ಶ್ರೀಮಜ್ಜಗನ್ನಾಥಯತಿ ವಿರಚಿತ

## ಭಾಷ್ಯದೀಪಿಕಾ ಸಹಿತ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತಂ

# ಶ್ರೀಮದ್ ಬ್ರಹ್ಮಸೂತ್ರಭಾಷ್ಯಮ್

ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ

ಸಂಪುಟ-೩



ಶ್ರೀಶೇಷಾಚಂದ್ರಿಕಾಚಾರ್ಯರು    ಶ್ರೀವ್ಯಾಸರಾಜರು    ಶ್ರೀಮಜ್ಜಗನ್ನಾಥತೀರ್ಥರು



ಕನ್ನಡಾನುವಾದ :

ಶ್ರೀ ಶ್ರೀವಿದ್ಯಾಶ್ರೀಶತೀರ್ಥ ಶ್ರೀಪಾದಂಗಳವರು, ಶ್ರೀವ್ಯಾಸರಾಜ ಮಠ (ಸೋಸಲೆ)

ಪ್ರಕಾಶಕರು :

ಶ್ರೀಗುರುರಾಜ ಅಸೋಸಿಯೇಷನ್ (ರಿ.)

ಬಸವನಗುಡಿ, ಬೆಂಗಳೂರು 560 004.

॥ ಶ್ರೀಃ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ಬ್ರಹ್ಮಸೂತ್ರಭಾಷ್ಯಮ್

ಶ್ರೀಜಗನ್ನಾಥತೀರ್ಥವಿರಚಿತ-

# ಭಾಷ್ಯದೀಪಿಕಾಸಹಿತಮ್

ಸಂಪುಟ - ೩

ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ


ಕನ್ನಡಾನುವಾದ

ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದರು

ಪೀಠಾಧಿಪತಿಗಳು

ಸೋಸಲೆ ಶ್ರೀವ್ಯಾಸರಾಜಮಠ.


***


ಪ್ರಕಾಶಕರು

ಶ್ರೀ ಗುರುರಾಜ ಅಸೋಸಿಯೇಷನ್

ನಂ ೫೩, ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು - ೫೬೦೦೦೪

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ ಬ್ರಹ್ಮಸೂತ್ರಭಾಷ್ಯಮ್ -
ಶ್ರೀಜಗನ್ನಾಥವಿರಚಿತಭಾಷ್ಯದೀಪಿಕಾಸಹಿತಮ್ (ಸಂಪುಟ-3) ಕನ್ನಡಾನುವಾದದೊಂದಿಗೆ
ಶ್ರೀರಾಘವೇಂದ್ರಸ್ವಾಮಿಗಳ 347ನೆಯ ಆರಾಧನಾಮಹೋತ್ಸವದ ಸುಸಂದರ್ಭದಲ್ಲಿ ಬಿಡುಗಡೆಗೊಳಿಸಲ್ಪಟ್ಟಿತು.


ಪ್ರಕಾಶನ :
ಶ್ರೀಗುರುರಾಜಾ ಅಸೋಸಿಯೇಷನ್,
ಮಾಡಲ್ ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು- 560 004; ದೂರವಾಣಿ – 26625658/59

ಮೊದಲನೆಯ ಮುದ್ರಣ : 2018

ಪ್ರತಿಗಳು : 1000
ಬೆಲೆ : ₹ 300=00

ಅಕ್ಷರಸಂಯೋಜನೆ
ಸುಬ್ಬಣ್ಣ, ಕೆಂಪದಾಳಿಹಳ್ಳಿ
(080) 26761614

ಮುದ್ರಣ :
ವಾಗರ್ಥ
ನಂ.149, 8ನೇ ಕ್ರಾಸ್, ನರಸಿಂಹರಾಜಾ ಕಾಲೋನಿ, ಬೆಂಗಳೂರು–560 019.
ದೂರವಾಣಿ : 080–22427677




**श्रीश्रीविश्वेशतीर्थश्रीपादाः**
श्रीपेजावरअधोक्षजमठः
जगद्गुरु श्रीमध्वाचार्यमूलमहासंस्थानम्
उडुपि-५७६१०१
0820-25244198,2526598


''ಆನಂದತೀರ್ಥಭಗವತ್ಪಾದಾಚಾರ್ಯವಚಸಾಂ
ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾ ಏವ ಹ್ಯಧಿಕಾರಿಣಃ''

ಈ ರೀತಿ ಶ್ರೀಜಯತೀರ್ಥರೇ ಮೊದಲಾದ ಜ್ಞಾನಿಗಳು ಶ್ರೀಮದಾಚಾರ್ಯರ ಭಾಷ್ಯವನ್ನು ಪ್ರಶಂಸಿಸಿದ್ದಾರೆ. ಭಾಷ್ಯದ ಅರ್ಥ-ವನ್ನು ತಿಳಿಯಲು ಅತ್ಯಂತ ಉಪಯುಕ್ತವಾದ ಕೃತಿ ಶ್ರೀಜಗನ್ನಾಥ-ತೀರ್ಥರ ಭಾಷ್ಯದೀಪಿಕಾ. ಪ್ರಜ್ವಲಿಸುವ ದೀಪವು ಎಲ್ಲ ಪದಾರ್ಥ-ಗಳನ್ನು ಪ್ರಕಟಿಸುವಂತೆ ಈ ಕೃತಿಯು ಭಾಷ್ಯದ ಎಲ್ಲಾ ಪದಗಳು ಹಾಗೂ ಉದಾಹೃತಶ್ರುತಿಗಳ ಅರ್ಥವನ್ನೂ ಅಭಿಪ್ರಾಯವನ್ನೂ ಸುಂದರವಾಗಿ ನಿರೂಪಿಸುತ್ತದೆ. ಇದರ ಕನ್ನಡ ಅನುವಾದವನ್ನು ಶ್ರೀವ್ಯಾಸರಾಜಮಠದ ಪೀಠಾಧಿಪತಿಗಳಾದ ಶ್ರೀಶ್ರೀವಿದ್ಯಾಶ್ರೀಶ-ತೀರ್ಥರು ಮಾಡಿರುವುದು ನಮಗೆ ಸಂತೋಷವನ್ನು ತಂದಿದೆ. ಇದನ್ನು ಪ್ರಕಟಿಸುತ್ತಿರುವ ಮಾಡೆಲ್ ಹೌಸ್ ರಾಯರ ಮಠದ ಎಲ್ಲಾ ಪದಾಧಿಕಾರಿಗಳನ್ನು ಅಭಿನಂದಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳೊಂದಿಗೆ

**ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರು,**
ಪರ್ಯಾಯ ಶ್ರೀಪೇಜಾವರ ಅಧೋಕ್ಷಜಮಠ,
ಶ್ರೀಕೃಷ್ಣಮಠ, ಉಡುಪಿ.



ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ
ಪೀಠಾಧಿಪತಿಗಳು ಶ್ರೀಶ್ರೀಸುಶಮೀಂದ್ರತೀರ್ಥಶ್ರೀಪಾದರ-
ಕರಕಮಲಸಂಜಾತರಾದ

## ಶ್ರೀಶ್ರೀಸುವಿದ್ಯೇಂದ್ರತೀರ್ಥಶ್ರೀಪಾದಂಗಳವರು

# ಅನುಗ್ರಹಸಂದೇಶ

॥ ಶ್ರೀಃ ॥

ಶ್ರೀ ಜಗನ್ನಾಥತೀರ್ಥರ 'ಭಾಷ್ಯದೀಪಿಕಾ' ಗ್ರಂಥವು ಸರಳವಾದ ಶೈಲಿಯಿಂದ ಭಾಷ್ಯದ ಪ್ರತಿಪದಾರ್ಥ ಮತ್ತು ಶ್ರುತ್ಯರ್ಥನಿರೂಪಣೆಯ ಮೂಲಕ ಎಲ್ಲರಿಂದ ಮಾನ್ಯವಾಗಿದೆ. ಅದಿಲ್ಲದೇ ಭಾಷ್ಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂದೇ ಎಲ್ಲಾ ಅಧ್ಯೇತೃಗಳ ಹಾಗೂ ಅಧ್ಯಾಪಕರ ಅಭಿಪ್ರಾಯ.

ಈ ಗ್ರಂಥದಲ್ಲಿ ಪ್ರಾಚೀನವ್ಯಾಖ್ಯಾಕಾರರ ಅಭಿಪ್ರಾಯಗಳನ್ನು ಅನೇಕ ಪ್ರಸಂಗ-ಗಳಲ್ಲಿ ತಿಳಿಸಿ ವಿಮರ್ಶಿಸಿದ್ದಾರೆ.

ಕೆಲವೆಡೆ ಭಾಷ್ಯಕ್ಕೂ ಸೂತ್ರಕ್ಕೂ ರೋಚಕವಾದ ಹೊಸ ಅರ್ಥವನ್ನೂ ಹೇಳಿದ್ದಾರೆ. ಉದಾಹರಣೆಗೆ – ಓಂ ಸ್ವಪಕ್ಷದೋಷಾಚ್ಚ ಓಂ - ಎಂಬ ಸೂತ್ರವು ಅಪ್ರಾಮಾಣಿಕತ್ವ-ದೋಷವಿರುವುದರಿಂದ ಪ್ರಲಯದಲ್ಲಿ ಸರ್ವ-ಅಸತ್ವಪಕ್ಷವು ಸರಿಯಲ್ಲ ಎನ್ನುತ್ತಿದೆ. ಅಪ್ರಾಮಾಣಿಕವೇಕೆ? ಎಂಬ ಪ್ರಶ್ನೆಗೆ ಆಚಾರ್ಯರು 'ದೃಷ್ಟಾಂತಾಭಾವಾದೇವ' ಎಂದು ಹೇಳಿದ್ದಾರೆ. ಅಂದರೆ ದೃಷ್ಟಾಂತವಿಲ್ಲದಿರುವುದರಿಂದ ಅನುಮಾನವು ಪ್ರಮಾಣವಾಗ-ಲಾರದು ಎಂದಭಿಪ್ರಾಯ. ಆದರೆ ಇದರ ಮೇಲೆ ಪ್ರಶ್ನೆ ಬರುತ್ತದೆ. – ಪ್ರತ್ಯಕ್ಷಾಗಮಗಳು ಪ್ರಮಾಣವಾಗಬಹುದಲ್ಲ? ಎಂದು. ಇದಕ್ಕೆ ಜಗನ್ನಾಥತೀರ್ಥರು - ಆಚಾರ್ಯರ 'ದೃಷ್ಟಾಂತಾಭಾವಾದೇವ' ಎಂಬ ವಾಕ್ಯದಲ್ಲೇ ಉತ್ತರವಿದೆ ಎಂದು ತೋರಿಸಿದ್ದಾರೆ. ದೃಷ್ಟಂ - ಪ್ರತ್ಯಕ್ಷಂ, ಅಂತಃ - ನಿರ್ಣಯಜನಕವಾದ ಆಗಮ. ಇವುಗಳ ಉಪಲಬ್ಧಿ ಇಲ್ಲ ಎಂದು ವ್ಯಾಖ್ಯಾನಿಸಿದ್ದಾರೆ.

ಇದರಂತೆ 'ಓಂ ಸುಷುಪ್ತ್ಯೋತ್ಕ್ರಾಂತಿಭೇದೇನ ಓಂ' ಎಂಬ ಸೂತ್ರದಲ್ಲಿ ಸುಷುಪ್ತಿ ಮತ್ತು ಉತ್ಕ್ರಾಂತಿ ಪ್ರಕರಣದಲ್ಲಿ ಜೀವ-ಈಶರಿಗೆ ಭೇದ ಹೇಳಿದ್ದರಿಂದ ಎಂದು ಅರ್ಥವಾಗುತ್ತದೆ. ಇಲ್ಲಿ ಮೇಲ್ನೋಟಕ್ಕೆ 'ಜೀವ- ಈಶರಿಗೆ' ಎಂಬ ಅಂಶವು ಸೂತ್ರದಲ್ಲಿ ಇಲ್ಲ ಎನಿಸುತ್ತದೆ. ಆದರೆ ಶ್ರೀಜಗನ್ನಾಥತೀರ್ಥರು ಅದನ್ನೂ ಸೂತ್ರಾರೂಢ ಮಾಡಿ ತೋರಿಸಿದ್ದಾರೆ. 'ಸುಷುಪ್ತಿ'ಪದಕ್ಕೆ ಸುಷುಪ್ತಿಯಿಂದ ಕೂಡಿದ ಜೀವ ಎಂದರ್ಥ. ಉತ್ಕ್ರಾಂತಿ ಪದಕ್ಕೆ ಉತ್ಕ್ರಮಣವನ್ನು ಉಂಟುಮಾಡುವ ಈಶ ಎಂದರ್ಥ - ಎಂದು ಚಮತ್ಕಾರಯುತ ವ್ಯಾಖ್ಯಾನವನ್ನು ಮಾಡಿದ್ದಾರೆ.

ಇಂತಹ ಅತ್ಯುಪಯುಕ್ತವಾದ ಗ್ರಂಥದ ಅನುವಾದವನ್ನು ಶ್ರೀಶ್ರೀವ್ಯಾಸರಾಜ ಮಠಾಧೀಶರಾದ ಶ್ರೀವಿದ್ಯಾಶ್ರೀಶತೀರ್ಥರು ಮಾಡಿದ್ದಾರೆ. ಇವರು ತಮ್ಮ ಪೂರ್ವಾ-ಶ್ರಮದಲ್ಲಿ ನಾವು ಪೂರ್ವಾಶ್ರಮದಲ್ಲಿದ್ದಾಗ ಅನೇಕ ವರ್ಷಗಳ ಕಾಲ ಅನೇಕ ಗ್ರಂಥ-ಗಳನ್ನು ವ್ಯುತ್ಪತ್ತಿ ಬರುವಂತೆ ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಪಾಠ ಹೇಳಿ ಪ್ರೋತ್ಸಾಹಿಸಿ ಉಪಕಾರ ಮಾಡಿದ ಗುರುಗಳು. ಅವರ ಚತುಃಶಾಸ್ತ್ರಪಾಂಡಿತ್ಯಪಾಠದ ವೈಖರಿ ದೇಶ ವಿದೇಶದ ಪಂಡಿತಮಂಡಳಿಗಳಲ್ಲಿ ಪ್ರಖ್ಯಾತವಾದುದು. ಇಂತಹವರು ಅನುವಾದಕರಾಗಿ ದೊರೆತದ್ದು ಅಸೋಸಿಯೇಷನ್ ಭಾಗ್ಯವೇ ಆಗಿದೆ. ಈ ಗುರುರಾಜಾ ಅಸೋಸಿ-ಯೇಷನ್ ಸಂಸ್ಥೆಯು ವಿಶೇಷವಾಗಿ ಜ್ಞಾನಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡು ಸರ್ವರಿಂದಲೂ ಅಭಿನಂದನೀಯವಾಗಿದೆ. ಎಲ್ಲ ಜಿಜ್ಞಾಸುಗಳೂ ಇದರ ಸದು-ಪಯೋಗವನ್ನು ಪಡೆದು ಶ್ರೀಹರಿವಾಯುಗುರುಗಳ ಅನುಗ್ರಹಕ್ಕೆ ಪಾತ್ರರಾಗಲಿ.

ಇತ್ಯನೇಕ ನಾರಾಯಣಸ್ಮರಣೆಗಳು

ಶ್ರೀಶ್ರೀಸುವಿದ್ಯೇಂದ್ರತೀರ್ಥಶ್ರೀಪಾದರು



**ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದಂಗಳವರು,**
ಪೀಠಾಧಿಪತಿಗಳು,
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,
ಶ್ರೀರಾಜೇಂದ್ರತೀರ್ಥ ಪೂರ್ವಾದಿಮಠ
ಶ್ರೀವ್ಯಾಸರಾಜಮಠ
(ಸೋಸಲೆ).

## ಅನುಗ್ರಹಸಂದೇಶ

ಭಾಷ್ಯದೀಪಿಕೆಯ ಪ್ರಥಮಾಧ್ಯಾಯ ತೃತೀಯಪಾದದ ಕನ್ನಡ ಅನುವಾದದ ಮೂರನೆಯ ಸಂಪುಟವಾಗಿ ಜಿಜ್ಞಾಸುಗಳ ಅಧ್ಯಯನಕ್ಕೆ ಅನುಕೂಲವಾಗುವಂತೆ ಈ ಸಂಪುಟವು ಹೊರಬರುತ್ತಿದೆ. ಭಾಷ್ಯದೀಪಿಕಾಕರ್ತೃಗಳಾದ ಶ್ರೀಜಗನ್ನಾಥಯತಿಗಳು ಭಾಷ್ಯದ ಪ್ರತಿಯೊಂದು ಪದ ಮತ್ತು ವಾಕ್ಯದ ಅರ್ಥವನ್ನು ತಿಳಿಸುವ ಉದ್ದೇಶದಿಂದ ರಚನೆ ಮಾಡಿರುವ ಈ ಗ್ರಂಥವು ಅತ್ಯಂತ ಮಹತ್ವಪೂರ್ಣವಾದ ಕೃತಿಯಾಗಿದೆ ಎಂಬ ವಿಷಯದಲ್ಲಿ ಎರಡು ಮಾತಿಲ್ಲ. ಶ್ರೀಮಟ್ಟೀಕಾಕೃತ್ಪಾದರ ಭಾಷ್ಯಟೀಕೆಯಾದ 'ತತ್ವ-ಪ್ರಕಾಶಿಕೆ'ಯನ್ನು ಈ ವ್ಯಾಖ್ಯಾನವು ಪ್ರಧಾನವಾಗಿ ಅವಲಂಬಿಸಿದರೂ ಪ್ರಾಚೀನ ಟೀಕಾಕಾರರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ 'ತತ್ವಪ್ರದೀಪ'ದಲ್ಲಿ ಮಾಡಿರುವ ವ್ಯಾಖ್ಯಾನದ ವಿಶೇಷಾಂಶಗಳನ್ನು ಒಂದನ್ನೂ ಬಿಡದೇ ಸಂಗ್ರಹಿಸಿರುವುದು ಭಾಷ್ಯ-ದೀಪಿಕೆಯ ವೈಶಿಷ್ಟ್ಯ ಎಂಬುದು ಈಗಾಗಲೇ ಭಾಷ್ಯದೀಪಿಕೆಯನ್ನು ಅಧ್ಯಯನ ಮಾಡು-ವವರಿಗೆ ಎದ್ದು ತೋರುವ ಅಂಶವಾಗಿದೆ.

ಶ್ರೀಮದಾಚಾರ್ಯರ ಪದತಲದಲ್ಲಿ ಕುಳಿತು ಅವರ ಮುಖದಿಂದ ಭಾಷ್ಯಪಾಠ-ವನ್ನು ಕೇಳಿದ ತ್ರಿವಿಕ್ರಮಪಂಡಿತಾಚಾರ್ಯರ ತತ್ವಪ್ರದೀಪಗ್ರಂಥದ ಅಧ್ಯಯನ-ಪದ್ಧತಿಯೇ ನಿಂತು ಹೋಗಿರುವ ಈ ಕಾಲದಲ್ಲಿ, ಶ್ರೀರಾಘವೇಂದ್ರಸ್ವಾಮಿಗಳ 'ತತ್ವಪ್ರಕಾಶಿಕಾ ಭಾವದೀಪ'ದ ಅನಂತರ ಬಂದಿರುವ, ಭಾಷ್ಯದೀಪಿಕೆಯು ನಮಗೆ ಅತ್ಯಮೂಲ್ಯವಾದ ಭಾಷ್ಯವ್ಯಾಖ್ಯಾನವಾಗಿದೆ. ಭಾಷ್ಯದ ಹಾಗೂ ಭಾಷ್ಯದಲ್ಲಿ ಉದಾ-ಹರಿಸಲಾದ ಶ್ರುತಿಗಳ ಬಗ್ಗೆ ಇತರ ವ್ಯಾಖ್ಯಾನಕಾರರು ಮಾಡುವ ವ್ಯಾಖ್ಯಾನದ ಬಗ್ಗೆ

ಕೆಲವೊಮ್ಮೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುವ ವಿಚಾರಪ್ರಚೋದಕವಾದ ಅವರ ಶೈಲಿ ಜಿಜ್ಞಾಸುಗಳಿಗೆ ಅತ್ಯಂತ ಉಪಕಾರಕವಾಗಿದೆ. ಇತರ ವ್ಯಾಖ್ಯಾನಕಾರರಲ್ಲಿ ನಮಗೆ ಹೆಚ್ಚಾಗಿ ಸಿಗದಿರುವ 'ಚ' 'ತು' ಇತ್ಯಾದಿ ಪ್ರತಿಯೊಂದು ಪದಗಳಿಗೂ ವಿಶೇಷವಾದ ಅರ್ಥ ಮತ್ತು ಅವುಗಳ ಅನ್ವಯವನ್ನು ಪದಗಳ ಆವೃತ್ತಿ, ಅನುವೃತ್ತಿ, ಅಧ್ಯಾಹಾರ ತೋರಿಸುವ ಮೂಲಕ ಭಾಷ್ಯದೀಪಿಕೆಯು ಆಚಾರ್ಯರ ಭಾಷ್ಯ ಎಷ್ಟು ಅರ್ಥ-ಗರ್ಭಿತವಾಗಿದೆ ಎನ್ನುವುದನ್ನು ಮನವರಿಕೆ ಮಾಡಿಕೊಡುತ್ತದೆ.

ಈ ಮೂರನೇ ಪಾದದ ಮೂರನೆಯ ಅಧಿಕರಣವಾದ ಅಕ್ಷರಾಧಿಕರಣದಲ್ಲಿ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರಭಾಷ್ಯಕ್ಕೆ ವ್ಯಾಖ್ಯಾನಮಾಡುವಾಗ ''ಏತದ್ ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ..... ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ' ಎಂಬ ಶ್ರುತ್ಯರ್ಥವನ್ನು ಹೇಳುವಾಗ ಅವರು ಆ ಶ್ರುತಿಗೆ ಒಂದು ವ್ಯಾಖ್ಯಾನ-ವನ್ನು ಮಾಡಿ ತಮಗೆ ಸ್ವಪ್ನದಲ್ಲಿ ತೋರಿದ ಮತ್ತೊಂದು ಅರ್ಥಾಂತರವನ್ನು ಹೇಳಿದ್ದನ್ನು ನೋಡುತ್ತೇವೆ.

ಹೀಗೆ ಅನೇಕ ವೈಶಿಷ್ಟ್ಯಗಳಿಂದ ಕೂಡಿದ ಭಾಷ್ಯದೀಪಿಕೆಯ ಅಧ್ಯಯನ ಸೂತ್ರ-ಪ್ರಸ್ಥಾನದ ಅಧ್ಯೇತೃಗಳಿಗೆ ಅತ್ಯಾವಶ್ಯಕವಾದದ್ದು ಎಂಬ ವಿಷಯದಲ್ಲಿ ಸಂದೇಹವಿಲ್ಲ.

ಈ ಭಾಗದ ಅನುವಾದಕಾಲದಲ್ಲಿ ಅಲ್ಲಲ್ಲಿ ಈಗಾಗಲೇ ಮುದ್ರಿತವಾಗಿರುವ ಪಾಠಗಳಲ್ಲಿ ಅಸ್ವಾರಸ್ಯ ಇರುವುದನ್ನು ಗಮನಿಸಿ ತಿದ್ದುಪಡಿ ಮಾಡಲಾಗಿದೆ.

ಹಿಂದಿನ ಸಂಪುಟಗಳ ಮುನ್ನುಡಿಯಲ್ಲಿ ಈಗಾಗಲೇ ಹೇಳಿರುವಂತೆ ಈ ಅನು-ವಾದವು ಗುರುಮುಖದಿಂದ ಪಾಠವನ್ನು ಕೇಳುವವರಿಗೆ ಮನನ ಮಾಡಲು ಸಹಾಯಕವಾಗುವುದೇ ಹೊರತು ಸ್ವತಂತ್ರವಾಗಿ ಇದನ್ನು ಓದಿ ಭಾಷ್ಯದ ಅಧ್ಯಯನ ಮಾಡಿದ್ದೇವೆಂದು ಹೇಳಲಾಗದು. ಕೆಲವೊಮ್ಮೆ ಅನುವಾದ ಕ್ಲಿಷ್ಟವಾಗಿದೆ ಎಂದೆನಿಸ-ಬಹುದು. ಆದರೆ ಭಾಷ್ಯದೀಪಿಕೆಯ ಶೈಲಿಯನ್ನು ಅನುಸರಿಸಿ ಅನುವಾದಿಸಿರುವುದರಿಂದ ಈ ಕ್ಲೇಶ ಅನಿವಾರ್ಯವಾಗಿದೆ. ಜಿಜ್ಞಾಸುಗಳು ಈ ಅಂಶಗಳನ್ನು ಗಮನಿಸಿ ಈ ಅನು-ವಾದದ ಉಪಯೋಗವನ್ನು ಪಡೆಯಲು ಪ್ರಯತ್ನಿಸಬೇಕಾಗಿದೆ.

ಶ್ರೀಗುರುರಾಜ ಅಸೋಸಿಯೇಷನ್, ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು – ಇದರ ಆಡಳಿತ ಸಮಿತಿಯವರು ಶ್ರೀರಾಘವೇಂದ್ರಸ್ವಾಮಿಗಳ ಸೇವಾ ಕಾರ್ಯಗಳಲ್ಲಿ ತತ್ವಜ್ಞಾನಪ್ರಸಾರಕ್ಕೋಸ್ಕರವಾಗಿ ಮಾಡುವ ಇಂತಹ ಗ್ರಂಥಪ್ರಕಾಶನ ಕಾರ್ಯಗಳು ಪ್ರಧಾನವೆಂದು ಪರಿಗಣಿಸಿರುವುದು ಅತ್ಯಂತ ಅಭಿನಂದನೀಯವಾಗಿದೆ. ಶ್ರೀಗುರುರಾಜರ ಈ ಸೇವಾಕಾರ್ಯದಿಂದ ಈ ಸಮಿತಿಯು ಶ್ರೀಗುರುರಾಜರ ಪೂರ್ಣಾನುಗ್ರಹಕ್ಕೆ ಪಾತ್ರವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಇಂತಹ ಜ್ಞಾನ-ಕಾರ್ಯಗಳು ನಿರಂತರವಾಗಿ ನಡೆಯುವಂತೆ ಹರಿವಾಯುಗುರುಗಳ ಪೂರ್ಣಾನುಗ್ರಹ-ವನ್ನು ಪ್ರಾರ್ಥಿಸುತ್ತೇವೆ.

ಈ ಸಂಪುಟದ ಕರಡು ಪ್ರತಿಯನ್ನು ತಿದ್ದುವ ಶ್ರಮದ ಕೆಲಸವನ್ನು ವಿದ್ವಾನ್. ಕೆ.ವಿ. ಎನ್. ಪ್ರಸನ್ನಾಚಾರ್ಯ ಅವರು ಮಾಡಿ ಕೊಟ್ಟಿದ್ದಾರೆ. ಅವರಿಗೂ ಹರಿವಾಯುಗಳ ಪೂರ್ಣಾನುಗ್ರಹ ಮಾಡಲೆಂದು ಪ್ರಾರ್ಥಿಸುತ್ತೇವೆ.

ದೂರವಾಣಿಯ ಮೂಲಕ ನಡೆದ ಈ ಅನುವಾದದ ಡಿ.ಟಿ.ಪಿ. ಕಾರ್ಯವನ್ನು ಶ್ರೀಯುತ ಸುಬ್ಬಣ್ಣ. ಕೆ. ಅವರು ತುಂಬಾ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರಿಗೂ ಶ್ರೀರಾಘವೇಂದ್ರಸ್ವಾಮಿಗಳ ಪೂರ್ಣಾನುಗ್ರಹ ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

ಶ್ರೀಶ್ರೀವಿದ್ಯಾಶ್ರೀಶತೀರ್ಥಶ್ರೀಪಾದಂಗಳವರು

# ಪ್ರಕಾಶಕರ ನುಡಿ

ಶ್ರೀಗುರುರಾಘವೇಂದ್ರಸ್ವಾಮಿಗಳ ಅನುಗ್ರಹ ವಿಶೇಷ ಬಲದಿಂದ ಮಾಡೆಲ್ ಹೌಸ್‌ನ ಶ್ರೀ ಗುರುರಾಜ ಅಸೋಸಿಯೇಷನ್ (ರಿ.) ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಹಾಗೂ ಸದಸ್ಯರ ದೃಢ ಸಂಕಲ್ಪದ ಪರಿಣಾಮವಾಗಿ ಕೈಗೆತ್ತಿಕೊಂಡಿದ್ದ ಶ್ರೀಜಗನ್ನಾಥತೀರ್ಥರ ಭಾಷ್ಯದೀಪಿಕಾಗ್ರಂಥದ ಕನ್ನಡಾನುವಾದದ ಪ್ರಕಾಶನ ಕಾರ್ಯದಲ್ಲಿ ಮತ್ತೊಂದು ಹೆಜ್ಜೆ ಮುಂದುವರೆದು ಮೂರನೆಯ ಈ ಸಂಪುಟವು ಶ್ರೀರಾಯರ ೩೪೭ನೇ ಆರಾಧನೆಯ ಅಂಗವಾಗಿ ಅಸೋಸಿಯೇಷನ್ ಹಮ್ಮಿಕೊಂಡಿರುವ ಜ್ಞಾನಕಾರ್ಯದ ಭಾಗವಾಗಿ ಪ್ರಕಟ-ವಾಗುತ್ತಿರುವುದು ಸಂತಸದ ಸಂಗತಿಯಾಗಿದೆ.

ಪ್ರಕೃತ ಸಂಪುಟದಲ್ಲಿ ಬ್ರಹ್ಮಸೂತ್ರ ಪ್ರಥಮಾಧ್ಯಾಯದ ತೃತೀಯಪಾದದ ಅನು-ವಾದವು ಪ್ರಕಟಿತವಾಗುತ್ತಿದೆ.

ಈ ಅನುವಾದಕಾರ್ಯವನ್ನು ಕರ್ನಾಟಕವಿದ್ಯಾಸಿಂಹಾಸನಾಧೀಶ್ವರರು ಎಂಬ ಬಿರುದು ಭಾಜನರಾದ ಸೋಸಲೆ ವ್ಯಾಸರಾಜಮಠದ ಪೀಠಾಧಿಪತಿಗಳಾದ ಶ್ರೀಶ್ರೀವಿದ್ಯಾಶ್ರೀಶ-ತೀರ್ಥಶ್ರೀಪಾದರು ನಡೆಸಿಕೊಟ್ಟಿರುತ್ತಾರೆ. ಪೂಜ್ಯಶ್ರೀಪಾದಂಗಳವರು ತಮ್ಮ ಬಿಡುವಿಲ್ಲದ ಕಾರ್ಯಕ್ರಮದಲ್ಲಿಯೂ ಸಹ ಅನುವಾದ ಕಾರ್ಯ ಮಾಡಿಕೊಟ್ಟು ನಮ್ಮನ್ನು ಆಶೀ-ರ್ವದಿಸಿರುವುದಕ್ಕಾಗಿ ಅವರಿಗೆ ಅನಂತಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಶ್ರೀಪಾದರು ತಿಳಿಸಿದಂತೆ ಈ ಪ್ರಕಟನೆಯು ಜಿಜ್ಞಾಸುಬಂಧುಗಳಿಗೆ ಶ್ರೀಮದಾ-ಚಾರ್ಯರ ಬ್ರಹ್ಮಸೂತ್ರಭಾಷ್ಯದ ಅಧ್ಯಯನ ಕಾರ್ಯದಲ್ಲಿ ಮಾರ್ಗದರ್ಶಿಯಾಗಿ ಬಹು ಉಪಯುಕ್ತವಾಗುತ್ತದೆಯೆಂದು ಆಶಿಸುತ್ತೇವೆ.

ಈ ಗ್ರಂಥಕ್ಕೆ ಆಶೀರ್ವಚನ ದಯಪಾಲಿಸಿದ ಶ್ರೀಪೇಜಾವರ ಅಧೋಕ್ಷಜ ಮಠಾ-ಧೀಶರಾದ ಪರಮ ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರ ಪಾದಾರವಿಂದಗಳಿಗೆ ಶಿರ ಸಾಷ್ಟಾಂಗ ದಂಡಪ್ರಣಾಮಗಳನ್ನು ಅರ್ಪಿಸುತ್ತೇವೆ.

ತಮ್ಮ ಪ್ರೌಢ ಸಂದೇಶದಿಂದ ಈ ಸಂಪುಟವನ್ನು ಅಲಂಕರಿಸಿದ ಶ್ರೀಶ್ರೀಸುವಿದ್ಯೇಂದ್ರ ತೀರ್ಥಶ್ರೀಪಾದರಿಗೆ ಸಮಿತಿಯು ಶಿರಸಾಷ್ಟಾಂಗ ದಂಡಪ್ರಣಾಮಗಳನ್ನು ಅರ್ಪಿಸುತ್ತದೆ.

ಗ್ರಂಥದ ಕರಡು ಪ್ರತಿ ತಿದ್ದುವಲ್ಲಿ ಪರಿಶ್ರಮ ವಹಿಸಿದ ವಿ|| ಕೆ.ವಿ.ಎನ್. ಪ್ರಸನ್ನಾ-ಚಾರ್ಯರಿಗೆ ಸಂಸ್ಥೆಯು ವಂದನೆಗಳನ್ನು ಅರ್ಪಿಸುತ್ತದೆ.

ಈ ಗ್ರಂಥದ ಅಕ್ಷರ ಜೋಡಣೆಯಲ್ಲಿ ಸಹಕರಿಸಿದ ಸುಬ್ಬಣ್ಣ.ಕೆ. ಇವರಿಗೂ ಸಂಸ್ಥೆಯು ಆಭಾರಿಯಾಗಿದೆ.

ಅದರಂತೆ ಈ ಗ್ರಂಥದ ಮುಖಪುಟದ ಸುಂದರ ವಿನ್ಯಾಸವನ್ನು ರಚಿಸಿ ಸಹಕರಿಸಿದ ಸುಪ್ರಜಾ ವಿನ್ಯಾಸ ಇವರಿಗೆ ಸಂಸ್ಥೆಯು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಸಮಗ್ರ ಸಂಪುಟದ ಮುದ್ರಣ ಕಾರ್ಯದಲ್ಲಿ ಎಂದಿನಂತೆ ಸಹಕರಿಸಿದ ವಾಗರ್ಥದ ಎಲ್ಲಾ ಬಂಧುಗಳಿಗೂ ಸಂಸ್ಥೆಯು ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಈ ಪ್ರಕಟನೆಯನ್ನು ಮಾಧ್ವಜಿಜ್ಞಾಸುಬಂಧುಗಳು ಹೃತ್ಪೂರ್ವಕವಾಗಿ ಸ್ವೀಕರಿಸಿ ಸದು-ಪಯೋಗಮಾಡಿಕೊಳ್ಳಬೇಕೆಂದು ಮಂಡಳಿಯು ಆಶಿಸುತ್ತದೆ.

**ಶ್ರೀಗುರುರಾಜ ಅಸೋಸಿಯೇಷನ್**
ಮಂಡಳಿ ಸಮಿತಿಯ ಸದಸ್ಯರು.

* * * * * *

## ವಿಷಯಾನುಕ್ರಮಣಿಕೆ

ಬ್ರಹ್ಮಸೂತ್ರಭಾಷ್ಯಸ್ಯ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ

* * * *

## ಭಾಷ್ಯ ಮತ್ತು ಭಾಷ್ಯದೀಪಿಕಾ
## ಮಂಗಳಾಚರಣಶ್ಲೋಕಗಳು

### (ಭಾಷ್ಯ)

**ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥**

ಅಥ ಶ್ರೀಜಗನ್ನಾಥತೀರ್ಥವಿರಚಿತಭಾಷ್ಯದೀಪಿಕಾ

ಜಿಜ್ಞಾಸ್ಯಂ ಜನ್ಮರಕ್ಷಾಲಯನಿಯತಿಮತಿಪ್ರತ್ಯಗಜ್ಞಾನಬಂಧ-
ಶ್ರೇಯೋದಂ ಶಾಸ್ತ್ರಗಮ್ಯಂ ಶ್ರುತಿಗತವಚನೈರ್ಮುಖ್ಯವೃತ್ತ್ಯಾಽಭಿಧೇಯಮ್ ।
ಭೈಷ್ಮೀಸತ್ಯಾಸಮೇತಂ ಬಹುಗುಣವಪುಷಂ ಭೀತಿಪೂರ್ವಾರದೂರಂ
ಭಕ್ತಿಶ್ರುತ್ಯಾದಿಚಿಂತ್ಯಂ ಭಜನಪರಗತಿಂ ಭಾವಯೇ ವೇಣುಕೃಷ್ಣಮ್ ॥೧॥

ಆಮ್ರಸ್ತಂಭಾತ್ ಸಮಾಗತ್ಯ ತಾಮ್ರತುಂಡಾನ್ ನಿಹತ್ಯ ಯಃ ।
ನಮ್ರಂ ನೌಮಿ ಜಗನ್ನಾಥಂ ಕ್ರಮೋಪಾತ್ತಂ ನೃಕೇಸರೀ ॥೨॥

ಅನಧೀತ್ಯ ಮಹಾಭಾಷ್ಯಂ ಯಸ್ಯ ವ್ಯಾಕೃಷ್ಯನುಗ್ರಹಾತ್ ।
ತಮುಪಾಸೇ ನೃಸಿಂಹಾರ್ಕಂ ಪ್ರತ್ಯೂಹತಿಮಿರಾಪಹಮ್ ॥೩॥

ಪೂರ್ಣಬೋಧಗುರೂನ್ ವಂದೇ ಜಯಾರ್ಯಾನ್ ವ್ಯಾಸದೇಶಿಕಾನ್ ।
ರಾಮಚಂದ್ರಗುರೂನಾರ್ಯಾನ್ ಲಕ್ಷ್ಮೀಕಾಂತಗುರೂನಪಿ ॥೪॥

ಯೇನಾಯಂ ನಿರಣಾಯಿ ಮಧ್ವಗುರುಸದ್ಭಾಷ್ಯಪ್ರಕಾಶಾಶಯಃ
ಪ್ರಾಖಂಡಿ ಪ್ರತಿವಾದಿದರ್ಶನಗಣಃ ಪ್ರಾಬಂಧಿ ಗುರ್ವರ್ಣವಃ ।
ಶಿಷ್ಯೇಭ್ಯಃ ಸಮದಾಯಿ ವಿತ್ತಮುಭಯಂ ಪ್ರಾಲಂಭಿ ವಿದ್ಯಾಸನಂ
ಸೋಽಯಂ ಶ್ರೀರಘುನಾಥತೀರ್ಥಗುರುರಾಟ್ ಶುದ್ಧಿಂ ವಿದಧ್ಯಾನ್ಮತೇಃ ॥೫॥

ಜಯಾರ್ಯರಚಿತಾಂ ಟೀಕಾಮನುಸೃತ್ಯ ಯಥಾಮತಿ ।
ಜಗನ್ನಾಥಾಖ್ಯಯತಿನಾ ಕ್ರಿಯತೇ ಭಾಷ್ಯದೀಪಿಕಾ ॥೬॥

ಕ್ವಚಿದ್ ಭಾಷ್ಯವಿವೃತ್ಯೈವ ಟೀಕಾರ್ಥೋಽಪಿ ವಿವಿಚ್ಯತೇ ।
ತತ್ತ್ವಪ್ರದೀಪ-ತಾತ್ಪರ್ಯಚಂದ್ರಿಕಾದ್ಯುಕ್ತಮಾರ್ಗತಃ ॥೭॥

* * * *

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ಬ್ರಹ್ಮಸೂತ್ರಭಾಷ್ಯಮ್

ಶ್ರೀಜಗನ್ನಾಥಯತಿವಿರಚಿತ-

# ಭಾಷ್ಯದೀಪಿಕಾಸಹಿತಮ್

ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ

## ೧. ಅಥ ದ್ಯುಭ್ವಾದ್ಯಧಿಕರಣಮ್

**ಭಾಷ್ಯಮ್ – ತತ್ರ ಚಾನ್ಯತ್ರ ಚ ಪ್ರಸಿದ್ಧಾನಾಂ ಶಬ್ದಾನಾಂ ವಿಷ್ಣೌ ಸಮನ್ವಯಂ ಪ್ರಾಯೇಣಾಸ್ಮಿನ್ ಪಾದೇ ದರ್ಶಯತಿ ।**

ಬ್ರಹ್ಮನಲ್ಲಿ ಹಾಗೂ ಬ್ರಹ್ಮಭಿನ್ನರಾದ ರುದ್ರ, ಪ್ರಕೃತಿ ಮೊದಲಾದವರಲ್ಲೂ ಕೂಡ ಪ್ರಸಿದ್ಧವಾಗಿರುವ ಶಬ್ದಗಳಿಗೆ ವಿಷ್ಣುವಿನಲ್ಲಿ ಸಮನ್ವಯವಿರುವುದೆಂದು ಬಹುಲವಾಗಿ ಸೂತ್ರಕಾರರು ಈ ಪಾದದಲ್ಲಿ ಪ್ರತಿಪಾದಿಸುತ್ತಿದ್ದಾರೆ.

ಭಾಷ್ಯದೀಪಿಕಾ – ಏತತ್ ಪಾದಪ್ರತಿಪಾದ್ಯಂ ದರ್ಶಯತಿ – ತತ್ರೇತಿ ॥ ಅನ್ಯೋನ್ಯಸಮುಚ್ಚಯೇ 'ಚ'ಶಬ್ದೌ । ದೇವತಾಧಿಕರಣಾಪಶೂದ್ರಾಧಿಕರಣಯೋಃ ಸಮನ್ವಯಾಕರಣಾತ್ ತದ್ವ್ಯಾವೃತ್ತ್ಯರ್ಥಂ – 'ಪ್ರಾಯೇಣ' ಪ್ರಾಚುರ್ಯೇಣೇತಿ । ತಥಾ ಚ ಪ್ರಾಯೇಣ ಅಸ್ಮಿನ್ ತೃತೀಯಪಾದೇ 'ತತ್ರ' ಹರೌ ತಸ್ಮಾತ್ 'ಅನ್ಯತ್ರ' ರುದ್ರಪ್ರಕೃತ್ಯಾದೌ ಚ ಶ್ರುತಿಲಿಂಗಾದಿಭಿಃ ಪ್ರಸಿದ್ಧಾನಾಂ ನಾಮಲಿಂಗಾತ್ಮಕಶಬ್ದಾನಾಂ ವಿಷ್ಣೌ 'ಸಮನ್ವಯಂ' ಪರಮಮುಖ್ಯಯಾ ವೃತ್ತ್ಯಾ ತಾತ್ಪರ್ಯಪ್ರಬಲಹೇತುಭಿಃ 'ದರ್ಶಯತಿ' ಪ್ರತಿಪಾದಯತಿ ಸೂತ್ರಕೃದಿತ್ಯರ್ಥಃ ।

ಈ ಪಾದದಲ್ಲಿ ಪ್ರತಿಪಾದ್ಯವಾದ ವಿಷಯವನ್ನು ಭಾಷ್ಯಕಾರರು 'ತತ್ರ' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ. ಇಲ್ಲಿರುವ ಎರಡು ಚಶಬ್ದಗಳು ಪರಸ್ಪರಸಮುಚ್ಚಯವನ್ನು

ಹೇಳುತ್ತವೆ. ಈ ಪಾದದಲ್ಲಿ ಬರುವ ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣ-ಗಳಲ್ಲಿ ಸಮನ್ವಯವನ್ನು ಮಾಡದಿರುವುದರಿಂದ ಅದನ್ನು ಹೊರತುಪಡಿಸಲು ಪ್ರಾಯೇಣ ಎಂದು ಹೇಳಿದೆ. 'ಪ್ರಾಚುರ್ಯೇಣ' ಎಂದು ಅರ್ಥ.

ತಥಾ ಚ ಈ ತೃತೀಯಪಾದದಲ್ಲಿ ಪ್ರಚುರವಾಗಿ ತತ್ರ - ಶ್ರೀಹರಿಯಲ್ಲಿ, ಮತ್ತು ಅವನಿಂದ ಅನ್ಯತ್ರ - ಭಿನ್ನರಾದ ರುದ್ರ , ಪ್ರಕೃತಿ, ಮೊದಲಾದವರಲ್ಲೂ ಶ್ರುತಿ, ಲಿಂಗ, ಮೊದಲಾದ ಪ್ರಮಾಣಗಳಿಂದ ಪ್ರಸಿದ್ಧವಾಗಿರುವ ನಾಮಲಿಂಗಾತ್ಮಕವಾದ ಶಬ್ದಗಳಿಗೆ ವಿಷ್ಣುವಿನಲ್ಲಿ ಸಮನ್ವಯಂ - ಅಂದರೆ ಪರಮಮುಖ್ಯವೃತ್ತಿಯಿಂದ ತಾತ್ಪರ್ಯವನ್ನು ಪ್ರಬಲಹೇತುಗಳಿಂದ ದರ್ಶಯತಿ - ಸೂತ್ರಕಾರರು ಪ್ರತಿಪಾದಿಸುತ್ತಿದ್ದಾರೆ ಎಂದು ಅರ್ಥ.

ಭಾ.ದೀ.– ಶ್ರುತ್ಯಾದಿಸಂಗತಿಂ ವಿಷಯವಾಕ್ಯಮುದಾಹೃತ್ಯ ವಿಷಯಸಂಶಯ-ಸಯುಕ್ತಿಕಪೂರ್ವಪಕ್ಷಾನ್ ದರ್ಶಯತಿ – ವಿಷ್ಣೋರಿತಿ ॥

ಶ್ರುತಿಮೊದಲಾದವುಗಳ ಸಂಗತಿಯನ್ನು ಮತ್ತು ವಿಷಯವಾಕ್ಯವನ್ನು ಉದಾಹರಿಸಿ ಈ ಅಧಿಕರಣದ ವಿಷಯ ಸಂಶಯ, ಮತ್ತು ಯುಕ್ತಿಸಹಿತವಾದ ಪೂರ್ವಪಕ್ಷಗಳನ್ನು ಭಾಷ್ಯಕಾರರು 'ವಿಷ್ಣೋಃ'' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – ವಿಷ್ಣೋಃ ಪರವಿದ್ಯಾವಿಷಯತ್ವಮುಕ್ತಮ್ । ತತ್ರ 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಮ್'** (ಮುಂ.೨-೨-೫) **ಇತ್ಯತ್ರ, 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾಽಽವಿಶಾಂತಕಃ' 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ' ಇತ್ಯಾದಿನಾ ರುದ್ರಸ್ಯ ಪ್ರಾಣಾಧಾರತ್ವಪ್ರತೀತೇಃ । 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಇತಿ ಜೀವಲಿಂಗಾಚ್ಚ ತಯೋಃ ಪ್ರಾಪ್ತಿಃ ।**

ವಿಷ್ಣುವಿಗೆ ಪರವಿದ್ಯಾವಿಷಯತ್ವವು ಇರುವುದೆಂದು ಹಿಂದೆ ಹೇಳಲಾಗಿತ್ತು. ಆ ಪರವಿದ್ಯಾವಿಷಯತ್ವವು ''ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಸ್ತಮೇವೈಕಂ ಜಾನಥ ಆತ್ಮಾನಮ್' (ಮುಂ.೨-೨-೫)' ಎಂಬಲ್ಲಿ, 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾಽಽವಿಶಾಂತಕಃ' 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ' ಇತ್ಯಾದಿ ವಾಕ್ಯಗಳಿಂದ ರುದ್ರನಿಗೆ ಪ್ರಾಣಾಧಾರತ್ವವನ್ನು ಹೇಳುವುದು ಕಂಡು-ಬರುವುದರಿಂದ ಮತ್ತು 'ಸ ಏಷೋಂತಶ್ಚರತೇ..' ಎಂಬ ಜೀವನ ಲಿಂಗ ಇರುವುದರಿಂದಲೂ ರುದ್ರ ಮತ್ತು ಜೀವರಲ್ಲಿ ಪ್ರಾಪ್ತವಾಗುವುದು.

ಭಾ.ದೀ. – **'ಉಕ್ತಮ್' ಇತ್ಯಾವರ್ತತೇ। 'ತತ್ರ' ಇತ್ಯವ್ಯಯಂ ತದಿತ್ಯರ್ಥೇಽಪಿ। 'ಅತ್ರ' ಇತ್ಯಪಿ ಆವರ್ತತೇ। 'ಆದಿ'ಶಬ್ದಃ ಉಭಯಾನ್ವಯೀ। 'ರುದ್ರಸ್ಯ' ಇತಿ ಶೇಷೇ ಷಷ್ಠೀ। 'ತಯೋಃ' ಇತ್ಯೇತತ್ ಪ್ರಧಾನವಾಯ್ವೋರಪ್ಯುಪಲಕ್ಷಕಮ್। ತಥಾ ಚಾದೃಶ್ಯತ್ವಾದಿಗುಣಕಾಕ್ಷರಸ್ಯ ವಿಷ್ಣೋಃ ಪರವಿದ್ಯಾವಿಷಯತ್ವಂ ಯತ್ರೋಕ್ತಂ ತತ್ರೈವ ಆಥರ್ವಣೇ ತತ್ಪರವಿದ್ಯಾವಿಷಯತ್ವಮ್ –**

**'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ।**
**ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ'**

**'ಅಮೃತಸ್ಯೈಷ ಸೇತುಃ' ಇತ್ಯತ್ರ - ಇತಿ ವಾಕ್ಯೇ, ತತ್ರ - ದ್ಯುಭ್ವಾದ್ಯಾಶ್ರಯೇ ಉಕ್ತಮ್ – ಇತ್ಯೇಕಾ ಯೋಜನಾ।**

ಭಾಷ್ಯದ ''ಉಕ್ತಮ್'' ಎಂಬ ಪದವು ಆವೃತ್ತಿಯನ್ನು ಹೊಂದುವುದು. ತತ್ರ ಎಂಬ ಅವ್ಯಯವು 'ತತ್' ಎಂಬರ್ಥವನ್ನೂ ಹೇಳುವುದು. ಭಾಷ್ಯದಲ್ಲಿ 'ಇತ್ಯತ್ರ' ಎಂಬಲ್ಲಿರುವ 'ಅತ್ರ' ಎಂಬ ಪದವೂ ಆವೃತ್ತಿಯನ್ನು ಪಡೆಯುವುದು. 'ಇತ್ಯಾದಿನಾ' ಎಂಬಲ್ಲಿರುವ ಆದಿಶಬ್ದವು ಎರಡೂ ಕಡೆ ಅನ್ವಯವನ್ನು ಹೊಂದುವುದು. ರುದ್ರಸ್ಯ ಎಂಬ ಪದದಲ್ಲಿರುವ ಷಷ್ಠೀವಿಭಕ್ತಿಯು ಸಂಬಂಧಸಾಮಾನ್ಯವನ್ನು ಹೇಳುವುದು. 'ತಯೋಃ ಪ್ರಾಪ್ತಿಃ' ಎಂಬಲ್ಲಿರುವ ತಯೋಃ ಎಂಬ ಪದವು ಪ್ರಕೃತಿ ಮತ್ತು ವಾಯು-ಗಳನ್ನು ಉಪಲಕ್ಷಣಯಾ ಹೇಳುವುದು. ತಥಾ ಚ ಅದೃಶ್ಯತ್ವಾದಿಗುಣಯುಕ್ತನಾದ

ಅಕ್ಷರಶಬ್ದವಾಚ್ಯನಾದ ವಿಷ್ಣುವಿಗೆ ಯಾವ ಆಥರ್ವಣದಲ್ಲಿ ಪರವಿದ್ಯಾವಿಷಯತ್ವವು ಹೇಳಲ್ಪಟ್ಟಿದೆಯೋ ಅದೇ ಆಥರ್ವಣದಲ್ಲಿ ಆ ಪರವಿದ್ಯಾವಿಷಯತ್ವವು ''ಯಸ್ಮಿನ್ ದ್ಯೌಃ ....' 'ಅಮೃತಸ್ಯೈಷ ಸೇತುಃ' - 'ಇತ್ಯತ್ರ' ಅಂದರೆ ಎಂಬ ವಾಕ್ಯದಲ್ಲಿ. 'ತತ್ರ' ಆ ದ್ಯುಭ್ವಾದಿಗಳಿಗೆ ಆಶ್ರಯನಾದವನಲ್ಲಿ ಉಕ್ತವಾಗಿದೆ – ಎಂದು ಭಾಷ್ಯದ ಪದಗಳಿಗೆ ಒಂದು ಯೋಜನೆ.

ಭಾ.ದೀ. – ತತ್ರ ದ್ಯುಭ್ವಾದ್ಯಾಯತನತ್ವೇ 'ತಯೋಃ' ರುದ್ರಜೀವಯೋಃ ಪ್ರಾಪ್ತಿಃ । ಕುತಃ? ಅತ್ರ ವಾಕ್ಯೇ ದ್ಯುಭ್ವಾದ್ಯಾಯತನೇ ಪ್ರಾಣಾಧಾರತ್ವಪ್ರತೀತೇಃ ಶ್ರವಣಾತ್ । ತಥಾ 'ಸ ಏಷಃ' ಇತಿ ಜೀವಲಿಂಗಶ್ರವಣಾಚ್ಚ । ನ ಚ ಪ್ರಾಣಾಧಾರತ್ವಶ್ರವಣೇಽಪಿ ಕುತೋಽತ್ರ ರುದ್ರಸ್ಯ ಪ್ರಾಪ್ತಿಃ? ಇತಿ ವಾಚ್ಯಮ್ । 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾಽಽವಿಶಾಂತಕಃ, ತೇನಾನ್ನೇನ ಆಪ್ಯಾಯಸ್ವ' (ಮಹಾನಾ. ೩೫) ಇತಿ ತೈತ್ತಿರೀಯವಾಕ್ಯೇನ, ತಥಾ – 'ಯೋ ಬ್ರಹ್ಮಾ ಬ್ರಹ್ಮಣ ಉಜ್ಜಭಾರ ಪ್ರಾಣೇಶ್ವರಃ ಕೃತ್ತಿವಾಸಾ ಪಿನಾಕೀ । ಈಶಾನೋ ದೇವಃ ಸ ನ ಆಯುರ್ದಧಾತು' (ಘೃತಸೂಕ್ತಮ್) ಇತ್ಯಾದಿ ಖಿಲಸಂಹಿತಾವಾಕ್ಯೇನ ಚ ರುದ್ರಸ್ಯ ಪ್ರಾಣಾಧಾರತ್ವಪ್ರತೀತೇಃ – ಇತ್ಯಪರಾ ಯೋಜನಾ ।

ಆ ದ್ಯುಭ್ವಾದ್ಯಾಯತನತ್ವದ ವಿಷಯದಲ್ಲಿ 'ತಯೋಃ' - ಆ ರುದ್ರ , ಜೀವರಿಗೆ ಪ್ರಾಪ್ತಿಯಿರುವುದು. ಏಕೆಂದರೆ? ಅತ್ರ -ಈ ವಾಕ್ಯದಲ್ಲಿ, ದ್ಯು , ಭು ಮೊದಲಾದ-ವುಗಳಿಗೆ ಆಶ್ರಯನಾದವನಲ್ಲಿ ಪ್ರಾಣಾಧಾರತ್ವವು ಪ್ರತೀತವಾಗಿದೆ ಎಂದರೆ ಶ್ರುತವಾಗಿದೆ ಆದ್ದರಿಂದ. ಹಾಗೆಯೇ 'ಸ ಏಷಃ' ಎಂಬುದಾಗಿ ಜೀವನ ಅಸಾಧಾರಣಧರ್ಮವೂ ಶ್ರುತವಾಗಿದೆ ಆದ್ದರಿಂದ. ಪ್ರಾಣಾಧಾರತ್ವವು ಇಲ್ಲಿ ಶ್ರುತವಾಗಿದ್ದರೂ ರುದ್ರನಿಗೆ ಪ್ರಾಪ್ತಿಯಿರುವುದೆಂದು ಹೇಗೆ ಎಂದು ಹೇಳತಕ್ಕದ್ದಲ್ಲ. ಏಕೆಂದರೆ 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾಽಽವಿಶಾಂತಕಃ, ತೇನಾನ್ನೇನ ಆಪ್ಯಾಯಸ್ವ' ಎಂಬ ತೈತ್ತಿರೀಯವಾಕ್ಯದಿಂದ ಹಾಗೆಯೇ 'ಯೋ ಬ್ರಹ್ಮಾ ಬ್ರಹ್ಮಣ ಉಜ್ಜಭಾರ ಪ್ರಾಣೇಶ್ವರಃ ಕೃತ್ತಿವಾಸಾ ಪಿನಾಕೀ । ಈಶಾನೋ ದೇವಃ ಸ ನ ಆಯುರ್ದಧಾತು' ಇತ್ಯಾದಿ

ಖಿಲಭಾಗದಲ್ಲಿರುವ ಸಂಹಿತಾವಾಕ್ಯದಿಂದಲೂ ರುದ್ರನಿಗೆ ಪ್ರಾಣಾಧಾರತ್ವವು ಶ್ರುತವಾಗಿರುವುದರಿಂದ ಎಂದು ಇನ್ನೊಂದು ಯೋಜನೆ.

ಭಾ.ದೀ. – ಯದ್ವಾ – ಅಸ್ಮಿನ್ನೇವ ಪಕ್ಷೇ 'ತಯೋಃ' ಇತ್ಯೇತತ್ ಸಪ್ತಮ್ಯಂತ-ಮಾಶ್ರಿತ್ಯ ಲಿಂಗಲಿಂಗಿರೂಪಧರ್ಮದ್ವಯಪರತಯಾ ವ್ಯಾಖ್ಯೇಯಮ್ । ತಥಾತ್ವೇ ಆದಿಶಬ್ದೋ 'ರುದ್ರೋ ವಾವ ಲೋಕಾಧಾರಃ' ಇತಿ ವಾಕ್ಯಗ್ರಾಹೀ । ಏವಂ ತತ್ರ ತಯೋಃ ಪ್ರಾಪ್ತಿರಿತಿ ದೂರಾನ್ವಯೇನ 'ತತ್ರ' - ಪರವಿದ್ಯಾವಿಷಯತ್ವೇ ತಯೋಃ - ರುದ್ರಜೀವಯೋಃ ಪ್ರಾಪ್ತಿರಿತ್ಯನ್ಯಾಯೋಜನಾ ।

ಅಥವಾ ಇದೇ ಪಕ್ಷದಲ್ಲಿ 'ತಯೋಃ' ಎಂಬ ಪದವು ಸಪ್ತಮೀ ವಿಭಕ್ತ್ಯಂತವಾಗಿದೆ ಎಂದು ಗ್ರಹಿಸಿ ಆ ಪದವನ್ನು ಲಿಂಗಲಿಂಗಿರೂಪವಾದ ಎರಡು ಧರ್ಮಗಳನ್ನು ಹೇಳುವ ತಾತ್ಪರ್ಯವುಳ್ಳದ್ದು ಎಂದು ವ್ಯಾಖ್ಯಾನ ಮಾಡಬೇಕು. ಹೀಗೆ ಹೇಳಿದಾಗ ಇತ್ಯಾದಿನಾ ಎಂಬಲ್ಲಿರುವ 'ಆದಿ' ಶಬ್ದವು 'ರುದ್ರೋ ವಾವ ಲೋಕಾಧಾರಃ...' ಎಂಬ ವಾಕ್ಯವನ್ನು ಗ್ರಹಿಸುವುದು. ಹೀಗೆ ತತ್ರ ತಯೋಃ ಪ್ರಾಪ್ತಿಃ ಎಂಬುದಾಗಿ ದೂರದ ಪದಗಳಿಗೆ ಅನ್ವಯ ಮಾಡಿ, ತತ್ರ - ಆ ಪರವಿದ್ಯಾವಿಷಯತ್ವದಲ್ಲಿ ತಯೋಃ - ರುದ್ರಜೀವರಿಗೆ, ಪ್ರಾಪ್ತಿ ಇರುವುದು ಎಂದು ಮತ್ತೊಂದು ಭಾಷ್ಯದ ಪದಗಳ ಯೋಜನೆಯಾಗಿದೆ.

ಭಾ.ದೀ. – ತತ್ರ ಆದ್ಯಯೋಜನಾಯಾಂ ದ್ಯುಭ್ವಾದ್ಯಾಯತನಸ್ಯ ವಿಷ್ಣ್ವ-ನ್ಯತ್ವಾಕ್ಷೇಪಮುಖೇನ 'ತಮೇವಮ್' ಇತ್ಯಾದಿನಾ 'ಅಮೃತಸ್ಯೈಷ ಸೇತುಃ' (ಮುಂ. ೨.೨.೫) ಇತಿ ವಾಕ್ಯಶೇಷಬಲಾತ್ ಪ್ರತೀತಸ್ಯ ಮೋಕ್ಷಜನಕಜ್ಞಾನಜನಕವಿದ್ಯಾ-ವಿಷಯತ್ವರೂಪಸ್ಯ ತತ್ತ್ವಪ್ರದೀಪರೀತ್ಯಾ ಅನನ್ಯಯೋಗೇನ ಪ್ರಾಧಾನ್ಯೇನ ಜ್ಞೇಯತ್ವರೂಪಸ್ಯ ವಾ ಪರವಿದ್ಯಾವಿಷಯತ್ವಸ್ಯ ಪೂರ್ವೋಕ್ತಸ್ಯ ವಿಷ್ಣೋರಿತರ-ತ್ವಾಕ್ಷೇಪಾದ್ ಅದೃಶ್ಯತ್ವಾಧಿಕರಣೇನಾಸ್ಯ ಆಕ್ಷೇಪಿಕೀಸಂಗತಿರುಕ್ತಾ ಭವತಿ । ತಥಾ ದ್ಯುಭ್ವಾದ್ಯಾಯತನತ್ವರೂಪೋ ವಿಷಯೋ ದರ್ಶಿತಃ । ದ್ವಿವಿಧದ್ವಿತೀಯ-ಯೋಜನಾಯಾಂ ಸಯುಕ್ತಿಕಪೂರ್ವಪಕ್ಷೋ ದರ್ಶಿತಃ । ತೃತೀಯಾಯಾಂ ತು ಪೂರ್ವಫಲಂ ದರ್ಶಿತಮಿತಿ ದ್ರಷ್ಟವ್ಯಮ್ ।

ಇಲ್ಲಿ ಮೊದಲನೆಯ ಯೋಜನೆಯಲ್ಲಿ ದ್ಯು, ಭೂ ಮೊದಲಾದವುಗಳಿಗೆ ಆಶ್ರಯನಾದವನು ವಿಷ್ಣುಭಿನ್ನನಾಗಿದ್ದಾನೆ ಎಂದು ಆಕ್ಷೇಪಿಸುವ ಮೂಲಕ 'ತಮೇವಮ್' ಎಂದು ಆರಂಭಿಸಿ, 'ಅಮೃತಸ್ಯೈಷ ಸೇತುಃ' ಎಂಬಲ್ಲಿಯವರೆಗೆ ವಾಕ್ಯಶೇಷದಿಂದ ತಿಳಿದುಬರುವ ಮೋಕ್ಷಕ್ಕೆ ಕಾರಣವಾದ ಜ್ಞಾನಕ್ಕೆ ಜನಕವಾದ ವಿದ್ಯಾವಿಷಯತ್ವರೂಪ-ವಾದ ಅಥವಾ ತತ್ವಪ್ರದೀಪರೀತ್ಯಾ ಇನ್ನ್ಯಾವುದಕ್ಕೂ ಸಂಬಂಧಿಸದೇ ಪ್ರಾಧಾನ್ಯೇನ ಜ್ಞೇಯತ್ವರೂಪವಾದ ಪರವಿದ್ಯಾವಿಷಯತ್ವವು ಹಿಂದೆ ಹೇಳಲಾದ ವಿಷ್ಣುವಿಗಲ್ಲದೇ ಇತರರಿಗೆ ಸಂಬಂಧಪಟ್ಟಿದ್ದು ಎಂದು ಆಕ್ಷೇಪಿಸುವುದರಿಂದ ಈ ಅಧಿಕರಣಕ್ಕೆ ಅದೃಶ್ಯತ್ವಾಧಿಕರಣದಿಂದ ಆಕ್ಷೇಪಿಕೀ ಸಂಗತಿ ಇರುವುದೆಂದು ಹೇಳಿದಂತಾಗುವುದು. ಹಾಗೆಯೇ ಈ ಅಧಿಕರಣಕ್ಕೆ ದ್ಯುಭ್ವಾದ್ಯಾಯತನತ್ವ ಎಂಬ ವಿಷಯವಿರುವುದೆಂದು ತಿಳಿಸಿದಂತಾಗುವುದು. ಎರಡು ವಿಧವಾದ ಎರಡನೆಯ ಯೋಜನೆಯಲ್ಲಿ ಸಯುಕ್ತಿಕ-ವಾದ ಪೂರ್ವಪಕ್ಷವು ದರ್ಶಿತವಾಗಿದೆ. ಮೂರನೆಯ ಯೋಜನೆಯಲ್ಲಾದರೋ ಪೂರ್ವಪಕ್ಷದ ಫಲವು ದರ್ಶಿತವಾಗಿದೆ ಎಂದು ತಿಳಿಯತಕ್ಕದ್ದು.

ಭಾ.ದೀ. – 'ಯಸ್ಮಿನ್' ಪರಮಾತ್ಮನಿ ದ್ವ್ಯಾದಿಲೋಕಾಃ 'ಮನಃ' ತದಭಿ-ಮಾನೀ, 'ಸರ್ವೈಃ ಪ್ರಾಣೈಃ' ಇಂದ್ರಿಯೈಃ ತದಭಿಮಾನಿಭಿಶ್ಚ ಸಹ 'ತಂ' ಪ್ರವಿಷ್ಟಂ ಪರಮಾತ್ಮಾನಮ್ 'ಏಕಂ' ಪ್ರಧಾನಂ 'ಜಾನಥ' – ಜಾನೀಧ್ವಮ್ ಇತಿ ಶ್ರುತ್ಯರ್ಥಃ।

'ರುದ್ರ ಉ ಮಾ ಆವಿಶ' ಇತಿ ಪದಚ್ಛೇದಃ । ಉ ಇತ್ಯವ್ಯಯಂ, ಸಂಬುದ್ಧಿ-ದ್ಯೋತಕೋ ನಿಪಾತಃ । ಮಾ ಇತ್ಯವ್ಯಯಮ್, ನಾಸ್ಮದಾದೇಶಃ ಮಾಶಬ್ದಃ । ಯದ್ವಾ 'ಮಾ' ಇತ್ಯನೇನ ಅಸ್ಮದಾದೇಶೋ ಮಾಶಬ್ದಶ್ಚ ಇತ್ಯುಭೌ ತಂತ್ರೇಣೋ-ಪಾತ್ತೌ। ಸ ಚ ನಿಷೇಧಾರ್ಥಃ।

ತಥಾ ಚ – ಹೇ ರುದ್ರ! ತ್ವಂ 'ಪ್ರಾಣಾನಾಮ್' ಇಂದ್ರಿಯಾಣಾಮ್, 'ಗ್ರಥ್ಯತೇ ಅಸ್ಮಿನ್ ಇತಿ' 'ಗ್ರಂಥಿಃ' – ಆಶ್ರಯಃ, 'ಅಂತಕಃ' ಸಂಹರ್ತಾ ಚಾಸಿ। ಸ ತ್ವಂ 'ಮಾ' ಮಾಮ್ 'ಆವಿಶ' ಪ್ರವಿಶ – ಮಯಿ ಸನ್ನಿಧಿಂ ಕುರು ಇತ್ಯರ್ಥಃ। ಯದ್ವಾ–

ಹೇ ರುದ್ರ! ಅಂತಕಸ್ತ್ವಂ ಮಾಂ ಮಾ ಪ್ರವಿಶೇತ್ಯರ್ಥಃ। 'ತೇನ' ಆಹುತಿರೂಪೇಣ ದತ್ತೇನ 'ಅನ್ನೇನ' ಮಾಮ್ 'ಆಪ್ಯಾಯಸ್ವ' ಸುಖಯ।

ಯೋ 'ಬ್ರಹ್ಮಣೇ' ಚತುರ್ಮುಖಾಯ 'ಬ್ರಹ್ಮ' ವೇದಾನ್ 'ಉಜ್ಜಭಾರ' ಉಜ್ಜಹಾರ, ಸ 'ಪ್ರಾಣೇಶ್ವರಃ' ಇಂದ್ರಿಯೇಶಃ, 'ಕೃತ್ತಿವಾಸಾಃ' ಕೃತ್ತಿಶ್ಚರ್ಮ ವಸನಂ ಯಸ್ಯಾಸೌ, 'ಪಿನಾಕೀ' ಈಶಾನೋ ನ ಆಯುಃ 'ದಧಾತು' ಪುಷ್ಣಾತು - ಇತಿ ಶ್ರುತ್ಯಂತರಾರ್ಥಃ।

ಸ ಏಷ ಜೀವೋ 'ಬಹುಧಾ' ಬಹುಶರೀರೇಣ ಉತ್ಪದ್ಯಮಾನಃ ಶರೀರಾಂತಃ-ಸಂಚಾರಿ – ಇತ್ಯಾಥರ್ವಣಶ್ರುತ್ಯರ್ಥಃ।

ಯಸ್ಮಿನ್ - ಯಾವ ಪರಮಾತ್ಮನಲ್ಲಿ , ದ್ಯು ಮೊದಲಾದ ಲೋಕಗಳು 'ಮನಃ'- ಅಂದರೆ ಮನೋಭಿಮಾನಿಯು, 'ಸರ್ವೈಃ ಪ್ರಾಣೈಃ' - ಎಲ್ಲ ಇಂದ್ರಿಯಗಳಿಂದ ಮತ್ತು ಅವುಗಳ ಅಭಿಮಾನಿಗಳಿಂದ ಸಹಿತವಾಗಿ, ಪ್ರವೇಶವನ್ನು ಹೊಂದಿದೆಯೋ 'ತಂ' - ಆ ಪರಮಾತ್ಮನನ್ನು , ಏಕಂ - ಪ್ರಧಾನನಾದವನೆಂದು, 'ಜಾನಥ' - ತಿಳಿಯಿರಿ ಎಂದು ಶ್ರುತಿಯ ಅರ್ಥ.

'ರುದ್ರೋ ಮಾವಿಶಾಂತಕಃ' ಎಂಬಲ್ಲಿ ರುದ್ರ, ಉ, ಮಾ, ಆವಿಶ ಎಂದು ಪದಚ್ಛೇದ. ಉ ಎಂಬ ಪದವು ಅವ್ಯಯವಾಗಿದ್ದು ಸಂಬೋಧನೆಯನ್ನು ಸೂಚಿಸುವ ನಿಪಾತವಾಗಿದೆ. ಮಾ ಎಂಬ ಪದವು ಅವ್ಯಯವಾಗಿದೆ ಹೊರತು ಅಸ್ಮತ್ ಶಬ್ದಕ್ಕೆ ಆದೇಶವಾಗಿ ಬರುವ ಮಾಶಬ್ದವಲ್ಲ. ಅಥವಾ 'ಮಾ' ಎಂಬ ಪದದಿಂದ ಅಸ್ಮತ್ ಶಬ್ದಕ್ಕೆ ಆದೇಶವಾದ ಮಾಶಬ್ದ ಮತ್ತು ಮಾ ಎಂಬ ಅವ್ಯಯ ಇವರೆಡನ್ನೂ ತಂತ್ರದಿಂದ ಸ್ವೀಕರಿಸಲಾಗಿದೆ. ಆ ಮಾ ಎಂಬ ಅವ್ಯಯವು ನಿಷೇಧವಾಚಕವಾಗಿದೆ.

ತಥಾ ಚ – ಹೇ ರುದ್ರ! ಎಲೈ ರುದ್ರನೇ!, ನೀನು 'ಪ್ರಾಣಾನಾಮ್'- ಇಂದ್ರಿಯಗಳಿಗೆ ಗ್ರಂಥಿಯು. 'ಗ್ರಥ್ಯತೇ ಅಸ್ಮಿನ್' ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಆಶ್ರಯನಾಗಿರುವಿ ಮತ್ತು 'ಅಂತಕಃ' ಸಂಹಾರಕನೂ ಆಗಿರುವಿ. ಅಂತಹ ನೀನು 'ಮಾ' ನನ್ನನ್ನು, ಆವಿಶ - ಪ್ರವೇಶಿಸು ನನ್ನಲ್ಲಿ ನಿನ್ನ ಸನ್ನಿಧಾನವನ್ನುಂಟುಮಾಡು ಎಂದರ್ಥ.

ಅಥವಾ – ಹೇ ರುದ್ರ! ಅಂತಕನಾದ ನೀನು ಮಾಂ - ನನ್ನನ್ನು, ಮಾ ಪ್ರವಿಶ - ಪ್ರವೇಶಿಸಬೇಡ ಎಂದು ಅರ್ಥ. 'ತೇನ' - ಆಹುತಿರೂಪವಾಗಿ ಕೊಡಲಾದ 'ಅನ್ನೇನ' ಅನ್ನದಿಂದ ಮಾಮ್ ನನ್ನನ್ನು, ಆಪ್ಯಾಯಸ್ವ - ಸುಖಪಡಿಸು.

'ಯೋ ಬ್ರಹ್ಮಣೇ' - ಯಾರು ಬ್ರಹ್ಮನಿಗೆ 'ಬ್ರಹ್ಮ' - ವೇದಗಳನ್ನು 'ಉಜ್ಜಭಾರ' ಉಪದೇಶಿಸಿದನೋ ಸಃ 'ಪ್ರಾಣೇಶ್ವರಃ' - ಆ ಇಂದ್ರಿಯಗಳಿಗೆ ಸ್ವಾಮಿಯಾದ, ಕೃತ್ತಿವಾಸಾಃ - ಕೃತ್ತಿ ಅಂದರೆ ಚರ್ಮ ಅದನ್ನೇ ವಸನವಾಗುಳ್ಳ, 'ಪಿನಾಕೀ - ಈಶಾನಃ ಎಂದು ಕರೆಯಲ್ಪಡುವ ರುದ್ರನು ನಃ - ನಮ್ಮ, 'ಆಯುಃ' ಆಯುಸ್ಸನ್ನು, ದಧಾತು - ಪೋಷಿಸಲಿ ಎಂದು ಇನ್ನೊಂದು ಶ್ರುತಿಯ ಅರ್ಥ. ಸಿದ್ಧಾಂತದಲ್ಲಾದರೋ ರುದ್ರ ಮೊದಲಾದ ಶಬ್ದಗಳು ವಿಷ್ಣುಪರವಾಗಿವೆ.

ಆ ಪ್ರಸಿದ್ಧನಾದ ಜೀವನು 'ಬಹುಧಾ ಜಾಯಮಾನಃ' - ಬಹುಶರೀರಗಳನ್ನು ಧರಿಸಿ ಹುಟ್ಟುವವನು. 'ಅಂತಶ್ಚರತೇ' - ಶರೀರದ ಒಳಗೆ ಸಂಚರಿಸುವವನು ಎಂದು ಆಥರ್ವಣಶ್ರುತಿಯ ಅರ್ಥ.

ಭಾ.ದೀ. – ಸಿದ್ಧಾಂತಯತ್ ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ 'ಅತ' ಎಂಬ ವಾಕ್ಯದಿಂದ ಅವತಾರಿಕೆಯನ್ನು ಕೊಟ್ಟು ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತ ಉಚ್ಯತೇ –**

**॥ ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ ॥ ೧ ॥**

**'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾತ್ಮಶಬ್ದಾತ್ ದ್ಯುಭ್ವಾದ್ಯಾಶ್ರಯೋ ವಿಷ್ಣುರೇವ ।**

ಆದ್ದರಿಂದ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂದು ಹೇಳಲಾಗಿದೆ. 'ತಮೇವೈಕಂ ಜಾನಥ ಆತ್ಮಾನಮ್' ಎಂಬಲ್ಲಿ ಇರುವ

ಆತ್ಮಶಬ್ದದ ಆಧಾರದಿಂದ ದ್ಯುಭ್ವಾದ್ಯಾಶ್ರಯನು ವಿಷ್ಣುವೇ ಆಗಿ-
ದ್ದಾನೆ.

ಭಾ.ದೀ. – ಸೌತ್ರ-ಸ್ವಶಬ್ದಸ್ಯ - 'ಸ್ವಶಬ್ದಪರ್ಯಾಯಾತ್ಮಶಬ್ದಾತ್' ಇತಿ ವಿಷ್ಣುತತ್ವನಿರ್ಣಯೋಕ್ತೇಃ, 'ಸ್ವೇತಿ ಶಬ್ದಃ ಸ್ವಶಬ್ದಃ ಇತಿ ವ್ಯುತ್ಪತ್ತ್ಯಾ ಸ್ವಶಬ್ದಪರ್ಯಾಯಾತ್ಮಶಬ್ದಗ್ರಾಹಿತ್ವಂ ವಿಷ್ಣೋಃ ಸ್ವರೂಪಸ್ಯೈವ ಸಾಕ್ಷಾದ್ವಾಚಕೋ ಹಿ ಆತ್ಮಶಬ್ದಃ' ಇತಿ ತತ್ತ್ವಪ್ರದೀಪೋಕ್ತೇಃ, 'ಸ್ವಸ್ಯ ವಿಷ್ಣೋರೇವ ವಾಚಕಃ ಶಬ್ದಃ ಸ್ವಶಬ್ದಃ' ಇತಿ ವಿಗ್ರಹಾಶ್ರಯಣೇನ ಚ - ಆತ್ಮಶಬ್ದ- ಪರಾಮರ್ಶಿತ್ವಮಾಶ್ರಿತ್ಯ 'ಸ್ವಶಬ್ದಾತ್' ಇತ್ಯೇತತ್ 'ಆತ್ಮಶಬ್ದಾತ್' ಇತಿ ವ್ಯಾಖ್ಯಾತಮ್।

ತಥಾ ಚ 'ಇತ್ಯಾತ್ಮಶಬ್ದಾತ್' ಇತ್ಯತ್ರ 'ಆತ್ಮಶಬ್ದಶ್ರವಣಾತ್' ಇತ್ಯರ್ಥಃ । 'ದ್ಯುಭ್ವಾದ್ಯಾಶ್ರಯಃ' ಇತ್ಯನೇನ ಆಯತನಶಬ್ದೋ ವ್ಯಾಖ್ಯಾತಃ । ಕ್ವಚಿದ್ ಆಯತನಶಬ್ದಸ್ಯೈವ ಪಾಠಃ । 'ವಿಷ್ಣೋರೇವ' ಇತ್ಯನೇನ ಸಮನ್ವಯಸೂತ್ರಾನು-ವೃತ್ತಂ 'ತತ್ತು' ಇತ್ಯೇತತ್ ಶ್ರುತ್ಯನುಸಾರಲಿಂಗವಿಪರಿಣಾಮೇನ ವ್ಯಾಖ್ಯಾತಮ್।

ಅನೇನ 'ಸ್ವಶಬ್ದಾತ್' ವಿಷ್ಣುವಾಚಿಸ್ವಶಬ್ದಪರ್ಯಾಯಾತ್ಮಶಬ್ದಾತ್ 'ದ್ಯುಭ್ವಾ-ದ್ಯಾಯತನಂ' ಸ್ವರ್ಗಭೂಮ್ಯಾದಿಸರ್ವಾಶ್ರಯಃ 'ತತ್ತು' ವಿಷ್ಣುರೇವೇತಿ ಸೂತ್ರಾರ್ಥ ಉಕ್ತೋ ಭವತಿ।

ಸೂತ್ರದಲ್ಲಿರುವ ಸ್ವಶಬ್ದಕ್ಕೆ (೧) 'ಸ್ವಶಬ್ದಪರ್ಯಾಯ ಆತ್ಮಶಬ್ದಾತ್ - ಸ್ವಶಬ್ದಕ್ಕೆ ಪರ್ಯಾಯಶಬ್ದವಾಗಿರುವ ಆತ್ಮಶಬ್ದದಿಂದ' ಎಂದು ವಿಷ್ಣುತತ್ವನಿರ್ಣಯದಲ್ಲಿ ಹೇಳಿರುವುದರಿಂದ, ಹಾಗೂ (೨) 'ಸ್ವೇತಿಶಬ್ದಃ ಸ್ವಶಬ್ದಃ' 'ಸ್ವ ಎಂಬ ಶಬ್ದ ಸ್ವಶಬ್ದ' ಎಂಬ ವ್ಯುತ್ಪತ್ತಿಗನುಸಾರವಾಗಿ ಸ್ವಶಬ್ದವು ಅದಕ್ಕೆ ಪರ್ಯಾಯವಾದ ಆತ್ಮಶಬ್ದವನ್ನೇ ತಿಳಿಸಿವುದು. ವಿಷ್ಣುವಿನ ಸ್ವರೂಪವನ್ನೇ ಸಾಕ್ಷಾತ್ತಾಗಿ ಹೇಳುವ ಶಬ್ದವೇ ಈ ಆತ್ಮಶಬ್ದ-ವಾಗಿದೆ – ಎಂದು ತತ್ವಪ್ರದೀಪದಲ್ಲಿ ಹೇಳಿರುವುದರಿಂದ. ಮತ್ತು (೩) ಸ್ವಸ್ಯ - ಅಂದರೆ ವಿಷ್ಣುವಿಗೇ ವಾಚಕವಾದ ಶಬ್ದವು ಸ್ವಶಬ್ದ ಎಂಬ ವಿಗ್ರಹವನ್ನು ಆಶ್ರಯಿಸುವು-

ದರಿಂದಲೂ ಸ್ವಶಬ್ದವು ಆತ್ಮಶಬ್ದವನ್ನು ಪರಾಮರ್ಶಿಸುವುದು ಎಂದು ಭಾವಿಸಿ ಭಾಷ್ಯದಲ್ಲಿ 'ಸ್ವಶಬ್ದಾತ್' ಎಂಬ ಪದವನ್ನು 'ಆತ್ಮಶಬ್ದಾತ್' ಎಂದು ವ್ಯಾಖ್ಯಾನ-ಮಾಡಲಾಗಿದೆ.

ತಥಾ ಚ - 'ಇತ್ಯಾತ್ಮಶಬ್ದಾತ್' - ಅಂದರೆ ಇತ್ಯತ್ರ - 'ತಮೇವೈಕಂ ಇತ್ಯಾದಿ ಶ್ರುತಿಯಲ್ಲಿ' ಆತ್ಮಶಬ್ದವು ಶ್ರುತವಾಗಿರುವುದರಿಂದ ಎಂದು ಅರ್ಥ. ಭಾಷ್ಯದಲ್ಲಿ 'ದ್ಯುಭ್ವಾದ್ಯಾಶ್ರಯಃ' ಎಂಬ ಪದದಿಂದ ಸೂತ್ರದ ಆಯತನಶಬ್ದವನ್ನು ವ್ಯಾಖ್ಯಾನಮಾಡಲಾಗಿದೆ. ಕೆಲವು ಹಸ್ತಪ್ರತಿಗಳಲ್ಲಿ ಭಾಷ್ಯದಲ್ಲಿ ಆಯತನಶಬ್ದದ ಪಾಠವೇ ಇರುವುದು. 'ವಿಷ್ಣುರೇವ' ಎಂಬ ಪದದಿಂದ ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ 'ತತ್ ತು' ಎಂಬ ಪದಗಳು 'ತಮೇವ' ಎಂಬ ಶ್ರುತಿಯನ್ನು ಅನುಸರಿಸಿ ಪುಲ್ಲಿಂಗವಾಗಿ ಬದಲಾಯಿಸಿ ವ್ಯಾಖ್ಯಾನಿಸಲ್ಪಟ್ಟಿವೆ.

ಇದರಿಂದ 'ಚಶಬ್ದಾತ್' - ವಿಷ್ಣುವಾಚಕವಾದ ಸ್ವಶಬ್ದಕ್ಕೆ ಪರ್ಯಾಯವಾದ ಆತ್ಮಶಬ್ದವಿರುವುದರಿಂದ ದ್ಯುಭ್ವಾದ್ಯಾಯತನಂ - ಸ್ವರ್ಗಭೂಮಿ ಮೊದಲಾದ ಸಕಲಕ್ಕೆ ಆಶ್ರಯನಾದವನು 'ತತ್ತು' ವಿಷ್ಣುವೇ ಆಗಿದ್ದಾನೆ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಆತ್ಮಶಬ್ದಾದಪಿ ಕುತೋಽಯಂ ವಿಷ್ಣುರಿತ್ಯತ ಆಹ – ಆತ್ಮೇತಿ ॥

ಆತ್ಮಶಬ್ದವಿರುವುದರಿಂದಲೂ ವಿಷ್ಣುವೇ ಇಲ್ಲಿ ಪ್ರತಿಪಾದ್ಯನೆಂದು ಹೇಳಲು ಆಧಾರವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಭಾಷ್ಯದಲ್ಲಿ 'ಆತ್ಮ' ಎಂದು ಪ್ರಮಾಣವನ್ನು ಉದಾಹರಿಸಲಾಗಿದೆ.

**ಭಾಷ್ಯಮ್ –**

**'ಆತ್ಮಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್ ।**
**ನ ಸಂಭವಂತಿ ಯಸ್ಮಾತ್ ತೈರ್ನೈರ್ಽವಾಪ್ತಾ ಗುಣಪೂರ್ಣತಾ ॥'**

**ಇತಿ ಬ್ರಹ್ಮವೈವರ್ತೇ ॥ ೧ ॥**

ಭಾ.ದೀ.– 'ಯಸ್ಮಾತ್' 'ತೈಃ' ವಿಷ್ಣೋರಿತರೈಶ್ಚತುರ್ಮುಖಾದಿಜೀವೈಃ, ಗುಣಪೂರ್ಣತಾ 'ನೈವಾಽಪ್ತಾ' ನ ಸರ್ವಥಾ ಆಪ್ತಾ। ತಸ್ಮಾತ್ ಆತ್ಮಬ್ರಹ್ಮಾದಯಃ ಶಬ್ದಾಃ 'ಅವ್ಯಯಂ' ನಿತ್ಯನಿರತಿಶಯಪ್ರವೃತ್ತಿನಿಮಿತ್ತವಂತಂ ವಿಷ್ಣುಮ್, 'ಋತೇ' ವಿನಾ ತದನ್ಯಂ 'ನ ಸಂಭವಂತಿ' ನ ಮುಖ್ಯತೋ ವಾಚಕತ್ವೇನ ಪ್ರಾಪ್ನುವಂತಿ – ಇತ್ಯರ್ಥಃ।

ಅನೇನ ಆತ್ಮಶಬ್ದಸ್ಯಾಪಿ ಗುಣಪೂರ್ತಿರರ್ಥ ಇತ್ಯುಕ್ತಂ ಭವತಿ। 'ಬ್ರಹ್ಮವೈವರ್ತೇ' ಇತ್ಯನಂತರಮ್ 'ಅನ್ಯತ್ರ ನಿರವಕಾಶತಯಾ ಉಕ್ತಾತ್' ಇತಿಶೇಷಃ । ತಸ್ಯ 'ಆತ್ಮಶಬ್ದಾತ್' ಇತ್ಯನೇನಾನ್ವಯಃ।

'ಯಸ್ಮಾತ್' ಯಾವ ಕಾರಣದಿಂದಾಗಿ 'ತೈಃ' - ವಿಷ್ಣುವಿನಿಂದ ಭಿನ್ನರಾದ ಚತುರ್ಮುಖನೇ ಮೊದಲಾದ ಜೀವರಿಂದ 'ಗುಣಪೂರ್ಣತಾ ನೈವ ಆಪ್ತಾ' - ಗುಣಪೂರ್ಣತ್ವವು ಸರ್ವಥಾ ಪ್ರಾಪ್ತವಾಗಿಲ್ಲವೋ ಆ ಕಾರಣದಿಂದ 'ಆತ್ಮಬ್ರಹ್ಮಾದಯಃ ಶಬ್ದಾಃ' - ಆತ್ಮ ಬ್ರಹ್ಮ ಮೊದಲಾದ ಶಬ್ದಗಳು 'ಅವ್ಯಯಮ್' - ನಿತ್ಯವೂ ನಿರತಿಶಯವೂ ಆದ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಹೊಂದಿರುವ 'ವಿಷ್ಣುಮ್ ಋತೇ' - ವಿಷ್ಣುವನ್ನು ಬಿಟ್ಟು ಇತರರನ್ನು, 'ನ ಸಂಭವಂತಿ' - ಮುಖ್ಯತಯಾ ವಾಚಕವಾಗಿ ಹೊಂದಿರುವುದಿಲ್ಲ ಎಂದು ಅರ್ಥ.

ಇದರಿಂದ ಆತ್ಮಶಬ್ದಕ್ಕೂ ಗುಣಪೂರ್ಣತ್ವವು ಅರ್ಥವಾಗಿದೆ ಎಂದು ಹೇಳಿದಂತಾಗುವುದು. 'ಬ್ರಹ್ಮವೈವರ್ತೇ' ಎಂಬ ಪದದ ನಂತರ 'ಅನ್ಯತ್ರ ನಿರವಕಾಶತಯಾ ಉಕ್ತಾತ್' ಎಂಬ ಪದಗಳನ್ನು ಶೇಷವಾಗಿ ಸೇರಿಸಬೇಕು. ಅದಕ್ಕೆ 'ಆತ್ಮಶಬ್ದಾತ್' ಎಂಬ ಪದದೊಂದಿಗೆ ಅನ್ವಯವಾಗುವುದು. ಹೀಗೆ ಬ್ರಹ್ಮವೈವರ್ತ ಪುರಾಣದಲ್ಲಿ ವಿಷ್ಣುವನ್ನು ಬಿಟ್ಟು ಇತರರಲ್ಲಿ ಅವಕಾಶರಹಿತವಾದುದೆಂದು ಹೇಳಲಾಗಿರುವ ಆತ್ಮಶಬ್ದದಿಂದ ಎಂದು ಅರ್ಥ.

## ಸೂತ್ರಮ್ – ಓಂ ॥ ಮುಕ್ತೋಪಸೃಪ್ಯವ್ಯಪದೇಶಾತ್ ॥ ಓಂ॥೨॥

**'ಅಮೃತಸ್ಯೈಷ ಸೇತುಃ'** (ಮುಂ.೨-೨-೫) **ಇತಿ।**

'ಅಮೃತಸ್ಯೈಷ ಸೇತುಃ' ಎಂದು. 'ದ್ಯುಭ್ವಾದ್ಯಾಯತನನು ಮುಕ್ತರಿಗೆ ಪರಮಪ್ರಾಪ್ಯನು' ಎಂದು ಹೇಳಿರುವುದರಿಂದ ದ್ಯುಭ್ವಾದ್ಯಾಯ-ತನನು ವಿಷ್ಣುವೇ ಆಗಿರುವನು.

ಭಾ.ದೀ. – ನನು ವಿಷ್ಣೌ ಮುಖ್ಯೋಽಪಿ ಆತ್ಮಶಬ್ದೋ ಜಾಯಮಾನತ್ವ-ರೂಪಜೀವಲಿಂಗಬಲಾದಮುಖ್ಯಾರ್ಥ ಕಿಂ ನ ಸ್ಯಾತ್? ತಥಾ ಚ - ನ ತತೋ ವಿಷ್ಣೋರ್ದ್ಯುಭ್ವಾದ್ಯಾಯತನತ್ವನಿರ್ಣಯ ಇತ್ಯಾಶಂಕಾಂ ಪರಿಹರತ್ ಸೂತ್ರ-ಮುಪನ್ಯಸ್ಯ ತದುಪಾತ್ತಶ್ರುತಿಮೇವೋದಾಹರತಿ – ಮುಕ್ತೇತಿ ॥ 'ಇತಿ ಮುಕ್ತ-ಪ್ರಾಪ್ಯತ್ವವ್ಯಪದೇಶಾತ್' ಇತ್ಯನ್ವಯಃ । ಸೂತ್ರೇ 'ದ್ಯುಭ್ವಾದ್ಯಾಯತನಸ್ಯ' ಇತಿ ವಿಪರಿಣಾಮೇನಾನುವರ್ತನೀಯಮ್ । 'ಮುಕ್ತೋಪಸೃಪ್ಯ' ಇತಿ ಭಾವನಿರ್ದೇಶಃ । ಉಪಸೃಪ್ಯತ್ವಂ ಚೇಹ ಶ್ರೌತಸೇತುಶಬ್ದಬಲಾತ್ ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವಂ ವಿವಕ್ಷಿತಮ್ । ನ ತು ಅರ್ಚಿರಾದಿವತ್ ಪ್ರಾಪ್ಯತ್ವಮಾತ್ರಮ್ ।

ತಥಾ ಚ – ದ್ಯುಭ್ವಾದ್ಯಾಯತನಸ್ಯ 'ಅಮೃತಸ್ಯ' ಇತಿ ಮುಕ್ತೋಪಸೃಪ್ಯತ್ವೋಕ್ತೇಃ ವಿಷ್ಣುತ್ವನಿಶ್ಚಯಾತ್ ನಾಽತ್ಮಶಬ್ದಸ್ಯಾಮುಖ್ಯಾರ್ಥತ್ವಮಾಶ್ರಿತ್ಯ ವಿಷ್ಣೋರನ್ಯದ್ ದ್ಯುಭ್ವಾದ್ಯಾಯತನಂ ಕಲ್ಪ್ಯಮಿತಿ । 'ಮುಕ್ತಾನಾಮ್' ಇತಿ ಸ್ಮರಣಾದ್ 'ಅಮೃತಸ್ಯ' ಇತಿ ಜಾತಾವೇಕವಚನಮ್ । ತಥಾ ಚ 'ಅಮೃತಸ್ಯ' ಮುಕ್ತಜಾತಸ್ಯ 'ಏಷಃ' ಪರಮಾತ್ಮಾ 'ಸೇತುಃ' ಸೇತುರಿವ ಸೇತುರ್ಮುಖ್ಯಾಶ್ರಯ ಇತ್ಯರ್ಥಃ ।

ವಿಷ್ಣುವಿನಲ್ಲಿ ಆತ್ಮಶಬ್ದವು ಮುಖ್ಯವಾಗಿದ್ದರೂ ಜಾಯಮಾನತ್ವವೆಂಬ ಜೀವನ ಲಿಂಗವು ಪ್ರಬಲವಾದುದರಿಂದ ಇಲ್ಲಿರುವ ಆತ್ಮಶಬ್ದವು ಅಮುಖ್ಯಾರ್ಥವುಳ್ಳದ್ದು ಎಂದು ಏಕೆ ಹೇಳಬಾರದು? ತಥಾ ಚ – ಆ ಆತ್ಮಶಬ್ದದಿಂದ ವಿಷ್ಣುವಿಗೆ ದ್ಯುಭ್ವಾದ್ಯಾ-ಯತನತ್ವವಿರುವುದೆಂದು ಹೇಳಲಾಗುವುದಿಲ್ಲ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸ ಮಾಡಿ ಆ ಸೂತ್ರವು ಗ್ರಹಿಸಿರುವ ಶ್ರುತಿಯನ್ನೇ ಭಾಷ್ಯಕಾರರು 'ಅಮೃತಸ್ಯ' ಎಂದು ಉದಾಹರಿಸುತ್ತಿದ್ದಾರೆ. ಭಾಷ್ಯದ ಇತಿ ಪದಕ್ಕೆ 'ಇತಿ ಮುಕ್ತ-ಪ್ರಾಪ್ಯತ್ವವ್ಯಪದೇಶಾತ್' ಎಂಬುದಾಗಿ ಸೂತ್ರದ ಪದದೊಂದಿಗೆ ಅನ್ವಯವಾಗುವುದು.

ಸೂತ್ರದಲ್ಲಿ 'ದ್ಯುಭ್ವಾದ್ಯಾಯತನಸ್ಯ' ಎಂಬುದಾಗಿ ಹಿಂದಿನ ಸೂತ್ರದ ಶಬ್ದವನ್ನು ವಿಭಕ್ತಿವ್ಯತ್ಯಾಸಮಾಡಿಕೊಂಡು ಅನುವರ್ತನೆ ಮಾಡಿಕೊಳ್ಳಬೇಕು. ಸೂತ್ರದ 'ಮುಕ್ತೋಪಸೃಪ್ಯ' ಎಂಬ ಪದವು ಭಾವ ಅಂದರೆ ಮುಕ್ತೋಪಸೃಪ್ಯತ್ವರೂಪ ಧರ್ಮವನ್ನೇ ಪ್ರಧಾನವಾಗಿ ನಿರ್ದೇಶಿಸುವ ಪದವಾಗಿದೆ. ಈ ಸೂತ್ರದಲ್ಲಿ ಉಪ-ಸೃಪ್ಯತ್ವವೆಂದರೆ ಭಾಷ್ಯದಲ್ಲಿ ಉದಾಹರಿಸಿರುವ ಶ್ರುತಿಯಲ್ಲಿರುವ 'ಸೇತು' ಎಂಬ ಶಬ್ದಕ್ಕೆ ಅನುಸಾರವಾಗಿ 'ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವ' ಅಂದರೆ 'ಇನ್ನೊಂದು ಹೊಂದಬೇಕಾದದ್ದು ಇಲ್ಲದೇ ಹೊಂದಲ್ಪಡತಕ್ಕದ್ದು' ಎಂದು ವಿವಕ್ಷಿತವಾಗಿದೆ. ಹೊರತು ಅರ್ಚಿರಾದಿ ಲೋಕಗಳಂತೆ ಹೊಂದಲ್ಪಡತಕ್ಕದ್ದು ಎಂದು ಇಷ್ಟು ಮಾತ್ರ ಅರ್ಥವಲ್ಲ.

ತಥಾ ಚ – ದ್ಯುಭ್ವಾದ್ಯಾಯತನನಿಗೆ 'ಅಮೃತಸ್ಯ' ಎಂಬ ಶ್ರುತಿಯಲ್ಲಿ ಮುಕ್ತೋಪಸೃಪ್ಯತ್ವವನ್ನು ಹೇಳಿರುವುದರಿಂದ ಅವನು ವಿಷ್ಣುವೆಂದೇ ನಿಶ್ಚಯವಾಗು-ವುದು. ಆದ್ದರಿಂದ ಆತ್ಮಶಬ್ದಕ್ಕೆ ಅಮುಖ್ಯಾರ್ಥವನ್ನು ಆಶ್ರಯಿಸಿ ವಿಷ್ಣುಭಿನ್ನನಿಗೇ ದ್ಯುಭ್ವಾದ್ಯಾಯತನತ್ವವು ಇಲ್ಲಿ ಹೇಳಲಾಗಿದೆ ಎಂದು ಕಲ್ಪಿಸತಕ್ಕದ್ದಲ್ಲ. 'ಮುಕ್ತಾನಾಂ ಪರಮಾಗತಿಃ' ಎಂಬುದಾಗಿ ಸ್ಮೃತಿವಾಕ್ಯವಿರುವುದರಿಂದ ಶ್ರುತಿಯಲ್ಲಿ 'ಅಮೃತಸ್ಯ' ಎಂಬಲ್ಲಿರುವ ಏಕವಚನವು ಸಮುದಾಯದ ವಿವಕ್ಷೆಯಿಂದ ಕೂಡಿದೆ. ತಥಾ ಚ – 'ಅಮೃತಸ್ಯ' - ಮುಕ್ತಸಮೂಹಕ್ಕೆ, 'ಏಷಃ' - ಈ ಪರಮಾತ್ಮನು 'ಸೇತುಃ' - ಸೇತು-ವಿನಂತೆ ಮುಖ್ಯಾಶ್ರಯನಾಗಿದ್ದಾನೆ ಎಂದು ಅರ್ಥ.

ಭಾದೀ. – ನನು ದ್ಯುಭ್ವಾದ್ಯಾಯತನಸ್ಯ ಮುಕ್ತಪ್ರಾಪ್ಯತ್ವಂ ಕುತಃ ವಿಷ್ಣುತ್ವ-ನಿಶ್ಚಾಯಕಮ್? ಇತ್ಯಾಶಂಕಾಪರಿಹಾರಕತಯಾಽಪಿ ಸೂತ್ರಂ ವ್ಯಾಚಷ್ಟೇ – ಬ್ರಹ್ಮವಿದಿತಿ ॥

ದ್ಯುಭ್ವಾದ್ಯಾಯತನನಿಗೆ ಮುಕ್ತಪ್ರಾಪ್ಯತ್ವವಿರುವುದು ಅವನು ವಿಷ್ಣುವೇ ಎಂದು ನಿಶ್ಚಯಿಸಲು ಹೇಗೆ ಕಾರಣವಾಗುವುದು? ಎಂಬ ಆಶಂಕೆಯನ್ನು ಪರಿಹರಿಸು-ವಂತೆಯೂ ಭಾಷ್ಯಕಾರರು ಸೂತ್ರವನ್ನು 'ಬ್ರಹ್ಮವಿತ್'' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾ-ನಿಸುತ್ತಿದ್ದಾರೆ.

**ಭಾಷ್ಯಮ್ – 'ಬ್ರಹ್ಮವಿದಾಪ್ನೋತಿ ಪರಮ್', 'ನಾರಾಯಣಂ ಮಹಾ-ಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್' 'ಮುಕ್ತಾನಾಂ ಪರಮಾ ಗತಿಃ' ''ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ' ಇತ್ಯಾದಿನಾ ತಸ್ಯೈವ ಮುಕ್ತಪ್ರಾಪ್ಯತ್ವವ್ಯಪದೇಶಾತ್ ।**

'ಬ್ರಹ್ಮವಿದಾಪ್ನೋತಿ ಪರಮ್', 'ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್', 'ಮುಕ್ತಾನಾಂ ಪರಮಾ ಗತಿಃ' ''ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿರುವ ಶ್ರುತಿಸ್ಮೃತಿಗಳಿಂದ ವಿಷ್ಣುವಿಗೇ ಮುಕ್ತಪ್ರಾಪ್ಯತ್ವ ಇರುವುದೆಂದು ಹೇಳಲಾಗಿದೆ.

ಭಾ.ದೀ. – 'ಇತ್ಯಾದಿನಾ' ವಾಕ್ಯೇನ, 'ತಸ್ಯ' ವಿಷ್ಣೋಃ । 'ಏವ' ಇತ್ಯನೇನ ಪ್ರಾಪ್ಯತ್ವಂ ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವಮ್ । ಅನೇನ ದ್ಯುಭ್ವಾದ್ಯಾಯ-ತನಸ್ಯ ಮುಕ್ತೋಪಸೃಪ್ಯತ್ವವ್ಯಪದೇಶಾತ್ ತಸ್ಯ ವಿಷ್ಣೋರೇವ ಮುಕ್ತೋಪಸೃಪ್ಯತ್ವ-ವ್ಯಪದೇಶಾತ್ ಇತ್ಯಾವೃತ್ತ್ಯಾ ಸೂತ್ರಂ ವ್ಯಾಖ್ಯಾತಮ್ ।

ಪ್ರಧಾನಸೂತ್ರೇ ಅನುವೃತ್ತಂ 'ತತ್ತು' ಇತ್ಯೇತದಿಹ ವಿಪರಿಣಾಮೇನ ಅನು-ವರ್ತನೀಯಮಿತಿ ಸೂಚಿತಮ್ ।

ಭಾಷ್ಯದಲ್ಲಿ 'ಇತ್ಯಾದಿನಾ' ಅಂದರೆ ಇವೇ ಮೊದಲಾದ ವಾಕ್ಯಗಳಿಂದ, 'ತಸ್ಯ' ಅಂದರೆ ವಿಷ್ಣುವಿಗೆ ಎಂದರ್ಥ. 'ಏವ' ಎಂಬ ಪದದಿಂದ ಇಲ್ಲಿ ವಿವಕ್ಷಿತವಾದ 'ಪ್ರಾಪ್ಯತ್ವ' ಎಂದರೆ 'ಇನ್ನೊಂದು ಪ್ರಾಪ್ಯವಾಗತಕ್ಕಂಥದ್ದು ಇಲ್ಲದೇ ಪ್ರಾಪ್ಯವಾಗುವುದು' ಎಂದು ಅರ್ಥ ಲಭಿಸುವುದು. ಇದರಿಂದ ದ್ಯುಭ್ವಾದ್ಯಾಯತನನಿಗೆ ಮುಕ್ತೋಪ-ಸೃಪ್ಯತ್ವವನ್ನು ಹೇಳಿರುವುದರಿಂದ 'ತಸ್ಯೈವ' ಆ ವಿಷ್ಣುವಿಗೇ ಮುಕ್ತೋಪಸೃಪ್ಯತ್ವವನ್ನು ಹೇಳಿರುವುದರಿಂದ ಎಂದು 'ಮುಕ್ತೋಪಸೃಪ್ಯತ್ವವ್ಯಪದೇಶಾತ್' ಎಂಬ ಪದವನ್ನು ಆವೃತ್ತಿಮಾಡಿಕೊಂಡು ಸೂತ್ರವನ್ನು ವ್ಯಾಖ್ಯಾನಿಸಲಾಗಿದೆ.

ಈ ಅಧಿಕರಣದ ಪ್ರಧಾನಸೂತ್ರವಾದ ಮೊದಲನೆಯ ಸೂತ್ರದಲ್ಲಿ ಅನುವೃತ್ತಿ-ಹೊಂದಿರುವ 'ತತ್, ತು' ಎಂಬ ಪದಗಳನ್ನು ವಿಭಕ್ತಿಬದಲಾವಣೆಯೊಂದಿಗೆ ಈ ಸೂತ್ರದಲ್ಲಿ ಅನುವೃತ್ತಿಮಾಡಿಕೊಳ್ಳಬೇಕೆಂದು ಸೂಚಿತವಾಯಿತು. ಸೂತ್ರದ 'ಉಪಸೃಪ್ಯ'ಪದವನ್ನು ಧರ್ಮವನ್ನೇ ಪ್ರಧಾನವನ್ನಾಗಿ ಹೇಳುವ ಶಬ್ದವನ್ನಾಗಿ ಭಾವಿಸಿ ವ್ಯಾಖ್ಯಾನ ಮಾಡಲಾಗಿದೆ. ಏವಕಾರವು ಈ ಮುಕ್ತೋಪಸೃಪ್ಯತ್ವ ಎಂಬ ಲಿಂಗವು ಅನ್ಯನಿಷ್ಠವಲ್ಲವೆಂದು ತಿಳಿಸುವುದು.

'ಬ್ರಹ್ಮವಿತ್' - ವಿಷ್ಣುವಿನ ಜ್ಞಾನಿಯು ಮುಕ್ತನಾಗಿ 'ಪರಂ' ಸರ್ವೋತ್ತಮನಾದ ವಿಷ್ಣುವನ್ನು 'ಆಪ್ನೋತಿ' - ಹೊಂದುವನು ಎಂದು ತೈತ್ತಿರೀಯಶ್ರುತಿಯ ಅರ್ಥ.

'ನಾರಾಯಣಮ್' ಎಂಬ ವಾಕ್ಯವು ತೈತ್ತಿರೀಯೋಪನಿಷತ್ತಿನಲ್ಲಿ ಹಾಗೂ ಮಹೋಪನಿಷತ್ತಿನಲ್ಲಿ ಶ್ರುತವಾಗಿದೆ. ಈ ವಾಕ್ಯದಲ್ಲಿ 'ತದ್ವಿಶ್ವಮುಪಜೀವತಿ' ಎಂಬ ಪದಗಳು ಹಿಂದಿನ ವಾಕ್ಯದಿಂದ ಅನುವೃತ್ತಗೊಳ್ಳುತ್ತವೆ. ತಥಾ ಚ – 'ತದ್ವಿಶ್ವಂ' ಆ ಜಗತ್ತು, 'ಮಹಾಜ್ಞೇಯಂ' - ಮಹನೀಯನೂ, ಜ್ಞೇಯನೂ ಆದ ಅಥವಾ ಪೂಜ್ಯಜ್ಞೇಯನಾದ 'ವಿಶ್ವಾತ್ಮಾನಂ' - ಸಮಸ್ತಜಗತ್ತಿಗೇ ಸ್ವಾಮಿಯಾದ, 'ಪರಾಯಣಂ' - ಮುಕ್ತರಿಗೆ ಆಶ್ರಯನಾದ ನಾರಾಯಣನನ್ನು 'ಉಪಜೀವತಿ' - ಆಶ್ರಯಿಸಿಕೊಂಡಿದೆ ಎಂದು ಶ್ರುತಿಯ ಅರ್ಥ.

'ಮುಕ್ತಾನಾಂ ಪರಮಾ ಗತಿಃ' - ಎಂಬುದು ವಿಷ್ಣುಸಹಸ್ರನಾಮದಲ್ಲಿರುವ ಭಗವಂತನ ಒಂದು ನಾಮವಾಗಿದೆ. ಪರಮಾ ಗತಿಃ ಎಂದರೆ 'ಪರಮಾ' ಎಂದರೆ ಮುಖ್ಯವಾದ, 'ಗಮ್ಯತೇ ಇತಿ ಗತಿಃ' ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಹೊಂದ-ಲ್ಪಡುವವನು, ಆಶ್ರಯನು ಎಂದು ಅರ್ಥ.

'ಏತಮ್'- ಎಂಬ ತೈತ್ತಿರೀಯವಾಕ್ಯವು ಆನಂದಮಯಾಧಿಕರಣದಲ್ಲಿ ವ್ಯಾಖ್ಯಾನ-ಮಾಡಲ್ಪಟ್ಟಿದೆ. 'ಇತ್ಯಾದಿನಾ' ಎಂಬಲ್ಲಿರುವ ಆದಿಪದದಿಂದ 'ಏತಮಾನಂದ-ಮಯಮ್ ಆತ್ಮಾನಮ್ ಉಪಸಂಕ್ರಮ್ಯ', 'ಪರಮಂ ಯಃ ಪರಾಯಣಮ್' ಇತ್ಯಾದಿವಾಕ್ಯಗಳು ಗ್ರಹಿಸಲ್ಪಡುತ್ತವೆ.

ಭಾ.ದೀ. – ನನು ಉದಾಹೃತವಾಕ್ಯೈರಸ್ತು ವಿಷ್ಣೋಃ ಮುಕ್ತಪ್ರಾಪ್ಯತ್ವಂ, ತಥಾಽಪ್ಯತ್ರಾನ್ವಯವ್ಯವಚ್ಛೇದಾಭಾವಾದ್ ವಿಷ್ಣುವದನ್ಯಸ್ಯ ಮುಕ್ತಪ್ರಾಪ್ಯತ್ವಂ ಕಿಂ ನಸ್ಯಾತ್ ಇತಿ ಲಿಂಗಸ್ಯ ಸಾವಕಾಶತ್ವಮಾಶಂಕ್ಯ ಅನ್ಯತ್ರ ಪ್ರಾಪ್ಯತ್ವಮಾತ್ರಸಂಭವೇಽಪಿ ನಿರುಕ್ತೋಪಸೃಪ್ಯತ್ವಂ ಸ್ರೌತಮುಕ್ತಶಬ್ದಿತವಿವಕ್ಷಿತಮುಕ್ತ್ಯುಪೇತಜೀವಪ್ರಾಪ್ಯತ್ವಂ ವಾಽನ್ಯತ್ರ ನಿರವಕಾಶಮಿತಿ ಪ್ರಮಾಣೇನಾಽಹ – ಬಹುನೇತಿ ॥

ಮೇಲೆ ಉದಾಹರಿಸಿದ ವಾಕ್ಯಗಳಿಂದ ವಿಷ್ಣುವಿಗೆ ಮುಕ್ತಪ್ರಾಪ್ಯತ್ವ ಇರಲಿ, ಆದರೂ ಈ ಶ್ರುತಿಗಳಲ್ಲಿ ಇತರರಿಗೆ ಆ ಲಿಂಗವು (ಧರ್ಮವು) ಇಲ್ಲವೆಂದು ಹೇಳಿಲ್ಲದಿರುವುದರಿಂದ ವಿಷ್ಣುವಿನಂತೆ ಅನ್ಯನಿಗೂ ಮುಕ್ತಪ್ರಾಪ್ಯತ್ವ ಏಕಿರಬಾರದು? ಎಂದು ಮುಖ್ಯಪ್ರಾಪ್ಯತ್ವಲಿಂಗವು ಸಾವಕಾಶವೆಂದು ಶಂಕಿಸಿ, ಇತರರಲ್ಲಿ ಕೇವಲಪ್ರಾಪ್ಯತ್ವ ಇರಬಹುದಾದರೂ ಮೇಲೆ ವಿವರಿಸಲಾದ ಉಪಸೃಪ್ಯತ್ವವು ಅಥವಾ ಸೂತ್ರದಲ್ಲಿರುವ ಮುಕ್ತಶಬ್ದವು ಹೇಳುವ ವಿಶೇಷವಾಗಿ ವಿವಕ್ಷಿತವಾದ 'ಮುಕ್ತಿಯನ್ನು ಹೊಂದಿದ ಜೀವರಿಂದ ಪ್ರಾಪ್ಯತ್ವವು ಇತರರಲ್ಲಿ ಅವಕಾಶರಹಿತವೆಂದು ಭಾಷ್ಯಕಾರರು ''ಬಹುನಾ'' ಎಂಬ ಪ್ರಮಾಣವಾಕ್ಯದಿಂದ ಹೇಳುತ್ತಿದ್ದಾರೆ.

**ಭಾಷ್ಯಮ್– 'ಬಹುನಾಽತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ ।**
**ಯೋಗೀ ತಾವನ್ನ ಮುಕ್ತಸ್ಸ್ಯಾದೇಷ ಶಾಸ್ತ್ರನಿರ್ಣಯಃ' ॥**
**ಇತ್ಯಾದಿತ್ಯಪುರಾಣೇ ॥**

ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದ ಪ್ರಯೋಜನವೇನು? ಎಲ್ಲಿಯವರೆಗೆ ಅಪರೋಕ್ಷಜ್ಞಾನಿಯು ಶ್ವೇತದ್ವೀಪವೆಂಬ ಸ್ಥಾನವನ್ನು ಹೊಂದುವುದಿಲ್ಲವೋ ಅಲ್ಲಿಯವರೆಗೆ ಅವನು ಮುಕ್ತನಾಗುವುದಿಲ್ಲ, ಇದೇ ಶಾಸ್ತ್ರನಿರ್ಣಯವಾಗಿದೆ. - ಹೀಗೆ ಆದಿತ್ಯಪುರಾಣದಲ್ಲಿ ಹೇಳಿದೆ.

ಭಾ.ದೀ. – 'ಅತ್ರ' ಪ್ರಾಪ್ಯಮೋಕ್ಷತತ್ಸಾಧನವಿಷಯೇ 'ಬಹುನೋಕ್ತೇನ' ಇದಮಿದಂ ಚೇತಿ ಪ್ರತ್ಯೇಕಂ ಬಹುನಾ ವಚನೇನ 'ಕಿಂ ಪ್ರಯೋಜನಮ್' ನ

ಕಿಮಪಿ, ಪ್ರತ್ಯುತೋಕ್ತಿಗೌರವಮೇವೇತಿ ಭಾವಃ । ತರ್ಹಿ ಕಥಂ ನಿರ್ಣಯಃ? ಇತ್ಯತ ಆಹ – ಯಾವಚ್ಛ್ವೇತಮಿತಿ ॥ 'ಶ್ವೇತಂ' ಶ್ವೇತದ್ವೀಪಾಖ್ಯಂ ವಿಷ್ಣುಸ್ಥಾನಂ 'ಯಾವನ್ನ ಗಚ್ಛತಿ' ನ ಪ್ರಾಪ್ನೋತಿ, ತತ್ರತ್ಯಂ ವಿಷ್ಣುಂ ಚ ನ ಪಶ್ಯತಿ 'ತಾವದ್ ಯೋಗೀ' ಅಪರೋಕ್ಷಜ್ಞಾನಾಖ್ಯೋಪಾಯವಾನ್ ಮುಕ್ತೋ ನ ಸ್ಯಾತ್ । ಭಗವದಿಚ್ಛಾರೂಪಾವರಣಾನ್ಮುಕ್ತಃ ಸಮ್ಯಗಾವಿರ್ಭೂತಜ್ಞಾನಾನಂದಾದಿಮಾನ್ ನ ಭವೇದಿತಿ 'ಏಷಃ' ಉಪದೇಶಃ 'ಶಾಸ್ತ್ರವಿನಿರ್ಣಯಃ' ಶಾಸ್ತ್ರತತ್ತ್ವವಿಷಯಕನಿರ್ಣಯಸಾಧನಮಿತ್ಯರ್ಥಃ । ಏಷೋಽರ್ಥಃ 'ಶಾಸ್ತ್ರವಿನಿರ್ಣಯಃ' ತಜ್ಜನ್ಯನಿರ್ಣಯವಿಷಯ ಇತಿ ವಾ ॥

ಭಾವಬೋಧೇ ತು – 'ಸೂತ್ರೇ ಪುರಾಣೇ ಚ ಮುಕ್ತಪದೇನ ಲಿಂಗಭಂಗವಾನ್ ವಿವಕ್ಷಿತಃ' ಇತ್ಯುಕ್ತಮ್ । ಅತ್ರ ಶ್ವೇತದ್ವೀಪಾಗಂತುರಮುಕ್ತತ್ವೋಕ್ತ್ಯಾ ಶ್ವೇತದ್ವೀಪಂ ಪ್ರಾಪ್ತಸ್ಯೈವ ಮುಕ್ತತ್ವಂ ಜ್ಞಾಯತೇ । ತಥಾ ಚ ತತ್ಸ್ಥಿತಸ್ಯ ವಿಷ್ಣೋರೇವ ಇತರವ್ಯವಚ್ಛೇದೇನ ಮುಕ್ತಪ್ರಾಪ್ಯತ್ವಂ ಸಿದ್ಧಮಿತಿ ಭಾವಃ । 'ಇತ್ಯಾದಿತ್ಯಪುರಾಣೇ' ಇತ್ಯಸ್ಯ 'ತಸ್ಯೈವ ಮುಕ್ತಪ್ರಾಪ್ಯತ್ವವ್ಯಪದೇಶಾತ್' ಇತ್ಯನೇನಾನ್ವಯಃ । ಅನೇನ 'ತಸ್ಯೈವ' ಇತ್ಯೇವಕಾರಸ್ಯ ಉಪಯೋಗೋ ಜ್ಞಾಪಿತೋ ಭವತಿ । ಅಸ್ಯ ಹೇತೋರ್ನ ಲಿಂಗಸ್ಯ ಸಾವಕಾಶತ್ವಂ ಶಂಕ್ಯಮಿತ್ಯಧ್ಯಾಹೃತಸಾಧ್ಯೇನಾನ್ವಯಃ ।

'ಅತ್ರ' ಜ್ಞಾನಿಯು ಪಡೆಯುವ ಮೋಕ್ಷ ಮತ್ತು ಅದರ ಸಾಧನವಿಷಯದಲ್ಲಿ 'ಬಹುನಾ ಉಕ್ತೇನ' - ಇದು ಮತ್ತು ಇದು ಎಂಬುದಾಗಿ ಪ್ರತ್ಯೇಕವಾಗಿ ಬಹುವಚನಗಳಿಂದ 'ಕಿಂ' ಏನು ಪ್ರಯೋಜನ? ಏನೂ ಇಲ್ಲ. ಅದರ ಬದಲು ಕೇವಲ ಬಹುವಾಕ್ಯಗಳನ್ನು ಹೇಳಿದ ಮಾತ್ರವೇ ಆಗುವುದು. ಹಾಗಿದ್ದಲ್ಲಿ ನಿರ್ಣಯವಾಗುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ''ಯಾವಚ್ಛ್ವೇತಮ್'' ಎಂದು ಹೇಳಿರುವರು. 'ಶ್ವೇತಂ' - ಶ್ವೇತದ್ವೀಪವೆಂಬ ಹೆಸರಿನ ವಿಷ್ಣುವಿನ ಸ್ಥಾನವನ್ನು, 'ಯಾವನ್ನ ಗಚ್ಛತಿ' ಎಲ್ಲಿಯವರೆಗೆ ಹೊಂದುವುದಿಲ್ಲವೋ, ಅಲ್ಲಿರುವ ವಿಷ್ಣುವನ್ನು ನೋಡುವುದಿಲ್ಲವೋ, 'ತಾವದ್' ಅಲ್ಲಿಯವರೆಗೆ, 'ಯೋಗೀ' - ಅಪರೋಕ್ಷಜ್ಞಾನವೆಂಬ ಸಾಧನವನ್ನು

ಉಳ್ಳವನು, 'ನ ಮುಕ್ತಃ ಸ್ಯಾತ್' - ಭಗವದಿಚ್ಛೆಯೆಂಬ ಆವರಣದಿಂದ ಮುಕ್ತನಾಗಿ ಪೂರ್ಣವಾಗಿ ವ್ಯಕ್ತವಾದ ಜ್ಞಾನಾನಂದಾದಿಗಳನ್ನು ಹೊಂದಿರುವವನು ಆಗಲಾರನೆಂದು, 'ಏಷಃ' - ಈ ಉಪದೇಶವು, 'ಶಾಸ್ತ್ರವಿನಿರ್ಣಯಃ' - ಶಾಸ್ತ್ರತತ್ವಗಳನ್ನು ನಿರ್ಣಯಿಸುವ ಸಾಧನವಾಗಿದೆ ಎಂದರ್ಥ. ಅಥವಾ ಏಷಃ - ಈ ವಿಷಯವು, 'ಶಾಸ್ತ್ರವಿನಿರ್ಣಯಃ' - ಶಾಸ್ತ್ರಜನ್ಯವಾದ ನಿರ್ಣಯಕ್ಕೆ ವಿಷಯವಾಗಿದೆ ಎಂದು ಅರ್ಥ.

ಭಾವಬೋಧದಲ್ಲಾದರೋ - ಸೂತ್ರದಲ್ಲಿ ಮತ್ತು ಪುರಾಣವಾಕ್ಯದಲ್ಲಿ 'ಮುಕ್ತ'ಪದದಿಂದ ಲಿಂಗಶರೀರಭಂಗವನ್ನು ಪಡೆದವನು ವಿವಕ್ಷಿತನಾಗಿದ್ದಾನೆ- ಎಂದು ಹೇಳಿದೆ. ಇಲ್ಲಿ ಶ್ವೇತದ್ವೀಪಕ್ಕೆ ಹೋಗದವನು ಮುಕ್ತನಲ್ಲವೆಂದು ಹೇಳಿರುವುದರಿಂದ ಶ್ವೇತದ್ವೀಪವನ್ನು ಹೊಂದಿದವನೇ ಮುಕ್ತನೆಂದು ತಿಳಿದುಬರುವುದು. ತಥಾ ಚ – ಅಲ್ಲಿರುವ ವಿಷ್ಣುವಿಗೆ ಮಾತ್ರ ಇತರರಿಗೆ ಇಲ್ಲದ ಮುಕ್ತಪ್ರಾಪ್ಯತ್ವ(ಧರ್ಮ)ವು ಸಿದ್ಧವಾಗುವುದೆಂದು ಭಾವ. 'ಇತ್ಯಾದಿತ್ಯಪುರಾಣೇ' ಎಂಬ ಪದಗಳಿಗೆ 'ತಸ್ಯೈವ ಮುಕ್ತಪ್ರಾಪ್ಯತ್ವವ್ಯಪದೇಶಾತ್' ಎಂಬ ಭಾಷ್ಯವಾಕ್ಯದೊಂದಿಗೆ ಅನ್ವಯ. ಇದರಿಂದ 'ತಸ್ಯೈವ' ಎಂಬಲ್ಲಿರುವ ಏವಕಾರದ ಉಪಯೋಗವನ್ನು ತಿಳಿಸಿದಂತಾಗುವುದು.

'ತಸ್ಯೈವ ಮುಕ್ತಪ್ರಾಪ್ಯತ್ವವ್ಯಪದೇಶ' ಎಂಬ ಹೇತುವಿಗೆ 'ನ ಲಿಂಗಸ್ಯ ಸಾವಕಾಶತ್ವಂ ಶಂಕ್ಯಮ್' - 'ಮುಕ್ತೋಪಸೃಪ್ಯತ್ವ ಎಂಬ ಲಿಂಗಕ್ಕೆ ಸಾವಕಾಶತ್ವವನ್ನು ಶಂಕಿಸಬಾರದು' ಎಂಬ ಅಧ್ಯಾಹಾರ ಮಾಡಿಕೊಳ್ಳುವ ಸಾಧ್ಯದೊಂದಿಗೆ ಅನ್ವಯವಾಗುವುದು.

**ಸೂತ್ರಮ್ – ।। ಓಂ ನಾನುಮಾನಮತಚ್ಛಬ್ದಾತ್ ಓಂ ।। ೩ ।।**

**ಭಾಷ್ಯಮ್ – ನಾನುಮಾನಾತ್ಮಕಾಗಮಪರಿಕಲ್ಪಿತರುದ್ರೋಽತ್ರ ವಾಚ್ಯಃ ।**

ಆಥರ್ವಣದ ಈ ಪ್ರಕರಣದಲ್ಲಿ ಶೈವಾದಿ ಆಗಮಗಳಲ್ಲಿ ಹೇಳಿರತಕ್ಕ ರುದ್ರಾದಿಗಳು ದ್ಯುಭ್ವಾದ್ಯಾಯತನರೆಂದು ಹೇಳಿಲ್ಲ. ಏಕೆಂದರೆ ರುದ್ರಾದಿಗಳನ್ನು ಹೇಳುವ ಶಬ್ದಗಳು ಇಲ್ಲಿಲ್ಲ.

ಅನುಮಾನದಿಂದ ಪ್ರಮಾಣವೆಂದು ಸಾಧಿಸಲ್ಪಡುವ ಪಾಶುಪತಾ-

ದ್ಯಾಗಮಗಳಲ್ಲಿ ಬೋಧಿತನಾದ ರುದ್ರನು ಈ ಪ್ರಕರಣದಲ್ಲಿ ಪ್ರತಿಪಾದ್ಯನಾಗಿಲ್ಲ.

ಭಾ.ದೀ. – ನನು ಪ್ರಾಗುಕ್ತರೀತ್ಯಾ ರುದ್ರಪ್ರಕೃತ್ಯೋರ್ದ್ಯುಭ್ವಾದ್ಯಾಯತನತ್ವಂ ಕಿಂ ನ ಸ್ಯಾತ್? ಇತ್ಯತಃ ತತ್ಸಾಧಕಾಭಾವಾನ್ನ ತಯೋಸ್ತದಿತ್ಯಾಹ ಸೂತ್ರಕೃತ್ – ನಾನುಮಾನಮಿತಿ ॥ ಅತ್ರ 'ನಾನುಮಾನಮ್' ಇತಿ ಸಾಧ್ಯಾಂಶಂ ವ್ಯಾಚಷ್ಟೇ – ನಾನುಮಾನಾತ್ಮಕೇತಿ ॥ 'ಅನುಮಾನಪ್ರಾಪ್ತಪ್ರಾಮಾಣ್ಯಾಸದಾಗಮೋಽನುಮಾತ್ಮಕಃ' ಇತಿ ತತ್ವಪ್ರದೀಪೋಕ್ತೇರನುಮಾನಾತ್ಮಕೇಽನುಮಾನಸಿದ್ಧಪ್ರಾಮಾಣ್ಯಕೇ ಪಾಶುಪತಾದ್ಯಾಗಮೇ ಸರ್ವಾಶ್ರಯತ್ವೇನ ಕಲ್ಪಿತೋ ಬೋಧಿತ ಇತ್ಯರ್ಥಃ।

ಕೇಚಿತ್ತು – 'ಪ್ರಮಾಣತ್ವೇನಾನುಮೀಯತ ಇತ್ಯನುಮಾನಮ್' ಇತಿ ವ್ಯಾಚಖ್ಯುಃ। ಏತತ್ ಪಕ್ಷೇ ಆತ್ಮಕಶಬ್ದವೈಯರ್ಥ್ಯಂ, ತತ್ತ್ವಪ್ರದೀಪಟೀಕೇ ವಿರುದ್ಧೇ। ರುದ್ರಪದಂ ಪ್ರಧಾನಾದೇರುಪಲಕ್ಷಕಮ್ । ಪ್ರಧಾನಸೂತ್ರಾದನುವೃತ್ತೇನ ದ್ಯುಭ್ವಾದ್ಯಾಯತನಪದೇನೋಪಸ್ಥಾಪಿತಂ (*)ತದರ್ಥಪ್ರತಿಯೋಗಿನಂ ದರ್ಶಯತಿ – ಅತ್ರೇತಿ ॥ 'ದ್ಯುಭ್ವಾದ್ಯಾಯತನಪ್ರಕರಣೇ' ಇತ್ಯರ್ಥಃ। 'ವಾಚ್ಯಃ' - ಪ್ರತಿಪಾದ್ಯಃ। 'ಸರ್ವಾಶ್ರಯತ್ವೇನ' ಇತಿ ಶೇಷಃ।

ಶಂಕೆ - ಹಿಂದೆ ಹೇಳಿದಂತೆ ರುದ್ರ ಮತ್ತು ಪ್ರಕೃತಿಗಳಿಗೆ ದ್ಯುಭ್ವಾದ್ಯಾಯತನತ್ವವು ಏಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ, ಅದಕ್ಕೆ ಸಾಧಕವಾದ ಆಧಾರವಿಲ್ಲದ್ದರಿಂದ ಅವರಿಗೆ ದ್ಯುಭ್ವಾದ್ಯಾಯತನತ್ವವು ಇಲ್ಲವೆಂದು ಸೂತ್ರಕಾರರು 'ನಾನುಮಾನಂ' ಎಂಬ ಸೂತ್ರದಿಂದ ಹೇಳುತ್ತಿದ್ದಾರೆ. ಇಲ್ಲಿ 'ನಾನುಮಾನಂ' ಎನ್ನುವುದು ಸಾಧ್ಯಾಂಶವಾಗಿದೆ. ಅದನ್ನು ಭಾಷ್ಯಕಾರರು 'ನಾನುಮಾನಾತ್ಮಕ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅನುಮಾನಪ್ರಾಪ್ತಪ್ರಾಮಾಣ್ಯಾಸದಾಗಮಃ ಅನುಮಾತ್ಮಕಃ' - ಅನುಮಾನದಿಂದ ಸಿದ್ಧವಾಗುವ ಪ್ರಾಮಾಣ್ಯವುಳ್ಳ ಅಸದಾಗಮವು ಅನುಮಾನಾತ್ಮಕವೆಂದೆನಿಸುವುದು' ಎಂದು ತತ್ವಪ್ರದೀಪದಲ್ಲಿ ಹೇಳಿದಂತೆ ಅನುಮಾನಾತ್ಮಕವೆಂದರೆ ಅನುಮಾನಸಿದ್ಧವಾದ ಪ್ರಾಮಾಣ್ಯವುಳ್ಳ ಪಾಶುಪತಾದ್ಯಾಗಮಗಳು. ಅಲ್ಲಿ ಸರ್ವಾಶ್ರಯನೆಂದು ಕಲ್ಪಿತನಾದವನು ಎಂದರೆ ಬೋಧಿತನಾದವನು ಎಂದರ್ಥ.

ಕೆಲವರು – 'ಪ್ರಮಾಣತ್ವೇನ ಅನುಮೀಯತೇ ಇತ್ಯನುಮಾನಮ್' - ಪ್ರಮಾಣವೆಂದು ಅನುಮಾನದಿಂದ ಸಾಧಿಸಲ್ಪಡುವುದು ಎಂದು ಅನುಮಾನಶಬ್ದದ ಅರ್ಥವೆಂದು ವ್ಯಾಖ್ಯಾನ ಮಾಡುವರು. ಈ ಪಕ್ಷದಲ್ಲಿ ಭಾಷ್ಯದಲ್ಲಿ 'ಆತ್ಮಕ' ಎಂಬ ಶಬ್ದ ವ್ಯರ್ಥವಾಗುವುದು. ತತ್ವಪ್ರದೀಪ ಮತ್ತು ತತ್ವಪ್ರಕಾಶಿಕೆಗಳೂ ಕೂಡ ವಿರುದ್ಧವಾಗುವವು.

ಭಾಷ್ಯದಲ್ಲಿರುವ ರುದ್ರಪದವು ಪ್ರಕೃತಿ ಮೊದಲಾದವುಗಳಿಗೆ ಉಪಲಕ್ಷಕವಾಗಿದೆ. ಪ್ರಧಾನಸೂತ್ರವಾದ ಮೊದಲನೆಯ ಸೂತ್ರದಿಂದ ಇಲ್ಲಿಗೆ ಅನುವೃತ್ತಿಗೊಂಡ 'ದ್ಯುಭ್ವಾದ್ಯಾಯತನ' ಪದದಿಂದ ಸ್ಮಾರಿತವಾಗುವ ದ್ಯುಭ್ವಾದ್ಯಾಯತನಪದದ ಅರ್ಥಕ್ಕೆ ಸಂಬಂಧಿಸಿರುವುದನ್ನು ''ಅತ್ರ'' ಎಂಬ ಪದದಿಂದ ತೋರಿಸುತ್ತಿದ್ದಾರೆ. 'ದ್ಯುಭ್ವಾದ್ಯಾಯತನಪ್ರಕರಣದಲ್ಲಿ' ಎಂದು ಅರ್ಥ. ಭಾಷ್ಯದಲ್ಲಿ ಇರುವ 'ವಾಚ್ಯಃ' ಎಂಬ ಪದಕ್ಕೆ ಪ್ರತಿಪಾದ್ಯನೆಂದು ಅರ್ಥ. 'ಸರ್ವಾಶ್ರಯತ್ವೇನ' - 'ಸರ್ವಾಶ್ರಯನೆಂದು' ಎಂಬ ಪದವು ಇಲ್ಲಿ ಶೇಷವಾಗಿದೆ.

(★) ಟಿಪ್ಪಣಿ – 'ನಞರ್ಥಪ್ರತಿಯೋಗಿನಂ' ಎಂಬ ಪಾಠದ ಬದಲು ಪಹಸ್ತಪ್ರತಿಯ 'ತದರ್ಥಪ್ರತಿಯೋಗಿಕಂ ದರ್ಶಯತಿ' ಎಂಬ ಪಾಠವೇ ಸರಿ ಎಂದು ತೋರುತ್ತದೆ. ಈ ಪಾಠದಲ್ಲೂ 'ಪ್ರತಿಯೋಗಿಕಂ' ಎಂಬುದರ ಬದಲಾಗಿ 'ಪ್ರತಿಯೋಗಿನಂ' ಎಂದಿದ್ದರೆ ಸರಿಯೆಂದು ತೋರುವುದು.

## ಭಾಷ್ಯಮ್ - ಭಸ್ಮಧರೋಗ್ರತ್ವಾದಿತಚ್ಛಬ್ದಾಭಾವಾತ್ ।

'ಭಸ್ಮಧರ' 'ಉಗ್ರ' ಮೊದಲಾದ ರುದ್ರನ ಶಬ್ದವಿಲ್ಲದಿರುವುದರಿಂದ (ರುದ್ರನು ಇಲ್ಲಿ ವಾಚ್ಯನಲ್ಲ).

ಭಾ.ದೀ. – ಏವಂ ಸೂತ್ರೇ ಪ್ರತಿಜ್ಞಾಂಶಂ ವ್ಯಾಖ್ಯಾಯ ಹೇತ್ವಂಶಂ ವ್ಯಾಚಷ್ಟೇ – ಭಸ್ಮಧರೇತಿ ॥ ತಸ್ಯ - ರುದ್ರಸ್ಯ ಶಬ್ದಸ್ತಚ್ಛಬ್ದಃ । ತಚ್ಛ್ರುತಿಲಿಂಗಾತ್ಮಕಃ । ತಥಾ ಚ – ಭಸ್ಮಧರೋಗ್ರತ್ವಾದಿಧರ್ಮವಿಶಿಷ್ಟಧರ್ಮಿಬೋಧಕಭಸ್ಮಧರೋಗ್ರಾದಿಶಬ್ದಾಭಾವಾದಿತ್ಯರ್ಥಃ । ಅಥವಾ – 'ಕಿಮುಚ್ಯತೇ ಭಸ್ಮಧರೋಗ್ರತ್ವಾದೀನಾಂ ತಚ್ಛ-

ಬ್ದತ್ವಮ್' ಇತ್ಯುತ್ತರಟೀಕಾಬಲಾದ್ ಭಾವಭವಿತ್ರೋರಭೇದವಿವಕ್ಷಯಾ ಸ್ವಾರ್ಥೇ ತ್ವಪ್ರತ್ಯಯಃ। ತತ್ಪ್ರಯೋಗಸ್ತು ಲಿಂಗಾತ್ಮಕಶಬ್ದಸ್ಯಾಪಿ ಸಂಗ್ರಹಾಯ।

ಹೀಗೆ ಸೂತ್ರದಲ್ಲಿ 'ನಾನುಮಾನಂ' ಎಂಬ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನ ಮಾಡಿ ಭಾಷ್ಯಕಾರರು 'ಅತಚ್ಛಬ್ದಾತ್' ಎಂಬ ಹೇತುಭಾಗವನ್ನು "ಭಸ್ಮಧರ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ತಚ್ಛಬ್ದವೆಂದರೆ 'ತಸ್ಯ - ಆ ರುದ್ರನಿಗೆ ವಾಚಕವಾದ ಶಬ್ದ'. ಅಂದರೆ ರುದ್ರಬೋಧಕವಾದ ನಾಮಲಿಂಗಾತ್ಮಕವಾದ ಶಬ್ದ. ತಥಾ ಚ – ಭಸ್ಮಧರತ್ವ, ಉಗ್ರತ್ವ ಮೊದಲಾದ ಧರ್ಮಗಳಿಂದ ಕೂಡಿದ ಧರ್ಮಿ-ಯನ್ನು ಬೋಧಿಸುವ ಭಸ್ಮಧರ, ಉಗ್ರ ಇತ್ಯಾದಿ ಶಬ್ದಗಳಿಲ್ಲದಿರುವುದರಿಂದ ಎಂದು ಅರ್ಥ. ಅಥವಾ – 'ಕಿಮುಚ್ಯತೇ ಭಸ್ಮಧರೋಗ್ರತ್ವಾದೀನಾಂ ತಚ್ಛಬ್ದತ್ವಮ್' ಎಂಬ ಮುಂದಿನ ಟೀಕಾವಾಕ್ಯವನ್ನು ಅನುಸರಿಸಿ ಧರ್ಮಧರ್ಮಿಗಳಿಗೆ ಅಭೇದಾಭಿಪ್ರಾಯ-ದಿಂದ ಉಗ್ರತ್ವ ಎಂಬಲ್ಲಿರುವ ತ್ವಪ್ರತ್ಯಯವು ಸ್ವಾರ್ಥೇ ತ್ವಪ್ರತ್ಯಯವಾಗಿದೆ. ಆ ಪ್ರತ್ಯಯವನ್ನು ಪ್ರಯೋಗಿಸಿರುವುದು ಲಿಂಗಾತ್ಮಕಶಬ್ದಗಳನ್ನು ಸಂಗ್ರಹಿಸುವ ಸಲುವಾಗಿ.

ಭಾ.ದೀ. – ಭಾವಬೋಧೇ ತು – 'ಭಸ್ಮಧರ' ಇತ್ಯನೇನ ರುದ್ರವಾಚಕ-ನಾಮಾತ್ಮಕಶಬ್ದೋ ಗೃಹ್ಯತೇ । 'ಉಗ್ರತ್ವ'ಪದೇನ ಉಗ್ರತ್ವರೂಪಲಿಂಗಾತ್ಮಕಶಬ್ದೋ ಗೃಹ್ಯತೇ । 'ಆದಿ'ಪದೇನ ನಾಮಲಿಂಗಾತ್ಮಕಶಬ್ದಾಂತರಾಣಿ ಗೃಹ್ಯಂತೇ । ಸಮಾಖ್ಯಾದೇರುಪಲಕ್ಷಕಮೇತತ್ । ತಥಾ ಚ ಭಸ್ಮಧರಾದಿರುದ್ರಶ್ರುತೀನಾಮ್ ಉಗ್ರತ್ವಾದಿರೂಪಲಿಂಗಾನಾಂ ರುದ್ರಪ್ರಾಪಕಸಮಾಖ್ಯಾದೀನಾಂ ಚಾಭಾವಾದಿ-ತ್ಯರ್ಥಃ - ಇತ್ಯುಕ್ತಮ್ ।

ಅತ್ರ ರುದ್ರಶಿವಾದಿತಚ್ಛಬ್ದಾಭಾವಾತ್ ಇತ್ಯನುಕ್ತ್ವಾ 'ಭಸ್ಮಧರೋಗ್ರತ್ವಾತ್' ಇತಿ ವಚನಂ 'ರುದ್ರೋ ಭಸ್ಮಧರೋ ನಗ್ನಃ' ಇತಿ ವಚನಾದ್ ವಿಶೇಷನಾಮಾ-ಭಿಪ್ರಾಯೇಣ । ಅತ ಏವೈತದ್ವಚನೋಕ್ತಾಃ ನಗ್ನಾದಿಶಬ್ದಾ ಏವಾಽದಿಪದೇನ ಗ್ರಾಹ್ಯಾ ಇತಿ ಧ್ಯೇಯಮ್ । 'ಭಸ್ಮಧರ' ಇತ್ಯೇತತ್ ಪ್ರಧಾನತ್ರಿಗುಣತ್ವಾದಿರೂಪ-

ಪ್ರಕೃತಿಪ್ರಾಪಕಶ್ರುತಿಲಿಂಗಾದ್ಯಭಾವಾದಿತ್ಯರ್ಥಾಂತರೋಪಲಕ್ಷಕತಯಾಽಪಿ ವ್ಯಾಖ್ಯೇಯಮ್ ।

ಯದ್ಯಪಿ 'ಅತಚ್ಛಬ್ದಾತ್' ಇತ್ಯಸ್ಯ 'ತಚ್ಛಬ್ದಾಭಾವಾತ್' ಇತಿ ವ್ಯಾಖ್ಯಾನೇ ನಞಃ ಕ್ರಿಯಾಸಾಪೇಕ್ಷತ್ವೇನಾಸಮರ್ಥತ್ವಾತ್ ಸಮಾಸಾನುಪಪತ್ತಿಃ । ತಥಾಽಪಿ 'ನಿರ್ಮಕ್ಷಿಕಮ್' ಇತ್ಯಾದಾವಿವ 'ಅರ್ಥಾಭಾವೇ ಯದವ್ಯಯಮ್' ಇತ್ಯವ್ಯಯೀ-ಭಾವಸಮಾಸಾಶ್ರಯಣಾನ್ನಾನುಪಪತ್ತಿಃ। ಪಂಚಮೀತ್ವಾನ್ನಾತ್ರಾಮ್ ಭವತಿ ।

ಭಾವಬೋಧದಲ್ಲಾದರೋ – ಭಸ್ಮಧರ ಎಂಬ ಪದದಿಂದ ರುದ್ರವಾಚಕವಾದ ಆತ್ಮಶಬ್ದವು ಗ್ರಹಿಸಲ್ಪಟ್ಟಿದೆ. ಉಗ್ರತ್ವಪದದಿಂದ ಉಗ್ರ ಎಂಬ ಲಿಂಗಾತ್ಮಕಶಬ್ದವು ಗೃಹೀತ-ವಾಗಿದೆ. 'ಆದಿ'ಪದದಿಂದ ನಾಮಲಿಂಗಾತ್ಮಕವಾದ ಇತರ ಶಬ್ದಗಳು ಗ್ರಹಿಸಲ್ಪಡುತ್ತವೆ. ಸಮಾನಾರ್ಥಕವಾದ ವಾಕ್ಯಾಂತರರೂಪವಾದ ಸಮಾಖ್ಯಾಮೊದಲಾದವುಗಳಿಗೂ ಈ ಪದವು ಉಪಲಕ್ಷಕವಾಗಿದೆ. ತಥಾ ಚ ಭಸ್ಮಧರಮೊದಲಾದ ರುದ್ರವಾಚಕಶಬ್ದಗಳು ಉಗ್ರತ್ವಮೊದಲಾದ ರುದ್ರಪ್ರಾಪಕವಾದಅಸಾಧಾರಣಧರ್ಮಗಳನ್ನು ಹೇಳುವ ಲಿಂಗಾ-ತ್ಮಕಶಬ್ದಗಳು ಹಾಗೂ ರುದ್ರನೇ ಇಲ್ಲಿ ಪ್ರತಿಪಾದ್ಯನೆಂದು ಸೂಚಿಸುವ ಸಮಾಖ್ಯಾ ಮೊದಲಾದವುಗಳು ಇರುವುದರಿಂದ - ಎಂದು ಭಾಷ್ಯವಾಕ್ಯದ ಅರ್ಥವೆಂದು ಹೇಳಿದೆ.

ಇಲ್ಲಿ 'ರುದ್ರ, ಶಿವ ಮೊದಲಾದ ರುದ್ರನ ಶಬ್ದಗಳಿಲ್ಲದಿರುವುದರಿಂದ' ಎಂದು ಹೇಳದೇ 'ಭಸ್ಮಧರ, ಉಗ್ರತ್ವಾದಿ ಎಂಬ ಶಬ್ದಗಳು ಇಲ್ಲದಿರುವುದರಿಂದ' ಎಂದು ಹೇಳಿರುವುದು 'ರುದ್ರೋ ಭಸ್ಮಧರೋ ನಗ್ನಃ' ಎಂಬ ವಚನಾನುಸಾರ ಈ ಶಬ್ದಗಳು ರುದ್ರನ ವಿಶೇಷನಾಮಗಳು ಎಂಬ ಅಭಿಪ್ರಾಯದಿಂದ. ಆದ್ದರಿಂದಲೇ ಈ ವಚನಗಳಿಂದ ಹೇಳಿದ ನಗ್ನ ಮೊದಲಾದ ಶಬ್ದಗಳೇ ಇಲ್ಲಿ ಆದಿಪದದಿಂದ ಗ್ರಾಹ್ಯವಾಗಿವೆ ಎಂದು ತಿಳಿಯಬೇಕು. 'ಭಸ್ಮಧರ' ಎಂಬ ವಾಕ್ಯವನ್ನು 'ಪ್ರಧಾನ, ತ್ರಿಗುಣತ್ವ ಮೊದಲಾದ ಪ್ರಕೃತಿಯನ್ನು ಸೂಚಿಸುವ ಶ್ರುತಿಲಿಂಗ ಮೊದಲಾದವುಗಳು ಇಲ್ಲದಿರುವುದರಿಂದ' - ಎಂದು ಇನ್ನೊಂದು ಅರ್ಥವನ್ನೂ ಉಪಲಕ್ಷಣಯಾ ಹೇಳುವುದು ಎಂದು ವ್ಯಾಖ್ಯಾನ ಮಾಡಬೇಕು.

ಯದ್ಯಪಿ 'ಅತಚ್ಛಬ್ದಾತ್' ಎಂಬ ಪದಕ್ಕೆ 'ತಚ್ಛಬ್ದಾಭಾವಾತ್' ತಚ್ಛಬ್ದ-ವಿಲ್ಲದಿರುವುದರಿಂದ - ಎಂದು ವ್ಯಾಖ್ಯಾನ ಮಾಡಿದರೆ ನಞ್‌ಪದವು ಕ್ರಿಯಾ-ಸಾಪೇಕ್ಷವಾಗುವುದರಿಂದ ಅಸಮರ್ಥವಾಗುತ್ತದೆ. ಆದ್ದರಿಂದ ಸಮಾಸವಾಗಲು ಸಾಧ್ಯವಿಲ್ಲ. ಆದರೂ 'ನಿರ್ಮಕ್ಷಿಕಮ್' ಇತ್ಯಾದಿ ಸಮಾಸಗಳಲ್ಲಿರುವಂತೆ 'ಅರ್ಥಾ-ಭಾವೇ ಯದವ್ಯಯಮ್' ಎಂಬ ವ್ಯಾಕರಣದ ಅನುಶಾಸನದ ಪ್ರಕಾರ ಅವ್ಯಯೀ-ಭಾವಸಮಾಸವನ್ನು ಆಶ್ರಯಿಸಿದಾಗ ಯಾವ ಅನುಪಪತ್ತಿಯೂ ಇಲ್ಲ. ಅತಚ್ಛಬ್ದಾತ್ ಎಂಬ ಪದವು ಪಂಚಮೀವಿಭಕ್ತ್ಯಂತವಾಗಿರುವುದರಿಂದ ಇಲ್ಲಿ ಅಮಾದೇಶ ಬರುವು-ದಿಲ್ಲ. (*)

(★) 'ಅತಚ್ಛಬ್ದಾತ್' ಎಂಬ ಸಮಾಸಕ್ಕೆ 'ತಚ್ಛಬ್ದಃ ನಾಸ್ತಿ ಇತಿ ಅತಚ್ಛಬ್ದಃ ತಸ್ಮಾತ್' ಎಂದು ವಿಗ್ರಹವನ್ನು ಹೇಳಿದಲ್ಲಿ ತಚ್ಛಬ್ದವಿಲ್ಲದಿರುವುದರಿಂದ ಎಂಬ ಅರ್ಥವು ದೊರಕುವುದು. ಆದರೆ ಇಲ್ಲಿ ನಞ್‌ಪದವು ಅಸ್ತಿ ಎಂಬ ಸಾಪೇಕ್ಷವಾಗಿರು–ವುದರಿಂದ ಸಾಪೇಕ್ಷವಾದದ್ದು 'ಸಾಪೇಕ್ಷಂ ಅಸಮರ್ಥವತ್ ಭವತಿ' – ಸಾಪೇಕ್ಷವಾದದ್ದು ಉತ್ತರಪದದೊಂದಿಗೆ ಸಮಾಸಹೊಂದಲು ಅಗತ್ಯವಾದ ಸಾಮರ್ಥ್ಯವನ್ನು ಪಡೆಯುವುದಿಲ್ಲವಾದ್ದರಿಂದ ಅತಚ್ಛಬ್ದ ಎಂದು ಸಮಾಸವಾಗ–ಲಾರದು. ಆದರೆ ಭಾಷ್ಯದೀಪಿಕಾಕಾರರು ಸೂಚಿಸುವಂತೆ ಅತಚ್ಛಬ್ದಪದವು ನಞ್ ಸಮಾಸವಾಗದೇ ಅರ್ಥಾಭಾವವನ್ನು ಹೇಳುವ ಅವ್ಯಯದೊಂದಿಗೆ ಸಮಾಸಪಡೆದ ಅವ್ಯಯೀಭಾವಸಮಾಸವಾಗಿದೆ. ಆದ್ದರಿಂದ 'ಮಕ್ಷಿಕಾಣಾಮ್ ಅಭಾವಃ = ನಿರ್ಮಕ್ಷಿಕಮ್' ಎಂಬ ಅವ್ಯಯೀಭಾವಸಮಾಸದಂತೆ 'ತಚ್ಛಬ್ದಸ್ಯ ಅಭಾವಃ ಅತಚ್ಛಬ್ದಮ್' ಎಂದು ಅವ್ಯಯೀಭಾವಸಮಾಸವಾಗಿ ಅದರ ಮುಂದೆ ಪಂಚಮೀವಿಭಕ್ತಿಯನ್ನು ಸೇರಿಸಿದಾಗ ಅತಚ್ಛಬ್ದಾತ್ ಎಂದು ರೂಪವಾಗುವುದು. ಯದ್ಯಪಿ ಅಕಾರಾಂತವಾದ ಅವ್ಯಯೀಭಾವಸಮಾಸದ ಮುಂದೆ ಬರುವ ಸುಪ್ ವಿಭಕ್ತಿಗಳಿಗೆ ಅಮಾದೇಶ ಬರಬೇಕೆಂಬ ಅನುಶಾಸನವಿದೆ. ಆದರೆ ಆ ಅನುಶಾಸನವು ಪಂಚಮೀವಿಭಕ್ತಿಯನ್ನು ಬಿಟ್ಟು ಉಳಿದ ವಿಭಕ್ತಿಗಳಿಗೆ ಮಾತ್ರ ಅನ್ವಯಿಸುವುದರಿಂದ ಇಲ್ಲಿ ಅಮಾದೇಶವಿಲ್ಲ ಎಂದು ಭಾವ.

ಭಾ.ದೀ. – ಅನೇನ ಸೂತ್ರೇ (೧) ಜಗತ್ಕರ್ತೃತ್ವೇನ ಅನುಮೀಯತೇ ಇತ್ಯನುಮಾನಶಬ್ದೇನ ವಾ (೨) 'ಅನುಮಾನಮನುಮಾನಸಂಬಂಧಿ' ಇತಿ ಸತ್ತರ್ಕದೀಪಾವಲ್ಯುಕ್ತೇರಾನುಮಾನಮಿತಿ ಪದಚ್ಛೇದೇನಾऽನುಮಾನಶಬ್ದೇನ ವಾ ಅನುಮಾನಸಿದ್ಧಪ್ರಾಮಾಣ್ಯಕಪಾಶುಪತಾದ್ಯಾಗಮಸಿದ್ಧಂ ರುದ್ರಪ್ರಧಾನಾದಿಕಂ ಗೃಹ್ಯತೇ।

ಯದ್ವಾ – 'ಪ್ರಮಾಣತ್ವೇನಾऽನುಮೀಯತೇ' ಇತ್ಯನುಮಾನಂ ಪಾಶುಪತಾದ್ಯಾಗಮಃ । ತತೋ ಮತ್ವರ್ಥೇ ಅರ್ಶಆದಿಭ್ಯೋऽಚ್, ತೇನ ತತ್ಪ್ರತಿಪಾದ್ಯಮುಚ್ಯತೇ । ಏವಮಾನುಮಾನಮಿತಿ ಪದಚ್ಛೇದೇऽಪ್ಯಣಂತಾತ್ ಪುನರಣ್ ಕಾರ್ಯಃ । ತತ್ರ ಪ್ರಮಾಣಾಂತಪದೇನಾऽಗಮ ಉಚ್ಯತೇ । ದ್ವಿತೀಯೇನ ಪ್ರತಿಪಾದ್ಯತ್ವಾತ್ । ತಥಾ ಚ ಅನುಮಾನಾತ್ಮಕಪಾಶುಪತಾದ್ಯಾಗಮಪ್ರತಿಪಾದ್ಯಂ ರುದ್ರಾದಿಕಂ ನ ದ್ಯುಭ್ವಾದ್ಯಾಯತನಂ = ನ 'ಯಸ್ಮಿನ್' ಇತ್ಯಾದಿಪ್ರಕರಣೇ ಸರ್ವಾಶ್ರಯತ್ವೇನ ಪ್ರತಿಪಾದ್ಯಂ ಕುತಃ? 'ಅತಚ್ಛಬ್ದಾತ್' ರುದ್ರಪ್ರಧಾನಾದಿಸಾಧಕ - ಶ್ರುತಿಲಿಂಗಾದ್ಯಭಾವಾದಿತಿ ಸೂತ್ರಾರ್ಥ ಉಕ್ತೋ ಭವತಿ।

ಅನು– ಇದರಿಂದ ಸೂತ್ರದಲ್ಲಿ 'ಜಗತ್ಕರ್ತೃತ್ವೇನ ಅನುಮೀಯತೇ ಇತ್ಯನುಮಾನಮ್' - ಜಗತ್ಕರ್ತೃವೆಂದು ಅನುಮಾನದಿಂದ ಸಿದ್ಧವಾಗುವುದು ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಅನುಮಾನಶಬ್ದವು ರುದ್ರ, ಪ್ರಕೃತಿ ಮೊದಲಾದವರನ್ನು ಹೇಳುವುದು. ಅಥವಾ 'ಆನುಮಾನಮ್ - ಅನುಮಾನಸಂಬಂಧಿ' ಎಂದು ಸತ್ತರ್ಕದೀಪಾವಳಿಯಲ್ಲಿ ಹೇಳಿರುವುದರಿಂದ ಸೂತ್ರದಲ್ಲಿ 'ನ ಆನುಮಾನಮ್' ಎಂದು ಪದಚ್ಛೇದದಿಂದ ಲಭಿಸುವ ಆನುಮಾನಶಬ್ದದಿಂದ ಅನುಮಾನದಿಂದ ಸಿದ್ಧವಾದ ಪ್ರಾಮಾಣ್ಯವುಳ್ಳ ಪಾಶುಪತಾದಿ ಆಗಮಗಳಿಂದ ಸಿದ್ಧರಾಗುವ ರುದ್ರ, ಪ್ರಕೃತಿ ಮೊದಲಾದವರು ಆನುಮಾನಪದದಿಂದ ಇಲ್ಲಿ ಗ್ರಹಿಸಲ್ಪಡುತ್ತಾರೆ.

ಅಥವಾ 'ಪ್ರಮಾಣತ್ವೇನ ಅನುಮೀಯತೇ ಇತ್ಯನುಮಾನಮ್' ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಪಾಶುಪತರು ಪ್ರಮಾಣವೆಂದು ಅನುಮಾನದಿಂದ ಸಾಧಿಸುವ ಪಾಶುಪತಾದ್ಯಾಗಮಗಳು ಅನುಮಾನವೆಂದೆನಿಸುತ್ತವೆ. ಅನುಮಾಪದದ ಮುಂದೆ

ಮತ್ವರ್ಥದಲ್ಲಿ ಅಂದರೆ ಹೊಂದಿರುವುದು ಎಂಬರ್ಥದಲ್ಲಿ 'ಅರ್ಶ ಆದಿಭ್ಯೋಽಚ್' ಎಂಬ ಸೂತ್ರದಿಂದ ಅಚ್‌ಪ್ರತ್ಯಯವನ್ನು ಸೇರಿಸಿದಾಗ ಅನುಮಾನಂ ಎಂದೇ ರೂಪವಾಗುವುದು. ಆ ಪದಕ್ಕೆ 'ಪಾಶುಪತಾದ್ಯಾಗಮದಿಂದ ಪ್ರತಿಪಾದ್ಯವಾದದ್ದು' ಎಂದೇ ಅರ್ಥವಾಗುವುದು. ಇದೇ ರೀತಿಯಾಗಿ 'ಆನುಮಾನಂ' ಎಂದು ಪದಚ್ಛೇದ ಮಾಡಿದಾಗಲೂ ಅಣ್‌ಪ್ರತ್ಯಯಾಂತವಾದ ಆನುಮಾನಶಬ್ದದ ಮೇಲೆ ಪುನಃ ಅಣ್ ಪ್ರತ್ಯಯವನ್ನು ಸೇರಿಸಬೇಕು. ಆಗಲೂ 'ಆನುಮಾನಂ' ಎಂದೇ ರೂಪವಾಗುವುದು. ಇಲ್ಲಿ ಮೊದಲನೆಯ ಅಣ್‌ಪ್ರತ್ಯಯಾಂತಪದದಿಂದ ಪಾಶುಪತಾದ್ಯಾಗಮವು ಹೇಳಲ್ಪಡುವುದು. ಎರಡನೆಯ ಅಣ್‌ಪ್ರತ್ಯಯಾಂತಪದವಾದ ಆನುಮಾನಂ ಎಂಬ ಪದದಿಂದ 'ಅಂಥ ಆಗಮದಿಂದ ಪ್ರತಿಪಾದ್ಯವಾದದ್ದು' ಎಂಬ ಅರ್ಥವು ದೊರೆಯುವುದು. ತಥಾ ಚ – ಅನುಮಾನವೆಂದು ಹೇಳಲಾಗುವ ಪಾಶುಪತಾದಿ ಆಗಮಗಳಿಂದ ಪ್ರತಿಪಾದ್ಯರಾದ ರುದ್ರ ಮೊದಲಾದವರು ದ್ಯುಭ್ವಾದ್ಯಾಯತನರಲ್ಲ ಅಂದರೆ 'ಯಸ್ಮಿನ್ ದ್ಯೌಃ' ಇತ್ಯಾದಿ ಪ್ರಕರಣದಲ್ಲಿ ಸರ್ವಾಶ್ರಯರೆಂದು ಪ್ರತಿಪಾದ್ಯ-ರಾಗಿರುವುದಿಲ್ಲ. ಏಕೆಂದರೆ 'ಅತಚ್ಛಬ್ದಾತ್' ರುದ್ರ, ಪ್ರಧಾನ ಮೊದಲಾದವರಿಗೆ ಸಾಧಕವಾದ ಶ್ರುತಿ, ಲಿಂಗ ಮೊದಲಾದ ಯಾವುದೇ ಪ್ರಮಾಣಗಳು ಇಲ್ಲದಿರು-ವುದರಿಂದ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನನು ಆಥರ್ವಣೇ ರುದ್ರಾದಿಜ್ಞಾಪಕಾಭಾವೇಽಪಿ ಅತ್ರೋಕ್ತ-ಪ್ರಾಣಾಧಾರತ್ವಪ್ರತಿಪಾದಿಕಾಯಾಂ 'ಪ್ರಾಣಾನಾಂ ಗ್ರಂಥಿರಸಿ ರುದ್ರಃ' (ಮಹಾನಾ ೧೬-೨) ಇತ್ಯಾದಿ ಸಮಾಖ್ಯಾಶ್ರುತೌ ರುದ್ರಾದಿಶಬ್ದಾನಾಮ್ ಅಂತಕತ್ವಾದಿ-ಲಿಂಗಾನಾಂ ಚೋಕ್ತತ್ವಾತ್, ತದ್ಬಲಾತ್ ತತ್ರೋಕ್ತಂ ದ್ಯುಭ್ವಾದ್ಯಾಯತನತ್ವಂ ರುದ್ರಾದೇಃ ಕಿಂ ನ ಸ್ಯಾದಿತ್ಯತ ಆಹ – ಸ ಇತಿ ॥

ಶಂಕೆ– ಆಥರ್ವಣದಲ್ಲಿ ರುದ್ರ ಮೊದಲಾದವರನ್ನು ತಿಳಿಸುವ ಪ್ರಮಾಣವಿಲ್ಲದೇ ಇದ್ದರೂ ಇಲ್ಲಿ (ಓತಂ ಮನಃ ಸಹ ಪ್ರಾಣಶ್ಚ ಸರ್ವೈಃ ಎಂಬಲ್ಲಿ) ಹೇಳಲಾಗಿರುವ ಪ್ರಾಣಾಧಾರತ್ವವನ್ನು ಪ್ರತಿಪಾದಿಸುವ 'ಪ್ರಾಣಾನಾಂ ಗ್ರಂಥಿರಸಿ ರುದ್ರಃ' (ಮಹಾನಾ. ೧೬-೨) ಇತ್ಯಾದಿ ಸಮಾಖ್ಯಾಶ್ರುತಿಯಲ್ಲಿ ರುದ್ರಾದಿಶಬ್ದಗಳನ್ನು ಅಂತಕತ್ವ ಮೊದಲಾದ

ರುದ್ರನ ಲಿಂಗಗಳನ್ನೂ ಹೇಳಿರುವುದರಿಂದ ಅದರ ಬಲದಿಂದ ಆಥರ್ವಣದಲ್ಲಿ ಹೇಳಿರುವ ದ್ಯುಭ್ವಾದ್ಯಾಯತನತ್ವವು ರುದ್ರಾದಿಗಳಿಗೆ ಎಂದು ಏಕಾಗಬಾರದು?

ಸಮಾಧಾನ– ''ಸ'' ಎಂಬ ಭಾಷ್ಯವಾಕ್ಯದಿಂದ ಇದಕ್ಕೆ ಭಾಷ್ಯಕಾರರು ಸಮಾಧಾನವನ್ನು ನೀಡಿದ್ದಾರೆ.

**ಭಾಷ್ಯಮ್ – 'ಸೋಽಂತಕಃ ಸ ರುದ್ರಃ ಸ ಪ್ರಾಣಭೃತ್ಸ ಪ್ರಾಣನಾಯಕಃ ಸ ಈಶೋ ಯೋ ಹರಿರ್ಯೋಽನಂತೋ ಯೋ ವಿಷ್ಣುರ್ಯಃ ಪರಃ ಪರೋವರೀಯಾನ್' ಇತ್ಯಾದಿನಾ ಪ್ರಾಣಗ್ರಂಥಿರುದ್ರತ್ವಾದೇ- ರ್ವಿಷ್ಣೋರೇವೋಕ್ತತ್ವಾತ್ ।**

ಯಾರು ಹರಿಯೋ ಯಾರು ಅನಂತನೋ ಯಾರು ವಿಷ್ಣುವೋ ಯಾರು ಸರ್ವೋತ್ತಮೋತ್ತಮನೋ ಅವನೇ ಅಂತಕನೂ ರುದ್ರನೂ ಪ್ರಾಣಭೃತ್, ಪ್ರಾಣನಾಯಕನೂ ಹಾಗೂ ಈಶನೂ ಆಗಿರುವನು. - ಇತ್ಯಾದಿ ವಾಕ್ಯದಿಂದ ಪ್ರಾಣಗ್ರಂಥಿತ್ವ, ರುದ್ರತ್ವ ಮೊದಲಾದವು ಗಳನ್ನು ವಿಷ್ಣುವಿಗೆ ಹೇಳಲಾಗಿದೆ.

ಭಾ.ದೀ. – ಯೋಽಂತಕಃ ಸಂಹರ್ತಾ ಸ ಏವ ತಚ್ಛಬ್ದವಾಚ್ಯಃ ಶ್ರುತಃ ಸ ವಿಷ್ಣುರೇವ । ಯೋ ರುದ್ರಃ ಶ್ರುತಃ ಸೋಽಪಿ ವಿಷ್ಣುರೇವ । ಯಃ 'ಪ್ರಾಣಭೃತ್' ಪ್ರಾಣಾಧಾರತ್ವಬೋಧಕಪ್ರಾಣಗ್ರಂಥಿಶಬ್ದವಾಚ್ಯಃ, ಸೋಽಪಿ ವಿಷ್ಣುರೇವ । ಯಃ 'ಪ್ರಾಣನಾಯಕಃ' ತತ್ಸ್ವಾಮೀ ತತ ಏವ ಪ್ರಾಣೇಶಶಬ್ದಿತಃ ಸೋಽಪಿ ವಿಷ್ಣುರೇವ । ಯ ಈಶಃ ಶ್ರುತಃ ಸೋಽಪಿ ವಿಷ್ಣುರೇವ । ಯೋಽನಂತಸ್ತಚ್ಛಬ್ದವಾಚ್ಯಃ ಸೋಽಪಿ ತ್ರಿವಿಧಪರಿಚ್ಛೇದಶೂನ್ಯತ್ವಾದ್ ವಿಷ್ಣುರೇವ, ನ ಶೇಷಃ । ಯಃ ಪರೋವರೀಯಾನ್ ಸೋಽಪಿ ರುದ್ರಾದೇಃ ಪರತೋ ವಾಣ್ಯಾದೇಃ ಪರಾದ್ ವಿರಿಂಚಾದ್ ಪರತಃ ಪ್ರಕೃತೇಃ ಪರತ್ವಾದ್ ಹರಿರೇವ ನಾನ್ಯಃ – ಇತಿ ಶ್ರುತ್ಯರ್ಥಃ ।

ಭಾ.ದೀ. – ಯಾರು 'ಅಂತಕಃ' ಅಂದರೆ ಸಂಹಾರಕನೋ ಸ ಏವ ಆ ಶಬ್ದವಾಚ್ಯನೂ ವಿಷ್ಣುವೇ ಆಗಿರುವನು. ಯಾರು ರುದ್ರನೆಂದು ಶ್ರುತನಾಗಿರುವನೋ ಅವನೂ ವಿಷ್ಣುವೇ; ಯಾರು 'ಪ್ರಾಣಭೃತ್' ಅಂದರೆ ಪ್ರಾಣಾಧಾರತ್ವವನ್ನು ಬೋಧಿಸುವ ಪ್ರಾಣಗ್ರಂಥಿ ಎಂಬ ಶಬ್ದವಾಚ್ಯನೋ ಅವನೂ ವಿಷ್ಣುವೇ ಆಗಿದ್ದಾನೆ. ಯಾರು 'ಪ್ರಾಣನಾಯಕಃ' - ಪ್ರಾಣನಿಗೆ ಸ್ವಾಮಿಯೋ ಆದ್ದರಿಂದಲೇ ಪ್ರಾಣೇಶಬ್ದವಾಚ್ಯನೂ ಅವನೂ ವಿಷ್ಣುವೇ; ಯಾರು ಈಶನೆಂದು ಶ್ರುತನಾಗಿರುವನೋ ಅವನೂ ವಿಷ್ಣುವೇ. ಯಾರು 'ಅನಂತಃ' ಅನಂತಶಬ್ದವಾಚ್ಯನೋ ಅವನೂ ಮೂರುವಿಧವಾದ ಪರಿಮಿತಿಗಳಿಂದ ರಹಿತನಾದ ಕಾರಣ ವಿಷ್ಣುವೇ ಆಗಿರುವನು ಹೊರತು ಶೇಷನಲ್ಲ. ಯಾರು ಪರೋವರೀಯಾನ್ - ಎಂದು ಉಕ್ತನಾಗಿರುವನೋ ಅವನೂ ರುದ್ರಾದಿಗಳಿಂದ ಪರ ಅಂದರೆ ಶ್ರೇಷ್ಠರಾದ ವಾಣಿ ಮೊದಲಾದವರಿಂದ ಪರ ಎಂದೆನಿಸಿದ ಬ್ರಹ್ಮನಿಂದ (ಚತುರ್ಮುಖನಿಂದ) ಶ್ರೇಷ್ಠವಾದ ಚೇತನಪ್ರಕೃತಿಯಿಂದ ಪರನಾಗಿರುವುದರಿಂದ ಹರಿಯೇ ಹೊರತು ಅನ್ಯರಲ್ಲ - ಎಂದು ಈ ಶ್ರುತಿಯ ಅರ್ಥವಾಗಿದೆ.

ಭಾ.ದೀ.– ಅತ್ರ ಅಂತರಾಧಿಕರಣೋದಾಹೃತಚತುರ್ವೇದಶಿಖಾವಾಕ್ಯೇ ಚ 'ಪರಸ್ಮಾದುತ್ತಮಂ ಪ್ರೋಕ್ತಮ್' ಇತಿ ವಚನಾನುಸಾರೇಣ ಪರಪರತರವರವರತಮಾನಾಂ ಚತುರ್ಣಾಂ ಪ್ರತ್ಯಾಯನಾಯ ವೃತ್ತಿವಾಕ್ಯೇ ಸುಬಾದೇಶಸ್ಯ ಸೋರುತ್ಪೋತ್ವಗುಣಸಮಾನಶಬ್ದಲೋಪಾ ಜ್ಞಾತವ್ಯಾಃ । ಪ್ರತ್ಯುದ್ದೇಶ್ಯಂ ವಿಧೇಯಾನ್ವಯಜ್ಞಾಪನಾಯ ಬಹೂನಾಂ ಯತ್ತದಾಂ ಪ್ರಯೋಗಃ । 'ಇತ್ಯಾದಿನಾ' - ಶ್ರುತ್ಯಂತರವಾಕ್ಯೇನ 'ಪ್ರಾಣಗ್ರಂಥಿರುದ್ರತ್ವಾದೇಃ' ಪ್ರಾಣಗ್ರಂಥಿತ್ವಲಿಂಗಸ್ಯ ರುದ್ರಶಬ್ದವಾಚ್ಯತ್ವಸ್ಯ ಚ 'ತಸ್ಯೈವ' ವಿಷ್ಣೋರೇವ ಉಕ್ತತ್ವಾತ್ ಇತ್ಯರ್ಥಃ । ಪ್ರಾಣೇಶ್ವರಾದಿಶಬ್ದವಾಚ್ಯತ್ವಮ್ ಅಂತಕತ್ವಾದಿಲಿಂಗಂ ಚ 'ಆದಿ'ಶಬ್ದಾರ್ಥಃ। ಪ್ರಕೃತಿಶ್ರುತಿಲಿಂಗಾದೇರಪಿ ಉಪಲಕ್ಷಕಮೇತತ್ । 'ನ ತು ರುದ್ರಾದೇಃ' ಇತ್ಯೇವಕಾರಾರ್ಥಃ। ಏವಕಾರೇಣ ಅನ್ಯತ್ರಾಮುಖ್ಯತಃ ಸತ್ತ್ವಮನುಮನ್ಯತೇ । 'ಉಕ್ತತ್ವಾತ್' ಇತ್ಯಸ್ಯ 'ನ ರುದ್ರಾದಿಶ್ರುತಿಲಿಂಗವಿರೋಧಃ' ಇತ್ಯಧ್ಯಾಹೃತಸಾಧ್ಯೇನ ಅನ್ವಯಃ।

ಇಲ್ಲಿ ಮತ್ತು ಅಂತರಾಧಿಕರಣದಲ್ಲಿ ಉದಾಹೃತವಾಗಿರುವ ಚತುರ್ವೇದಶಿಖಾ-ವಾಕ್ಯದಲ್ಲೂ ಕೂಡ 'ಪರಸ್ಮಾದುತ್ತಮಂ ಪ್ರೋಕ್ತಮ್' ಎಂಬ ಪ್ರಮಾಣವಚನವನ್ನು ಅನುಸರಿಸಿ ಪರ, ಪರತರ, ವರ ಮತ್ತು ವರತಮರಾಗಿರುವ ನಾಲ್ವರನ್ನು ತಿಳಿಸುವು-ದಕ್ಕೋಸ್ಕರ ವಿಗ್ರಹವಾಕ್ಯದಲ್ಲಿ ಸುಪ್ ಪ್ರತ್ಯಯಕ್ಕೆ ಆದೇಶವಾಗಿ ಬಂದಿರುವ ಶಬ್ದಕ್ಕೆ 'ರುತ್ವ , ಉತ್ವ , ಗುಣ ಮತ್ತು ಸದೃಶವಾದ ಶಬ್ದದ ಲೋಪ' ಇವುಗಳು ಆಗಿರು-ವುದೆಂದು ತಿಳಿಯತಕ್ಕದ್ದು. ಅಂತಕ ರುದ್ರ ಮೊದಲಾದ ಪ್ರತಿಯೊಂದು ಉದ್ದೇಶ್ಯಕ್ಕೆ ವಿಷ್ಣು ಎಂಬ ವಿಧೇಯದ ಅನ್ವಯವಾಗುವುದು ಎಂಬುದನ್ನು ತಿಳಿಸಲು ಶ್ರುತಿಯಲ್ಲಿ ಅನೇಕ ಯತ್ ಮತ್ತು ತತ್ ಪದಗಳ ಪ್ರಯೋಗವಿದೆ. ಭಾಷ್ಯದಲ್ಲಿ 'ಇತ್ಯಾದಿನಾ' ಅಂದರೆ ಇದೇ ಮೊದಲಾದ ಇನ್ನೊಂದು ಶ್ರುತಿಯ ವಾಕ್ಯದಿಂದ ''ಪ್ರಾಣಗ್ರಂಥಿ-ರುದ್ರತ್ವಾದೇಃ'' - ಅಂದರೆ ಪ್ರಾಣಗ್ರಂಥಿತ್ವ ಎಂಬ ಲಿಂಗವು ಮತ್ತು ರುದ್ರಶಬ್ದ-ವಾಚ್ಯತ್ವವು ಆ ವಿಷ್ಣುವಿಗೇ ಹೇಳಲ್ಪಟ್ಟಿರುವುದರಿಂದ ಎಂದು ಅರ್ಥ. ಇಲ್ಲಿ ಪ್ರಾಣೇಶ್ವರ ಮೊದಲಾದ ಶಬ್ದವಾಚ್ಯತ್ವ ಮತ್ತು ಅಂತಕತ್ವಾದಿ ಲಿಂಗಗಳು ರುದ್ರತ್ವಾದೇಃ ಎಂಬಲ್ಲಿ-ರುವ ಆದಿಶಬ್ದದ ಅರ್ಥವಾಗಿದೆ. ಪ್ರಕೃತಿಯನ್ನು ಹೇಳುವ ಶಬ್ದ ಲಿಂಗ ಮೊದಲಾದವು-ಗಳಿಗೂ ಈ ಪದವು ಉಪಲಕ್ಷಕವಾಗಿದೆ. ವಿಷ್ಣುರೇವ ಎಂಬಲ್ಲಿರುವ 'ಏವ'ಕಾರಕ್ಕೆ 'ವಿಷ್ಣುವಿಗೆ ಹೊರತು ರುದ್ರಾದಿಗಳಿಗಲ್ಲ' ಎಂದು ಅರ್ಥ. ಏವಕಾರದಿಂದ ವಿಷ್ಣುವನ್ನು ಬಿಟ್ಟು ಉಳಿದವರಲ್ಲಿ ಈ ಶ್ರುತಿಲಿಂಗಗಳು ಅಮುಖ್ಯವಾಗಿ ಇರುವುದನ್ನು ಅನುಮತಿ-ಸಲಾಗಿದೆ. 'ಉಕ್ತತ್ವಾತ್' ಎಂಬ ಭಾಷ್ಯದ ಪದಕ್ಕೆ 'ನ ರುದ್ರಾದಿಶ್ರುತಿಲಿಂಗವಿರೋಧಃ' - ರುದ್ರ ಮೊದಲಾದ ಶಬ್ದಗಳು ಹಾಗೂ ಲಿಂಗಗಳ ವಿರೋಧವಿಲ್ಲ ಎಂಬ ಅಧ್ಯಾಹಾರ ಮಾಡಿಕೊಳ್ಳುವ ಸಾಧ್ಯದೊಂದಿಗೆ ಅನ್ವಯ ಮಾಡಬೇಕು.

ಭಾ.ದೀ. – ನನು ತಥಾಽಪಿ ನ ಪ್ರಾಣಾಧಾರತ್ವ-ದ್ಯುಭ್ವಾದ್ಯಾಯತನತ್ವ-ಬೋಧಕಸಮಾಖ್ಯಾಶ್ರುತೌ ವಿಷ್ಣೋಃ ಪ್ರತಿಪಾದ್ಯತ್ವನಿಶ್ಚಯಃ । ತತ್ರತ್ಯಾನಾಂ ರುದ್ರಾದಿಶಬ್ದಾನಾಂ ಪಶುಪತ್ಯಾದಾವೇವ ರೂಢತ್ವೇನ ವಿಷ್ಣೌ ತದಭಾವಾತ್, ಭಾವೇ ವಾ ಪುನರನಿಶ್ಚಯಾತ್ । ವಿಷ್ಣೌ ಯೋಗವೃತ್ತಿಸಂಭವೇಽಪಿ ತಸ್ಯಾ ರೂಢಿತೋ ದುರ್ಬಲತ್ವೇನ ಅನಿಶ್ಚಾಯಕತ್ವಾತ್ । ನ ಹಿ ಶ್ರುತ್ಯಂತರೇ ವಿಷ್ಣುಲಿಂಗಾದ್ಯಸ್ತೀತ್ಯತ ಆಹ – ಬ್ರಹ್ಮಾಂಡೇ ಇತಿ ॥

ಆದರೂ ಪ್ರಾಣಾಧಾರತ್ವ, ದ್ಯುಭ್ವಾದ್ಯಾಯತನತ್ವವನ್ನು ತಿಳಿಸುವ ಸಮಾಖ್ಯಾ-ಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನಾಗಿರುವನೆಂದು ನಿಶ್ಚಯಿಸಲಾಗದು. ಅಲ್ಲಿರುವ ರುದ್ರ ಮೊದಲಾದ ಶಬ್ದಗಳಿಗೆ ಪಶುಪತಿ ಮೊದಲಾದವರಲ್ಲೇ ರೂಢಿಯಿರುವುದೇ ಹೊರತು ವಿಷ್ಣುವಿನಲ್ಲಿ ಇಲ್ಲ. ವಿಷ್ಣುವಿನಲ್ಲೂ ರೂಢಿಯಿರುವುದಾದರೆ ಪುನಃ ಇಲ್ಲಿ ವಿಷ್ಣು ಪ್ರತಿಪಾದ್ಯನೋ ಅಥವಾ ರುದ್ರಪ್ರತಿಪಾದ್ಯನೋ ಎಂಬ ಸಂದೇಹವೇ ಹೊರತು ನಿಶ್ಚಯವಿಲ್ಲ. ಈ ಶಬ್ದಗಳಿಗೆ ವಿಷ್ಣುವಿನಲ್ಲಿ ಯೋಗ, ವೃತ್ತಿ ಇರುವುದಾದರೂ ಆ ಯೋಗವು ರೂಢಿಗಿಂತ ದುರ್ಬಲವಾದುದರಿಂದ ನಿರ್ಣಾಯಕವಲ್ಲ. ಆ ಸಮಾಖ್ಯಾ-ಶ್ರುತಿಯಲ್ಲಿ ವಿಷ್ಣುವಿನ ಲಿಂಗ ಮೊದಲಾದವುಗಳು ಇಲ್ಲವಷ್ಟೇ ಎಂಬ ಶಂಕೆ.

ಈ ಶಂಕೆಯನ್ನು ''ಬ್ರಹ್ಮಾಂಡೇ ಚ'' ಎಂಬ ವಾಕ್ಯದಿಂದ ಆಚಾರ್ಯರು ಪರಿಹರಿಸುತ್ತಿದ್ದಾರೆ.

**ಭಾಷ್ಯಮ್ – ಬ್ರಹ್ಮಾಂಡೇ ಚ-**

**'ರುಜಂ ದ್ರಾವಯತೇ ಯಸ್ಮಾದ್ ರುದ್ರಸ್ತಸ್ಮಾಜ್ಜನಾರ್ದನಃ ।**
**ಈಶನಾದೇವ ಚೇಶಾನೋ ಮಹಾದೇವೋ ಮಹತ್ತ್ವತಃ ॥**
**ಪಿಬಂತಿ ಯೇ ನರಾ ನಾಕಂ ಮುಕ್ತಾಃ ಸಂಸಾರಸಾಗರಾತ್।**
**ತದಾಧಾರೋ ಯತೋ ವಿಷ್ಣುಃ ಪಿನಾಕೀತಿ ತತಃ ಸ್ಮೃತಃ ॥**
**ಶಿವಃ ಸುಖಾತ್ಮಕತ್ವೇನ ಶರ್ವಃ ಶಂರೋಧನಾದ್ಧರಿಃ ।**
**ಕೃತ್ತ್ಯಾತ್ಮಕಮಿದಂ ದೇಹಂ ಯತೋ ವಸ್ತೇ ಪ್ರವರ್ತಯನ್ ॥**
**ಕೃತ್ತಿವಾಸಾಸ್ತತೋ ದೇವೋ ವಿರಿಂಚಶ್ಚ ವಿರೇಚನಾತ್ ।**
**ಬೃಂಹಣಾದ್ ಬ್ರಹ್ಮನಾಮಾಽಸಾವೈಶ್ವರ್ಯಾದಿಂದ್ರ ಉಚ್ಯತೇ ॥**
**ಏವಂ ನಾನಾವಿಧೈಃ ಶಬ್ದೈರೇಕ ಏವ ತ್ರಿವಿಕ್ರಮಃ ।**
**ವೇದೇಷು ಸಪುರಾಣೇಷು ಗೀಯತೇ ಪುರುಷೋತ್ತಮಃ' ಇತಿ ।**

ಬ್ರಹ್ಮಾಂಡಪುರಾಣದಲ್ಲೂ ಕೂಡ – 'ರೋಗವನ್ನು ನಿವಾರಿಸುವ ಕಾರಣದಿಂದ ಜನಾರ್ದನನು ರುದ್ರನೆಂದೆನಿಸುವನು. ಈಶರೆನಿಸಿದ ಬ್ರಹ್ಮಾದಿಗಳಿಗೂ ಪ್ರವರ್ತಕನಾಗಿರುವುದರಿಂದ ಅವನೇ ಈಶಾನನೂ ಆಗಿರುವನು. ಮಹತ್ತ್ವವನ್ನು ಪಡೆದಿರುವುದರಿಂದಲೇ ಅವನು ಮಹಾದೇವನೆಂದೆನಿಸುವನು. ಸಂಸಾರಸಾಗರದಿಂದ ಮುಕ್ತರಾದ ಯಾವ ನರರು ನಾಕವನ್ನು ಅಂದರೆ ಪರಮಸುಖವನ್ನು ಭುಜಿಸುವುದರಿಂದ ಪಿನಾಕರೆಂದೆನಿಸುವರು. ಅವರಿಗೆ ಆಧಾರನಾಗಿರುವ ಕಾರಣ ವಿಷ್ಣುವು ಶ್ರುತಿಗಳಲ್ಲಿ ಪಿನಾಕಿ ಎಂದು ಉಕ್ತನಾಗಿರುವನು. ಅವನು ಸುಖಸ್ವರೂಪನಾದುದರಿಂದ ಶಿವನೆಂದೂ, ಮುಕ್ತಿಯವರೆಗೆ ಸ್ವರೂಪಸುಖವನ್ನು ನಿರೋಧಿಸುವ ಕಾರಣದಿಂದ ಶರ್ವನೆಂದೂ ಹೇಳಲ್ಪಡುವನು. ಚರ್ಮಮಯವಾದ ಈ ದೇಹವನ್ನು ನಿಯಮಿಸುತ್ತ ಅದರೊಳಗಿರುವ ಕಾರಣ ಅವನು ಕೃತ್ತಿವಾಸನೆಂದೆನಿಸುವನು. ಆ ದೇವನು ಜಗತ್ತನ್ನು ಸೃಷ್ಟಿಮಾಡುವುದರಿಂದ ವಿರಿಂಚ ಎಂದೆನಿಸುವನು. ಪೂರ್ಣನಾದುದರಿಂದ ಬ್ರಹ್ಮನಾಮಕನಾದ ಇವನು ಪರಮೈಶ್ವರ್ಯಶಾಲಿಯಾದುದರಿಂದ ಇಂದ್ರನೆಂದೆನಿಸುವನು. ಹೀಗೆ ನಾನಾವಿಧಶಬ್ದಗಳಿಂದ ಒಬ್ಬನೇ ತ್ರಿವಿಕ್ರಮನಾದ ಆ ಪುರುಷೋತ್ತಮನು ಪುರಾಣಸಹಿತವಾದ ಶ್ರುತಿಗಳಲ್ಲಿ ಶಬ್ದಗಳಿಂದ ಮುಖ್ಯವಾಗಿ ವಾಚ್ಯನಾಗಿರುವನು – ಎಂದು ಹೇಳಿದೆ.

ಭಾ.ದೀ.– ಚೋಽಪ್ಯರ್ಥಃ ಸಮುಚ್ಚಯೇ । 'ಉಕ್ತತ್ವಾತ್' ಇತ್ಯನುವರ್ತತೇ । ತೇನ ಅಸ್ಯಾನ್ವಯಃ । ಕಿಮುಕ್ತಮ್? ಇತ್ಯತೋ ರುದ್ರಾದಿಶಬ್ದಾನಾಂ ಮಹಾಯೋಗವಿದ್ವದ್ರೂಢಿಪ್ರತಿಪಾದಕಂ ವಾಕ್ಯಂ ಪಠತಿ – ರುಜಮಿತಿ ॥ 'ರುಜಂ' ರೋಗಮ್ ಉತ್ಪತ್ತ್ಯಾದಿಕಂ 'ದ್ರಾವಯತೇ' - ನಿರ್ವಾಪಯತಿ ನಿವರ್ತಯತಿ ಯಸ್ಮಾತ್ ತಸ್ಮಾದ್ 'ರುದ್ರಃ' ಇತ್ಯುಚ್ಯತೇ । 'ಕಃ?' ಇತ್ಯತಃ ತದ್ರೂಪವಿಶೇಷಮಾಹ – ಜನಾರ್ದನ ಇತಿ ॥ 'ಜನನಮರ್ದಯತಿ' ಇತಿ ವ್ಯುತ್ಪತ್ತಿಃ । ಈಶನಾದ್ ಈಶಾನಾಂ ಬ್ರಹ್ಮಾದೀನಾಂ ಚೇಷ್ಟಕತ್ವಾತ್ ಈಶಾನೋಽಪಿ ಸ ಏವ - ಇತ್ಯರ್ಥಃ। 'ಮಹತ್ತ್ವತಃ' ಇತ್ಯುಪಲಕ್ಷಣಮ್ । 'ದ್ಯೋತನಾದೇಶ್ಚ' ಇತ್ಯಪಿ ದ್ರಷ್ಟವ್ಯಮ್ ।

'ಬ್ರಹ್ಮಾಂಡೇ ಚ' ಎಂಬಲ್ಲಿನ ಚಕಾರವು ಅಪಿಶಬ್ದದ ಅರ್ಥವುಳ್ಳದ್ದಾಗಿ ಸಮುಚ್ಚಯವನ್ನು ಹೇಳುವುದು. 'ಉಕ್ತತ್ವಾತ್' ಎಂಬ ಪದವು ಅನುವೃತ್ತಿಯನ್ನು

ಹೊಂದುವುದು. 'ಬ್ರಹ್ಮಾಂಡೇ ಚ' ಎಂಬ ಪದವು ಆ ಪದದೊಂದಿಗೆ ಅನ್ವಯವನ್ನು ಪಡೆಯುವುದು. ಬ್ರಹ್ಮಾಂಡಪುರಾಣದಲ್ಲಿ ಏನು ಹೇಳಿದೆ? ಎಂಬ ಶಂಕೆಗೆ ಉತ್ತರವಾಗಿ ಭಾಷ್ಯಕಾರರು ರುದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮಹಾಯೋಗವಿದ್ವದ್ರೂಢಿಗಳನ್ನು ಹೇಳುವ ಬ್ರಹ್ಮಾಂಡಪುರಾಣದ ವಾಕ್ಯವನ್ನು ''ರುಜಮ್'' ಎಂದು ಪಠಿಸುತ್ತಿದ್ದಾರೆ. 'ರುಜಮ್' ಎಂದರೆ ಜನನವೇ ಮೊದಲಾದ ರೋಗವನ್ನು 'ದ್ರಾವಯತೇ' - ನಿರ್ವಾ-ಪಯತಿ ಅಂದರೆ ಯಾವ ಕಾರಣದಿಂದ ನಿವೃತ್ತಿಗೊಳಿಸುವನೋ ಆದ್ದರಿಂದ ರುದ್ರ-ನೆಂದೆನಿಸುವನು. ಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ ರುದ್ರಶಬ್ದವಾಚ್ಯವಾದ ರೂಪವಿಶೇಷವನ್ನು ''ಜನಾರ್ದನಃ'' ಎಂಬ ಪದದಿಂದ ಹೇಳಿದೆ. 'ಜನನಮ್ ಅರ್ದಯತಿ' - ಅಂದರೆ ಜನನವನ್ನು ಇಲ್ಲದಂತೆ ಮಾಡುವವನು ಎಂದು ಆ ಶಬ್ದದ ಅರ್ಥ. 'ಈಶನಾದ್' ಅಂದರೆ ನಿಯಮನ ಮಾಡುವ ನಿಮಿತ್ತದಿಂದಾಗಿ ಈಶ-ರೆಂದೆನಿಸುವ ಬ್ರಹ್ಮಾದಿಗಳಿಗೂ ಅನ ಅಂದರೆ ಚೇಷ್ಟಕನಾಗುವ ಕಾರಣದಿಂದ ಈಶಾನಶಬ್ದವಾಚ್ಯನೂ ಅವನೇ ಆಗಿರುವನು ಎಂದು ಅರ್ಥ.

ವಿಷ್ಣುವು 'ಮಹಾದೇವ'ಶಬ್ದವಾಚ್ಯನಾಗಲು ಮಹತ್ವವು ನಿಮಿತ್ತವಾಗಿದೆ ಎಂದು ಹೇಳಿದೆ. ಅಲ್ಲಿ 'ಮಹತ್ತ್ವತಃ' ಎಂಬ ಪದವು ದ್ಯೋತನಾದಿ ಧರ್ಮಗಳಿಗೆ ಉಪಲಕ್ಷಣ-ವಾಗಿದೆ ಎಂದು ತಿಳಿಯಬೇಕು.

ಭಾ.ದೀ. – ಯೇ 'ನರಾಃ' ಜನಾಃ ಸಂಸಾರಸಾಗರಾತ್ ಮುಕ್ತಾಃ ಸಂತೋ 'ನಾಕಂ' ಪರಮಸುಖಂ 'ಪಿಬಂತಿ' ಭುಂಜತೇ ತೇ ಪಿನಾಕಾಃ । ವಿಷ್ಣುರ್ಯತಃ 'ತದಾಧಾರಃ' – ತೇಷಾಮಾಧಾರಃ ತತಃ ಪಿನಾಕೀತಿ 'ಸ್ಮೃತಃ' – ಅಭಿಹಿತಃ 'ಶ್ರುತೌ' ಇತಿ ಶೇಷಃ । 'ಶ್ರುತಃ' ಇತಿ ಪಾಠಃ ಸ್ವರಸಃ ।

'ಶಂರೋಧನಾತ್' – ಮುಕ್ತಿಪರ್ಯಂತಂ ಸ್ವರೂಪಭೂತಮಪಿ ಸುಖಂ ರುಧ್ವಾ ವರ್ತನಾದ್ ಆಸುರಸುಖಂ ನಿರುಧ್ಯ ವರ್ತನಾದ್ ವಾ 'ಶರ್ವಃ' ಇತ್ಯರ್ಥಃ ।

ಯತಃ 'ಕೃತ್ತ್ಯಾತ್ಮಕಂ' ಚರ್ಮಮಯಮಿಮಂ ದೇಹಂ 'ಪ್ರವರ್ತಯನ್' ಸೃಜನ್ ನಿಯಮಯನ್ ವಾ ತೇನ ಸ್ವಾತ್ಮಾನಂ ಜೀವಂ ವಾ 'ವಸ್ತೇ' ಆಚ್ಛಾದಯತಿ ತದಂತ-

ವರ್ತತೇ । ಯದ್ವಾ 'ದೇಹಂ ವಸ್ತೇ ಅಧಿವಸತಿ ಇತ್ಯತಃ ಕೃತ್ತಿವಾಸಾ ಇತ್ಯುಚ್ಯತೇ' ಇತ್ಯರ್ಥಃ।

'ವಿರೇಚನಾತ್' ಜಗತ್ಸರ್ಜನಾತ್।

**ಅಸೌ ವಿಷ್ಣುಃ ಬೃಂಹಣಾದ್ ವರ್ಧನಾದ್ ವಾ ಬ್ರಹ್ಮನಾಮಾ । ಅಸೌ ಪರಮೈಶ್ವರ್ಯಾದ್ 'ಇಂದ್ರಃ' ಇತ್ಯುಚ್ಯತೇ।**

'ಯೇ ನರಾಃ' - ಯಾವ ಜನರು ಸಂಸಾರಸಾಗರಾತ್ - ಸಂಸಾರಸಾಗರದಿಂದ ಮುಕ್ತರಾಗಿ 'ನಾಕಂ' - ಪರಮಸುಖವನ್ನು 'ಪಿಬಂತಿ' ಭುಜಿಸುವರೋ ಅವರು ಪಿನಾಕರೆಂದೆನಿಸುವರು. ವಿಷ್ಣುವು ಯತಃ 'ತದಾಧಾರಃ' ಯಾವ ಕಾರಣದಿಂದಾಗಿ ಅವರಿಗೆ ಆಧಾರನಾಗಿದ್ದಾನೋ ಆ ನಿಮಿತ್ತದಿಂದ ಅವನು ಪಿನಾಕಿ ಎಂಬುದಾಗಿ ಸ್ಮೃತಃ - ಹೇಳಲ್ಪಟ್ಟಿದ್ದಾನೆ. ಇಲ್ಲಿ 'ಶ್ರುತೌ' - ಶ್ರುತಿಯಲ್ಲಿ ಎಂಬ ಪದವು ಶೇಷವಾಗಿದೆ. 'ಸ್ಮೃತಃ' ಎಂಬ ಪಾಠದ ಬದಲಾಗಿ ಶ್ರುತಃ' ಎಂಬ ಪಾಠವು ಹೆಚ್ಚು ಸ್ವರಸವಾಗಿದೆ.

'ಶಂರೋಧನಾತ್' - ಮೋಕ್ಷವಾಗುವ ಪರ್ಯಂತ ಜೀವಸ್ವರೂಪವೇ ಆಗಿದ್ದರೂ ಕೂಡ ಸುಖವನ್ನು ಅನುಭವಕ್ಕೆ ಬರದಂತೆ ಆಚ್ಛಾದಿಸಿರುವುದರಿಂದ ಅಥವಾ ಅಸುರ-ರಿಗೆ ಸುಖವನ್ನು ನಿರೋಧಿಸುವುದರಿಂದ ವಿಷ್ಣುವು 'ಶರ್ವ'ನೆಂದೆನಿಸುವನು ಎಂದರ್ಥ.

ಯಾವ ಕಾರಣದಿಂದಾಗಿ 'ಕೃತ್ತ್ಯಾತ್ಮಕಂ' ಚರ್ಮಮಯವಾದ ಈ ದೇಹವನ್ನು 'ಪ್ರವರ್ತಯನ್' - ಸೃಜಿಸಿ ಅಥವಾ ನಿಯಮಿಸುತ್ತಾ ಆ ದೇಹದಿಂದ ತನ್ನನ್ನು ಅಥವಾ ಜೀವನನ್ನು 'ವಸ್ತೇ' - ಆಚ್ಛಾದಿಸುತ್ತಾನೋ ಮತ್ತು ಅದರ ಅಂತರ್ಗತನಾಗಿರುವನೋ ಆದ್ದರಿಂದ ವಿಷ್ಣುವು ಕೃತ್ತಿವಾಸ ಎಂದೆನಿಸುವನು. ಅಥವಾ ಚರ್ಮಮಯವಾದ ದೇಹದೊಳಗೆ ವಸ್ತೇ - ವಾಸಿಸುವನು ಎಂಬ ಕಾರಣದಿಂದ ಅವನು ಕೃತ್ತಿವಾಸನೆಂದು ಹೇಳಲ್ಪಡುವನು ಎಂದರ್ಥ.

'ವಿರೇಚನಾತ್' - ಅಂದರೆ ಜಗತ್ತನ್ನು ಸೃಷ್ಟಿಮಾಡುವ ಕಾರಣದಿಂದ ಎಂದು ಅರ್ಥ.

ಅಸೌ - ಈ ವಿಷ್ಣುವು, ಬೃಂಹಣಾತ್- ಪೂರ್ಣನಾದುದರಿಂದ ಅಥವಾ ವೃದ್ಧಿಯನ್ನು ಪಡೆದಿರುವುದರಿಂದ ಬ್ರಹ್ಮನಾಮಕನಾಗಿರುವನು. ಇವನು ಪರಮೈಶ್ವರ್ಯ-ನಿಮಿತ್ತದಿಂದ ಇಂದ್ರನೆಂದು ಹೇಳಲ್ಪಡುವನು.

ಭಾ.ದೀ. – ಏವಂ ವಿಷ್ಣೌ ರುದ್ರಾದಿಶಬ್ದಾನಾಂ ಮಹಾಯೋಗಮುಕ್ತ್ವಾ ವಿದ್ವದ್ರೂಢಿಂ ಚಾಽಽಹ – ಏವಮಿತಿ ॥ 'ನಿಮಿತ್ತೈಃ' ಇತ್ಯಧ್ಯಾಹಾರ್ಯಮ್ । ತಥಾ ಚ – 'ಏವಮ್' ಉಕ್ತರೀತ್ಯಾ ನಾನಾವಿಧೈರ್ನಿಮಿತ್ತೈಃ 'ಸಪುರಾಣೇಷು ವೇದೇಷು' ಗತ್ಯೈಃ ಏತೈರ್ನಾನಾವಿಧೈಃ ಶಬ್ದೈಃ ವಿಷ್ಣುರೇಕ ಏವ 'ಗೀಯತೇ' ಮುಖ್ಯತೋಽಭಿಧೀಯತೇ ಇತ್ಯರ್ಥಃ।

ಕಥಮನ್ಯತ್ರಾದೃಷ್ಟಂ ಸರ್ವಶಬ್ದಮುಖ್ಯವಾಚ್ಯತ್ವಮಸ್ಯ? ಇತ್ಯತಃ 'ಪುರುಷೋ-ತ್ತಮಸ್ತ್ರಿವಿಕ್ರಮಃ' ಇತ್ಯಾಭ್ಯಾಂ ತತ್ರೋಪಪಾದಕಮುಕ್ತಮ್ । ತ್ರಿಭುವನಾರ್ಥ-ಶಬ್ದವ್ಯಾಪೀ ಹಿ ತ್ರಿವಿಕ್ರಮಃ । ಸರ್ವಪುರುಷಶಬ್ದನಿಮಿತ್ತಕಸ್ವಾಮೀ ಹಿ ಪುರುಷೋ-ತ್ತಮಃ । ತಥಾಚ– ಅನೇನ ವಿಷ್ಣೌ ರುದ್ರಾದಿಶಬ್ದಾನಾಂ ಮಹಾಯೋಗವಿದ್ವ-ದ್ರೂಢಿಕಥನಾತ್ ತಯೋಶ್ಚ ರೂಢಿಮಾತ್ರಾತ್ ಪ್ರಾಬಲ್ಯಾದ್ ಯುಕ್ತಃ ಸಮಾಖ್ಯಾಶ್ರುತ್ಯಂತರೇಽಪಿ ವಿಷ್ಣೋಃ ಪ್ರತಿಪಾದ್ಯತ್ವನಿಶ್ಚಯಃ - ಇತಿ ಭಾವಃ । 'ಪುರುಷೋತ್ತಮ ಇತಿ' ಇತ್ಯಂತಸ್ಯ 'ಬ್ರಹ್ಮಾಂಡೇ' ಇತಿ ಪೂರ್ವೇಣಾನ್ವಯಃ।

ಹೀಗೆ ವಿಷ್ಣುವಿನಲ್ಲಿ ರುದ್ರಾದಿಶಬ್ದಗಳಿಗೆ ಮಹಾಯೋಗವಿರುವುದೆಂದು ಹೇಳಿ ವಿದ್ವದ್ರೂಢಿಯೂ ಇರುವುದೆಂದು ''ಏವಮ್'' ಎಂಬ ಶ್ಲೋಕದಿಂದ ಹೇಳುತ್ತಿದ್ದಾರೆ. 'ನಿಮಿತ್ತೈಃ' ಎಂಬ ಪದವನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ತಥಾ ಚ - ಈಗ ಹೇಳಿದ ರೀತಿಯಿಂದ ನಾನಾವಿಧವಾದ ನಿಮಿತ್ತಗಳಿಂದ 'ಸಪುರಾಣೇಷು ವೇದೇಷು' - ಪುರಾಣಸಹಿತವಾದ ವೇದಗಳಲ್ಲಿ ಹೇಳಲಾಗಿರುವ ನಾನಾವಿಧವಾದ ಶಬ್ದಗಳಿಂದ ವಿಷ್ಣುವೊಬ್ಬನೇ 'ಗೀಯತೇ' - ಮುಖ್ಯವಾಗಿ ವಾಚ್ಯನಾಗಿದ್ದಾನೆ ಎಂದು ಅರ್ಥ.

ಸರ್ವಶಬ್ದಗಳಿಂದ ಮುಖ್ಯವಾಚ್ಯತ್ವವು ಬೇರೆ ಎಲ್ಲೂ ಕಾಣದಿರುವುದು ವಿಷ್ಣುವಿಗೆ ಇರುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಸರ್ವಶಬ್ದಮುಖ್ಯವಾಚ್ಯತ್ವ-

ವಿಷಯದಲ್ಲಿ ಸಮರ್ಥನೆಯನ್ನು ''ಪುರುಷೋತ್ತಮಃ ತ್ರಿವಿಕ್ರಮಃ'' ಎಂಬ ಈ ಎರಡು ಪದಗಳಿಂದ ಹೇಳಲಾಗಿದೆ. ತ್ರಿಭುವನಾರ್ಥವ್ಯಾಪೀ - ತ್ರಿಭುವನವ್ಯಾಪಿಯಾಗಿರುವವನೇ ತ್ರಿವಿಕ್ರಮನಷ್ಟೇ . ಹಾಗೆಯೇ (ಸರ್ವಪುರುಷಸ್ವಾಮೀ) ಸರ್ವ ಪುರುಷರಿಗೆ ಸ್ವಾಮಿಯಾಗಿರುವವನೇ ಪುರುಷೋತ್ತಮನಷ್ಟೇ . ತಥಾ ಚ – ಈ ಪ್ರಮಾಣವಾಕ್ಯದಿಂದ ರುದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮಹಾಯೋಗ ವಿದ್ವದ್ರೂಢಿಗಳು ಇರುವುದೆಂದು ಹೇಳಿರುವದರಿಂದ ಅವೆರಡು ಕೇವಲ ರೂಢಿಯಿಂದ ಪ್ರಬಲವಾದ ಕಾರಣ ಇನ್ನೊಂದು ಸಮಾಖ್ಯಾ ಶ್ರುತಿಯಲ್ಲೂ ವಿಷ್ಣುವು ಪ್ರತಿಪಾದ್ಯನೆಂದು ನಿಶ್ಚಯಿಸುವುದು ಯುಕ್ತವೆಂದು ಭಾವ. 'ಪುರುಷೋತ್ತಮ ಇತಿ' - ಎಂಬಲ್ಲಿ ಕೊನೆಗೊಳ್ಳುವ ಭಾಷ್ಯವಾಕ್ಯಕ್ಕೆ ಹಿಂದಿರುವ 'ಬ್ರಹ್ಮಾಂಡೇ' ಎಂಬ ಪದದೊಂದಿಗೆ ಅನ್ವಯವಿರುವುದು.

ಭಾ.ದೀ. – ನನು ಯದಿ ರುದ್ರಾದಿಶಬ್ದಾನಾಂ ವಿಷ್ಣುಪರತ್ವಮುಕ್ತ್ವಾ 'ರುದ್ರೋ ಮಾऽऽವಿಶಾಂತಕಃ' ಇತ್ಯಾದಿ ಶ್ರುತೀನಾಮ್ ಅನಿರ್ಣಾಯಕತ್ವಮುಚ್ಯತೇ, ತರ್ಹಿ ನಾರಾಯಣಾದಿನಾಮ್ನಾಂ ರುದ್ರಾದಿಪರತ್ವೇನ 'ನಾರಾಯಣಂ ಮಹಾಜ್ಞೇಯಮ್ ' (ಮಹಾನಾ-೧೧) ಇತ್ಯಾದಿಶ್ರುತೀನಾಮ್ ಅನಿರ್ಣಾಯಕತ್ವಂ ಚ ಸ್ಯಾತ್, ಇತ್ಯತ ಆಹ – ವಾಮನೇ ಚೇತಿ ॥

ಶಂಕೆ - ರುದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲೇ ತಾತ್ಪರ್ಯವನ್ನು ಹೇಳಿ, 'ರುದ್ರೋ ಮಾऽऽವಿಶಾಂತಕಃ' ಇತ್ಯಾದಿ ಶ್ರುತಿಗಳು (ಪೂರ್ವಪಕ್ಷದಲ್ಲಿ ನಿರ್ಣಾಯಕವಲ್ಲ ಎಂದು ಹೇಳುವುದಾದರೆ) ನಾರಾಯಣಾದಿಶಬ್ದಗಳಿಗೆ ರುದ್ರಾದಿಗಳಲ್ಲಿ ತಾತ್ಪರ್ಯವಿರುವುದರಿಂದ 'ನಾರಾಯಣಂ ಮಹಾಜ್ಞೇಯಮ್' ಇತ್ಯಾದಿ ಶ್ರುತಿಗಳು ನಿರ್ಣಾಯಕವಾಗದಿರಲಿ? ಈ ಶಂಕೆಗೆ ಸಮಾಧಾನವನ್ನು ''ವಾಮನೇ ಚ'' ಎಂಬ ಭಾಷ್ಯವಾಕ್ಯದಲ್ಲಿ ಹೇಳಿದೆ.

**ಭಾಷ್ಯಮ್ – ವಾಮನೇ ಚ –**

**'ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ ।**
**ಅನ್ಯನಾಮ್ನಾಂ ಗತಿರ್ವಿಷ್ಣುರೇಕ ಏವ ಪ್ರಕೀರ್ತಿತಃ' ಇತಿ ॥**

ವಾಮನಪುರಾಣದಲ್ಲೂ ಕೂಡ – 'ನಾರಾಯಣಾದಿ ನಾಮಾತ್ಮಕ-ಶಬ್ದಗಳಿಗೆ ಇತರತ್ರ ಮುಖ್ಯವೃತ್ತಿಯಿಲ್ಲ. ಆದರೆ ಇತರ ವಾಚಕಗ-ಳೆಂದು ಹೇಳಲಾಗುವ ರುದ್ರಾದಿಶಬ್ದಗಳಿಗೆ ವಿಷ್ಣುವೇ ಮುಖ್ಯ-ವಾಚ್ಯನೆಂದು ಹೇಳಲ್ಪಟ್ಟಿದ್ದಾನೆ - ಎಂದು (ಹೇಳಿರುವುದರಿಂದ ನಾರಾಯಣಂ ಮಹಾಜ್ಞೇಯಂ ಇತ್ಯಾದಿ ಶ್ರುತಿಗಳು ನಿರ್ಣಾಯಕ-ವಲ್ಲ ಎಂದು ಹೇಳಲಾಗದು).

ಭಾ.ದೀ. – ಚೋಽಪ್ಯರ್ಥೇ । ಅಸ್ಯಾಪಿ 'ಉಕ್ತತ್ವಾದವಿರೋಧಃ' ಇತಿ ಪೂರ್ವೇಣಾನ್ವಯಃ । ಕಿಮುಕ್ತಮ್? ಇತ್ಯತಸ್ತದ್ವಾಕ್ಯಂ ಪಠತಿ – ನ ತ್ವಿತಿ ॥ ತುರವಧಾರಣೇ । 'ನಾರಾಯಣಾದೀನಾಂ' - ನಾರಾಯಣ ಇತ್ಯಾದೀನಾಮ್ ಅನ್ಯತ್ರ ರುದ್ರಾದೌ ಸಂಭವೋ 'ಮುಖ್ಯವೃತ್ತಿರಸ್ತಿ' ಇತಿ ಶೇಷಃ । 'ಅನ್ಯನಾಮ್ನಾಂ' ರುದ್ರಾದಿಶಬ್ದಾನಾಂ 'ವಿಷ್ಣುರೇಕ ಏವ ಗತಿಃ' - ಮುಖ್ಯವಾಚ್ಯಃ ಪ್ರಕೀರ್ತಿತ ಇತ್ಯರ್ಥಃ । 'ಇತಿ'ಶಬ್ದಸ್ಯ 'ವಾಮನೇ' ಇತ್ಯನೇನಾನ್ವಯಃ । ತಸ್ಯ ನಾರಾಯಣಾದಿ-ನಾಮ್ನಾಮನ್ಯತ್ರ ನಿರವಕಾಶತ್ವೋಕ್ತೇಃ ನ ತಚ್ಛ್ರುತೀನಾಮ್ ಅನಿರ್ಣಾಯಕತ್ವಮ್- ಇತಿ ವಿವಕ್ಷಿತಸಾಧ್ಯೇನಾನ್ವಯಃ ।

ವಾಮನೇ ಚ ಎಂಬಲ್ಲಿರುವ 'ಚಕಾರವು ಅಪಿ ಶಬ್ದಾರ್ಥವಾದ ಸಮುಚ್ಚಯವನ್ನು ಹೇಳುವುದು. ಈ ಪದಗಳಿಗೂ 'ಉಕ್ತವಾಗಿರುವುದರಿಂದ ವಿರೋಧವಿಲ್ಲ' ಎಂಬ ಹಿಂದಿನ (ಅಧ್ಯಾಹಾರ ಮಾಡಿಕೊಂಡಿರುವ) ಪದಗಳೊಂದಿಗೆ ಅನ್ವಯವಿರುವುದು. ವಾಮನಪುರಾಣದಲ್ಲಿ ಏನು ಹೇಳಿದೆ? ಎಂಬ ಶಂಕೆಗೆ ಉತ್ತರವಾಗಿ ಆ ವಾಕ್ಯವನ್ನು ''ನ ತು'' ಎಂದು ಭಾಷ್ಯದಲ್ಲಿ ಪಠಿಸಿದ್ದಾರೆ. ಇಲ್ಲಿ ತುಶಬ್ದವು ಏವ ಎಂದು ಅವಧಾರ-ಣಾರ್ಥವನ್ನು ಹೇಳುವುದು. 'ನಾರಾಯಣಾದೀನಾಮ್' - ಅಂದರೆ ನಾರಾಯಣ ಇತ್ಯಾದಿ ಶಬ್ದಗಳಿಗೆ ಅನ್ಯತ್ರ - ರುದ್ರಾದಿ ಇತರರಲ್ಲಿ 'ಸಂಭವಃ'- ಮುಖ್ಯವೃತ್ತಿಯು ಎಂದು ಅರ್ಥ. ಇಲ್ಲಿ 'ಅಸ್ತಿ' ಎಂಬ ಪದವು ಶೇಷವಾಗಿದೆ. 'ಅನ್ಯನಾಮ್ನಾಂ' (ಇತರವಾಚಕವೆಂದು ತಿಳಿಯಲಾದ) ರುದ್ರಾದಿಶಬ್ದಗಳಿಗೆ 'ವಿಷ್ಣುರೇಕ ಏವ ಗತಿಃ'

ವಿಷ್ಣುವೊಬ್ಬನೇ ಮುಖ್ಯವಾಚ್ಯನೆಂದು ಹೇಳಲ್ಪಟ್ಟಿದ್ದಾನೆ ಎಂದು ಅರ್ಥ. ಈ ಶ್ಲೋಕದ ಅನಂತರವಿರುವ) ಇತಿ ಶಬ್ದಕ್ಕೆ ವಾಮನೇ ಎಂಬ ಪದದೊಂದಿಗೆ ಅನ್ವಯ. ಆ (ವಾಮನೇ ಎಂಬ) ಪದಕ್ಕೆ 'ನಾರಾಯಣಾದಿ ಶಬ್ದಗಳಿಗೆ ಅನ್ಯತ್ರ ಅವಕಾಶವಿಲ್ಲವೆಂದು ಹೇಳಿರುವುದರಿಂದ ಆ ಶ್ರುತಿಗಳಿಗೆ ಅನಿರ್ಣಾಯಕತ್ವವಿಲ್ಲ' ಎಂಬ ಇಲ್ಲಿ ಅಭಿಪ್ರೇತವಾದ ಸಾಧ್ಯದೊಂದಿಗೆ ಅನ್ವಯವಿರುವುದು.

ಭಾ.ದೀ. – ಭಗವನ್ನಾಮತ್ವಾವಿಶೇಷಾದ್ ರುದ್ರಾದಿನಾಮವತ್ ನಾರಾಯಣಾದಿನಾಮ್ನಾಪಿ ರುದ್ರಾದೌ ವೃತ್ತಿಃ ಕಿಂ ನ ಸ್ಯಾದಿತ್ಯತ ಆಹ – ಸ್ಕಾಂದೇ ಚೇತಿ ॥

ಭಾ.ದೀ. – ರುದ್ರಾದಿ ನಾಮಗಳಂತೆ ನಾರಾಯಣಾದಿ ನಾಮಗಳೂ ಭಗವಂತನ ನಾಮಗಳೇ ಆಗಿರುವುದರಿಂದ ಅವುಗಳಿಗೂ ರುದ್ರಾದಿವಾಚಕತ್ವವು ಏಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ ''ಸ್ಕಾಂದೇ ಚ'' ಎಂದು ಹೇಳಲಾಗಿದೆ.

**ಭಾಷ್ಯಮ್ –ಸ್ಕಾಂದೇ ಚ –**

**'ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।**

**ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್' ಇತಿ ।**

ಸ್ಕಾಂದಪುರಾಣದಲ್ಲೂ – ''ಪುರುಷೋತ್ತಮನಾದ ಭಗವಂತನು, ಒಬ್ಬ ರಾಜನು ತನ್ನ ಪುರವನ್ನು ಬಿಟ್ಟು ಉಳಿದದ್ದನ್ನು ತನ್ನ ಅಮಾತ್ಯರಿಗೆ ಕೊಡುವಂತೆ, ನಾರಾಯಣಾದಿ ನಾಮಗಳನ್ನು ಬಿಟ್ಟು ಉಳಿದ ನಾಮಗಳನ್ನು ರುದ್ರಾದಿ ಇತರ ದೇವತೆಗಳಿಗೆ ಕೊಟ್ಟನು'' - ಎಂದು (ಹೇಳಿರುವುದರಿಂದ ನಾರಾಯಣಾದಿ ಶಬ್ದಗಳಿಗೆ ರುದ್ರಾದಿಶಬ್ದಗಳ ಸಾಮ್ಯವನ್ನು ಹೇಳಲಾಗದು).

ಭಾ.ದೀ. – ಚೋಽಪ್ಯರ್ಥಃ ಸಮುಚ್ಚಯೇ । ಅಸ್ಯಾಪಿ 'ಉಕ್ತತ್ವಾತ್' ಇತಿ ಪೂರ್ವೇಣಾನ್ವಯಃ । ಕಿಮುಕ್ತಮ್ ಇತ್ಯತಸ್ತದ್ವಾಕ್ಯಂ ಪಠತಿ – ಋತ ಇತಿ ॥ 'ವಿನಾ' ಇತ್ಯರ್ಥಃ । 'ಅನ್ಯತ್ರ' - ಅನ್ಯೇಭ್ಯೋ ರುದ್ರಾದಿಭ್ಯಃ 'ಅನ್ಯಾನಿ ರುದ್ರಾದಿನಾಮಾನಿ'

ಇತಿ ಶೇಷಃ । 'ಆದಿ'ಶಬ್ದೇನ ವಿಷ್ಣುರಿತ್ಯಾದಿಕಂ ಗೃಹ್ಯತೇ । ಅತ್ರ ದೃಷ್ಟಾಂತಮಾಹ – ರಾಜೇತಿ ॥ ಯಥಾ ರಾಜಾ ಸ್ವಕಂ ಪುರಮ್ ಋತೇऽನ್ಯತ್ ಅಮಾತ್ಯಾದಿಭ್ಯೋ ದದಾತಿ ತದ್ವತ್ ಇತ್ಯರ್ಥಃ । 'ಇತಿ' ಇತ್ಯಂತಸ್ಯ 'ಸ್ಕಾಂದೇ' ಇತ್ಯನೇನಾನ್ವಯಃ । ತಸ್ಯ ಚ 'ನಾರಾಯಣಾದಿನಾಮ್ನಾಮನ್ಯತ್ರ ವೃತ್ತ್ಯಭಾವಸ್ಯೋಕ್ತತ್ವಾತ್ ನ ಸಾಮ್ಯಮ್' ಇತ್ಯುಪಸ್ಕೃತೇನಾನ್ವಯಃ । ಅನೇನ ಸ್ಕಾಂದೇ ನಾರಾಯಣಾದಿನಾಮ್ನಾಂ ವಿಷ್ಣೋ-ರೇವ ಉಕ್ತತ್ವಾತ್ ನ ಸಾಮ್ಯಮ್ ಇತ್ಯನ್ವಯೇನ ಪೂರ್ವಪ್ರಯುಕ್ತೈವಕಾರಸ್ಯ ಕೃತ್ಯಾಂತರಂ ಸೂಚಿತಂ ಭವತಿ ।

''ಸ್ಕಾಂದೇ ಚ'' ಎಂಬಲ್ಲಿರುವ 'ಚ'ಕಾರವು ಅಪಿಶಬ್ದದ ಅರ್ಥವುಳ್ಳದ್ದಾಗಿ ಸಮುಚ್ಚಯವನ್ನು ಹೇಳುವುದು. ಈ ಪದಗಳಿಗೂ ಉಕ್ತತ್ವಾತ್' ಎಂಬ ಹಿಂದಿನ ಪದದೊಂದಿಗೆ ಅನ್ವಯವಿರುವುದು. ಸ್ಕಾಂದಪುರಾಣದಲ್ಲಿ ಏನು ಹೇಳಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ ಆ ವಾಕ್ಯವನ್ನು ಭಾಷ್ಯಕಾರರು 'ಋತೇ' ಎಂಬುದಾಗಿ ಪಠಿಸುತ್ತಿ-ದ್ದಾರೆ. ಋತೇ ಎಂದರೆ ವಿನಾ ಎಂದು ಅರ್ಥ. 'ಅನ್ಯತ್ರ' ಅಂದರೆ ಇತರರಾದ ರುದ್ರಾದಿಗಳಿಗೆ ಎಂದು ಅರ್ಥ. 'ಅನ್ಯಾನಿ ರುದ್ರಾದಿನಾಮಾನಿ' - 'ಇತರ ರುದ್ರಾದಿ-ನಾಮಗಳನ್ನು' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ನಾರಾಯಣಾದಿ' ಎಂಬಲ್ಲಿರುವ ಆದಿಶಬ್ದದಿಂದ ವಿಷ್ಣು ಮೊದಲಾದ ಶಬ್ದಗಳನ್ನು ಗ್ರಹಿಸಬೇಕು. ಈ ವಿಷಯದಲ್ಲಿ ''ರಾಜಾ'' ಎಂಬ ವಾಕ್ಯದಿಂದ ದೃಷ್ಟಾಂತವನ್ನು ಹೇಳುತ್ತಿದ್ದಾರೆ. 'ಹೇಗೆ ರಾಜನು ತನ್ನ ಪುರವನ್ನು ಬಿಟ್ಟು ಉಳಿದದ್ದನ್ನು ಅಮಾತ್ಯರೇ ಮೊದಲಾದವರಿಗೆ ಕೊಡುವನೋ ಅದರಂತೆ' ಎಂದು ಅರ್ಥ. 'ಇತಿ' ಎಂಬಲ್ಲಿ ಕೊನೆಗೊಳ್ಳುವ ಭಾಗಕ್ಕೆ 'ಸ್ಕಾಂದೇ' ಎಂಬ ಪದದಿಂದ ಅನ್ವಯ. ಆ ಪದಕ್ಕೂ ಕೂಡ 'ನಾರಾಯಣಾದಿ ಶಬ್ದಗಳಿಗೆ ಅನ್ಯತ್ರ ವಾಚಕತ್ವವು ಇಲ್ಲವೆಂದು ಹೇಳಿರುವುದರಿಂದ ಆ ಶಬ್ದಗಳಿಗೆ (ರುದ್ರಾದಿಶಬ್ದಗಳ) ಸಾಮ್ಯವಿಲ್ಲ ಎಂಬ ಅಧ್ಯಾಹಾರ ಮಾಡಿಕೊಳ್ಳುವ ಪದಗಳೊಂದಿಗೆ ಅನ್ವಯವಾಗು-ವುದು. ಇದರಿಂದ – 'ಸ್ಕಾಂದಪುರಾಣದ ವಾಕ್ಯದಲ್ಲಿ ನಾರಾಯಣಾದಿ ಶಬ್ದಗಳಿಗೆ ವಿಷ್ಣುವೇ ವಾಚ್ಯನೆಂದು ಹೇಳಿರುವುದರಿಂದ ಆ ಶಬ್ದಗಳಿಗೆ ರುದ್ರಾದಿಶಬ್ದಗಳ ಸಾಮ್ಯ-ವಿಲ್ಲ' ಎಂದು ಅನ್ವಯ ಮಾಡುವುದರಿಂದ ಹಿಂದೆ (ವಿಷ್ಣೋರೇವ ಉಕ್ತತ್ವಾತ್ ಎಂಬ

ಭಾಷ್ಯವಾಕ್ಯದಲ್ಲಿ) ಪ್ರಯೋಗಿಸಲಾಗಿರುವ 'ಏವ'ಕಾರಕ್ಕೆ ಮತ್ತೊಂದು ಪ್ರಯೋಜನವು ಸೂಚಿತವಾಗುವುದು.

ಭಾ.ದೀ. – ಯದ್ಯೇವಂ ರುದ್ರಾದಿಶಬ್ದಾಃ ವಿಷ್ಣ್ವೇಕಪರಾಃ ತರ್ಹಿ ಕಿಮುಚ್ಯತೇ ಭಸ್ಮಧರೋಗ್ರತ್ವಾದೀನಾಂ ತಚ್ಛಬ್ದತ್ವಮ್ । ವಿಷ್ಣುದತ್ತತ್ವಾಭಿಪ್ರಾಯೇಣ ಚೇತ್ - ತರ್ಹಿ ರುದ್ರಾದಿಶಬ್ದಾ ಅಪಿ ತಾದೃಶಾ ಇತಿ ಕಥಂ ತೈರ್ನಿರ್ಣಯಾಭಾವಃ? ಇತ್ಯತ ಆಹ – ಚತುರ್ಮುಖ ಇತಿ ॥

ಭಾ.ದೀ.– ಹೀಗೆ ರುದ್ರಾದಿಶಬ್ದಗಳು ವಿಷ್ಣುವಿನಲ್ಲೇ ಮುಖ್ಯತಾತ್ಪರ್ಯವುಳ್ಳವು ಎಂದಾದರೆ ಭಸ್ಮಧರ ಉಗ್ರ ಮೊದಲಾದ ಶಬ್ದಗಳು ತಚ್ಛಬ್ದ ಅಂದರೆ ರುದ್ರನ ಶಬ್ದಗಳು ಎಂದು ಹೇಳಿರುವುದು ಹೇಗೆ ಯುಕ್ತವಾಗುವುದು? ಆ ಶಬ್ದಗಳು ರುದ್ರಾದಿಗಳಿಗೆ ವಿಷ್ಣುವಿನಿಂದ ದತ್ತವಾಗಿವೆ ಎಂಬ ಅಭಿಪ್ರಾಯದಿಂದ ಹಾಗೆ ಹೇಳಿರುವದಾದರೆ ರುದ್ರಾದಿಶಬ್ದಗಳೂ ಕೂಡ ರುದ್ರಾದಿಗಳಿಗೆ ವಿಷ್ಣುವಿನಿಂದ ದತ್ತವಾಗಿರುವ ಕಾರಣ ರುದ್ರಾದಿಶಬ್ದಗಳು ಭಸ್ಮಧರ ಮೊದಲಾದ ಶಬ್ದಗಳಂತೆಯೇ ಆದ ಕಾರಣ ಅವುಗಳಿಂದ ನಿರ್ಣಯಮಾಡಲು ಸಾಧ್ಯವಿಲ್ಲ ಎಂದು ಹೇಳುವುದು ಹೇಗೆ? ಎಂಬ ಆಕ್ಷೇಪಕ್ಕೆ ಉತ್ತರವಾಗಿ ಭಾಷ್ಯದಲ್ಲಿ ''ಚತುರ್ಮುಖಃ'' ಇತ್ಯಾದಿ ವಾಕ್ಯದಿಂದ ಉತ್ತರಿಸಲಾಗಿದೆ.

**ಭಾಷ್ಯಮ್ - 'ಚತುರ್ಮುಖಃ ಶತಾನಂದೋ ಬ್ರಹ್ಮಣಃ ಪದ್ಮಭೂರಿತಿ ।**
**ಉಗ್ರೋ ಭಸ್ಮಧರೋ ನಗ್ನಃ ಕಪಾಲೀತಿ ಶಿವಸ್ಯ ಚ ।**
**ವಿಶೇಷನಾಮಾನಿ ದದೌ ಸ್ವಕೀಯಾನ್ಯಪಿ ಕೇಶವಃ'**
**ಇತಿ ಚ ಬ್ರಾಹ್ಮೇ ॥ ೩ ॥**

'ಕೇಶವನು ತನ್ನದೇ ಆಗಿರುವುದಾದರೂ ಚತುರ್ಮುಖ ಶತಾನಂದ, ಪದ್ಮಭೂಃ ಎಂಬ ಶಬ್ದಗಳನ್ನು ಬ್ರಹ್ಮನಿಗೆ ಹಾಗೂ ಉಗ್ರ, ಭಸ್ಮಧರ, ನಗ್ನ ಕಪಾಲಿ ಎಂಬ ವಿಶೇಷನಾಮಗಳನ್ನು ಶಿವನಿಗೂ ಕೊಟ್ಟನು' ಎಂದೂ ಬ್ರಾಹ್ಮಪುರಾಣದಲ್ಲಿ ಹೇಳಿದೆ.

ಭಾ.ದೀ.– ಯದ್ಯಪಿ ಸ್ವಕೀಯಾನಿ, ತಥಾಽಪಿ 'ಕೇಶವಃ' ಬ್ರಹ್ಮರುದ್ರಪ್ರವ-

ರ್ತಕೋ ವಿಷ್ಣುಃ 'ಸ್ವಕೀಯಾನಿ' ಮುಖ್ಯತಃ ಸ್ವವಾಚಕಾನ್ಯೇವ ಚತುರ್ಮುಖಃ ಶತಾನಂದಃ ಪದ್ಮಭೂರಿತಿ 'ವಿಶೇಷನಾಮಾನಿ' ನಾಮವಿಶೇಷಾನೇವ 'ಬ್ರಹ್ಮಣಃ' ಬ್ರಹ್ಮಣೇ ದದೌ ಇತ್ಯರ್ಥಃ।

'ನಗ್ನಃ' ದಿಗಂಬರಃ। 'ಶಿವಸ್ಯ' ಶಿವಾಯ। ಚಸ್ತ್ವರ್ಥಃ। 'ಬ್ರಾಹ್ಮೇ' ಇತ್ಯಸ್ಯಾಪಿ 'ಉಕ್ತತ್ವಾತ್' ಇತಿ ಪೂರ್ವೇಣಾನ್ವಯಃ। ರುದ್ರಾದೌ ಭಸ್ಮಧರೋಗ್ರತ್ವಾದೇರೇವ ವಿಷ್ಣೋಃ ಸಕಾಶಾತ್ ಪ್ರಾಪ್ತತ್ವೇನ ಇತಿ ತದರ್ಥಃ। ತಸ್ಯ ಚ 'ಪೂರ್ವೋಕ್ತಂ ಯುಕ್ತಮ್' ಇತಿ ಸಾಧ್ಯೇನಾನ್ವಯಃ।

ಯದ್ಯಪಿ ತನ್ನದೇ ಆದ ಶಬ್ದಗಳು ಆದರೂ ಕೇಶವನು ಅಂದರೆ ಬ್ರಹ್ಮ ಮತ್ತು ರುದ್ರರಿಗೆ ಪ್ರವರ್ತಕನಾದ ವಿಷ್ಣುವು ಸ್ವಕೀಯಾನ್ - ಮುಖ್ಯತಃ ತನಗೇ ವಾಚಕವಾಗಿ-ರುವ ಚತುರ್ಮುಖ, ಶತಾನಂದ, ಪದ್ಮಭೂಃ ಎಂಬ 'ವಿಶೇಷನಾಮಾನಿ' - ನಾಮವಿಶೇಷಗಳನ್ನೇ 'ಬ್ರಹ್ಮಣಃ' - ಬ್ರಹ್ಮನಿಗೆ ದದೌ - ಕೊಟ್ಟನು ಎಂದು ಅರ್ಥ.

ನಗ್ನಃ - ಅಂದರೆ ದಿಗಂಬರ ಎಂದರ್ಥ. ಶಿವಸ್ಯ - ಅಂದರೆ ಶಿವನಿಗೆ ಎಂದು ಅರ್ಥ. 'ಶಿವಸ್ಯ ಚ' ಎಂಬಲ್ಲಿನ 'ಚ'ಶಬ್ದವು ತುಶಬ್ದದ ಅರ್ಥವನ್ನು ಹೇಳುವುದು. 'ಬ್ರಾಹ್ಮೇ' ಎಂಬ ಪದಕ್ಕೂ ಹಿಂದೆ ಭಾಷ್ಯದಲ್ಲಿರುವ 'ಉಕ್ತತ್ವಾತ್' ಎಂಬ ಪದದೊಂದಿಗೆ ಅನ್ವಯವಿರುವುದು. 'ಭಸ್ಮಧರ, ಉಗ್ರ' ಇತ್ಯಾದಿ ಶಬ್ದಗಳಿಗೆ ಮಾತ್ರ ರುದ್ರಾದಿಗಳಲ್ಲಿ ವಿಷ್ಣುವಿನಿಂದ ಪ್ರಾಪ್ತಿ ಇರುವುದರಿಂದ - ಎಂದು 'ಬ್ರಾಹ್ಮೇ ಉಕ್ತತ್ವಾತ್' ಎಂಬ ಪದಗಳ ಅರ್ಥ. ಈ ಪದಗಳಿಗೂ ಹಿಂದೆ ಹೇಳಿರುವುದು ಯುಕ್ತವಾಗಿದೆ ' ಎಂಬ ಸಾಧ್ಯ-ದೊಂದಿಗೆ ಅನ್ವಯವಿರುವುದು.

ಭಾ.ದೀ. – ನನು 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' (ಮುಂ ೨-೨-೬) ಇತಿ ಜೀವಲಿಂಗಶ್ರವಣಾತ್ ಪ್ರಾಣಿತ್ವಪ್ರಸಿದ್ಧೇಶ್ಚ ಜೀವಸಾಮಾನ್ಯಸ್ಯ ವಾ, ವಿಷಯಭೂತಲೋಕಾಧಾರತ್ವಸ್ಯ 'ವಾಯುನಾ ವೈ ಗೌತಮ ಸೂತ್ರೇಣಾಯಂ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' (ಬೃ. ೫-೭-೨) ಇತಿ ಶ್ರುತ್ಯಂತರೇ ವಾಯುನಿಷ್ಠತ್ವೇನ ಪ್ರಸಿದ್ಧತ್ವಾದ್ ವಾಯೋರ್ವಾ ಅತ್ರ

ಪ್ರಕರಣೇ ದ್ಯುಭ್ವಾದ್ಯಾಶ್ರಯತ್ವೇನ ಪ್ರತಿಪಾದ್ಯತಾ ಕಿಂ ನ ಸ್ಯಾತ್? ಇತ್ಯಾಶಂಕಾಂ ಪರಿಹರತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಪ್ರಾಣಭೃಚ್ಚೇತಿ ॥

'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' (ಮುಂ. ೨-೨-೬) ಎಂದು ಜೀವನ ಲಿಂಗವು ಶ್ರುತವಾಗಿರುವುದರಿಂದ ಹಾಗೂ ಪ್ರಾಣವುಳ್ಳವನೆಂದು ಪ್ರಸಿದ್ಧಿಯಿರುವುದರಿಂದ ಜೀವಸಾಮಾನ್ಯನಾಗಲೀ, ಇಲ್ಲಿ ವಿಷಯವಾಗಿರುವ ಲೋಕಾಧಾರತ್ವವು 'ವಾಯುನಾ ವೈ ಗೌತಮ ಸೂತ್ರೇಣಾಯಂ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' ಎಂಬುದಾಗಿ ಮತ್ತೊಂದು ಶ್ರುತಿಯಲ್ಲಿ ವಾಯುವಿನಲ್ಲಿರುವುದೆಂದು ಪ್ರಸಿದ್ಧವಾಗಿರುವುದರಿಂದ ವಾಯುವಾಗಲೀ ಈ ಪ್ರಕರಣದಲ್ಲಿ ದ್ಯುಭ್ವಾದ್ಯಾಶ್ರಯರೆಂದು ಪ್ರತಿಪಾದ್ಯರು ಏಕಾಗಬಾರದು? ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಭಾಷ್ಯಕಾರರು ಪಠಿಸಿ ''ಪ್ರಾಣಭೃಚ್ಚ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ಓಂ ॥ ಪ್ರಾಣಭೃಚ್ಚ ॥ ಓಂ**

**ಭಾಷ್ಯಮ್ - ಏತೈರೇವ ಹೇತುಭಿರ್ನ ಜೀವೋ ವಾಯುಶ್ಚ ।**

ಹಿಂದೆ ಹೇಳಲಾದ ಈ ಹೇತುಗಳಿಂದಲೇ ಜೀವನಾಗಲೀ ವಾಯು-ವಾಗಲೀ ದ್ಯುಭ್ವಾದ್ಯಾಶ್ರಯರಲ್ಲ.

ಭಾ.ದೀ. – ಏತೈರಿತಿ ॥ ಆತ್ಮಶಬ್ದಃ, ಮುಕ್ತೋಪಸೃಪ್ಯತ್ವಮ್, ಅತಚ್ಛಬ್ದೋ ರುದ್ರಾದಿಪ್ರಾಪಕಶ್ರುತೀನಾಂ ವಿಷ್ಣುಪರತ್ವಮಿತ್ಯೇವಂರೂಪೈಃ ಪೂರ್ವೋಕ್ತಹೇತುಭಿ-ರಿತ್ಯರ್ಥಃ । 'ನಾತ್ರ ಹೇತ್ವಂತರಂ ವಾಚ್ಯಮ್' ಇತ್ಯೇವಶಬ್ದಾರ್ಥಃ । 'ಜೀವೋ ವಾಯುಃ' ಇತ್ಯನೇನ 'ಪ್ರಾಣಭೃತ್'ಶಬ್ದೋ ವ್ಯಾಖ್ಯಾತಃ।

ಅತ್ರ 'ವಾಚ್ಯಃ' ಇತ್ಯನುಷಜ್ಯತೇ । ಚಃ ಸಮುಚ್ಚಯೇ । ಅನೇನ ಸೂತ್ರೇ ಚಶಬ್ದಃ ಪ್ರಾಗುಕ್ತಹೇತೂನಾಂ 'ನಾನುಮಾನಮ್' ಇತ್ಯತೋ ನಞಶ್ಚ ಸಮಾಕರ್ಷಕಃ । 'ನ ಕೇವಲಂ ರುದ್ರೋಽತ್ರ ನ ವಾಚ್ಯಃ, ಕಿಂತು ಜೀವೋ ವಾಯುಶ್ಚ' ಇತಿ ಸಮುಚ್ಚಯಾರ್ಥಶ್ಚ ಇತ್ಯುಕ್ತಂ ಭವತಿ।

''ಏತ್ಯೈರಿತಿ''- ''ಏತ್ಯೈಃ'' ಅಂದರೆ ಆತ್ಮಶಬ್ದ, ಮುಕ್ತರಿಂದ ಪರಮಪ್ರಾಪ್ಯನಾಗಿರುವಿಕೆ ತಚ್ಛಬ್ದವಿಲ್ಲದಿರುವುದು ರುದ್ರಾದಿಗಳಿಗೆ ಪ್ರಾಪ್ತಿಯನ್ನು ಸೂಚಿಸುವ ಶಬ್ದಗಳಿಗೆ ವಿಷ್ಣುವಿನಲ್ಲೇ ತಾತ್ಪರ್ಯವಿರುವುದು ಎಂಬ ಹಿಂದೆ ಹೇಳಲಾದ ಹೇತುಗಳಿಂದ ಎಂದು ಅರ್ಥ. ಇಲ್ಲಿ ಮತ್ತೊಂದು ಹೇತುವನ್ನು ಹೇಳಬೇಕಾದದ್ದಿಲ್ಲ ಎಂದು 'ಏತ್ಯೈರೇವ' ಎಂಬಲ್ಲಿರುವ 'ಏವ'ಶಬ್ದದ ಅರ್ಥ. 'ಜೀವೋ ವಾಯುಃ' ಎಂಬ ಭಾಷ್ಯದ ಪದ-ಗಳಿಂದ ಸೂತ್ರದಲ್ಲಿರುವ ಪ್ರಾಣಭೃತ್‌ಶಬ್ದದ ವ್ಯಾಖ್ಯಾನವನ್ನು ಮಾಡಲಾಗಿದೆ.

ಇಲ್ಲಿ (ಹಿಂದಿನ ಭಾಷ್ಯವಾಕ್ಯದಲ್ಲಿರುವ) 'ವಾಚ್ಯಃ' ಎಂಬ ಪದವು ಅನುವೃತ್ತಿಯನ್ನು ಪಡೆಯುವುದು. ಭಾಷ್ಯದಲ್ಲಿರುವ ಚಕಾರವು ಸಮುಚ್ಚಯವನ್ನು ಹೇಳುವುದು. ಇದರಿಂದ ಸೂತ್ರದಲ್ಲಿರುವ ಚಶಬ್ದವು ಹಿಂದೆ ಹೇಳಿದ ಹೇತುಗಳಿಗೆ ಹಾಗೂ ನಾನುಮಾನಂ ಎಂಬ ಸೂತ್ರದಲ್ಲಿರುವ ನಞ್ ಪದದ ಅನುವೃತ್ತಿಯನ್ನು ಸೂಚಿಸುವುದು. ಕೇವಲ ರುದ್ರನು ಇಲ್ಲಿ ವಾಚ್ಯನಲ್ಲ ಎಂದಷ್ಟೇ ಅಲ್ಲ; ಕಿಂತು ಜೀವ ಮತ್ತು ವಾಯುಗಳೂ ಕೂಡ ಎಂಬುದಾಗಿ ಸಮುಚ್ಚಯವನ್ನು ಆ 'ಚ'ಶಬ್ದವು ಹೇಳುವುದೆಂದು ಸೂಚಿತವಾಗುವುದು.

ಭಾ.ದೀ. – ನನು 'ವಾಯುನಾ ವೈ ಗೌತಮ' ಇತ್ಯಾದಿಶ್ರುತೇರ್ವಿಷ್ಣುಪರತ್ವೇನ ವಾಯುಸಾಧಕತ್ವಾಭಾವೇಽಪಿ ಬಹುಧಾ ಜನ್ಮಾಖ್ಯಲಿಂಗೇನ ಜೀವೋಽತ್ರ ವಾಚ್ಯಃ ಕಿಂ ನ ಸ್ಯಾತ್? ಇತ್ಯತ ಆಹ – ಅಜಾಯಮಾನ ಇತಿ ॥

ಭಾ.ದೀ. – 'ವಾಯುನಾ ವೈ ಗೌತಮ' ಇತ್ಯಾದಿಶ್ರುತಿಯು ವಿಷ್ಣುಪರವಾದು-ದರಿಂದ ವಾಯುವೇ ಇಲ್ಲಿ ವಿವಕ್ಷಿತನೆಂಬುದಕ್ಕೆ ಸಾಧಕವಾಗದೇ ಇದ್ದರೂ ಬಹು-ಪ್ರಕಾರದಿಂದ ಜನ್ಮವೆಂಬ ಲಿಂಗದಿಂದ ಜೀವನೇ ಇಲ್ಲಿ ವಾಚ್ಯನು ಎಂದಾಗಬಾರದೇಕೆ? ಎಂಬ ಶಂಕೆಗೆ ಉತ್ತರವಾಗಿ ''ಅಜಾಯಮಾನಃ'' ಎಂದು ಹೇಳಿದೆ.

**ಭಾಷ್ಯಮ್ - 'ಅಜಾಯಮಾನೋ ಬಹುಧಾ ವಿಜಾಯತೇ' ಇತಿ ತಸ್ಯೈವ ಬಹುಧಾ ಜನ್ಮೋಕ್ತೇಃ ॥**

'ಅಜಾಯಮಾನೋ ಬಹುಧಾ ವಿಜಾಯತೇ' ಎಂಬುದು ವಿಷ್ಣುವಿಗೆ

ಬಹುಧಾ - ಬಹುಪ್ರಕಾರವಾಗಿ ಪ್ರಾದುರ್ಭಾವವನ್ನು ಹೇಳಿರುವು-
ದರಿಂದ ಈ ಶ್ರುತಿಯಲ್ಲಿ ಜೀವನು ವಾಚ್ಯನಲ್ಲ.

ಭಾ.ದೀ. – ದೇಹತಃ 'ಅಜಾಯಮಾನಃ' ಅವಿಕುರ್ವಾಣೋ 'ಬಹುಧಾ' ರಾಮಕೃಷ್ಣಾದಿರೂಪೇಣ 'ವಿಜಾಯತೇ' ತತ್ರ ತತ್ರ ಪ್ರಾದುರ್ಭವತಿ' - ಇತ್ಯರ್ಥಃ। ಇತೀತಿ ॥ ಇತಿ ಪುರುಷಸೂಕ್ತಗತವಾಕ್ಯೇನ – ಇತ್ಯರ್ಥಃ।

ಯಸ್ಯ ಜನ್ಮಾಸಂಭವೋಽಭಿಹಿತಃ ಪೂರ್ವವಾದಿನಾ ತಸ್ಯೈವ ವಿಷ್ಣೋರ್ನ ಜೀವಸ್ಯ ಇತ್ಯೇವಶಬ್ದಾರ್ಥಃ । ತಥಾ ಚ 'ಲಿಂಗಂ ಸಾವಕಾಶಮ್ ಇತಿ ನ ತದ್ವಿರೋಧಃ' ಇತಿ ವಾಕ್ಯಶೇಷಃ।

ದೇಹದಿಂದ 'ಅಜಾಯಮಾನಃ' - ವಿಕಾರವನ್ನು ಪಡೆಯದೇ 'ಬಹುಧಾ' - ರಾಮಕೃಷ್ಣಾದಿ ಅನೇಕ ರೂಪಗಳಿಂದ 'ವಿಜಾಯತೇ' - ಅಲ್ಲಲ್ಲಿ ಅಭಿವ್ಯಕ್ತನಾಗುವನು ಎಂದು ಅರ್ಥ. ''ಇತಿ'' - ಅಂದರೆ ಹೀಗೆ ಪುರುಷಸೂಕ್ತದಲ್ಲಿರುವ ವಾಕ್ಯದಿಂದ ಎಂದು ಅರ್ಥ.

ಯಾರಿಗೆ ಜನ್ಮವು ಅಸಂಭಾವಿತವೆಂದು ಪೂರ್ವಪಕ್ಷಿಯು ಹೇಳಿದನೋ ಅದೇ ವಿಷ್ಣುವಿಗೆ ಹೊರತು ಜೀವನಿಗಲ್ಲ ಎಂದು 'ತಸ್ಯೈವ' ಎಂಬಲ್ಲಿರುವ 'ಏವ' ಶಬ್ದದ ಅರ್ಥ. ತಥಾ ಚ - 'ಬಹುಧಾ ಜನ್ಮವೆಂಬ ಲಿಂಗವು ಸಾವಕಾಶವಾದುದರಿಂದ ಆ ಲಿಂಗದ ವಿರೋಧವಿಲ್ಲ' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಭಾ.ದೀ.– ನನು ಕಿಂ ಜೀವಲಿಂಗಸ್ಯ ವಿಷ್ಣುಗತತ್ವಪ್ರತಿಪಾದನಾಯಾಸೇನ ಲಿಂಗಬಲಾತ್ ಜೀವಸ್ಯೈವ ದ್ಯುಭ್ವಾದ್ಯಾಯತನತ್ವಂ ಸ್ಯಾತ್ । ನ ಚೋಕ್ತಾತ್ಮಶಬ್ದಾ-ದಿಹೇತುವಿರೋಧಃ। ಜೀವೇಶಾಭೇದಾಭಿಪ್ರಾಯೇಣ ಜೀವೇಽಪಿ ಆತ್ಮಶಬ್ದಾದ್ಯುಕ್ತಿ-ಸಂಭವಾತ್, ಇತ್ಯಾಶಂಕಾಂ ಪರಿಹರತ್ ಸೂಕ್ತಂ ಪಠಿತ್ವಾ ವ್ಯಾಚಷ್ಟೇ – ಭೇದೇತಿ ॥

ಭಾ.ದೀ. – ಶಂಕೆ - ಜೀವಲಿಂಗವು ವಿಷ್ಣುವಿಗೇ ಸಂಬಂಧಪಟ್ಟಿದ್ದು ಎಂದು ಪ್ರತಿಪಾದಿಸುವ ಆಯಾಸವೇಕೆ? ಆ ಲಿಂಗದ ಬಲದಿಂದ ಜೀವನೇ ದ್ಯುಭ್ವಾದ್ಯಾಯ-ತನನೆಂದಾಗಲಿ! ಹಾಗೆ ಹೇಳಿದ ಪಕ್ಷದಲ್ಲಿ ಆತ್ಮಶಬ್ದಾದಿ ಹೇತುಗಳ ವಿರೋಧ

ಬರುವುದೆಂದರೆ, ಅದು ಸರಿಯಲ್ಲ. ಏಕೆಂದರೆ, ಜೀವ ಪರಮಾತ್ಮರಿಗೆ ಅಭೇದ-ವಿರುವುದೆಂಬ ಅಭಿಪ್ರಾಯದಿಂದ ಜೀವನ ವಿಷಯದಲ್ಲೂ ಆತ್ಮಶಬ್ದಾದಿಗಳನ್ನು ಹೇಳಲು ಸಾಧ್ಯವಿದೆ.

ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು "ಭೇದ" ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ಭೇದವ್ಯಪದೇಶಾತ್ ಓಂ ॥ ೫ ॥**

**ಭಾಷ್ಯಮ್ – ನ ಚೈಕ್ಯಂ ವಾಚ್ಯಮ್ ।'ಜುಷ್ಟಂ ಯದಾ ಪಶ್ಯತ್ಯನ್ಯ-ಮೀಶಮಸ್ಯ ಮಹಿಮಾನಮ್' ಇತಿ ಭೇದವ್ಯಪದೇಶಾತ್ ॥**

ಜೀವೇಶ್ವರರಿಗೆ ಐಕ್ಯವು ಇಲ್ಲಿ ಅಭಿಪ್ರೇತವೆಂದು ಹೇಳತಕ್ಕದ್ದಲ್ಲ. ಏಕೆಂ-ದರೆ, 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ, ಅಸ್ಯ ಮಹಿಮಾನಂ' ಎಂಬುದಾಗಿ ಜೀವೇಶ್ವರರಿಗೆ ಭೇದವನ್ನು ಇಲ್ಲಿ ಹೇಳಲಾಗಿದೆ.

ಭಾ.ದೀ. – ನೈಕ್ಯಂ ವಾಚ್ಯಮಿತಿ ॥ 'ಜೀವೇಶ್ವರಯೋರತ್ರಾಭಿಪ್ರೇತಮ್' ಇತಿ ಶೇಷಃ । ಅನೇನ ಸೂತ್ರೇ 'ನಾನುಮಾನಮ್' ಇತ್ಯತೋ ನಞನುವರ್ತನೀಯಃ । ಸ ಚ ಹೇತುಗತಭೇದಪ್ರತಿಯೋಗಿನಾ ಸಂಯೋಜ್ಯ ಇತ್ಯುಕ್ತಂ ಭವತಿ । ಚಶಬ್ದೋ 'ಜೀವೇಶೈಕ್ಯಪ್ರಯುಕ್ತಾತ್ಮಶಬ್ದವಾಚ್ಯತಾ ಏತತ್ಪ್ರಕರಣಬೋಧ್ಯತಾಽಪಿ ನ' ಇತಿ ಸಮುಚ್ಚಯಾರ್ಥಃ । ಕೋಽಸೌ ವ್ಯಪದೇಶಃ? ಇತ್ಯತ ಆಹ – ಜುಷ್ಟಮಿತಿ ॥ ಇತಿ ಭೇದವ್ಯಪದೇಶಾದಿತಿ ॥ 'ಇತಿ ಭೇದಶ್ರುತೇಃ' ಇತ್ಯರ್ಥಃ ।

ಅನೇನ – 'ಜುಷ್ಟಮ್' ಇತಿ ವಾಕ್ಯೇ 'ಪಶ್ಯತಿ' ಇತಿ ದರ್ಶನಕರ್ತೃತ್ವೇನ ಪ್ರಕೃತ-ಜೀವಸ್ಯ ಈಶಪದೋಕ್ತೇಶ್ಚ ಈಶ್ವರಾದ್ ಭೇದೋಕ್ತೇಃ ನ ತಯೋರೈಕ್ಯಮ್ ಅತ್ರಾಭಿಪ್ರೇತಮಿತಿ ವಾಚ್ಯಮ್ - ಇತಿ ಸೂತ್ರಾರ್ಥ ಉಕ್ತೋ ಭವತಿ । ಶ್ರುತಿಸ್ತು ಆನಂದಮಯೇ ವ್ಯಾಕೃತಾ ।

ಅನು– ''ನ ಚೈಕ್ಯಂ ವಾಚ್ಯಮ್'' ಎಂಬ ಭಾಷ್ಯವಾಕ್ಯಕ್ಕೆ 'ಜೀವೇಶ್ವರಯೋರತ್ರ ಅಭಿಪ್ರೇತಮ್' ಎಂಬ ಪದಗಳು ಶೇಷವಾಗಿವೆ. (ಜೀವೇಶ್ವರರಿಗೆ ಐಕ್ಯವು ಅಭಿಪ್ರೇತ-ವಾದದ್ದು ಎಂದು ಹೇಳತಕ್ಕದ್ದಲ್ಲ). ಇದರಿಂದ 'ನಾನುಮಾನಂ' ಎಂಬ ಸೂತ್ರದಿಂದ ಈ ಸೂತ್ರಕ್ಕೆ ನಞ್ ಪದವನ್ನು ಅನುವೃತ್ತಮಾಡಿಕೊಳ್ಳಬೇಕು. ಆ ಪದವನ್ನು 'ಭೇದವ್ಯಪದೇಶಾತ್' ಎಂಬ ಹೇತುವಿನಲ್ಲಿರುವ ಭೇದಪ್ರತಿಯೋಗಿವಾಚಕಪದ-ದೊಂದಿಗೆ ಸಂಯೋಜಿಸಬೇಕು ಎಂದು ಹೇಳಿದಂತಾಗುವುದು. 'ನ ಚೈಕ್ಯಮ್' ಎಂಬಲ್ಲಿರುವ ಚ ಶಬ್ದವು ಜೀವೇಶರ ಅಭೇದಪ್ರಯುಕ್ತವಾದ ಆತ್ಮಶಬ್ದವಾಚ್ಯತ್ವ-ವಾಗಲೀ, ಈ ಪ್ರಕರಣಬೋಧ್ಯತ್ವವಾಗಲೀ ಜೀವನಿಗೆ ಇಲ್ಲವೆಂದು ಸಮುಚ್ಚಯವನ್ನು ಹೇಳುವುದು. ಭೇದವನ್ನು ಹೇಳುವ ವಾಕ್ಯ ಯಾವುದು? ಎಂಬ ಪ್ರಶ್ನೆಗೆ ಉತ್ತರವಾಗಿ ''ಜುಷ್ಟಮ್'' ಎಂದು ಹೇಳಲಾಗಿದೆ. ''ಇತಿ ಭೇದವ್ಯಪದೇಶಾತ್'' ಎಂದರೆ - 'ಹೀಗೆ ಭೇದಶ್ರುತಿ ಇರುವುದರಿಂದ' ಎಂದು ಅರ್ಥ.

ಇದರಿಂದ 'ಜುಷ್ಟಮ್' ಎಂಬ ವಾಕ್ಯದಲ್ಲಿ 'ಪಶ್ಯತಿ' ಎಂದು ದರ್ಶನವನ್ನು ಮಾಡುವವನೆಂದು ಪ್ರಕೃತನಾಗಿರುವ ಜೀವನಿಗೆ 'ಈಶ'ಪದದಿಂದ ಉಕ್ತನಾದ ಈಶ್ವರನಿಂದ ಭೇದವನ್ನು ಹೇಳಿರುವುದರಿಂದ ಅವರಿಬ್ಬರಿಗೆ ಐಕ್ಯವು ಇಲ್ಲಿ ಅಭಿಪ್ರೇತವೆಂದು ಹೇಳತಕ್ಕದ್ದಲ್ಲ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು. ಈ ಶ್ರುತಿಯನ್ನು ಆನಂದಮಯಾಧಿಕರಣದಲ್ಲಿ ವ್ಯಾಖ್ಯಾನ ಮಾಡಲಾಗಿದೆ. (ಭಾ.ದೀ. ಕನ್ನಡಾನುವಾದ ಸಂಪುಟ ೧. ಪುಳ೨೮)

ಭಾ.ದೀ. – ನನ್ವತ್ರ ಜೀವಸ್ಯ ಕಸ್ಮಾಚ್ಚಿದೀಶಾದನ್ಯತ್ವಮುಚ್ಯತೇ, ನ ಪರಮಾತ್ಮನಃ, ಅತೋ ನ ತಯೋರ್ಭೇದಃ ಇತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯ ವ್ಯಾಚಷ್ಟೇ – ಪ್ರಕರಣಾತ್ ಇತಿ ॥

ಶಂಕೆ - ಮುಂಡಕೋಪನಿಷತ್ತಿನ ಈ ಪ್ರಕರಣದಲ್ಲಿ ಜೀವನಿಗೆ ಯಾವನೋ ಒಬ್ಬ ಈಶನಿಂದ ಭೇದವನ್ನು ಹೇಳಲಾಗಿದೆ, ಹೊರತು ಪರಮಾತ್ಮನಿಂದ ಹೇಳಿಲ್ಲ. ಆದ್ದರಿಂದ ಜೀವೇಶರಿಗೆ ಭೇದವಿಲ್ಲ ಅಲ್ಲವೇ? ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸ ಮಾಡಿ ''ಪ್ರಕರಣಾತ್'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ಓಂ ॥ ಪ್ರಕರಣಾತ್ ॥ ಓಂ ॥೬॥**

**ಭಾಷ್ಯಮ್ - 'ದ್ವೇ ವಿದ್ಯೇ ವೇದಿತವ್ಯೇ' ಇತಿ ತಸ್ಯ ಹ್ಯೇತತ್ ಪ್ರಕರಣಮ್ ॥**

ಮುಂಡಕೋಪನಿಷತ್ತಿನಲ್ಲಿ ಇರುವ 'ಜುಷ್ಟಂ ಯದಾ ಪಶ್ಯತಿ' ಇತ್ಯಾದಿ ವಾಕ್ಯಸಮೂಹವು 'ತಸ್ಯೈವ' - ಅಂದರೆ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಪರವಿದ್ಯಾವಿಷಯನಾದ ಪರಮಾತ್ಮನ ಪ್ರಕರಣವೇ ಹೊರತು ಅನ್ಯರದ್ದಲ್ಲ.

ಭಾ.ದೀ. – 'ಇತಿ' ಇತ್ಯನಂತರಂ 'ಇತ್ಯುಪಕ್ರಮ್ಯಾಧೀತಮ್' ಇತಿ ಶೇಷಃ। 'ಹಿ' ಯತಃ 'ಏತತ್'- ಜುಷ್ಟಮಿತ್ಯಾದಿವಾಕ್ಯಜಾತಂ ಯತಃ 'ತಸ್ಯೈವ' - ಪರವಿದ್ಯಾ-ವಿಷಯಸ್ಯ ಪರಮಾತ್ಮನ ಏವ 'ಪ್ರಕರಣಂ' ನಾನ್ಯಸ್ಯೇತ್ಯೇವಶಬ್ದಾರ್ಥಃ।

ಅನೇನ ಸ್ವಪ್ರಕರಣಾತ್ 'ದ್ವೇ ವಿದ್ಯೇ ವೇದಿತವ್ಯೇ' ಇತಿ ಪರವಿದ್ಯಾವಿಷಯ-ವಸ್ತುನೋಽತ್ರಾಧೀತತ್ವೇನ ವಿಷ್ಣುಪ್ರಕರಣತ್ವಾತ್ ಪರಮಾತ್ಮನ ಏವ ಭೇದ-ವ್ಯಪದೇಶಾವಗತೇಃ ನ ಜೀವಪರಮಾತ್ಮನೋರಭೇದೋಽತ್ರಾಭಿಪ್ರೇತ ಇತಿ ಸೂತ್ರಯೋಜನಾ ದರ್ಶಿತಾ ಭವತಿ।

ಅನು– ಭಾಷ್ಯದಲ್ಲಿ ''ಇತಿ'' ಎಂಬ ಪದದ ನಂತರ 'ಇತ್ಯುಪಕ್ರಮ್ಯ ಅಧೀತಮ್' ಎಂಬ ವಾಕ್ಯಗಳು ಶೇಷವಾಗಿವೆ. 'ಹಿ' - ಯಾವ ಕಾರಣದಿಂದ 'ಏತತ್' - ಜುಷ್ಟಮ್ ಇತ್ಯಾದಿ ವಾಕ್ಯಸಮೂಹವು 'ಯತಃ' - ಯಾವ ಕಾರಣದಿಂದಾಗಿ 'ತಸ್ಯೈವ' - ಪರ-ವಿದ್ಯಾವಿಷಯನಾದ ಪರಮಾತ್ಮನಿಗೇ ಸಂಬಂಧಿಸಿದ 'ಪ್ರಕರಣಂ' ಪ್ರಕರಣವಾಗಿದೆಯೋ ಆದ್ದರಿಂದ ತಸ್ಯೈವ' ಪರಮಾತ್ಮನದ್ದೇ ಪ್ರಕರಣವಾಗಿದೆ ಹೊರತು ಇನ್ನೊಬ್ಬರದ್ದಲ್ಲ ಎಂಬುದಾಗಿ 'ಏವ'ಶಬ್ದದ ಅರ್ಥವಾಗಿದೆ.

ಇದರಿಂದ - ಸ್ವಪ್ರಕರಣಾತ್' 'ದ್ವೇ ವಿದ್ಯೇ ವೇದಿತವ್ಯೇ' ಎಂದು ಪರವಿದ್ಯಾ-ವಿಷಯವಾದ ವಸ್ತುವನ್ನು ಅಧ್ಯಯನ ಮಾಡಿ ಇದು ವಿಷ್ಣುಪ್ರಕರಣವಾದುದರಿಂದ

ಪರಮಾತ್ಮನಿಗೆ ಭೇದವನ್ನು ಇಲ್ಲಿ ಹೇಳಿರುವುದೆಂದು ತಿಳಿದು ಬರುವುದರಿಂದ ಈ ಪ್ರಕರಣದಲ್ಲಿ ಜೀವಪರಮಾತ್ಮರ ಅಭೇದವು ಇಲ್ಲಿ ಅಭಿಪ್ರೇತವಾಗಿದೆ ಎಂದು ಹೇಳತಕ್ಕದ್ದಲ್ಲ - ಎಂದು ಸೂತ್ರಪದಗಳ ಯೋಜನೆಯನ್ನು ತೋರಿಸಿದಂತಾಗುವುದು.

ಭಾ.ದೀ – ನ ಕೇವಲಂ 'ಜುಷ್ಟಮ್' ಇತಿ ಭೇದಶ್ರುತೇಃ ನ ಜೀವೇಶ-ಭೇದೋಽತ್ರ ಪ್ರಕರಣೇ ವಿವಕ್ಷಿತ ಇತಿ ಜ್ಞಾಯತೇ, ಕಿಂತು ಲಿಂಗಾದೇರಪಿ ಇತ್ಯಾಹ ಸೂತ್ರಕೃತ್ – ಸ್ಥಿತೀತಿ ॥ ತದಸಿದ್ಧಿವಾರಣಾಯ ಶ್ರುತ್ಯುದಾಹರಣೇನ ವ್ಯಾಚಷ್ಟೇ – ದ್ವಾ ಸುಪರ್ಣೇತಿ ॥

ಅನು–''ಜುಷ್ಟಮ್ ಎಂಬ ಭೇದಶ್ರುತಿಯು ಇರುವುದರಿಂದ ಜೀವೇಶರ ಭೇದವು ಇಲ್ಲಿ ವಿವಕ್ಷಿತವಾಗಿದೆ ಎಂದು ತಿಳಿದುಬರುವುದಷ್ಟೇ ಅಲ್ಲ; ಕಿಂತು ಲಿಂಗದಿಂದಲೂ ಜೀವೇಶರ ಭೇದವು ಇಲ್ಲಿ ಸಿದ್ಧವಾಗುವುದು ಎಂದು ಸೂತ್ರಕಾರರು 'ಓಂ ಸ್ಥಿತ್ಯದ-ನಾಭ್ಯಾಂ ಚ ಓಂ' ಎಂಬ ಸೂತ್ರದಿಂದ ಹೇಳುತ್ತಿದ್ದಾರೆ'' ಎಂದು ''ಸ್ಥಿತಿ'' ಎಂಬುದ-ರಿಂದ ಭಾಷ್ಯಕಾರರು ಹೇಳುತ್ತಿದ್ದಾರೆ. ಈ ಸೂತ್ರದಲ್ಲಿರುವ ಹೇತುವಿಗೆ ಅಸಿದ್ಧಿಯನ್ನು ಪರಿಹರಿಸಲು ಭಾಷ್ಯಕಾರರು ಶ್ರುತಿಯನ್ನು ಉದಾಹರಿಸಿ ''ದ್ವಾ ಸುಪರ್ಣಾ'' ಎಂಬು-ದಾಗಿ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ಸ್ಥಿತ್ಯದನಾಭ್ಯಾಂ ಚ ಓಂ ॥ ೭ ॥**

**ಭಾಷ್ಯಮ್ – 'ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ' ಇತಿ ಈಶಜೀವಯೋಃ ಸ್ಥಿತ್ಯದನೋಕ್ತೇಃ ॥**

॥ ಇತಿ ದ್ಯುಭ್ವಾದ್ಯಧಿಕರಣಮ್ ॥ ೧ ॥

'ದ್ವಾಸುಪರ್ಣಾ' ಎಂಬ ಶ್ರುತಿಯಿಂದ ಮಾತ್ರವಲ್ಲದೇ ಲಿಂಗ-ದಿಂದಲೂ ಕೂಡ ಅವರಿಬ್ಬರಿಗೆ ಭೇದವು ಸಿದ್ಧಿಸುವುದೆಂದು ಭಾವ.

ಭಾ.ದೀ.– ಅನೇನ – 'ದ್ವಾ ಸುಪರ್ಣಾ' ಇತ್ಯತ್ರ ಶ್ರುತಾಭ್ಯಾಂ ಕರ್ಮಫಲಾನುಪಜೀವನಾವಸ್ಥಿತದುಪಜೀವನಾಭ್ಯಾಂ ಹೇತುಭ್ಯಾಂ ಚ ನೈವಾತ್ರ ಜೀವೇಶಯೋರೈಕ್ಯಂ ವಾಚ್ಯಮ್ – ಇತಿ ಸೂತ್ರಾರ್ಥ ಉಕ್ತೋ ಭವತಿ।

'ಚ'ಶಬ್ದಸ್ತು ಹೇತುಸಮುಚ್ಚಾಯಕ ಇತಿ ಸ್ಪಷ್ಟತ್ವಾನ್ನ ವ್ಯಾಖ್ಯಾತಃ । ಶ್ರುತೌ ಅದನಸ್ಯ ಪ್ರಾಥಮ್ಯೇಽಪಿ ಸ್ಥಿತೇರೀಶಸಂಬಂಧಿತ್ವೇನಾಭ್ಯರ್ಹಿತತ್ವಾದ್ ಅಲ್ಪಾಕ್ಷರತ್ವಾಚ್ಚ ಸೂತ್ರೇ ತದನುಸಾರೇಣ ಭಾಷ್ಯೇ ಚ ಶ್ರೌತಕ್ರಮಮುಲ್ಲಂಘ್ಯ ಸ್ಥಿತೇಃ ಪ್ರಥಮಮುಕ್ತಿಃ।

'ಸಯುಜಾ' ಸಯುಜೌ ಸಂಯುಕ್ತೌ ಉಪಕಾರ್ಯೋಪಕಾರಕಭಾವವತ್ತಯಾ ಪರಸ್ಪರಪರಿಹಾರೇಣ ವರ್ತಮಾನೌ 'ಸಖಾಯಾ' ಸಖಾಯೌ ಪ್ರೀತ್ಯಾ ಏಕದೇಶಸ್ಥೌ 'ದ್ವಾ' ದ್ವೌ 'ಸುಪರ್ಣಾ' ಸುಪರ್ಣೌ । ಸುಪರ್ಣಸರೂಪೌ । 'ಸುಪರ್ಣಾ ಸಖಾಯಾ' ಇತಿ ವಿಶೇಷಣಸ್ವಾರಸ್ಯಾದಸ್ಯ ಸಮಜೀವಮಾತ್ರವಿಷಯತ್ವೇ ಸುಷ್ಠುಪರಮಾನಂದರೂಪೌ ಜೀವೇಶ್ವರೌ 'ಸಮಾನಮ್' ಏಕಂ 'ವೃಕ್ಷಂ' ದೇಹಾಖ್ಯಮ್ ಅಶ್ವತ್ಥಂ 'ಪರಿಷಸ್ವಜಾತೇ' ಆಲಿಲಿಂಗತುಃ । 'ತಯೋಃ' ಸುಪರ್ಣಯೋರ್ಮಧ್ಯೇ ಈಶ್ವರಾತ್ 'ಅನ್ಯೋ' ಜೀವಃ 'ಪಿಪ್ಪಲಮ್' ಅಶ್ವತ್ಥಫಲರೂಪಂ ದೇಹಜನಿತಕರ್ಮಫಲಮ್ 'ಸ್ವಾದು ಅತ್ತಿ' ಅಸ್ವಾದ್ವೇವ ಸ್ವಾದುತ್ವೇನೈವ ಅಶ್ನಾತಿ। ಜೀವಾತ್ 'ಅನ್ಯಃ' ಈಶ್ವರಸ್ತು 'ಅನಶ್ನನ್' ಜೀವಾದ್ಯಮೇವ ಅಭುಂಜಾನಃ 'ಅಭಿ' ಅಭಿತಃ 'ಚಾಕಶೀತಿ' ಪ್ರಕಾಶತೇ । ನ ತು ಸ್ವಸ್ಥಿತ್ಯೈ ಜೀವವತ್ ಕರ್ಮಫಲಮಪೇಕ್ಷತೇ – ಇತಿ ಮುಂಡಕಶ್ರುತ್ಯರ್ಥಃ।

ಅನು– ಇದರಿಂದ 'ದ್ವಾ ಸುಪರ್ಣಾ' ಎಂಬ ಶ್ರುತಿಯಲ್ಲಿ ಶ್ರುತವಾಗಿರುವ ಕರ್ಮಫಲವನ್ನು ಉಪಜೀವಿಸದೇ ಇರುವಿಕೆ, ಮತ್ತು ಅದನ್ನು ಉಪಜೀವಿಸಿಕೊಂಡು ಇರುವಿಕೆ ಎಂಬ ಹೇತುಗಳಿಂದಲೂ ಕೂಡ ಈ ಶ್ರುತಿಯಲ್ಲಿ ಜೀವೇಶರೈಕ್ಯವು ಹೇಳಲ್ಪಟ್ಟಿಲ್ಲ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಸೂತ್ರದಲ್ಲಿರುವ 'ಚ'ಶಬ್ದವು ಹೇತುಗಳ ಸಮುಚ್ಚಯವನ್ನು ಹೇಳುವುದೆಂದು ಸ್ಪಷ್ಟವಾಗುವುದರಿಂದ ಅದನ್ನು ವ್ಯಾಖ್ಯಾನ ಮಾಡಿಲ್ಲ.

ಶ್ರುತಿಯಲ್ಲಿ 'ಅದನ' ಎಂದರೆ ಭಕ್ಷಣವು ಪ್ರಥಮವಾಗಿ ನಿರ್ದಿಷ್ಟವಾಗಿದ್ದರೂ ಸ್ಥಿತಿಯು ಬ್ರಹ್ಮನಿಗೆ ಸಂಬಂಧಿಸಿರುವ ಕಾರಣ ಶ್ರೇಷ್ಠವಾಗಿರುವ ಕಾರಣದಿಂದಾಗಿ ಮತ್ತು ಅಲ್ಪಾಕ್ಷರತ್ವವಿರುವ ಕಾರಣ ಸೂತ್ರದಲ್ಲಿ ಅದನ್ನು ಅನುಸರಿಸಿ ಭಾಷ್ಯದಲ್ಲಾದರೋ ಶ್ರುತಿಯಲ್ಲಿ ಹೇಳಿದ ಕ್ರಮವನ್ನು ಉಲ್ಲಂಘಿಸಿ ಸ್ಥಿತಿಯನ್ನೇ ಮೊದಲು ಹೇಳಲಾಗಿದೆ.

'ಸಯುಜಾ' - 'ಸಯುಜೌ' ಅಂದರೆ ಸಂಯುಕ್ತವಾಗಿರತಕ್ಕ ಅಂದರೆ ಉಪಕಾರಿ-ಉಪಕಾರಕಭಾವವನ್ನು ಪಡೆದಿರುವುದರಿಂದ, ಒಂದನ್ನು ಬಿಟ್ಟು ಇಲ್ಲದಿರುವ, 'ಸಖಾಯಾ'- ಸಖಾಯೌ ಪ್ರೀತಿಯಿಂದ ಒಂದೇ ಪ್ರದೇಶದಲ್ಲಿರುವ, 'ದ್ವಾ ಸುಪರ್ಣೌ' - ಎರಡು ಪಕ್ಷಿಗಳು. 'ಸುಪರ್ಣಾ ಸಖಾಯಾ' ಎಂದು ವಿಶೇಷಣದ ಸ್ವಾರಸ್ಯವಿದ್ದ ಕಾರಣ ಈ ವಾಕ್ಯವು ಸಮಾನರಾದ ಇಬ್ಬರು ಜೀವರಿಗೆ ಮಾತ್ರ ಸಂಬಂಧಿಸಿದ ವಿಷಯ-ವಾಗಿದ್ದ ಪಕ್ಷದಲ್ಲಿ 'ಸುಪರ್ಣೌ' ಎಂದರೆ ಸುಷ್ಠುಪರಮಾನಂದರೂಪೌ - ಸಮೀಚೀನ-ವಾದ ಪರಮಾನಂದಸ್ವರೂಪರಾದ ಜೀವೇಶ್ವರರು 'ಸಮಾನಂ ವೃಕ್ಷಂ' - ಒಂದು ದೇಹವೆಂಬ ಅಶ್ವತ್ಥವನ್ನು 'ಪರಿಷಸ್ವಜಾತೇ' ಆಲಂಗಿಸಿಕೊಂಡಿರುವರು. 'ತಯೋಃ'- ಆ ಎರಡು ಸುಪರ್ಣಗಳ ಮಧ್ಯೆ 'ಅನ್ಯಃ' ಈಶ್ವರನಿಂದ ಭಿನ್ನನಾದ ಜೀವನು 'ಪಿಪ್ಪಲಂ' ಅಶ್ವತ್ಥಫಲರೂಪವಾದ ದೇಹದಿಂದ ಉಂಟಾದ ಕರ್ಮಫಲವನ್ನು 'ಸ್ವಾದು ಅತ್ತಿ' - ಅಸ್ವಾದುವಾಗಿದ್ದರೂ ಸ್ವಾದುವಾಗಿರುವುದೆಂದೇ ಅನುಭವಿಸುವನು. 'ಅನ್ಯಃ' ಜೀವನಿ-ಗಿಂತ ಭಿನ್ನನಾದ ಈಶ್ವರನಾದರೋ 'ಅನಶ್ನನ್' ಜೀವರಿಂದ ಭುಜಿಸಲ್ಪಡುವುದನ್ನೇ ಭುಜಿಸದೇ 'ಅಭಿ' ಸುತ್ತಲೂ, 'ಚಾಕಶೀತಿ' - ಪ್ರಕಾಶಿಸುತ್ತಿದ್ದಾನೆ. ಹೊರತು ಈಶ್ವರನು ತನ್ನ ಸ್ಥಿತಿಗೋಸ್ಕರವಾಗಿ ಜೀವನಂತೆ ಕರ್ಮಫಲವನ್ನು ಅಪೇಕ್ಷಿಸಿ ಇರುವವನಲ್ಲ - ಎಂದು ಮುಂಡಕಶ್ರುತಿಯ ಅರ್ಥ.

॥ ಇಲ್ಲಿಗೆ ದ್ಯುಭ್ವಾದ್ಯಧಿಕರಣದ ಅನುವಾದವು ಮುಗಿಯಿತು ॥

## ೨. ಭೂಮಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಭೂಮನಾಮ್ನೋ ವಿಷ್ಣೌ ಸಮನ್ವಯಃ ಪ್ರತಿಪಾದ್ಯತೇ । ಭೂಮಶಬ್ದಶ್ಚ 'ಭೂಮ್ನಃ ಕ್ರತುವತ್' ಇತ್ಯಾದೌ ಕ್ವಚಿದ್ ಧರ್ಮವಾಚಕೋಽಪಿ ಅತ್ರ ಪೂರ್ಣರೂಪಧರ್ಮಿವಚನಃ । 'ಪೂರ್ಣತ್ವಂ ಚ ಗುಣತ ಉತ್ತಮತ್ವಮ್' ಇತಿ ಧ್ಯೇಯಮ್ । ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ಸೂಚಯನ್ ಸಯುಕ್ತಿಕಂ ಪೂರ್ವಪಕ್ಷಂ ದರ್ಶಯತಿ – ಪ್ರಾಣ ಇತಿ ॥

ಅನು– ಈ ಅಧಿಕರಣದಲ್ಲಿ ವಿಷ್ಣುವಿನಲ್ಲಿ 'ಭೂಮ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಪ್ರತಿಪಾದಿಸಲಾಗಿದೆ. ಭೂಮಶಬ್ದವಾದರೋ 'ಭೂಮ್ನಃ ಕ್ರತುವತ್' ಇತ್ಯಾದಿ ಸ್ಥಳದಲ್ಲಿ ಕೆಲವುಕಡೆ ಧರ್ಮವಾಚಕವಾಗಿದ್ದರೂ, ಇಲ್ಲಿ ಪೂರ್ಣಸ್ವರೂಪನಾದ ಧರ್ಮಿಯನ್ನೇ ಹೇಳುವ ಶಬ್ದವಾಗಿದೆ. ಪೂರ್ಣತ್ವವೆಂದರೆ ಗುಣಗಳ ದೃಷ್ಟಿಯಿಂದ ಉತ್ತಮನಾಗಿರುವವನು ಎಂದು ತಿಳಿಯತಕ್ಕದ್ದು. ಶ್ರುತಿ ಮೊದಲಾದವುಗಳ ಸಂಗತಿಯನ್ನು ಈ ಅಧಿಕರಣದ ವಿಷಯ ಮೊದಲಾದವುಗಳನ್ನು ಸೂಚಿಸುತ್ತಾ, ಸಯುಕ್ತಿಕವಾಗಿ ಪೂರ್ವಪಕ್ಷವನ್ನು ಭಾಷ್ಯಕಾರರು ''ಪ್ರಾಣೋ ವಾ'' ಎಂಬ ವಾಕ್ಯದಿಂದ ತಿಳಿಸುತ್ತಿದ್ದಾರೆ.

**ಭಾಷ್ಯಮ್ – 'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯುಕ್ತ್ವಾ 'ಯೋ ವೈ ಭೂಮಾ ತತ್ಸುಖಮ್' ಇತ್ಯುಕ್ತೇಃ ತಸ್ಯೈವ ಭೂಮತ್ವಪ್ರಾಪ್ತಿಃ ।**

'ಪ್ರಾಣೋ ವಾ ಆಶಾಯಾ ಭೂಯಾನ್' 'ಪ್ರಾಣನು ಆಶಾಭಿಮಾನಿ ದೇವತೆಗಿಂತ ಭೂಮನಾದವನು' ಎಂದು ಹೇಳಿ 'ಯಾರು ಭೂಮನೋ ಅವನೇ ಸುಖಸ್ವರೂಪನು' ಎಂದು ಹೇಳಿರುವುದರಿಂದ ಆ ಪ್ರಾಣನಿಗೇ ಭೂಮತ್ವವು ಪ್ರಾಪ್ತಿಯಾಗುವುದು.

ಭಾ.ದೀ. – 'ಛಾಂದೋಗ್ಯೇ' ಇತ್ಯಾದೌ ಉಪಸ್ಕಾರ್ಯಮ್ । 'ಇತ್ಯುಕ್ತ್ವಾ'

'ಇತ್ಯುಪಕ್ರಮ್ಯ' ಇತ್ಯುಪಲಕ್ಷಣಮ್ । ತದುತ್ತಮಮನುಕ್ತ್ವಾ ಇತ್ಯಪಿ ದ್ರಷ್ಟವ್ಯಮ್ । ಅತ ಏವ 'ತಸ್ಯೈವ' ಪ್ರಾಣಸ್ಯೈವ ಇತ್ಯೇವಕಾರೋ ಅನ್ಯವ್ಯವಚ್ಛೇದಕಃ ಪ್ರಾಯೋಜಿ।

ಶ್ರುತೌ ಪೂರ್ವಪಕ್ಷೇ ಪ್ರಾಣಶಬ್ದೋ ವಾಯುಮಾತ್ರಪರಃ । ಸಿದ್ಧಾಂತೇ ತು ಭಾಷ್ಯರೀತ್ಯಾ ವಾಯುವಿಷ್ಣೂಭಯಪರಃ । ನ್ಯಾಯವಿವರಣಛಾಂದೋಗ್ಯಭಾಷ್ಯ-ರೀತ್ಯಾ ತು ವಾಯುಮಾತ್ರಪರಃ । ನ ಚ ವಾಯುವಿಷ್ಣೂಭಯವಾಚಿತ್ವಂ ವಾಯು-ಮಾತ್ರವಾಚಿತ್ವಮ್ ಇತ್ಯರ್ಥದ್ವಯಂ ವಿರುದ್ಧಮ್ । ಅಂತರ್ಯಾಮಿವಿವಕ್ಷಯಾ ಭಾಷ್ಯಸ್ಯ , ತದವಿವಕ್ಷಯಾ ವಿವರಣಾದೇಃ ಪ್ರವೃತ್ತತ್ವಾತ್ ।

ಯಥಾ 'ಆತ್ಮನಃ ಆಕಾಶಃ' (ತೈ.೨-೧) ಇತ್ಯತ್ರ ಸಂಭೂತಶಬ್ದಸ್ಯ ಅನೇಕಾ-ರ್ಥತ್ವೇ ಅಂತರ್ಯಾಮಿವಿಷ್ಣುರಪಿ ಆಕಾಶಪದೇನೋಚ್ಯತೇ । ತಸ್ಯ ಜನಿ-ಮಾತ್ರಾರ್ಥತ್ವೇ ತು ನ ತೇನ ಸ ಉಚ್ಯತೇ । ತಥಾ ತತ್ತ್ವಪ್ರದೀಪೇ ತು– 'ಅಭ್ಯುಪ-ಗಮವಾದತ್ವಾತ್' ಇತ್ಯಾದಿನಾ ಅಯಂ ಪ್ರಾಣೋ ವಿಷ್ಣುರಿತ್ಯಭ್ಯುಪೇತ್ಯ ವಾದೇನ ಭಾಷ್ಯಂ ಪ್ರವೃತ್ತಮ್ – ಇತ್ಯುಕ್ತಮ್ ।

ತಥಾ ಚ ಆದ್ಯಪಕ್ಷೇ – ಪ್ರಾಣಃ 'ಆಶಾಯಾಃ' ಭಾರತ್ಯಾಃ 'ಭೂಯಾನ್' ಗುಣತೋ ಜ್ಯೇಷ್ಠಃ । ಏವಂ 'ಪ್ರಾಣಃ' ತದಂತರ್ಯಾಮೀ ವಿಷ್ಣುರಂತರ್ಯಾ-ಮಿತ್ವಾದೇವ ತತ ಆಶಾಯಾಶ್ಚ ಭೂಯಾನ್ - ಇತ್ಯರ್ಥಃ । ಅನೇನ ಪೂರ್ವಮ್ ಆನಂದಮಯಶಬ್ದೋಕ್ತಸಜಾತೀಯೋತ್ಕೃಷ್ಟತ್ವರೂಪಪೂರ್ಣತ್ವಸ್ಯ ಇಹ ವಾಯೌ ಆಕ್ಷೇಪಾದ್ ಆನಂದಮಯಾಧಿಕರಣೇನ ಅಸ್ಯ ಆಕ್ಷೇಪಿಕೀ ಸಂಗತಿಃ ಸೂಚಿತಾ ।

ಅನು–'ಛಾಂದೋಗ್ಯೇ' ಎಂಬುದಾಗಿ ಪ್ರಾರಂಭದಲ್ಲಿ ಪದವನ್ನು ಸೇರಿಸಿಕೊಳ್ಳ-ಬೇಕು. 'ಇತ್ಯುಕ್ತ್ವಾ' ಎಂದರೆ 'ಹೀಗೆ ಉಪಕ್ರಮಿಸಿ' ಎಂದು ಅರ್ಥ. 'ಪ್ರಾಣನನ್ನು ಉಪಕ್ರಮಿಸಿ' ಎಂದು ಹೇಳಿರುವುದು ಉಪಲಕ್ಷಣ. 'ಅವನಿಗಿಂತಲೂ ಉತ್ತಮನನ್ನು ಹೇಳದೇ' ಎಂದೂ ಇಲ್ಲಿ ಸೇರಿಸಿಕೊಳ್ಳಬೇಕು. ಆದ್ದರಿಂದಲೇ 'ತಸ್ಯೈವ' - ಅಂದರೆ 'ಪ್ರಾಣನಿಗೇ' ಎಂಬುದಾಗಿ ಇತರರನ್ನು ವ್ಯಾವೃತ್ತಿಗೊಳಿಸುವ 'ಏವ'ಕಾರವನ್ನು ಪ್ರಯೋ-ಗಿಸಲಾಗಿದೆ.

ಶ್ರುತಿಯಲ್ಲಿ ಪೂರ್ವಪಕ್ಷದ ಪ್ರಕಾರ ಪ್ರಾಣಶಬ್ದವು ಕೇವಲ ವಾಯುವನ್ನು ಹೇಳುವುದು. ಸಿದ್ಧಾಂತದಲ್ಲಾದರೋ ಭಾಷ್ಯದಲ್ಲಿ ಹೇಳಿರುವಂತೆ ವಾಯು ಮತ್ತು ವಿಷ್ಣು ಇಬ್ಬರನ್ನೂ ಹೇಳುವ ತಾತ್ಪರ್ಯವುಳ್ಳದ್ದು. ನ್ಯಾಯವಿವರಣ ಮತ್ತು ಛಾಂದೋಗ್ಯಭಾಷ್ಯ ಇವುಗಳ ಪ್ರಕಾರವಾದರೋ ಪ್ರಾಣಶಬ್ದವು ಕೇವಲ ವಾಯುವನ್ನು ಹೇಳುವ ತಾತ್ಪರ್ಯವುಳ್ಳದ್ದು. ಹೀಗೆ ವಾಯುವಿಷ್ಣು ಉಭಯವಾಚಕವಾಗಿದೆ ಎಂದು, 'ವಾಯುಮಾತ್ರವನ್ನು ಹೇಳುವುದು' ಎಂಬುದಾಗಿ ಎರಡು ಅರ್ಥಗಳನ್ನು ಹೇಳುವುದು ಪರಸ್ಪರವಿರುದ್ಧವಾಗಿದೆ ಎಂದರೆ ಅದು ಸರಿಯಲ್ಲ. ಏಕೆಂದರೆ ಅಂತರ್ಯಾಮಿ-ವಿವಕ್ಷೆಯಿಂದ ಭಾಷ್ಯವು, ಅದರ ವಿವಕ್ಷೆ ಇಲ್ಲದೇ ನ್ಯಾಯವಿವರಣ ಮೊದಲಾದವುಗಳು ಪ್ರವೃತ್ತವಾಗಿವೆ.

ಹೇಗೆ 'ಆತ್ಮನಃ ಆಕಾಶಃ' ಎಂಬಲ್ಲಿ ಸಂಭೂತಶಬ್ದಕ್ಕೆ ಅನೇಕಾರ್ಥವಿದ್ದ ಪಕ್ಷದಲ್ಲಿ ಅಂತರ್ಯಾಮಿಯಾದ ವಿಷ್ಣುವು ಆಕಾಶಪದದಿಂದ ಹೇಳಲ್ಪಡುತ್ತಾನೋ - ಸಂಭೂತ-ಶಬ್ದಕ್ಕೆ ಕೇವಲ 'ಜನಿ' ಎಂಬ ಅರ್ಥವಿರುವುದಾದರೆ ಆ ಪದದಿಂದ ಅಂತರ್ಯಾಮಿ-ಯು ಹೇಳಲ್ಪಡುವುದಿಲ್ಲವೋ; ಹಾಗೆಯೇ ತತ್ವಪ್ರದೀಪದಲ್ಲಾದರೋ 'ಅಭ್ಯುಪಗಮ-ವಾದತ್ವಾತ್' ಇತ್ಯಾದಿ ವಾಕ್ಯದಿಂದ ಈ ಪ್ರಾಣನು ವಿಷ್ಣುವೆಂದೇ ಒಪ್ಪಿಕೊಂಡು ಭಾಷ್ಯವು ಪ್ರವೃತ್ತವಾಗಿದೆ ಎಂದು ಹೇಳಲಾಗಿದೆ.

ತಥಾ ಚ ಮೊದಲನೆಯ ಪಕ್ಷದಲ್ಲಿ ಪ್ರಾಣನು 'ಆಶಾಯಾಃ' - ಭಾರತಿಗಿಂತಲೂ 'ಭೂಯಾನ್' ಗುಣಗಳ ದೃಷ್ಟಿಯಿಂದ ಜ್ಯೇಷ್ಠನಾಗಿದ್ದಾನೆ. ಅದರಂತೆ 'ಪ್ರಾಣಃ' - ಅದರ ಅಂತರ್ಯಾಮಿಯಾದ ವಿಷ್ಣುವು ಅಂತರ್ಯಾಮಿಯಾಗಿರುವ ಕಾರಣದಿಂದಲೇ ಆ ಪ್ರಾಣನಿಗಿಂತಲೂ ಮತ್ತು ಆಶಾ ಎಂದರೆ ಭಾರತಿಗಿಂತಲೂ 'ಭೂಯಾನ್' - ಶ್ರೇಷ್ಠನಾಗಿದ್ದಾನೆ ಎಂದು ಅರ್ಥ.

ಇದರಿಂದ ಹಿಂದೆ ಆನಂದಮಯಶಬ್ದದಿಂದ ಹೇಳಲಾಗಿರುವ ಸಜಾತೀಯರಲ್ಲಿ ಉತ್ಕೃಷ್ಟತ್ವವೆಂಬ ಪೂರ್ಣತ್ವವು ವಾಯುವಿನಲ್ಲಿ ಇರುವುದೆಂದು ಆಕ್ಷೇಪಿಸುವ ಕಾರಣ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು ಸೂಚಿತ-ವಾಗುವುದು.

ಭಾ.ದೀ.– ಛಾಂದೋಗ್ಯಶ್ರುತ್ಯುಕ್ತೋ ಭೂಮಾಖ್ಯೋ ವಿಷಯಃ, 'ಕಿಂ ವಾಯುರುತ ವಿಷ್ಣುಃ? ಇತಿ ಸಂದೇಹಶ್ಚ ಸೂಚಿತಃ । ತಥಾ ಚ ತಸ್ಯೈವ ಭೂಮತ್ವ-ಪ್ರಾಪ್ತಿಃ ಇತಿ ಪೂರ್ವಪಕ್ಷಃ । ತತ್ರ ಪ್ರಾಣೋಪಕ್ರಮ-ತದುತ್ತಮಾನುಕ್ತಿರೂಪ-ಯುಕ್ತಿಶ್ಚ ದರ್ಶಿತಾ ಭವತಿ । 'ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಮ್' ಇತಿ ವಾಕ್ಯೇ ಸುಖಶಬ್ದಃ ಪೂರ್ಣಸುಖಾರ್ಥಃ । 'ಯತ್ಸುಖಂ ಸ ಭೂಮಾ' ಇತಿ ವ್ಯಾಸತೀರ್ಥೀಯೋಕ್ತೇಃ, 'ಸರ್ವನಾಮಾನಿ ಪರ್ಯಾಯೇಣ ತತ್ತಲ್ಲಿಂಗಭಾಂಜಿ' ಇತ್ಯುಕ್ತೇಶ್ಚ ನಿರುಪಪದಸುಖಶಬ್ದಮಾತ್ರಸ್ಯಾಪಿ ಪೂರ್ಣ-ಸುಖತ್ವಾತ್ । 'ಯತ್ ಅನನ್ಯಾಧೀನಪೂರ್ಣಾನಂದಸುಖಂ ಸ ಭೂಮಾ, ಗುಣತಃ ಪೂರ್ಣೋ ನಾರಾಯಣಃ' ಇತ್ಯುದ್ದೇಶ್ಯವಿಧೇಯಯೋರ್ವ್ಯತ್ಯಯಃ । ಅತ ಏವ ಸ್ವಾತಂತ್ರ್ಯೇಣ ಸುಖಸ್ಯ ವಿಶೇಷಣಾತ್ ನ ಮುಕ್ತಜೀವೇಷ್ವನೈಕಾಂತ್ಯಮ್ ಇತ್ಯಾ-ಶಯೇನ ತದುಪಪಾದಯತಿ – ನಾಲ್ಪೇ ಇತಿ ॥ 'ಅಲ್ಪೇ' ಅಪೂರ್ಣೇ ಮುಕ್ತಜೀವೇ ತತ್ಪ್ರಸಾದಂ ವಿನಾ ಯತಃ ಸುಖಂ ನಾಸ್ತಿ - ಇತ್ಯರ್ಥಃ । ನಿಗಮಯತಿ – ಭೂಮೈವ ಸುಖಮ್ ಇತಿ ॥ ಅತ್ರಾಪಿ ವ್ಯತ್ಯಯಃ ।

ಅನು– ಇಲ್ಲಿ ಛಾಂದೋಗ್ಯಶ್ರುತಿಯಲ್ಲಿ ಹೇಳಿದ ಭೂಮಾ ಎಂದು ಕರೆಯಲ್ಪ-ಡುವವನು ವಿಷಯನಾಗಿದ್ದಾನೆ. ಅವನು ವಾಯುವೋ ಅಥವಾ ವಿಷ್ಣುವೋ ಎಂದು ಸಂದೇಹವೂ ಇಲ್ಲಿ ಸೂಚಿತವಾಗಿದೆ. ಹಾಗೆಯೇ ಅವನಿಗೇ ಭೂಮತ್ವವು ಪ್ರಾಪ್ತವಾಗು-ವುದು ಎಂದು ಪೂರ್ವಪಕ್ಷ. ಆ ಉಪನಿಷತ್ತಿನಲ್ಲಿ ಪ್ರಾಣನ ಉಪಕ್ರಮ ಮತ್ತು ಪ್ರಾಣನಿಗಿಂತ ಉತ್ತಮರನ್ನು ಹೇಳದಿರುವುದು ಎಂಬ ಯುಕ್ತಿಗಳನ್ನು ತೋರಿಸಲಾಗಿದೆ. 'ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಮ್' ಎಂಬ ವಾಕ್ಯದಲ್ಲಿ ಸುಖಶಬ್ದವು ಪೂರ್ಣಸುಖ ಎಂಬ ಅರ್ಥವುಳ್ಳದ್ದು. ಏಕೆಂದರೆ 'ಯತ್ಸುಖಂ ಸ ಭೂಮಾ' ಎಂಬುದಾಗಿ ವ್ಯಾಸತೀರ್ಥರ ವ್ಯಾಖ್ಯಾನದಲ್ಲಿ ಹೇಳಿರುವುದರಿಂದ; ಹಾಗೂ 'ಎಲ್ಲ ನಾಮಗಳೂ ಪರ್ಯಾಯಕ್ರಮದಿಂದ ಆಯಾಯ ಲಿಂಗಗಳನ್ನು ಪಡೆದಿವೆ' ಎಂದು ಹೇಳಿರುವುದರಿಂದ ಯಾವುದೇ ಉಪಪದವಿಲ್ಲದ ಕೇವಲ ಸುಖ-ಶಬ್ದಕ್ಕೂ ಪೂರ್ಣಸುಖ ಎಂಬ ಅರ್ಥವಿದೆ. ಯಾವುದು ಇನ್ನೊಬ್ಬರಿಗೆ ಅಧೀನವಲ್ಲದ

ಪೂರ್ಣಾನಂದಸ್ವರೂಪವೋ ಅವನು ಭೂಮಾ ಎಂದರೆ ಗುಣತಃ ಪೂರ್ಣ- ನಾದ ನಾರಾಯಣನು ಎಂದು ಉದ್ದೇಶ್ಯ ವಿಧೇಯಗಳ ವ್ಯತ್ಯಾಸವನ್ನು ಮಾಡಬೇಕು. ಆದ್ದರಿಂದಲೇ ಸ್ವತಂತ್ರವಾಗಿ ಸುಖಕ್ಕೆ ಪೂರ್ಣ ಎಂಬ ವಿಶೇಷಣವಿರುವುದರಿಂದ ಮುಕ್ತ-ಜೀವರಲ್ಲಿ ವ್ಯಭಿಚಾರವಿಲ್ಲ ಎಂಬ ಆಶಯದಿಂದ ಅದನ್ನು ''ನಾಲ್ಪೇ'' ಎಂದು ವಿವರಿಸುತ್ತಿದ್ದಾರೆ. ''ಅಲ್ಪೇ'' ಅಪೂರ್ಣನಾದ ಮುಕ್ತಜೀವನಲ್ಲಿ ಅವನ ಪ್ರಸಾದವಿಲ್ಲದೇ ಸುಖವಿಲ್ಲದಿರುವ ಕಾರಣದಿಂದ ಎಂದು ಅರ್ಥ. 'ಭೂಮ್ನೈವ ಸುಖಮ್' ಎಂಬುದಾಗಿ ಭಾಷ್ಯದಲ್ಲಿ ಉಪಸಂಹಾರ ಮಾಡುತ್ತಿದ್ದಾರೆ. ಇಲ್ಲೂ 'ಸುಖಂ ಭೂಮ್ನೈವ' ಎಂದು ಉದ್ದೇಶ್ಯವಿಧೇಯವಿಭಾಗವನ್ನು ವ್ಯತ್ಯಾಸ ಮಾಡಿಕೊಳ್ಳಬೇಕು.

ಭಾ.ದೀ. – ನನು 'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯುಕ್ತ-ಪ್ರಾಣಶಬ್ದಸ್ಯ 'ಅತ ಏವ ಪ್ರಾಣಃ' (ಬ್ರ.ಸೂ.೧-೧-೨೩) ಇತ್ಯುಕ್ತರೀತ್ಯಾ ವಿಷ್ಣೋ-ರೇವ ಭೂಮತ್ವಪ್ರಾಪ್ತೇಃ ಕಥಂ ಪ್ರಾಣಶಬ್ದಬಲಾದ್ ವಾಯೋಃ ಭೂಮತ್ವ-ಪ್ರಾಪ್ತಿಃ? ಇತ್ಯತ ಆಹ – ಉತ್ಕ್ರಾಂತೇತಿ ॥

ಅನು–'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ವಾಕ್ಯದಲ್ಲಿ ಹೇಳಲಾಗಿ-ರುವ ಪ್ರಾಣಶಬ್ದವು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿರುವಂತೆ ವಿಷ್ಣು-ಪರವಾದುದರಿಂದ ವಿಷ್ಣುವಿಗೇ ಭೂಮತ್ವವು ಪ್ರಾಪ್ತವಾಗುವುದು. ಆದ್ದರಿಂದ ಪ್ರಾಣಶಬ್ದದ ಬಲದಿಂದ ವಾಯುವಿಗೆ ಭೂಮತ್ವಪ್ರಾಪ್ತಿಯಾಗುವುದು ಎನ್ನುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ''ಉತ್ಕ್ರಾಂತ'' ಎಂದು ಹೇಳಲಾಗಿದೆ.

**ಭಾಷ್ಯಮ್ – 'ಉತ್ಕ್ರಾಂತಪ್ರಾಣಾನ್'** (ಛಾಂ. ೭-೧೫-೩) **ಇತ್ಯಾದಿ-ಲಿಂಗಾತ್ ಪ್ರಾಣಶಬ್ದಶ್ಚ ವಾಯುವಾಚೀತಿ ।**

ಅನು– 'ಉತ್ಕ್ರಾಂತಪ್ರಾಣಾನ್' ಇತ್ಯಾದಿ ವಾಕ್ಯದಲ್ಲಿ ಪ್ರಾಣನ ಉತ್ಕ್ರಮಣ ಮೊದಲಾದ ಲಿಂಗವು ಶ್ರುತವಾಗಿರುವುದರಿಂದ ಪ್ರಾಣಶಬ್ದವು ಇಲ್ಲಿ ವಾಯುವಾಚಕವೇ ಆಗಿದೆ.

ಭಾ.ದೀ.– ಇತ್ಯಾದೀತಿ ॥ ಲುಪ್ತವಿಭಕ್ತಿಕೋ ನಿರ್ದೇಶಃ । ಆದಿಶಬ್ದೇನ 'ಉತ್ಕ್ರಾಂತ ಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ ನೈನಂ ಬ್ರೂಯುಃ ಪಿತೃಹಾऽತೀತಿ' ಇತಿ ಸಮಗ್ರವಾಕ್ಯಂ ಗೃಹ್ಯತೇ । ತಚ್ಚ ತತ್ ಲಿಂಗಂ ಚ, ತಸ್ಯ ಲಿಂಗಮ್ ಇತಿ ಚ ವಿಗ್ರಹಃ। 'ಅಯಮ್' ಇತಿ ಶೇಷಃ। ಚಶಬ್ದೋऽವಧಾರಣೇ। 'ವಾಯುವಾಚೀ ಚ' ಇತಿ ಭಿನ್ನಕ್ರಮಃ।

ತಥಾ ಚ– 'ಅಯಂ' ಪ್ರಾಣಶಬ್ದೋ 'ವಾಯುವಾಚ್ಯೇವ' ನ ವಿಷ್ಣುವಾಚೀ। ಕುತಃ? 'ಉತ್ಕ್ರಾಂತಪ್ರಾಣಾನ್' ಇತ್ಯಾದೌ 'ತಲ್ಲಿಂಗಾತ್' ತಸ್ಯ ಪ್ರಾಣಸ್ಯ ಉತ್ಕ್ರಮಣಾದಿರೂಪಲಿಂಗಶ್ರವಣಾತ್ - ಇತಿ ಯೋಜನಾ । ಉತ್ಕ್ರಾಂತಃ ಪ್ರಾಣೋ ಯೇಭ್ಯಃ, ತೇ ತಥೋಕ್ತಾಃ । ತಾನ್ ಮಾತೃಪಿತ್ರಾಚಾರ್ಯಾದೀನ್ 'ಸಮಾಸಂ' ಸಾಕಲ್ಯೇನ 'ವ್ಯತಿಷತ್' ಏಕದೇಶೇನ ಚ ಶೂಲೇನ ವಿಲುಂಠ್ಯ ಯದಿ ದಹೇತ್ ಪುತ್ರಃ ಶಿಷ್ಯೋ ವಾ ತಥಾ ನೈನಂ ಬ್ರೂಯುಃ ಜನಾಃ । ಕಿಮತಿ? 'ಪಿತೃಹಾऽಸಿ' ಇತಿ, 'ಮಾತೃಹಾऽಸಿ' ಇತಿ। 'ಮುಖ್ಯಪ್ರಾಣಸನ್ನಿಧಾನಾಭಾವಾತ್' ಇತಿ ಭಾವಃ। ಇತಿ ಶ್ರುತ್ಯರ್ಥಃ।

ಅನು–'ಇತ್ಯಾದಿ' ಎಂಬ ಪದವು ವಿಭಕ್ತಿಲೋಪವನ್ನು ಹೊಂದಿರುವ ಪದವಾಗಿದೆ. ಆದಿ ಶಬ್ದದಿಂದ ''ಉತ್ಕ್ರಾಂತ ಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ ನೈನಂ ಬ್ರೂಯುಃ ಪಿತೃಹಾऽತೀತಿ' ಎಂಬ (ಛಾಂ.ಉ. ೭-೧೫-೩) ಸಮಗ್ರವಾಕ್ಯವು ಗ್ರಹಿಸಲ್ಪಡುವುದು. ತಲ್ಲಿಂಗಶಬ್ದಕ್ಕೆ 'ತಚ್ಚ ತತ್ ಚ ಲಿಂಗಂ ಚ, ತಸ್ಯ ಲಿಂಗಂ' ಎಂದು ವಿಗ್ರಹ ಮಾಡಬೇಕು. 'ಅಯಂ' ಎಂಬ ಪದವು ಇಲ್ಲಿ ಶೇಷವಾಗಿದೆ. ಪ್ರಾಣಶಬ್ದಶ್ಚ ಎಂಬಲ್ಲಿರುವ ಚ ಶಬ್ದವು ಅವಧಾರಣವನ್ನು ಹೇಳುವುದು. ಆ ಚಕಾರಕ್ಕೆ 'ವಾಯುವಾಚೀ ಚ' ಎಂದು ಬೇರೆ ಸ್ಥಳದಲ್ಲಿ ಅನ್ವಯವಾಗುವುದು.

ತಥಾ ಚ – ಅಯಂ' ಈ ಪ್ರಾಣಶಬ್ದವು 'ವಾಯುವಾಚ್ಯೇವ' (ವಾಚೀ ಏವ) ವಾಯುವಾಚಕವೇ ಹೊರತು ವಿಷ್ಣುವಾಚಕವಲ್ಲ. ಏಕೆಂದರೆ, 'ಉತ್ಕ್ರಾಂತಪ್ರಾಣಾನ್' ಇತ್ಯಾದಿವಾಕ್ಯದಲ್ಲಿ ತಲ್ಲಿಂಗಾತ್ ತಸ್ಯ - ಆ ಪ್ರಾಣನ, ಉತ್ಕ್ರಮಣವೇ ಮೊದಲಾದ

ಲಿಂಗವು ಶ್ರುತವಾಗಿರುವುದರಿಂದ ಎಂದು ಪದಗಳ ಯೋಜನೆ. ಉತ್ಕ್ರಾಂತಪ್ರಾಣಾನ್ ಎಂಬಲ್ಲಿ ಉತ್ಕ್ರಾಂತಪ್ರಾಣ ಎಂದರೆ 'ಯಾರ ಶರೀರದಿಂದ ಪ್ರಾಣನು ಉತ್ಕ್ರಾಂತವಾಗಿ-ದೆಯೋ ಅವನು'. ಅಂತಹ ತಾಯಿ ತಂದೆ ಆಚಾರ್ಯ ಮೊದಲಾದವರನ್ನು ಸಮಾಸಂ' ಪೂರ್ಣವಾಗಿ 'ವ್ಯತಿಷಂ' ಒಂದು ಭಾಗದಿಂದ 'ಶೂಲೇನ' ಶೂಲದಿಂದ ತುಂಡರಿಸಿ 'ಯದಿ ದಹೇತ್' ಅವರ ಪುತ್ರನೋ ಅಥವಾ ಶಿಷ್ಯನೋ ದಹಿಸಿದರೆ ಆಗ 'ನೈನಂ ಬ್ರೂಯುಃ' - ಜನಗಳು ಅವನನ್ನು ಹಾಗೆ ಹೇಳುವುದಿಲ್ಲ. ಏನೆಂದು? 'ಪಿತೃವಧೆ ಮಾಡಿದವನು, ಮಾತೃವಧೆ ಮಾಡಿದವನು' ಎಂದು. ಏಕೆಂದರೆ ಆ ಶರೀರದಲ್ಲಿ ಮುಖ್ಯ-ಪ್ರಾಣನ ಸನ್ನಿಧಾನವೇ ಇಲ್ಲದಿರುವುದರಿಂದ ಎಂದು ಭಾವ. ಹೀಗೆ ಈ ಶ್ರುತಿಯ ಅರ್ಥ.

ಭಾ.ದೀ. – ಸಿದ್ಧಾಂತಯತ್ ಸೂತ್ರಮವತಾರಯತಿ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಭಾಷ್ಯದಲ್ಲಿ ''ಅತಃ'' ಎಂದು ಅವತಾರಿಕೆಯನ್ನು ಕೊಡುತ್ತಿದ್ದಾರೆ.

**ಸೂತ್ರಮ್ – ಅತೋ ವಕ್ತಿ-**

**॥ ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ॥ ೮ ॥**

**ಭಾಷ್ಯಮ್ – 'ಸಂಪ್ರಸಾದಾತ್' ಪೂರ್ಣಸುಖರೂಪತ್ವಾತ್ । 'ಅಧ್ಯು-ಪದೇಶಾತ್' ಸರ್ವೇಷಾಮುಪರ್ಯುಪದೇಶಾಚ್ಚ ವಿಷ್ಣುರೇವ ಭೂಮಾ।**

ಆದ್ದರಿಂದ ಸೂತ್ರಕಾರರು ಓಂ ಭೂಮಾ ಸಂಪ್ರಸಾದಾದಧ್ಯುಪ-ದೇಶಾತ್ ಓಂ ಎಂದು ಹೇಳುತ್ತಿದ್ದಾರೆ. ಸಂಪ್ರಸಾದಾತ್ ಎಂದರೆ ಪೂರ್ಣಸುಖರೂಪನಾದುದರಿಂದ ಹಾಗೆಯೇ ಅಧ್ಯುಪದೇಶಾತ್-ಎಲ್ಲರಿಗಿಂತ ಉತ್ತಮನೆಂದು ಹೇಳಿರುವುದರಿಂದ ಭೂಮನು ವಿಷ್ಣುವೇ ಆಗಿದ್ದಾನೆ.

ಭಾ.ದೀ. – ಸೂತ್ರೇ – ಪ್ರಸೀದತಿ ಅನೇನ ಜನಃ ಇತಿ ಪ್ರಸಾದಃ - ಸುಖಮ್, ಸಮ್ಯಕ್ ಪ್ರಸಾದಃ ಸಂಪ್ರಸಾದಃ, ತಸ್ಮಾತ್ – ಇತಿ ವಿಗ್ರಹಃ । ಈಶ್ವರೇ ಸುಖಮಿವ ದುಃಖಮಪಿ ಸ್ಯಾದಿತಿ ನಾಽಶಂಕ್ಯಮ್, ಪೂರ್ಣಸುಖಕಾರ್ಯೇಣ ಸಮ್ಯಕ್ ಪ್ರಸಾದೇನ ದುಃಖಾಭಾವನಿಶ್ಚಯಾತ್ ಇತ್ಯಾಶಯೇನ ಪ್ರಯುಕ್ತಂ 'ಸಂಪ್ರಸಾದಾತ್' ಇತಿ ಹೇತುಮನೂದ್ಯ ವ್ಯಾಚಷ್ಟೇ – ಸಂಪ್ರಸಾದಾದ್ ಇತಿ ॥

ಉತ್ತರಸೂತ್ರಸ್ಥ'ಚ'ಶಬ್ದಃ ಅತ್ರಾಕರ್ಷಣೀಯಃ, ಇತ್ಯಾಶಯೇನ 'ಅಧ್ಯುಪದೇಶಾತ್' ಇತ್ಯೇತದ್ ಹೇತ್ವಂತರಪರತಯಾಽನೂದ್ಯ ವ್ಯಾಖ್ಯಾತಿ – ಅಧ್ಯುಪದೇಶಾತ್ ಇತಿ ॥ ನಾಮಾದೀನಾಂ ಸರ್ವೇಷಾಮ್ 'ಉಪರಿ' ತದುತ್ತಮತ್ವೇನ 'ಉಪದೇಶಾತ್' - ಉಕ್ತೇಃ - ಇತ್ಯರ್ಥಃ । ಚೋ ಹೇತುಸಮುಚ್ಚಯೇ । ಅತ್ರ 'ಅಧಿ' ಇತ್ಯೇವ ಹೇತುಃ ನ ತು ಸಮಗ್ರ ಏಕೋ ಹೇತುಃ,। ಸ ಚ ಈಶ್ವರವಚನೋ ಭಾವಪ್ರಧಾನಃ । ವಿಶೇಷಾನುಕ್ತೇಃ ಅಖಿಲೇಶ್ವರತ್ವಾತ್ ಇತಿ ಹೇತ್ವರ್ಥಃ 'ಅಖಿಲೇಶ್ವರತ್ವಾತ್' ಇತ್ಯನುವ್ಯಾಖ್ಯಾನಸುಧೋಕ್ತೋ ಜ್ಞಾತವ್ಯಃ । ಅಸಿದ್ಧಿಪರಿಹಾರಾಯ ಉಪದೇಶಪರ್ಯಂತಂ ಧಾವನಮ್ । ಪ್ರಾಯಪಾಠಾದ್ ಭೂಮ್ನಃ ಅಖಿಲಾಧಿಪಪ್ರಾಣಾಧಿಪತ್ಯೇ ಅಖಿಲಾಧಿಪತ್ಯಂ ಸಿದ್ಧ್ಯತೀತಿ ಭಾವಃ । ಸಮನ್ವಯಸೂತ್ರಾದ್ ಅನುವೃತ್ತಸ್ಯ 'ತತ್ ತು' ಇತಿ ವಿಧೇಯಸಮರ್ಪಕಸ್ಯಾರ್ಥಮಾಹ – ವಿಷ್ಣುರೇವ ಇತಿ ॥ 'ಭೂಮಾ ವಿಷ್ಣುರೇವ' ಇತ್ಯನ್ವಯಃ।

ಅನು– ಸೂತ್ರದಲ್ಲಿ 'ಪ್ರಸೀದತಿ ಅನೇನ ಜನಃ ಇತಿ ಪ್ರಸಾದಃ, ಸಮ್ಯಕ್ ಪ್ರಸಾದಃ ಸಂಪ್ರಸಾದಃ, ತಸ್ಮಾತ್' - ಎಂಬ ವಿಗ್ರಹಾನುಸಾರ ಸಂಪ್ರಸಾದವೆಂದರೆ ಪೂರ್ಣಸುಖ, ಜನರು ಇದರಿಂದ ಪ್ರಸನ್ನರಾಗುವರು ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಪ್ರಸಾದವೆಂದರೆ ಸುಖ.

ಈಶ್ವರನಲ್ಲಿ ಸುಖವಿರುವಂತೆ ದುಃಖವೂ ಇರಬಹುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, 'ಸಮ್ಯಕ್ ಪ್ರಸಾದಃ' ಎಂದರೆ ಪೂರ್ಣಸುಖವೆಂಬ ಕಾರ್ಯದಿಂದ ದುಃಖಾಭಾವ ಎಂಬ ಕಾರಣವಿರುವುದು ನಿಶ್ಚಯವಾಗುವುದು ಎಂಬ ಅಭಿಪ್ರಾಯದಿಂದ

ಪ್ರಯೋಗಿಸಿರುವ ಸಂಪ್ರಸಾದಾತ್ ಎಂಬ ಹೇತುವನ್ನು ಭಾಷ್ಯಕಾರರು 'ಸಂಪ್ರಸಾದಾತ್' ಎಂದು ಅನುವಾದ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮುಂದಿನ ಸೂತ್ರದಲ್ಲಿರುವ ಚಶಬ್ದವು ಈ ಸೂತ್ರಕ್ಕೆ ಆಕರ್ಷಣ ಮಾಡಿ ಸೇರಿಸಬೇಕು ಎಂಬ ಅಭಿಪ್ರಾಯದಿಂದ 'ಅಧ್ಯುಪದೇಶಾತ್' ಎಂಬ ಸೂತ್ರದ ಪದವನ್ನು ಮತ್ತೊಂದು ಹೇತುವನ್ನು ಹೇಳುವ ಅಭಿಪ್ರಾಯವುಳ್ಳದ್ದೆಂದು 'ಅಧ್ಯುಪದೇಶಾತ್' ಅನುವಾದ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಅಧ್ಯುಪದೇಶಾತ್ ಎಂದರೆ ನಾಮ ಮೊದಲಾದ ಎಲ್ಲರಿಗೂ 'ಉಪರಿ' ಅವರೆಲ್ಲರಿಗಿಂತ ಉತ್ತಮನೆಂದು 'ಉಪದೇಶಾತ್' ಹೇಳಿರುವುದರಿಂದ ಎಂದು ಅರ್ಥ. ಮುಂದಿನ ಸೂತ್ರದಿಂದ ಇಲ್ಲಿ ಸೇರಿಸಿರುವ 'ಚ'ಕಾರವು ಹೇತುವಿನ ಸಮುಚ್ಚಯವನ್ನು ಹೇಳುವುದು. ಈ ಪದದಲ್ಲಿ 'ಅಧಿ' ಎಂದಿಷ್ಟೇ ಹೇತುವು ಹೊರತು ಸಮಗ್ರವಾದ ಪದವು ಒಂದು ಹೇತುವಲ್ಲ. ಆ 'ಅಧಿ' ಎಂಬ ಈಶ್ವರವಾಚಕವಾದ ಪದವು ಈಶ್ವರತ್ವ ಎಂಬ ಧರ್ಮವನ್ನು ಪ್ರಧಾನವಾಗಿ ಹೇಳುವುದು. ಇಂಥವರಿಗೆ ಈಶ್ವರ ಎಂದು ವಿಶೇಷವಾಗಿ ಹೇಳದಿರುವುದರಿಂದ ''ಅಖಿಲೇಶ್ವರನಾದುದರಿಂದ ಎಂದೇ ಈ ಹೇತುವಿಗೆ ಅರ್ಥ'' ಎಂದು 'ಅಖಿಲೇಶ್ವರ-ತ್ವಾತ್' ಎಂಬ ಅನುವ್ಯಾಖ್ಯಾನ ಮತ್ತು ಸುಧಾಗ್ರಂಥಗಳಲ್ಲಿ ಹೇಳಿರುವುದನ್ನು ತಿಳಿಯ-ತಕ್ಕದ್ದು.

ಸೂತ್ರದಲ್ಲಿ 'ಅಧಿ' ಎಂದಿಷ್ಟೇ ಹೇಳಿದರೆ ಪಕ್ಷವಾದ ಭೂಮನಲ್ಲಿ ಅಧಿ ಎಂಬ ಹೇತುವು ಇಲ್ಲದೇ ಇರುವುದರಿಂದ ಅಸಿದ್ಧಿ ದೋಷ ಬರುವುದು. ಈ ದೋಷದ ಪರಿಹಾರಕ್ಕಾಗಿ 'ಉಪದೇಶಾತ್' ಎಂಬಲ್ಲಿಯವರೆಗೆ ಹೇತುವನ್ನು ಹೇಳಲಾಗಿದೆ. ಹಿಂದೆ ಒಬ್ಬರಿಗಿಂತ ಒಬ್ಬರನ್ನು ಉತ್ತಮ ಎಂದು ಹೇಳಿರುವುದರಿಂದ ಎಲ್ಲರಿಗೂ ಅಧಿಪತಿ-ಯಾದ ಪ್ರಾಣನಿಗೂ ಭೂಮನು ಸ್ವಾಮಿಯಾಗಿರುವನೆಂದು (ಅಧಿಪತಿಯಾಗಿ-ರುವನೆಂದು) ಹೇಳಿದಾಗ ಭೂಮನಿಗೆ ಸರ್ವೋತ್ತಮತ್ವವು ಸಿದ್ಧವಾಗುವುದೆಂದು ಭಾವ. ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ 'ತತ್, ತು' ಎಂಬ ವಿಧೇಯವನ್ನು ಹೇಳುವ ಶಬ್ದದ ಅರ್ಥವನ್ನು ''ವಿಷ್ಣುರೇವ'' ಎಂದು ಭಾಷ್ಯದಲ್ಲಿ ಹೇಳಲಾಗಿದೆ. 'ಭೂಮಾ ವಿಷ್ಣುರೇವ' ಎಂದು ಪದಗಳಿಗೆ ಅನ್ವಯವಾ-ಗುವುದು.

ಭಾ.ದೀ.– ಪೂರ್ಣಸುಖತ್ವಾದಿಕಂ ಕುತೋ ವಿಷ್ಣುತ್ವನಿಶ್ಚಾಯಕಮ್? ಇತ್ಯತ ಆಹ – ಸಹಸ್ರೇತಿ ॥

ಪೂರ್ಣಸುಖತ್ವ ಮೊದಲಾದವು ಭೂಮನು ವಿಷ್ಣುವೇ ಎಂದು ನಿಶ್ಚಯಿಸಲು ಹೇಗೆ ಕಾರಣವಾಗುವುದು? ಎಂಬ ಶಂಕೆಗೆ ಉತ್ತರವಾಗಿ 'ಸಹಸ್ರಶೀರ್ಷಂ' ಎಂಬ ಭಾಷ್ಯವಾಕ್ಯ ಹೊರಟಿದೆ.

**ಭಾಷ್ಯಮ್ –'ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ।**
**ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥**
**ವಿಶ್ವತಃ ಪರಮಾಂ ನಿತ್ಯಮ್... ' ಇತಿ ಹಿ ಶ್ರುತಿಃ ।**

'ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥ ವಿಶ್ವತಃ ಪರಮಾಂ ನಿತ್ಯಮ್'' ಎಂದು ಶ್ರುತಿ ಇರುವುದರಿಂದ (ಪೂರ್ಣ-ಸುಖರೂಪನಾದ ಕಾರಣ ಭೂಮನು ವಿಷ್ಣುವೇ ಎಂದು ನಿಶ್ಚಯ-ವಾಗುವುದು ಎಂದು ಅರ್ಥ. )

ಭಾ.ದೀ. – 'ಇತಿ ಹಿ' ಇತಿ ॥ 'ಹಿ' ಯಸ್ಮಾತ್ 'ಇತಿ' ನಾರಾಯಣಾನುವಾಕ-ಗತಾ ಶ್ರುತಿರಸ್ತಿ, ತಸ್ಮಾತ್ ಸಂಪ್ರಸಾದಾದ್ ವಿಷ್ಣುತ್ವನಿಶ್ಚಯೋ ಭವತ್ಯೇವ - ಇತ್ಯರ್ಥಃ । 'ಸಹಸ್ರಶೀರ್ಷಂ' ಸಹಸ್ರಪದೋ(ಪಲ)ಕ್ಷಿತಾಮಿತಮೂರ್ಧಾನಂ 'ದೇವಂ' ಪ್ರಕಾಶರೂಪಂ ವಿಶ್ವತೋ ದರ್ಶನಾದ್ ಅಕ್ಷಸ್ಯ ಇತಿ 'ವಿಶ್ವಾಕ್ಷಂ' 'ವಿಶ್ವಶಂಭುವಮ್' ಪೂರ್ಣಸುಖಾಶ್ರಯಂ 'ವಿಶ್ವಂ' ಜಗತ್ಪ್ರವಿಷ್ಟತ್ವೇನ ವರ್ತಮಾನಂ 'ನಾರಾಯಣಂ' ಮುಕ್ತಸಂಘೇ ವ್ಯಕ್ತಮ್ 'ಅಕ್ಷರಂ' ಸ್ವರೂಪತೋ ನಾಶರಹಿತಮ್ ಅಕ್ಷೇಷು ರಮಮಾಣಂ ವಾ । 'ಪರೇಭ್ಯೋ ಬ್ರಹ್ಮಾದಿಭ್ಯೋಽಧಿಕತ್ವೇನ ಮೀಯತೇ' ಇತಿ, 'ಪರಾ ಮಾ ಯಸ್ಯ' ಇತಿ ವಾ ಪರಮಃ ತಂ ಪರಮಂ 'ಪದಂ' - ಪ್ರಾಪ್ಯಮ್ ।

ವಿಶ್ವತಃ ಪರಮಶ್ಚಾಸೌ ಆಶ್ಚೇತಿ ವಿಗ್ರಹಃ, ಸವರ್ಣದೀರ್ಘಃ । ಸೋಮಪಾ-ಶಬ್ದವದಯಂ ಶಬ್ದಃ । ಸುಧಾರೀತ್ಯಾ ಆಬಂತತ್ವಾಶ್ರಯೇಣ ಲಿಂಗವ್ಯತ್ಯಯೋ ವಾ । ತಥಾ ಚ 'ವಿಶ್ವತಃ ಪರಮಾಂ' ಸರ್ವಸ್ಮಾದುತ್ತಮಮ್ ಅಕಾರವಾಚ್ಯಂ ಸರ್ವೋ-ತ್ತಮಂ ವಾ 'ನಿತ್ಯಂ' ದೇಹತೋ ನಾಶರಹಿತಂ 'ವಿಶ್ವಂ' ಗುಣೈಃ ಪೂರ್ಣಂ ಯಜ್ಞೇಷು ಹವಿಃಸ್ವೀಕರಣಾತ್ ಹರಿವರ್ಣತ್ವಾಚ್ಚ 'ಹರಿಂ' 'ದೇವಂ' ಕ್ರೀಡಾದಿ-ಗುಣಕಂ 'ನಾರಾಯಣಂ' ತದಾಖ್ಯಂ ದೇವಂ ತತ್ ವಿಶ್ವಮುಪಜೀವತಿ - ಇತಿ ಶ್ರುತ್ಯರ್ಥಃ।

ಯದ್ಯಪಿ 'ವಿಶ್ವತಃ ಪರಮಮ್' ಇತಿ ದ್ರಾವಿಡಪಾಠಃ । ತಥಾಽಪಿ ಆಂಧ್ರ-ಪಾಠಮನುಸೃತ್ಯ 'ಪರಮಾಮ್' ಇತ್ಯುಕ್ತಮ್ ।

ಅನು– 'ಹಿ' ಯಾವ ಕಾರಣದಿಂದಾಗಿ 'ಇತಿ' - ಹೀಗೆ ನಾರಾಯಣಾನು-ವಾಕದಲ್ಲಿರುವ ಶ್ರುತಿ ಇರುವುದೋ ಆದ ಕಾರಣದಿಂದ ಪೂರ್ಣಸುಖವೆಂಬ ಹೇತು-ವಿನಿಂದ ಭೂಮನು ವಿಷ್ಣುವೆಂದು ನಿಶ್ಚಯವು 'ಭವತ್ಯೇವ' - ಆಗಿಯೇ ತೀರುವುದು ಎಂದು ಅರ್ಥ. 'ಸಹಸ್ರಶೀರ್ಷಂ' ಎಂಬಲ್ಲಿ ಸಹಸ್ರಪದವು ಉಪಲಕ್ಷಣಯಾ ಅಮಿತ ಎಂಬ ಅರ್ಥವನ್ನು ಹೇಳುವುದರಿಂದ 'ಸಹಸ್ರಶೀರ್ಷಾ' ಎಂದರೆ ಅನಂತ - ಅಪರಿಮಿತ ಶಿರಸ್ಸುಳ್ಳವನು ಎಂದರ್ಥ. ಅಂತಹ 'ದೇವಂ' - ಪ್ರಕಾಶರೂಪನಾದ ಎಲ್ಲೆಡೆಯಲ್ಲೂ ಪ್ರತ್ಯಕ್ಷವಿರುವುದರಿಂದ 'ಸರ್ವತ್ರ ಚಕ್ಷುಸ್ಸುಳ್ಳ 'ವಿಶ್ವಶಂಭುವಮ್' ಪೂರ್ಣಸುಖಕ್ಕೆ ಆಶ್ರಯನಾದ 'ವಿಶ್ವಂ' ಸಮಸ್ತ ಜಗತ್ತನ್ನು ಪ್ರವೇಶಿಸಿ ಇರುವ 'ನಾರಾಯಣಂ' ಮುಕ್ತಸಮೂಹದಲ್ಲಿ ವ್ಯಕ್ತನಾಗುವ, 'ಅಕ್ಷರಂ' - ಸ್ವರೂಪತಃ ನಾಶರಹಿತನಾದ ಅಥವಾ ಅಕ್ಷ ಅಂದರೆ ಇಂದ್ರಿಯಗಳಲ್ಲಿ ಇದ್ದು ಸುಖಿಸುವ. 'ಪರೇಭ್ಯಃ' ಬ್ರಹ್ಮಾದಿ ಇತರರಿಂದ ಅಧಿಕತ್ವೇನ ಮೀಯತೇ - ಅಧಿಕನೆಂದು ತಿಳಿಯಲ್ಪಡುವವನು ಎಂಬ ವಿಗ್ರಹಾನುಸಾರ, ಅಥವಾ 'ಪರಾ' -ಉತ್ಕೃಷ್ಟವಾದ 'ಮಾ ಯಸ್ಯ'- ಜ್ಞಾನವು ಯಾರಿಗಿರುವುದೋ ಅವನು ಎಂಬ ವಿಗ್ರಹಾನುಸಾರ ಪರಮನೆಂದೆನಿಸುವ 'ಪದಂ' - ಮುಕ್ತರಿಂದ ಪ್ರಾಪ್ಯನಾದ.

'ವಿಶ್ವತಃ ಪರಮಶ್ಚಾಸೌ ಅಶ್ಚ' - ಎಂದು ವಿಗ್ರಹ. ಇಲ್ಲಿ ಪರಮ ಅ ಎಂಬ ಪದಗಳಿಗೆ ಸವರ್ಣದೀರ್ಘಸಂಧಿಯಾದಾಗ ಪರಮಾ ಎಂದಾಗುವುದು. 'ಸೋಮಪಾ' ಶಬ್ದದಂತೆ ಈ ಶಬ್ದವಿದೆ. ಅಥವಾ ಸುಧಾ ಅನುಸಾರವಾಗಿ ಪರಮಾಶಬ್ದವು ಆಪ್-ಪ್ರತ್ಯಯಾಂತವಾದ ಶಬ್ದವಾಗಿದ್ದು ಸ್ತ್ರೀಲಿಂಗ ಶಬ್ದವಾಗಿ ವ್ಯತ್ಯಾಸವನ್ನು ಪಡೆದಿದೆ. ತಥಾ ಚ - ವಿಶ್ವತಃ ಪರಮಾಮ್' ಸರ್ವರಿಂದ ಉತ್ತಮನೂ, ಅಕಾರವಾಚ್ಯನೂ ಆದ ಅಥವಾ ಸರ್ವೋತ್ತಮನಾದ 'ನಿತ್ಯಂ'- ದೇಹಪ್ರಯುಕ್ತವಾದ ನಾಶವಿಲ್ಲದ, 'ವಿಶ್ವಂ' - ಗುಣಗಳಿಂದ ಪೂರ್ಣನಾದ, ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುವ ಕಾರಣ ಮತ್ತು ಹರಿವರ್ಣ ಅಂದರೆ ಕೃಷ್ಣವರ್ಣನಾದುದರಿಂದಲೂ 'ಹರಿ' ಎಂದೆನಿಸುವ 'ದೇವಂ' ಕ್ರೀಡಾದಿಗುಣವಿಶಿಷ್ಟನಾದ 'ನಾರಾಯಣಂ' - ನಾರಾಯಣಶಬ್ದವಾಚ್ಯನಾದ ದೇವನನ್ನು 'ತದ್ವಿಶ್ವಮುಪಜೀವತಿ' ಆ ಜಗತ್ತು ಉಪಜೀವಿಸಿಕೊಂಡಿರುವುದು ಎಂದು ಈ ಶ್ರುತಿಯ ಅರ್ಥವಾಗಿದೆ.

ಯದ್ಯಪಿ 'ವಿಶ್ವತಃ ಪರಮಮ್' ಎಂದು ದ್ರಾವಿಡರ ಪಾಠವಿದೆ. ಆದರೂ ಆಂಧ್ರಪಾಠವನ್ನು ಅನುಸರಿಸಿ 'ಪರಮಾಂ' ಎಂದು ಹೇಳಲಾಗಿದೆ.

ಭಾ.ದೀ. – ಅತ್ರ ಪ್ರಾಣಶಬ್ದೇನ ವಿಷ್ಣೋರ್ವಾಚ್ಯತ್ವಾಂಗೀಕಾರೇ ಪ್ರಾಗು-ಕ್ತೋತ್ಕ್ರಮಣಾದಿಲಿಂಗವಿರೋಧ ಇತ್ಯತೋ ನ ಇತ್ಯಾಹ – ತಮಿತಿ ॥

ಅನು–'ತಮುತ್ಕ್ರಾಂತಂ' ಎಂಬ ಶ್ರುತಿಯಲ್ಲಿ ಪ್ರಾಣಶಬ್ದದಿಂದ ವಿಷ್ಣುವೇ ವಾಚ್ಯ-ನೆಂದು ಅಂಗೀಕರಿಸಿದರೆ ಹಿಂದೆ ಹೇಳಿದ ಉತ್ಕ್ರಮಣ ಮೊದಲಾದ ಲಿಂಗಗಳ ವಿರೋಧ ಬರುವುದು ಎಂಬ ಶಂಕೆ ಬರುವುದಿಲ್ಲವೆಂದು ''ತಮ್'' ಎಂಬ ವಾಕ್ಯದಿಂದ ಹೇಳುತ್ತಿ-ದ್ದಾರೆ.

**ಭಾಷ್ಯಮ್ – 'ತಮುತ್ಕ್ರಮಂತಂ ಪ್ರಾಣೋಽನೂತ್ಕ್ರಾಮತಿ' ಇತ್ಯಾದಿನಾ ನೋತ್ಕ್ರಮಣಾದಿಲಿಂಗವಿರೋಧೋಽಪಿ ॥ ೮ ॥**

'ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ' ಇತ್ಯಾದಿ ವಾಕ್ಯಗಳಿಂದ

ಉತ್ಕ್ರಮಣವೇ ಮೊದಲಾದ ಲಿಂಗಗಳ ವಿರೋಧವು ಇರುವು-
ದಿಲ್ಲ.

ಭಾ.ದೀ.– ಪ್ರಥಮಾದಿಶಬ್ದೇನ ತದುತ್ತರವಾಕ್ಯಾನಿ, ದ್ವಿತೀಯೇನ ತಲ್ಲಿಂಗಾಂತರಾಣಿ ಚ ಗೃಹ್ಯಂತೇ । 'ಅಪಿ'ಶಬ್ದಃ ಸಮುಚ್ಚಯೇ, ಯದ್ಯಪಿ 'ತಥಾಽಪಿ' ಇತ್ಯರ್ಥೇ ಚ । ತಥಾ ಚ – ನ ಕೇವಲಂ ಪ್ರಾಣಶಬ್ದೋಪಕ್ರಮವಿರೋಧಃ, ತಸ್ಯ ವಿಷ್ಣುಪರತ್ವಾತ್, ಕಿಂತು 'ಅಪಿ' ಅತ್ರ ಪ್ರಾಣಶಬ್ದೇನ ವಿಷ್ಣೋರ್ವಾಚ್ಯತ್ವಾಂಗೀಕಾರೇ ಉತ್ಕ್ರಮಣಾದಿಲಿಂಗವಿರೋಧೋ ನಾಸ್ತಿ । ಕುತಃ? 'ಅಪಿ' ತಥಾಪಿ ಸರ್ವಗತೇಽಪಿ ವಿಷ್ಣೌ ಉತ್ಕ್ರಮಣಾದಿಲಿಂಗಸ್ಯ 'ತಮುತ್ಕ್ರಾಮಂತಮ್' ಇತ್ಯಾದಿನಾ ವಾಜಸನೇಯವಾಕ್ಯೇನ ಸಿದ್ಧತ್ವಾದಿತಿ ಯೋಜನಾ । ಶ್ರುತಿಸಿದ್ಧೇಽರ್ಥೇ ಲೋಕದೃಷ್ಟಿವಿರೋಧೋಽಕಿಂಚಿತ್ಕರ ಇತಿ ಭಾವಃ।

'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತನೇ । ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ' (ಬೃ.೬-೪-೨) ಇತಿ ಪೂರ್ವವಾಕ್ಯೇ ಪ್ರಕೃತಃ ಪರಮಾತ್ಮಾ ತಚ್ಛಬ್ದೇನ ಪರಾಮೃಶ್ಯತೇ । ತಥಾ ಚ – ಪ್ರದ್ಯೋತಿತಹೃದಯಾಗ್ರೇಣ ಅಪರೋಕ್ಷಜ್ಞಾನಿದೇಹಾತ್ 'ಉತ್ಕ್ರಾಮಂತಂ' - ನಿರ್ಗಚ್ಛಂತಂ ಪರಮಾತ್ಮಾನಮನುಸೃತ್ಯ 'ಪ್ರಾಣೋ' ಮುಖ್ಯವಾಯುಃ 'ಉತ್ಕ್ರಾಮತಿ' ದೇಹಾತ್ ನಿರ್ಗಚ್ಛತಿ – ಇತಿ ಶ್ರುತ್ಯರ್ಥಃ।

ಅನು– ಭಾಷ್ಯದಲ್ಲಿ ಮೊದಲನೇ 'ಆದಿ' ಶಬ್ದದಿಂದ ತಮ್ ಎಂಬ ವಾಕ್ಯದ ಮುಂದಿರುವ ವಾಕ್ಯಗಳು, ಎರಡನೆಯ ಆದಿಪದದಿಂದ ಪ್ರಾಣನ ಇತರ ಲಿಂಗಗಳು ಕೂಡ ಗ್ರಹಿಸಲ್ಪಡುತ್ತವೆ. 'ವಿರೋಧೋಽಪಿ' ಎಂಬಲ್ಲಿರುವ ಅಪಿಶಬ್ದವು ಸಮುಚ್ಚಯವನ್ನು ಹಾಗೆಯೇ 'ಯದ್ಯಪಿ ತಥಾಪಿ' ಎಂಬರ್ಥವನ್ನು ಹೇಳುತ್ತದೆ. ತಥಾ ಚ – ಉಪಕ್ರಮದಲ್ಲಿ ಇರುವ ಪ್ರಾಣಶಬ್ದವು ವಿಷ್ಣುಪರವಾದುದರಿಂದ ಅದರ ವಿರೋಧವಿಲ್ಲ ಎಂದಿಷ್ಟೇ ಅಲ್ಲ ಕಿಂತು 'ಅಪಿ' - ಮತ್ತು ಇಲ್ಲಿರುವ ಪ್ರಾಣಶಬ್ದದಿಂದ ವಿಷ್ಣುವು ವಾಚ್ಯನೆಂದು ಅಂಗೀಕರಿಸಿದಲ್ಲಿ ಉತ್ಕ್ರಮಣಾದಿ ಲಿಂಗಗಳ ವಿರೋಧವೂ ಇಲ್ಲ.

ಏಕೆಂದರೆ, 'ಅಪಿ' ಅಂದರೆ ತಥಾಪಿ ಪುನಃ ಅಂದರೆ ವಿಷ್ಣುವು ಸರ್ವಗತನಾಗಿದ್ದರೂ ಉತ್ಕ್ರಮಣಾದಿ ಲಿಂಗವು ಅವನಲ್ಲಿ ಇರುವುದೆಂದು 'ತಮುತ್ಕ್ರಾಂತಮ್' ಇತ್ಯಾದಿ ವಾಕ್ಯದಿಂದ ಸಿದ್ಧವಾಗಿರುವುದರಿಂದ ಎಂದು ಪದಗಳ ಯೋಜನೆ. ಶ್ರುತಿಸಿದ್ಧವಾದ ವಿಷಯದಲ್ಲಿ ಲೋಕದೃಷ್ಟಿಯ ವಿರೋಧವು ಏನನ್ನೂ ಮಾಡಲಾರದು ಎಂದು ಭಾವ.

'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ । ತೇನ ಪ್ರದ್ಯೋತೇನ ಏಷ ಆತ್ಮಾ ನಿಷ್ಕ್ರಾಮತಿ' (ಬೃ. ೬-೪-೨) ಎಂಬ ಪೂರ್ವವಾಕ್ಯದಲ್ಲಿ ಪ್ರಸ್ತುತನಾಗಿರುವ ಪರಮಾತ್ಮನು 'ತಮುತ್ಕ್ರಾಮಂತಮ್' ಎಂಬ ವಾಕ್ಯದಲ್ಲಿರುವ 'ತತ್' ಶಬ್ದದಿಂದ ಪರಾಮರ್ಶಿಸಲ್ಪಡುತ್ತಾನೆ. ತಥಾ ಚ – ಪ್ರಕಾಶಮಾನವಾದ ಹೃದಯದ ಅಗ್ರಭಾಗದಿಂದ ಅಪರೋಕ್ಷಜ್ಞಾನಿಯ ದೇಹದಿಂದ 'ಉತ್ಕ್ರಾಮಂತಂ' - ಹೊರಗೆ ಹೊರಡುವ ಪರಮಾತ್ಮನನ್ನು 'ಅನು' - ಅನುಸರಿಸಿ 'ಪ್ರಾಣಃ' - ಮುಖ್ಯವಾಯುವು, 'ಉತ್ಕ್ರಾಮತಿ' - ದೇಹದಿಂದ ನಿರ್ಗಮಿಸುವನು ಎಂದು ಶ್ರುತಿಯ ಅರ್ಥ.

ಭಾ.ದೀ. - ಯುಕ್ತ್ಯಂತರೇಣ ವಿಷ್ಣೋರ್ಭೂಮತ್ವಪ್ರತಿಪಾದಿಕಂ ಸೂತ್ರಮುಪ-ನ್ಯಸ್ಯ ವ್ಯಾಚಷ್ಟೇ – ಧರ್ಮೇತಿ ॥

ಅನು– ಇನ್ನೊಂದು ಯುಕ್ತಿಯಿಂದ ವಿಷ್ಣುವಿಗೆ ಭೂಮತ್ವವಿರುವುದೆಂದು ಪ್ರತಿ-ಪಾದಿಸುವ ''ಓಂ ಧರ್ಮೋಪಪತ್ತೇಶ್ಚ ಓಂ'' ಎಂಬ ಸೂತ್ರವನ್ನು ಉಪನ್ಯಾಸ ಮಾಡಿ ''ಧರ್ಮ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್– ॥ ಓಂ ಧರ್ಮೋಪಪತ್ತೇಶ್ಚ ಓಂ ॥ ೯ ॥**

**ಸರ್ವಗತತ್ವಾದಿಧರ್ಮೋಪಪತ್ತೇಶ್ಚ ।**

॥ ಇತಿ ಬ್ರಹ್ಮಸೂತ್ರಭಾಷ್ಯೇ ಭೂಮಾಧಿಕರಣಮ್ ॥ ೨ ॥

ಸರ್ವಗತತ್ವವೇ ಮೊದಲಾದ ಧರ್ಮಗಳು ವಿಷ್ಣುವಿನಲ್ಲೇ ಯುಕ್ತ-ವಾಗುವುದರಿಂದಲೂ ಕೂಡ ಭೂಮನು ವಿಷ್ಣುವೇ ಆಗಿದ್ದಾನೆ.

ಭಾ.ದೀ.– 'ಆದಿ'ಪದೇನ ಸ್ವಾತಂತ್ರ್ಯ-ಸ್ವಪ್ರತಿಷ್ಠಿತತ್ವಾದಿಕಂ ಗೃಹ್ಯತೇ । ಅಸ್ಯ ಹೇತೋಃ 'ವಿಷ್ಣುರೇವ ಭೂಮಾ' ಇತಿ ಪ್ರಧಾನಸಾಧ್ಯೇನಾನ್ವಯಃ।

ಯದ್ಯಪಿ ಛಾಂದೋಗ್ಯೇ 'ಯತ್ರ ನಾನ್ಯತ್' (ಛಾಂ.೭-೨೪-೧) ಇತಿ ಸ್ವಾತಂತ್ರ್ಯಬೋಧಕವಾಕ್ಯಾನಂತರಂ 'ಸ ಏವಾಧಸ್ತಾತ್' (ಛಾಂ.೭-೨೫) ಇತಿ ಸರ್ವಗತತ್ವಾಭಿಧಾಯಕವಾಕ್ಯಶ್ರವಣಾತ್ ಪ್ರಥಮಶ್ರುತಸ್ವಾತಂತ್ರ್ಯಧರ್ಮಂ 'ಸ್ವ'-ಶಬ್ದೇನ ಗೃಹೀತ್ವಾ ಸರ್ವಗತತ್ವಮ್ 'ಆದಿ'ಶಬ್ದೇನ ಗ್ರಾಹ್ಯಮ್ । ತಥಾಽಪಿ ತದ್ವಾಕ್ಯೇ ಭೂಮತ್ವನಿಯತಸರ್ವಗತತ್ವಸ್ಯ ಸ್ಪಷ್ಟಂ ಪ್ರತೀತೇಸ್ತದೇವ ವಾಚಕಶಬ್ದೇನ ಗೃಹೀತಮಿತಿ ದ್ರಷ್ಟವ್ಯಮ್ ।

ಅನೇನ – ಸೂತ್ರೇ ಚೋ ಯುಕ್ತಿಸಮುಚ್ಚಯೇ ಧರ್ಮಶಬ್ದಾತ್ ಪರಮ-ನ್ವೇತಿ । ಲಿಂಗಸ್ಯ ನಿರವಕಾಶತ್ವಜ್ಞಾಪನಾಯ ಉಪಪತ್ತಿಪರ್ಯಂತಂ ಧಾವನಮ್ । ತಥಾ ಚ – ನ ಕೇವಲಂ ಸಂಪ್ರಸಾದಾದೇಃ ಕಿಂತು 'ಸ ಏವಾಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ ಸ ಏವೇದಂ ಸರ್ವಮ್' (ಛಾಂ. ೭-೨೫-೧) ಇತಿ ವಾಕ್ಯೇ, ತಥಾ – 'ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯತ್ ವಿಜಾನಾತಿ ಸ ಭೂಮಾ' (ಛಾಂ.೭-೨೪-೧) ಇತ್ಯಾದಿ ವಾಕ್ಯೇ ಚ ಸರ್ವಗತತ್ವಾದಿಧರ್ಮಶ್ರವಣಾಚ್ಚ ಭೂಮಾ ವಿಷ್ಣುರೇವ, ತೇಷಾಂ ಚ ಧರ್ಮಾಣಾಂ ವಿಷ್ಣಾವೇವ ಉಪಪತ್ತೇಃ – ಇತಿ ಸೂತ್ರಾರ್ಥ ಉಕ್ತೋ ಭವತಿ।

ಅನು– 'ಸರ್ವಗತತ್ವಾದಿ' ಎಂಬಲ್ಲಿರುವ ಆದಿಪದದಿಂದ ಸ್ವಾತಂತ್ರ್ಯ , ಸ್ವಪ್ರತಿಷ್ಠಿತತ್ವ ಮೊದಲಾದ ಲಿಂಗಗಳು ಗ್ರಹಿಸಲ್ಪಡುತ್ತವೆ. ಈ ಸೂತ್ರದಿಂದ ಹೇಳುವ ಹೇತುವಿಗೆ 'ವಿಷ್ಣುರೇವ ಭೂಮಾ' ಎಂಬ ಪ್ರಧಾನವಾದ ಸಾಧ್ಯದಿಂದ ಅನ್ವಯ.

ಯದ್ಯಪಿ ಛಾಂದೋಗ್ಯದಲ್ಲಿ 'ಯತ್ರ ನಾನ್ಯತ್' (೭-೨೪-೧) ಎಂಬ ಸ್ವಾತಂತ್ರ್ಯ-ವನ್ನು ಬೋಧಿಸುವ ಇನ್ನೊಂದು ವಾಕ್ಯದ ನಂತರ 'ಸ ಏವ ಅಧಸ್ತಾತ್' ಎಂದು

ಸರ್ವಗತತ್ವವನ್ನು ಹೇಳುವ ವಾಕ್ಯವು ಶ್ರುತವಾಗಿರುವುದರಿಂದ ಮೊದಲು ಶ್ರುತವಾದ ಸ್ವಾತಂತ್ರ್ಯಧರ್ಮವನ್ನು 'ಸ್ವ'ಶಬ್ದದಿಂದ ಗ್ರಹಿಸಿ, ಸರ್ವಗತತ್ವವನ್ನು 'ಆದಿ'ಶಬ್ದದಿಂದ ಗ್ರಹಿಸಬೇಕು. ಆದರೂ ಆ ವಾಕ್ಯದಲ್ಲಿ ಭೂಮತ್ವದ ಜೊತೆಗೆ ನಿಯಮೇನ ಇರುವ ಸರ್ವಗತತ್ವವು ಸ್ಪಷ್ಟವಾಗಿ ಪ್ರತೀತವಾಗುವುದರಿಂದ ಅದನ್ನು ಹೇಳುವ ವಾಚಕಶಬ್ದದಿಂದ ಗ್ರಹಿಸಲ್ಪಟ್ಟಿದೆ ಎಂದು ತಿಳಿಯಬೇಕು.

ಇದರಿಂದ – ಸೂತ್ರದಲ್ಲಿ 'ಚ'ಕಾರವು ಯುಕ್ತಿಯ ಸಮುಚ್ಚಯವನ್ನು ಹೇಳು- ವುದಿದ್ದು ಸೂತ್ರದಲ್ಲಿರುವ ಧರ್ಮಶಬ್ದದ ಮುಂದೆ ಅನ್ವಯವನ್ನು ಹೊಂದುತ್ತದೆ. ಇಲ್ಲಿ ಹೇಳಲಾಗಿರುವ ಲಿಂಗವು ನಿರವಕಾಶವಾದದ್ದೆಂದು ತಿಳಿಸಲು 'ಉಪಪತ್ತಿ' ಪರ್ಯಂತ- ವಾಗಿ ಹೋಗಿದೆ. ತಥಾ ಚ - ಸಂಪ್ರಸಾದ ಮೊದಲಾದ ಕೆಲವು ಹೇತುಗಳಿಂದಷ್ಟೇ ಅಲ್ಲ ಕಿಂತು 'ಸ ಏವಾಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ ಸ ಏವ ಇದಂ ಸರ್ವಮ್' ಎಂಬ ವಾಕ್ಯವು ಗ್ರಹಿಸಲ್ಪಡುತ್ತದೆ. ಹಾಗೆಯೇ 'ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯತ್ ವಿಜಾನಾತಿ ಸ ಭೂಮಾ' ಎಂಬ ವಾಕ್ಯದಲ್ಲಿ ಹಾಗೆಯೇ 'ಸ ಭಗವತಃ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇ ಮಹಿಮ್ನಿ' ಎಂಬ ಮುಂದಿನ ವಾಕ್ಯದಲ್ಲಿ ಕೂಡ ಸರ್ವಗತತ್ವಾದಿ ಧರ್ಮವು ಶ್ರುತವಾಗಿರುವುದರಿಂದ ಭೂಮನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಆ ಧರ್ಮಗಳು ವಿಷ್ಣುವಿನಲ್ಲಿಯೇ ಯುಕ್ತವಾಗುತ್ತವೆ - ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ.– 'ಸಃ' ಭೂಮಶಬ್ದಿತೋ ನಾರಾಯಣಃ ಅಧಃ ಉಪರಿ ಪಶ್ಚಾತ್ ಪುರಸ್ತಾದ್ ದಕ್ಷಿಣತ ಉತ್ತರತಃ ಸರ್ವತ್ರ ಅಸ್ತಿ । ತತ್ಪ್ರಯೋಜನಮಾಹ – ಸ ಏವೇದಂ ಸರ್ವಮ್ ಇತಿ ॥ ತೇನೈವ ಇದಂ ಜಗದ್ ವ್ಯಾಪ್ತಂ ಸ ಏವ ಸರ್ವಸತ್ತಾ- ಪ್ರದಃ ತದರ್ಥಮೇವ ಸರ್ವತ್ರ ತಿಷ್ಠತೀತ್ಯರ್ಥಃ । 'ಯತ್ರ' ಯದ್ವಿನಾ ಯದಧೀನಂ ವಿನಾ ಅನ್ಯನ್ನ ಪಶ್ಯತಿ ಅಧಿಕಾರೀ, ಸರ್ವಮೇವ ತದಧೀನಂ ಪಶ್ಯತಿ, ತಥೈವ ಶೃಣೋತಿ, ವಿಜಾನಾತಿ ಚ ಸ ಭೂಮಾ – ಇತ್ಯರ್ಥಃ । 'ಯತ್ರ' ಯಸ್ಮಿನ್ ದೃಷ್ಟೇ ಅನ್ಯತ್ ಸ್ವತಂತ್ರಂ ನ ಪಶ್ಯತಿ - ಇತಿ ವಾ ।

ಹೇ 'ಭಗವೋ' ಭಗವಾನ್ ಸ ಭೂಮಾ ಕಸ್ಮಿನ್ ಪ್ರತಿಷ್ಠಿತಃ? ಇತಿ ನಾರದಪ್ರಶ್ನೇ ಮಹಿಮಗುಣಾತ್ಮಕೇ 'ಸ್ವೇ' ಸ್ವಸ್ಮಿನ್ ಸ್ವಕೀಯೇ ಮಹಿಮ್ನಿ ವಾ ಸ್ವಯಂ 'ಪ್ರತಿಷ್ಠಿತಃ' ಆಶ್ರಿತಃ - ಇತಿ ಸನತ್ಕುಮಾರಃ ಪ್ರತ್ಯಾಹ - ಇತಿ ಶ್ರುತ್ಯರ್ಥಃ ॥೨॥

ಅನು– 'ಸಃ' - ಆ ಭೂಮಶಬ್ದದಿಂದ ಹೇಳಲ್ಪಟ್ಟ ನಾರಾಯಣನು 'ಅಧಃ ಉಪರಿ ಪಶ್ಚಾತ್ ಪುರಸ್ತಾತ್ ದಕ್ಷಿಣತಃ ಉತ್ತರತಃ ಸರ್ವತ್ರ - ಅಸ್ತಿ' - ಕೆಳಗೆ, ಮೇಲೆ, ಹಿಂಭಾಗದಲ್ಲಿ, ಮುಂಭಾಗದಲ್ಲಿ, ದಕ್ಷಿಣಭಾಗದಲ್ಲಿ, ಉತ್ತರದಲ್ಲಿ - ಸರ್ವತ್ರ ಇರುವನು. ಅದರ ಪ್ರಯೋಜನವನ್ನು 'ಸ ಏವೇದಂ ಸರ್ವಮ್' ಎಂಬ ವಾಕ್ಯದಿಂದ ಹೇಳಲಾಗಿದೆ. ಅವನಿಂದಲೇ ಈ ಜಗತ್ತು ವ್ಯಾಪ್ತವಾಗಿದೆ. ಅವನೇ ಸರ್ವವಸ್ತುಗಳಿಗೆ ಸತ್ತಾಪ್ರದನಾಗಿದ್ದಾನೆ. ಆ ಉದ್ದೇಶದಿಂದಲೇ ಸರ್ವತ್ರ ಇರುವನು ಎಂದು ಅರ್ಥ.

ಅಥವಾ 'ಯತ್ರ' ಯಾರಿಲ್ಲದೇ ಅಥವಾ ಯಾರ ಅಧೀನತೆಯನ್ನು ಹೊಂದದೇ 'ಅನ್ಯನ್ನ ಪಶ್ಯತಿ ' ಬೇರೆ ಯಾವುದನ್ನೂ ನೋಡುವುದಿಲ್ಲವೋ ಅಂತಹ ಅಧಿಕಾರಿಯು ಎಲ್ಲವನ್ನೂ ಅವನ ಅಧೀನವೆಂದು ತಿಳಿಯುತ್ತಾನೆ. ಹಾಗೆಯೇ ಕೇಳುತ್ತಾನೆ. ಅಂತೆಯೇ ತಿಳಿಯುತ್ತಾನೆ. ಅವನೇ ಭೂಮಾ ಎಂದು ಅರ್ಥ.

ಅಥವಾ 'ಯತ್ರ' - ಯಾರನ್ನು ನೋಡಿದ ಮೇಲೆ ಮತ್ತೊಂದು ಸ್ವತಂತ್ರವಾದದ್ದನ್ನು ನೋಡುವುದಿಲ್ಲವೋ ಎಂದು ಅರ್ಥ.

'ಹೇ ಭಗವಃ' ಎಲೈ ಪೂಜ್ಯರೇ! ಭೂಮನಾದ ಸಃ - ಆ ಭಗವಂತನು, ಯಾರಲ್ಲಿ ಪ್ರತಿಷ್ಠಿತನಾಗಿದ್ದಾನೆ ಎಂದು ನಾರದರು ಪ್ರಶ್ನೆ ಮಾಡಿದಾಗ ಗುಣಸ್ವರೂಪನಾದ 'ಸ್ವೇ' ತನ್ನಲ್ಲಿ ಅಥವಾ ತನ್ನದಾದ ಮಹಿಮೆಯಲ್ಲಿ ಸ್ವಯಂ 'ಪ್ರತಿಷ್ಠಿತಃ' - ತಾನೇ ಆಶ್ರಿತನಾಗಿದ್ದಾನೆ ಎಂದು ಸನತ್ಕುಮಾರರು ಉತ್ತರಿಸಿದರೆಂದು ಶ್ರುತ್ಯರ್ಥ.

॥ ಇಲ್ಲಿಗೆ ಭಾಷ್ಯದೀಪಿಕಾದಲ್ಲಿ ಭೂಮಾಧಿಕರಣದ ಕನ್ನಡಾನುವಾದವು ಮುಗಿಯಿತು ॥

## ೩. ಅಕ್ಷರಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಅಕ್ಷರನಾಮಸಮನ್ವಯಃ ಕ್ರಿಯತೇ । ಶ್ರುತ್ಯಾದಿ-ಸಂಗತಿಂ ವಿಷಯವಾಕ್ಯಮುದಾಹೃತ್ಯ ವಿಷಯಾದಿಕಂ ಚ ಸೂಚಯನ್ ಸಯುಕ್ತಿಕಂ ಪೂರ್ವಪಕ್ಷಂ ದರ್ಶಯತಿ – ಅದೃಶ್ಯತ್ವಾದಿ ಇತಿ ॥

ಅನು– ಈ ಅಧಿಕರಣದಲ್ಲಿ ಅಕ್ಷರವೆಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗುವುದು. ಶ್ರುತಿಮೊದಲಾದವುಗಳ ಸಂಗತಿಯನ್ನು ಹಾಗೂ ವಿಷಯ-ವಾಕ್ಯವನ್ನು ಉದಾಹರಿಸಿ ವಿಷಯ ಮೊದಲಾದವುಗಳನ್ನು ಸೂಚಿಸುತ್ತಾ ಭಾಷ್ಯಕಾರರು ಸಯುಕ್ತಿಕವಾದ ಪೂರ್ವಪಕ್ಷವನ್ನು ಅದೃಶ್ಯತ್ವಾದಿ ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ 'ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ' ಇತ್ಯಾದಿನಾ । 'ಅಹಂ ಸೋಮಮಾಹನಸಂ ಬಿಭರ್ಮಿ' ಇತ್ಯಾದೇಶ್ಚ ತಸ್ಯಾಪಿ ಸಂಭವಾತ್ ಮಧ್ಯಮಾಕ್ಷರಸ್ಯೋಕ್ತಾ ಇತಿ,**

'ಅದೃಷ್ಟಂ ದ್ರಷ್ಟೃ ಅಶ್ರುತಂ ಶ್ರೋತೃ' ಇತ್ಯಾದಿ ವಾಕ್ಯದಿಂದ ಅದೃಶ್ಯತ್ವಾದಿಗುಣಗಳು ವಿಷ್ಣುವಿಗೆ ಹೇಳಲ್ಪಟ್ಟಿವೆ. 'ಅಹಂ ಸೋಮಂ ಆಹನಸಂ ಬಿಭರ್ಮಿ' ಎಂಬ ವಾಕ್ಯದಿಂದ ಚಂದ್ರಾದಿ ಆಧಾರತ್ವ-ಲಿಂಗವೂ ಕೂಡ ಆ ಅಕ್ಷರನಲ್ಲಿ ಯುಕ್ತವಾಗುವುದರಿಂದ ಮಧ್ಯ-ಮಾಕ್ಷರನಿಗೂ 'ತಸ್ಯ ಸಂಭವಾತ್'- ಅಕ್ಷರಶಬ್ದವಾಚ್ಯತ್ವವು ಪ್ರಾಪ್ತ-ವಾಗುವುದು.

ಭಾ.ದೀ. – 'ಉಕ್ತಾಃ' ಇತ್ಯಸ್ಯ ಆವೃತ್ತಿಃ । 'ತೇ' ಇತಿ ಶೇಷಃ । ಆದ್ಯ ಆದಿಶಬ್ದೇನ ಅಗ್ರಾಹ್ಯತ್ವಾದಿ ಗೃಹ್ಯತೇ । 'ಗುಣಾಃ' ಇತ್ಯನೇನ ಚಂದ್ರಾದಿತ್ಯಾದ್ಯಾಧಾರತ್ವ-ಗುಣೋಽಪಿ ಗೃಹ್ಯತೇ ।

ದ್ವಿತೀಯ ಆದಿಶಬ್ದೇನ 'ಅಶ್ರುತಂ ಶ್ರೋತಮ್ ಅಮತಂ ಮಂತ್ರವಿಜ್ಞಾತಂ ವಿಜ್ಞಾತೃ ನಾನ್ಯದ್ ಅತೋಽಸ್ತಿ ದ್ರಷ್ಟೃ ನಾನ್ಯದ್ ಅತೋಽಸ್ತಿ ಶ್ರೋತೃ ನಾನ್ಯದ್ ಅತೋಽಸ್ತಿ ಮಂತೃ ನಾನ್ಯದ್ ಅತೋಽಸ್ತಿ ವಿಜ್ಞಾತೃ ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' - (ಬೃ.ಉ.೪-೮-೧೧) ಇತಿ ಶಿಷ್ಟವಾಕ್ಯಮ್, ತಥಾ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' (ಬೃ.ಉ. ೫-೮-೯) ಇತಿ ವಾಕ್ಯಂ ಚ ಗೃಹ್ಯತೇ।

ತೃತೀಯ ಆದಿಶಬ್ದೇನ 'ಅಹಂ ತ್ವಷ್ಟಾರಮುತ ಪೂಷಣಂ ಭಗಮ್' (ಋ.ಮಂ. ೧೦.೧೨೫.೨) ಇತಿ ವಾಕ್ಯಮ್, ತಥಾ –

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ (ಗೀ.೧೨.೩)

ಇತಿ ಗೀತಾವಾಕ್ಯಮ್।

'ಆಸೀದಿದಂ ತಮೋಽಭೂತಮಪ್ರಜ್ಞಾತಮಲಕ್ಷಣಮ್।
ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ॥'

ಇತಿ ತದ್ಭಾಷ್ಯೋದಾಹೃತವಾಕ್ಯಂ ಚ ಗೃಹ್ಯತೇ।

ಅನು– ಭಾಷ್ಯದಲ್ಲಿ 'ಉಕ್ತಾಃ' ಎಂಬ ಪದವು ಆವೃತ್ತಿಯನ್ನು ಪಡೆಯುತ್ತದೆ. ಇಲ್ಲಿ 'ತೇ' ಎಂಬ ಪದವು ಶೇಷವಾಗಿ ಸೇರುವುದು. 'ಅದೃಶ್ಯತ್ವಾದಿಗುಣಾಃ' ಎಂಬಲ್ಲಿರುವ ಮೊದಲನೆಯ ಆದಿಶಬ್ದದಿಂದ ಅಗ್ರಾಹ್ಯತ್ವಾದಿ ಗುಣಗಳು ಗ್ರಹಿಸಲ್ಪಡುತ್ತವೆ. 'ಗುಣಾಃ' ಎಂಬ ಪದದಿಂದ ಚಂದ್ರ-ಆದಿತ್ಯಾದಿ ಆಧಾರತ್ವವೆಂಬ ಗುಣವೂ ಗ್ರಹಿಸಲ್ಪಡುತ್ತದೆ.

ಎರಡನೇ ಆದಿಶಬ್ದದಿಂದ ''ಅಶ್ರುತಂ ಶ್ರೋತಮ್ ಅಮತಂ ಮಂತ್ರವಿಜ್ಞಾತಂ ವಿಜ್ಞಾತೃ ನಾನ್ಯದ್ ಅತೋಽಸ್ತಿ ದ್ರಷ್ಟೃ ನಾನ್ಯದ್ ಅತೋಽಸ್ತಿ ಶ್ರೋತೃ ನಾನ್ಯದ್ ಅತೋಽಸ್ತಿ ಮಂತೃ ನಾನ್ಯದ್ ಅತೋಽಸ್ತಿ ವಿಜ್ಞಾತೃ ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂಬ ಉಳಿದ ವಾಕ್ಯವೂ, ಹಾಗೆಯೇ 'ಏತಸ್ಯ ವಾ ಅಕ್ಷರಸ್ಯ

ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಎಂಬ ವಾಕ್ಯವೂ ಗ್ರಹಿಸಲ್ಪಡುತ್ತದೆ.

ಭಾಷ್ಯದಲ್ಲಿರುವ ಮೂರನೆಯ ಆದಿಶಬ್ದದಿಂದ 'ಅಹಂ ತ್ವಷ್ಟಾರಮುತ ಪೂಷಣಂ ಭಗಮ್' ಎಂಬ ವಾಕ್ಯವೂ ಹಾಗೆಯೇ

''ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥''

ಎಂಬ ಗೀತಾವಾಕ್ಯವೂ ಮತ್ತು

'ಆಸೀದಿದಂ ತಮೋಽಭೂತಮಪ್ರಜ್ಞಾತಮಲಕ್ಷಣಮ್ ।
ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥'

ಎಂಬ (ಅದರ) ಗೀತಾಭಾಷ್ಯದಲ್ಲಿ ಉದಾಹರಿಸಿದ ವಾಕ್ಯವೂ ಗ್ರಹಿಸಲ್ಪಡುತ್ತವೆ.

ಭಾ.ದೀ. – ಚಶಬ್ದೇನ 'ಅಕ್ಷರಶಬ್ದಸ್ಯ ಶ್ರೀತತ್ತ್ವೇ ಪ್ರಸಿದ್ಧೇಶ್ಚ' ಇತಿ ಅಕ್ಷರಪದಸೂಚಿತೋ ಹೇತುಃ ಸಮುಚ್ಚೀಯತೇ । 'ತಸ್ಯ' ಇತಿ ಪದಮಾವರ್ತತೇ, ವಿಪರಿಣಮ್ಯತೇ ಚ । ನ ಕೇವಲಂ ವಿಷ್ಣೋರೇವ, ಕಿಂತು 'ತಸ್ಯ' ಅಕ್ಷರಸ್ಯಾಪಿ ಇತ್ಯ-ಪೇರರ್ಥಃ । ವಿಷ್ಣುಜಡವ್ಯಾವೃತ್ತ್ಯರ್ಥಂ – ಮಧ್ಯಮೇತಿ ॥ 'ಭೂಮತ್ವಪ್ರಾಪ್ತಿಃ' ಇತಿ ಪೂರ್ವವಾಕ್ಯಾದ್ 'ಬುದ್ಧ್ಯಾ ವಿವೇಕೇನ ಪ್ರಾಪ್ತಿಃ' ಇತಿ ಪದಮತ್ರಾನುವರ್ತತೇ । ತಥಾ ಚ – ಪೂರ್ವಮ್ ಅದೃಶ್ಯತ್ವಾಧಿಕರಣೇ ಯೇಽದೃಶ್ಯತ್ವಾದಿಗುಣಾ ಅಕ್ಷರಸ್ಯ ವಿಷ್ಣೋರುಕ್ತಾಃ । ತೇ ವಾಜಸನೇಯಕೇ 'ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ದ್ರಷ್ಟೃ' ಇತ್ಯಾದಿನಾ ವಾಕ್ಯೇನ 'ಮಧ್ಯಮಾಕ್ಷರಸ್ಯ' ಶ್ರೀತತ್ತ್ವಸ್ಯ 'ಉಕ್ತಾಃ' ಉಚ್ಯಂತೇ – ಇತ್ಯೇಕಾ ಯೋಜನಾ ।

ಅಪರಾ ತು – 'ತಸ್ಯ' ತೇಷಾಮದೃಶ್ಯತ್ವಾದಿಗುಣಾನಾಂ 'ತಸ್ಯ' ತಸ್ಮಿನ್ ಮಧ್ಯ-ಮಾಕ್ಷರೇಽಪಿ ಸಂಭವಾತ್ ಯುಕ್ತತ್ವಾತ್ 'ತಸ್ಯ' ಚಂದ್ರಾದ್ಯಾಧಾರತ್ವಲಿಂಗಸ್ಯಾಪಿ

'ಅಹಂ ಸೋಮಮ್ ಆಹನಸಮ್' ಇತ್ಯಾದಿವಾಕ್ಯಾತ್ ತಸ್ಮಿನ್ನಕ್ಷರೇ ಉಪಪತ್ತೇಃ 'ತಸ್ಯ' ಅಕ್ಷರಶಬ್ದಸ್ಯ ತಸ್ಮಿನ್ ಮಧ್ಯಮಾಕ್ಷರೇ ಪ್ರಸಿದ್ಧೇಶ್ಚ 'ತಸ್ಯ' ಮಧ್ಯಮಾಕ್ಷರಸ್ಯಾಪಿ 'ತಸ್ಯ' ಅಕ್ಷರನಾಮವಾಚ್ಯತ್ವಸ್ಯ ಪ್ರಾಪ್ತಿಃ – ಇತಿ।

'ಇತ್ಯಾದೇಶ್ಚ' ಎಂಬಲ್ಲಿರುವ ಚಶಬ್ದದಿಂದ ಅಕ್ಷರಪದವು ಸೂಚಿಸುವ 'ಅಕ್ಷರ-ಶಬ್ದವು ಶ್ರೀತತ್ತ್ವದಲ್ಲಿ ಪ್ರಸಿದ್ಧವಾಗಿರುವುದರಿಂದಲೂ' - ಎಂಬ ಹೇತುವಿನ ಸಮು-ಚ್ಚಯವು ಹೇಳಲ್ಪಡುವುದು. ಭಾಷ್ಯದಲ್ಲಿ 'ತಸ್ಯ' ಪದವು ಆವೃತ್ತಿಯನ್ನು ಪಡೆಯುತ್ತದೆ. ಮತ್ತು ವಿಭಕ್ತಿವ್ಯತ್ಯಾಸವನ್ನು ಹೊಂದುತ್ತದೆ. 'ತಸ್ಯಾಪಿ' ಎಂಬಲ್ಲಿರುವ ಅಪಿಶಬ್ದಕ್ಕೆ 'ವಿಷ್ಣುವಿಗೆ ಮಾತ್ರವಲ್ಲ; ಕಿಂತು ತಸ್ಯ - ಅಂದರೆ ಅಕ್ಷರಕ್ಕೂ' ಎಂದು ಅರ್ಥ.

'ಮಧ್ಯಮಾಕ್ಷರಸ್ಯ' ಎಂಬಲ್ಲಿರುವ ಮಧ್ಯಮಪದವನ್ನು ವಿಷ್ಣು ಮತ್ತು ಜಡ ಅಕ್ಷರವನ್ನು ವ್ಯಾವೃತ್ತಿಗೊಳಿಸಲು ಹೇಳಲಾಗಿದೆ. ಹಿಂದಿನ ಅಧಿಕರಣದ 'ಭೂಮತ್ವ-ಪ್ರಾಪ್ತಿಃ' - ಎಂಬ ವಾಕ್ಯದಿಂದ ಮನಸಾ ಬೇರ್ಪಡಿಸಲ್ಪಟ್ಟ 'ಪ್ರಾಪ್ತಿಃ' ಎಂಬ ಪದವು ಇಲ್ಲಿ ಅನುವೃತ್ತಿಯನ್ನು ಹೊಂದುತ್ತದೆ. ತಥಾ ಚ - ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಯಾವ ಅದೃಶ್ಯತ್ವಾದಿ ಗುಣಗಳು ಅಕ್ಷರನಾದ ವಿಷ್ಣುವಿಗೆ ಹೇಳಲಾಗಿದೆಯೋ ಅವು ಬೃಹದಾರಣ್ಯಕದಲ್ಲಿ 'ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ದ್ರಷ್ಟೃ' ಇತ್ಯಾದಿ ವಾಕ್ಯ-ದಿಂದ ಮಧ್ಯಮಾಕ್ಷರಳೆಂದೆನಿಸುವ ಶ್ರೀತತ್ತ್ವಕ್ಕೆ 'ಉಕ್ತಾಃ' - ಹೇಳಲ್ಪಡುತ್ತವೆ ಎಂದು ಭಾಷ್ಯವಾಕ್ಯಕ್ಕೆ ಒಂದು ಯೋಜನೆ.

ಇನ್ನೊಂದು ಯೋಜನೆಯಾದರೋ 'ತಸ್ಯ' 'ತೇಷಾಂ' - ಅದೃಶ್ಯತ್ವಾದಿಗುಣಗಳಿಗೆ 'ತಸ್ಯ' - ತಸ್ಮಿನ್ ಆ ಮಧ್ಯಮಾಕ್ಷರದಲ್ಲೂ 'ಸಂಭವಾತ್' ಯುಕ್ತವಾಗುವುದರಿಂದ 'ತಸ್ಯ' ಚಂದ್ರಾದ್ಯಾಧಾರತ್ವ ಎಂಬ ಲಿಂಗವೂ ಕೂಡ 'ಅಹಂ ಸೋಮಮ್ ಆಹನಸಮ್' ಇತ್ಯಾದಿವಾಕ್ಯದಿಂದ ಆ ಮಧ್ಯಮಾಕ್ಷರದಲ್ಲಿ ಯುಕ್ತವಾಗುವುದರಿಂದ 'ತಸ್ಯ' - ಆ ಅಕ್ಷರಶಬ್ದಕ್ಕೆ 'ತಸ್ಮಿನ್' - ಆ ಮಧ್ಯಮಾಕ್ಷರದಲ್ಲಿ ಪ್ರಸಿದ್ಧಿ ಇರುವುದರಿಂದಲೂ ಕೂಡ 'ತಸ್ಯ' - ಆ ಮಧ್ಯಮಾಕ್ಷರಕ್ಕೂ 'ತಸ್ಯ ಪ್ರಾಪ್ತಿಃ' ಅಕ್ಷರಶಬ್ದವಾಚ್ಯತ್ವದ ಪ್ರಾಪ್ತಿ ಇರುವುದು. - ಎಂದು.

ಭಾ.ದೀ.– ತತ್ರ ಆದ್ಯಯೋಜನಾಯಾಮ್ ಅದೃಶ್ಯತ್ವಾಧಿಕರಣೋಕ್ತಾ-ದೃಶ್ಯತ್ವಾದಿಗುಣಕಾಕ್ಷರಸ್ಯ ವಿಷ್ಣ್ವನ್ಯತ್ವಾಕ್ಷೇಪಾತ್ ತೇನ ಅಸ್ಯಾऽಕ್ಷೇಪಿಕೀ ಸಂಗತಿರುಕ್ತಾ ಭವತಿ।

ತಥಾ ಅಕ್ಷರಾಖ್ಯೋ ವಿಷ್ಣುಃ ವಿಷಯಃ, ದ್ರಷ್ಟೃತ್ವಾಭಿಧಾಯಕೋತ್ತರವಾಕ್ಯ-ಪರ್ಯಾಲೋಚನಯಾ ಜಡವ್ಯಾವೃತ್ತೇಃ । ಕಿಂ ಚೇತನಪ್ರಕೃತಿರುತ ವಿಷ್ಣುಃ? ಸಂಶಯಶ್ಚ ಸೂಚಿತಃ । ದ್ವಿತೀಯಯೋಜನಾಯಾಂ ಸಯುಕ್ತಿಕಃ ಪೂರ್ವಪಕ್ಷಃ ಪ್ರದರ್ಶಿತಃ - ಇತಿ ಜ್ಞಾತವ್ಯಮ್ ।

ಇಲ್ಲಿ ಮೊದಲನೆಯ ಯೋಜನೆಯಲ್ಲಿ ಅದೃಶ್ಯತ್ವಾಧಿಕರಣದಲ್ಲಿ ಹೇಳಿರುವ ಅದೃಶ್ಯತ್ವಾದಿ ಗುಣಗಳನ್ನು ಹೊಂದಿರುವ ಅಕ್ಷರನು ವಿಷ್ಣುವಿನಿಂದ ಭಿನ್ನನಾಗಿದ್ದಾನೆ ಎಂದು ಆಕ್ಷೇಪಿಸುವುದರಿಂದ ಆ ಅಧಿಕರಣದಿಂದ ಆಕ್ಷೇಪಿಕೀ ಸಂಗತಿಯನ್ನು ಹೇಳಿ-ದಂತಾಗುವುದು.

ಅಥವಾ ಈ ಅಧಿಕರಣದ ವಿಷಯನಾದ ಅಕ್ಷರನು, ಅವನಿಗೆ ದ್ರಷ್ಟೃತ್ವವನ್ನು ಹೇಳುವ ಮುಂದಿನ ವಾಕ್ಯವನ್ನು ಪರ್ಯಾಲೋಚಿಸಿದಾಗ ಜಡಾಕ್ಷರವಲ್ಲವೆಂದು ಸಿದ್ಧವಾಗುವುದರಿಂದ, ಚೇತನಪ್ರಕೃತಿಯೋ ಅಥವಾ ವಿಷ್ಣುವೋ ಎಂದು ಈ ಅಧಿ-ಕರಣದ ಸಂಶಯವೂ ಸೂಚಿತವಾಗುವುದು. ಎರಡನೆಯ ಯೋಜನೆಯಲ್ಲಿ ಯುಕ್ತಿ-ಸಹಿತವಾದ ಪೂರ್ವಪಕ್ಷವು ಸೂಚಿತವಾಗಿದೆ ಎಂದು ತಿಳಿಯಬೇಕು.

ಭಾ.ದೀ.– 'ತದ್ವಾ' ಇತ್ಯಾದೇಃ ಸಿದ್ಧಾಂತರೀತ್ಯಾ ಅಯಮರ್ಥಃ – 'ತತ್' ಆಕಾಶಾಶ್ರಯತ್ವೇನ ವಕ್ಷ್ಯಮಾಣಮ್ 'ಅಕ್ಷರಂ' ನ ಕ್ಷರತಿ ಇತ್ಯಕ್ಷರಶಬ್ದವಾಚ್ಯಂ ಬ್ರಹ್ಮ 'ಏತತ್' ಏತಲ್ಲಕ್ಷಣಕಂ ಚ ಪ್ರಸಿದ್ಧಮ್ । ತದೇವಾऽಹ – ಅದೃಷ್ಟಮ್ ಇತ್ಯಾದಿನಾ ॥ ಅನ್ಯೈಃ ಸಾಕಲ್ಯೇನ ಅದೃಷ್ಟತ್ವಾತ್ ಸ್ವಯಂ ದ್ರಷ್ಟೃತ್ವಾದ್ 'ಅದೃಷ್ಟಂ ದ್ರಷ್ಟೃ' - ಇತ್ಯುಚ್ಯತೇ। ಏವಮುತ್ತರವಾಕ್ಯಮಪಿ ವ್ಯಾಖ್ಯೇಯಮ್। ದ್ರಷ್ಟೃತ್ವಾದೌ ವಿಶೇಷಮಾಹ – ನೇತಿ ॥ 'ಅತಃ' ಅಕ್ಷರಾದನ್ಯತ್ ಸ್ವಾತಂತ್ರ್ಯೇಣ ದ್ರಷ್ಟೃ ಶ್ರೋತೃ ಮಂತೃ ಜ್ಞಾತೃ ಚ ನಾಸ್ತೀತ್ಯರ್ಥಃ।

'ಏತಸ್ಮಿನ್' ಏವಂಭೂತೇಽಕ್ಷರಶಬ್ದಿತೇ ಬ್ರಹ್ಮಣಿ ದೀಪ್ತಿನಿಮಿತ್ತಾಕಾಶಪದೋಕ್ತಂ ಶ್ರೀತತ್ತ್ವಮ್ 'ಓತಶ್ಚ ಪ್ರೋತಶ್ಚ' ಅತ್ರ 'ಓತಂ ಚ ಪ್ರೋತಂ ಚ । ತಥಾ ಚ ಸರ್ವಾಕಾರೇಣ ತದಾಶ್ರಿತಂ ಖಲ್ವಿತ್ಯರ್ಥಃ । 'ಗಾರ್ಗಿ' ಇತಿ ಯಾಜ್ಞವಲ್ಕ್ಯಕರ್ತೃಕ-ಪತ್ನೀಸಂಬೋಧನಮ್ । 'ಏತಸ್ಯ ವಾ ಅಕ್ಷರಸ್ಯ' ವಿಷ್ಣೋಃ 'ಪ್ರಶಾಸನೇ' ಆಜ್ಞಾ-ಯಾಮಿತಿ ನಿಮಿತ್ತಸಪ್ತಮೀ । ತಥಾ ಚ ಆಜ್ಞಾಮಾತ್ರಾತ್ 'ಸೂರ್ಯಾಚಂದ್ರ-ಮಸೌ' 'ಕೇಶೌ ಸೂರ್ಯವಿಧೂ ಮತೌ' ಇತಿ ಬೃಹದ್ಭಾಷ್ಯೋಕ್ತೇರ್ಬ್ರಹ್ಮರುದ್ರೌ ಭಾಷ್ಯಟೀಕಾರೀತ್ಯಾ ಪ್ರಸಿದ್ಧರವಿಚಂದ್ರೌ ಚ 'ವಿಧೃತೌ' ವಿಶೇಷೇಣ ಧೃತೌ ಭವತ ಇತಿ । ಪೂರ್ವಪಕ್ಷೇ ತ್ವಕ್ಷರಶಬ್ದಂ ಶ್ರೀತತ್ತ್ವಪರಂ ಮನ್ಯತೇ । ತತ್ಪಕ್ಷೇ ಆಕಾಶಶಬ್ದಃ ಪ್ರಕೃತಿ ಅನ್ಯತತ್ತ್ವೋಪೇಕ್ಷ್ಯಪರಃ।

ಅನು–'ತದ್ವಾ' ಇತ್ಯಾದಿ ಉಪನಿಷದ್ವಾಕ್ಯಕ್ಕೆ ಸಿದ್ಧಾಂತರೀತ್ಯಾ ಹೀಗೆ ಅರ್ಥವಿದೆ – 'ತತ್' ಆಕಾಶಕ್ಕೆ ಆಶ್ರಯನೆಂದು ಮುಂದೆ ಹೇಳಲಾಗುವ ಅಕ್ಷರವು ಅಂದರೆ 'ನ ಕ್ಷರತಿ ಇತಿ ಅಕ್ಷರಃ' - ನಾಶರಹಿತನು ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಅಕ್ಷರಶಬ್ದವಾಚ್ಯನಾದ ಬ್ರಹ್ಮನು, 'ಏತತ್' - `ಈ ಮುಂದೆ ಹೇಳುವ ಲಕ್ಷಣವುಳ್ಳವನೆಂದು ಪ್ರಸಿದ್ಧನು. ಆ ಲಕ್ಷಣವನ್ನೇ ''ಅದೃಷ್ಟಮ್'' ಇತ್ಯಾದಿ ವಾಕ್ಯದಿಂದ ಹೇಳಲಾಗಿದೆ. ಇತರರಿಂದ ಸಾಕಲ್ಯೇನ ದ್ರಷ್ಟನಾಗದಿರುವುದರಿಂದ ಆದರೆ ತಾನು ಸ್ವಯಂ ದ್ರಷ್ಟೃವಾಗಿರುವುದರಿಂದ ಆ ಅಕ್ಷರನು 'ಅದೃಷ್ಟಂ ದ್ರಷ್ಟೃ' ಎಂದೆನಿಸುತ್ತಾನೆ. ಹೀಗೆಯೇ ಮುಂದಿನ ವಾಕ್ಯಕ್ಕೂ ವ್ಯಾಖ್ಯಾನ ಮಾಡಬೇಕು. ದ್ರಷ್ಟೃತ್ವ ಮೊದಲಾದವುಗಳಲ್ಲಿ ವಿಶೇಷವನ್ನು – ''ನ'' ಎಂಬ ಮುಂದಿನ ವಾಕ್ಯದಿಂದ ಹೇಳಲಾಗಿದೆ. 'ಅತಃ' ಈ ಅಕ್ಷರಕ್ಕಿಂತ ಭಿನ್ನವಾದದ್ದು ಸ್ವಾತಂತ್ರ್ಯೇಣ ದ್ರಷ್ಟೃ ಶ್ರೋತೃ ಮಂತೃ ಅಥವಾ ಜ್ಞಾತೃವಾಗಿರುವಂಥಾದ್ದು ಇಲ್ಲವೆಂದು ಅರ್ಥ.

'ಏತಸ್ಮಿನ್ ಅಕ್ಷರೇ' - ಹೀಗಿರುವ ಅಕ್ಷರಶಬ್ದವಾಚ್ಯನಾದ ಬ್ರಹ್ಮನಲ್ಲಿ 'ದೀಪ್ತಿ' ಎಂಬ ಪ್ರವೃತ್ತಿನಿಮಿತ್ತವಿದ್ದ ಕಾರಣ ಆಕಾಶಪದದಿಂದ ಹೇಳಲ್ಪಡುವ ಶ್ರೀತತ್ತ್ವವು 'ಓತಶ್ಚ ಪ್ರೋತಶ್ಚ' ಆ ಬ್ರಹ್ಮನಲ್ಲಿ ಹಾಸುಹೊಕ್ಕಾಗಿ ಆಶ್ರಯಿಸಿ ಕೊಂಡಿದೆ. ತಥಾ ಚ – ಸರ್ವರೀತಿಯಿಂದಲೂ ಆಶ್ರಯಿಸಿಕೊಂಡಿರುವುದಷ್ಟೇ ಎಂದು ಅರ್ಥ. 'ಗಾರ್ಗಿ'

ಎನ್ನುವ ಪದ ಯಾಜ್ಞವಲ್ಕ್ಯರು ಮಾಡುವ ತಮ್ಮ ಪತ್ನಿಯನ್ನು ಕುರಿತಾದ ಸಂಬೋಧನೆಯಾಗಿದೆ. 'ಏತಸ್ಯ ವಾ ಅಕ್ಷರಸ್ಯ' - ಈ ಅಕ್ಷರನೆನಿಸಿದ ವಿಷ್ಣುವಿನ, 'ಪ್ರಶಾಸನೇ' ಆಜ್ಞೆಯಲ್ಲಿ - 'ಇಲ್ಲಿ ಸಪ್ತಮೀ ವಿಭಕ್ತಿಯು ನಿಮಿತ್ತಾರ್ಥಕವಾಗಿದೆ'. ತಥಾ ಚ – ಕೇವಲ ಆಜ್ಞೆಯಿಂದ 'ಸೂರ್ಯಾಚಂದ್ರಮಸೌ' - ಅಂದರೆ ಬ್ರಹ್ಮ ಮತ್ತು ರುದ್ರರು 'ಕೇಶೌ ಸೂರ್ಯವಿಧೂ ಮತೌ' - ಬ್ರಹ್ಮ ಮತ್ತು ರುದ್ರರು ಸೂರ್ಯ ಚಂದ್ರ ಶಬ್ದವಾಚ್ಯರು ಎಂದು ತಿಳಿಯಬೇಕು - ಎಂದು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿರುವಂತೆ, ತತ್ವಪ್ರಕಾಶಿಕಾ ರೀತ್ಯಾ ಪ್ರಸಿದ್ಧಸೂರ್ಯಚಂದ್ರರು ಕೂಡ 'ವಿಧೃತೌ' ವಿಶೇಷವಾಗಿ ಧರಿಸಲ್ಪಟ್ಟಿದ್ದಾರೆ. ಪೂರ್ವಪಕ್ಷಿಯಾದರೋ ಇಲ್ಲಿ ಅಕ್ಷರಶಬ್ದವು ಶ್ರೀತತ್ತ್ವಪರವೆಂದು ಭಾವಿಸುತ್ತಾನೆ. ಅವನ ಪಕ್ಷದ ಪ್ರಕಾರ (ಪೂರ್ವಪಕ್ಷದ ಪ್ರಕಾರ) ಇಲ್ಲಿರುವ ಆಕಾಶ-ಶಬ್ದವು ಪ್ರಕೃತಿಗಿಂತ ಭಿನ್ನವಾದ ಆದರೆ ಪ್ರಕೃತಿಯಿಂದ ಪೋಷಿಸಲ್ಪಡುವ ಆಕಾಶವನ್ನು ಹೇಳುವ ತಾತ್ಪರ್ಯವುಳ್ಳದ್ದು.

ಭಾ.ದೀ.– ಅಹಮ್ 'ಆಹನಸಂ' ಸ್ವಾಭಿಮನ್ಯಮಾನಲತಾದ್ವಾರಾ ಯಜ್ಞೇಷು ಅಭಿಷೂಯಮಾಣಂ 'ಸೋಮಂ' ಸೋಮಲತಾಭಿಮಾನಿನಂ ಚಂದ್ರಂ ತ್ವಷ್ಟಾರಂ ಚ 'ಉತ ಪೂಷಣಂ' – ಪೂಷಣಂ ಚ ಭಗಂ ಚ 'ಬಿಭರ್ಮಿ' ದಧಾಮಿ ಇತ್ಯಂಭ್ರಿಣೀವಾಕ್ಯಸ್ಯಾರ್ಥಃ । ತ್ವಷ್ಟ್ರಾದಯಸ್ತು ಸೂರ್ಯಪ್ರಭೇದಾಃ । ತತ್ತ್ವ-ಪ್ರದೀಪಸತ್ತರ್ಕದೀಪಾವಲ್ಯೋಸ್ತು ಬೃಹದ್ಭಾಷ್ಯಾನುಸಾರೇಣ 'ಸೋಮಮ್' ಉಮಯಾ ಸಹಿತಮ್ 'ಆಹನಸಮ್' ಆಸಮಂತಾದ್ ಹಂತಾರಂ ಸಂಹರ್ತಾರಂ ರುದ್ರಂ ಬಿಭರ್ಮಿ – ಇತಿ ವ್ಯಾಖ್ಯಾತಮ್ ।

ಅನು– ಅಹಮ್ - ನಾನು 'ಆಹನಸಂ' ನನ್ನಿಂದ ಅಭಿಮನ್ಯಮಾನವಾದ ಲತೆಯ ಮೂಲಕ ಯಜ್ಞಗಳಲ್ಲಿ ಹಿಂಡಲ್ಪಡುವ 'ಸೋಮಂ' ಸೋಮಲತೆಗೆ ಅಭಿಮಾನಿಯಾದ ಚಂದ್ರನನ್ನೂ, ಹಾಗೂ ತ್ವಷ್ಟೃವನ್ನೂ 'ಉತ ಪೂಷಣಂ' ಪೂಷಣನನ್ನೂ ಹಾಗೂ ಭಗನನ್ನೂ 'ಬಿಭರ್ಮಿ' - ಪೋಷಿಸುತ್ತಿದ್ದೇನೆ ಎಂದು ಅಂಭ್ರಣೀಸೂಕ್ತದ ವಾಕ್ಯದ ಅರ್ಥವಾಗಿದೆ. ತ್ವಷ್ಟೃ ಮೊದಲಾದವರು ಸೂರ್ಯಪ್ರಭೇದಗಳಾಗಿದ್ದಾರೆ. ತತ್ತ್ವ-ಪ್ರದೀಪ ಮತ್ತು ಸತ್ತರ್ಕದೀಪಾವಳಿಗಳಲ್ಲಾದರೋ ಬೃಹದಾರಣ್ಯಕಭಾಷ್ಯಕ್ಕೆ ಅನುಸಾರ-

ವಾಗಿ ಸೋಮಂ ಅಂದರೆ 'ಉಮಾದೇವಿಯಿಂದ ಸಹಿತನಾದ' 'ಆಹನಸಮ್' ಆ ಎಂದರೆ ಚೆನ್ನಾಗಿ 'ಹಂತಾರಂ' ಸಂಹಾರಕನಾದ ರುದ್ರನನ್ನು ಪೋಷಿಸುವೆನು ಎಂದು ವ್ಯಾಖ್ಯಾನ ಮಾಡಲ್ಪಟ್ಟಿದೆ.

ಭಾ.ದೀ.– 'ಅಕ್ಷರಂ' ದೇಹತೋಽಪ್ಯವಿನಾಶಿ, 'ಅನಿರ್ದೇಶ್ಯಂ' ಶಬ್ದಾಗೋಚರಂ, 'ಸರ್ವತ್ರಗಂ' ದೇಶತೋ ವ್ಯಾಪ್ತಮ್, 'ಅಚಿಂತ್ಯಂ' ಮನಸಾಽಗ್ರಾಹ್ಯಂ, ಗುಣಬಾಹುಲ್ಯಾತ್, ಕೂಟೇ ಆಕಾಶೇಽಭಿಮಾನಿತ್ವೇನ ತಿಷ್ಠತೀತಿ 'ಕೂಟಸ್ಥಮ್', 'ಅಚಲಂ' ಕದಾಽಪಿ ಸ್ವಪದಾದಭ್ರಷ್ಟಂ 'ಧ್ರುವಮ್' ಉತ್ಪತ್ತಿವಿನಾಶಶೂನ್ಯಮ್, 'ಅವ್ಯಕ್ತಂ' ಶ್ರೀತತ್ತ್ವಂ ಯೇ ಪರ್ಯುಪಾಸತೇ ಇತಿ ಗೀತಾರ್ಥಃ

ಪ್ರಲಯೇ 'ಅಭೂತಮ್' ಅಜಾತಮ್ 'ಅಪ್ರಜ್ಞಾತಂ' ಪ್ರತ್ಯಕ್ಷಾವೇದ್ಯಮ್ ಅವೇದ್ಯಲಕ್ಷಣತ್ವಾದ್ ಅಲಕ್ಷಣಮ್ ಅತ ಏವ 'ಅತರ್ಕ್ಯಮ್' ಅನುಮಾನಾವೇದ್ಯಮ್ 'ಅವಿಜ್ಞೇಯಮ್' ಆಗಮಾವೇದ್ಯಮ್ ಅನಾದ್ಯವಿದ್ಯಾಭಿಮಾನಿತ್ವಾತ್, ತಮಃಶಬ್ದವಾಚ್ಯಮಿದಂ ಲಕ್ಷ್ಮ್ಯಾಖ್ಯಂ ತತ್ತ್ವಂ 'ಪ್ರಸುಪ್ತಮಿವ' ನಿರ್ವ್ಯಾಪಾರಂ 'ಸರ್ವತಃ' ಸರ್ವತ್ರಾಽಸೀತ್ – ಇತಿ ಸ್ಮೃತ್ಯರ್ಥಃ।

ಅನು–'ಅಕ್ಷರಂ' ದೇಹದಿಂದಲೂ ವಿನಾಶವನ್ನು ಹೊಂದದ, 'ಅನಿರ್ದೇಶ್ಯಮ್' ಶಬ್ದಕ್ಕೆ ಗೋಚರನಲ್ಲದ, 'ಸರ್ವತ್ರಗಂ' - ದೇಶತಃ ವ್ಯಾಪ್ತನಾದ, ಬಹಳವಾದ ಗುಣಗಳನ್ನು ಹೊಂದಿರುವುದರಿಂದ 'ಅಚಿಂತ್ಯಂ' - ಮನಸ್ಸಿನಿಂದ ಗ್ರಹಿಸಲು ಅಶಕ್ಯನಾದ, 'ಕೂಟೇ' - ಆಕಾಶದಲ್ಲಿ 'ತಿಷ್ಠತಿ' ಅದಕ್ಕೆ ಅಭಿಮಾನಿಯಾಗಿ ಇರುವುದರಿಂದ 'ಕೂಟಸ್ಥ'ವೆಂದೆನಿಸುವ, 'ಅಚಲಂ' ಎಂದೂ (ಯಾವ ಸಂದರ್ಭದಲ್ಲೂ) ತನ್ನ ಪದದಿಂದ ಭ್ರಷ್ಟವಾಗದಿರುವ 'ಧ್ರುವಮ್' ಉತ್ಪತ್ತಿವಿನಾಶರಹಿತವಾದ, 'ಅವ್ಯಕ್ತಂ' ಶ್ರೀತತ್ತ್ವವನ್ನು ಯಾರು ಉಪಾಸನೆ ಮಾಡುವರೋ ಎಂದು ಗೀತಾಶ್ಲೋಕದ ಅರ್ಥ.

ಪ್ರಲಯಕಾಲದಲ್ಲಿ 'ಅಭೂತಮ್' ಜನನವಿಲ್ಲದಿರುವ, 'ಅಪ್ರಜ್ಞಾತಂ' - ಪ್ರತ್ಯಕ್ಷಕ್ಕೆ ಗೋಚರನಲ್ಲದ, ಅವೇದ್ಯವಾದ ಲಕ್ಷಣವಿರುವ ಕಾರಣ 'ಅಲಕ್ಷಣ'ನೆಂದೆನಿಸುವ, ಆದ್ದರಿಂದಲೇ 'ಅತರ್ಕ್ಯಮ್' ಅನುಮಾನಕ್ಕೂ ವೇದ್ಯನಲ್ಲದ, 'ಅವಿಜ್ಞೇಯಮ್'

ಆಗಮದಿಂದಲೂ ಅವೇದ್ಯನಾದ, ಅನಾದಿ ಕಾಲದಿಂದಿರುವ ಅವಿದ್ಯೆಗೆ ಅಭಿಮಾನಿಯಾಗಿರುವ ತಮಃಶಬ್ದದಿಂದ ವಾಚ್ಯಳಾಗಿರುವ ಈ ಲಕ್ಷ್ಮ್ಯಾಖ್ಯ ತತ್ವವು 'ಪ್ರಸುಪ್ತಮಿವ' ಯಾವುದೇ ವ್ಯಾಪಾರವಿಲ್ಲದೇ 'ಸರ್ವತಃ' ಸರ್ವತ್ರ ಇದ್ದಿತು ಎಂದು ಸ್ಮೃತಿವಾಕ್ಯದ ಅರ್ಥವಾಗಿದೆ.

ಭಾ.ದೀ. – ಸಿದ್ಧಾಂತಯತ್ ಸೂತ್ರಮವತಾರಯತಿ – ಅತ ಇತಿ ॥

ಅನು– ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ''ಅತಃ'' ಎಂದು ಅವತಾರಿಕೆ ಕೊಡುತ್ತಿದ್ದಾರೆ.

**ಭಾಷ್ಯಮ್– ಅತೋ ಬ್ರೂತೇ–**

**ಸೂತ್ರಮ್ – ಓಂ॥ ಅಕ್ಷರಮಂಬರಾಂತಧೃತೇಃ ॥ ಓಂ ॥೧೦ ॥**

**'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ'** (ಬೃ. ೫-೮-೧೧)

**ಇತ್ಯಂಬರಾಂತಸ್ಯ ಸರ್ವಸ್ಯ ಧೃತೇರ್ಬ್ರಹ್ಮೈವ ಅಕ್ಷರಮ್ ।**

ಈ ಪೂರ್ವಪಕ್ಷವನ್ನು ನಿರಾಕರಿಸಲು ಸೂತ್ರಕಾರರು 'ಅಕ್ಷರಮ್ ಅಂಬರಾಂತಧೃತೇಃ' ಎಂದು ಹೇಳುತ್ತಿದ್ದಾರೆ. 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂದು ಆಕಾಶದಲ್ಲಿ ಕೊನೆಗೊಳ್ಳುವ ಸರ್ವವನ್ನೂ ಧರಿಸುವುದರಿಂದ ಅಕ್ಷರಶಬ್ದವಾಚ್ಯನು ಬ್ರಹ್ಮನೇ ಆಗಿರುವನು.

ಭಾ.ದೀ. – ಸೂತ್ರೇ ಗಹನಾರ್ಥತ್ವಾತ್ ಪ್ರಥಮಂ ಹೇತುಭಾಗಂ ವ್ಯಾಕರಿಷ್ಯಮಾಣೋಽಸಿದ್ಧಿಪರಿಹಾರಾಯ ಶ್ರುತಿಮುದಾಹರತಿ – ಏತಸ್ಮಿನ್ನಿತಿ ॥ 'ಇತಿ' ಇತ್ಯನಂತರಂ 'ವಾಕ್ಯೇ' ಇತಿ ಶೇಷಃ । ಅನ್ಯಪದಾರ್ಥಂ ದರ್ಶಯನ್ ವಿಗ್ರಹಂ ದರ್ಶಯತಿ – ಅಂಬರೇತಿ ॥ ಅಂಬರಮ್ ಆಕಾಶಃ ಅಂತೋ ಯಸ್ಯ ಸರ್ವಸ್ಯ ಪೃಥಿವ್ಯಾದೇರ್ಧಾರಕತ್ವೋಕ್ತೇರಿತ್ಯರ್ಥಃ । ಯದ್ಯಪಿ 'ಏತಸ್ಮಿನ್' ಇತಿ ವಾಕ್ಯೇಽಂಬರ

-ಧೃತಿರೇವ ಉಚ್ಯತೇ । ನ ತು ತದಂತಸರ್ವಧೃತಿಃ । ತಥಾऽಪಿ 'ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ... ಆಕಾಶ ಏವ ತದೋತಂ ಚ ಪ್ರೋತಂ ಚ' (ಬೃ.೫-೮-೭) ಇತ್ಯನೇನಾऽಕಾಶಸ್ಯ ಚಿತ್ಪ್ರಕೃತೇಃ ಸರ್ವಾಧಾರತ್ವಮುಕ್ತ್ವಾ ಅನಂತರಮ್ 'ಏತಸ್ಮಿನ್' ಇತಿ ವಾಕ್ಯೇ ಅಕ್ಷರಸ್ಯ ತಾದೃಶಪ್ರಕೃತ್ಯಾಧಾರತ್ವೋಕ್ತೇಃ ಪ್ರಕೃತಿದ್ವಾರಾ ಅಕ್ಷರಸ್ಯ ಅಂಬರಾಂತಸರ್ವಾ-ಧಾರತ್ವಮತ್ರೋಕ್ತಮೇವ ಇತಿ ನ ದೋಷಃ । ಏತಚ್ಚ ಸೂತ್ರೇ ಅಂಬರಾಂತೇತಿ ಅಂತಪದಪ್ರಯೋಗಾತ್ ಸೂಚಿತಮ್ । ಸೂತ್ರೇ 'ತತ್ ತು' ಇತ್ಯನುವೃತ್ತಪದ-ದ್ವಯೋಪೇತಪ್ರತಿಜ್ಞಾಭಾಗಂ ವ್ಯಾಖ್ಯಾತಿ – ಬ್ರಹ್ಮೈವೇತಿ ॥ 'ಅಕ್ಷರಂ ಬ್ರಹ್ಮೈವ' ಇತ್ಯನ್ವಯಃ।

ಅನೇನ ಅಕ್ಷರಸ್ಯ 'ಏತಸ್ಮಿನ್' ಇತಿ ಪ್ರಕೃತಿದ್ವಾರಾ ಆಕಾಶಾಂತಸರ್ವಾಧಾರತ್ವ-ಶ್ರುತೇಃ 'ಅಕ್ಷರಂ ಬ್ರಹ್ಮೈವ' ಇತಿ ಸೂತ್ರಾರ್ಥ ಉಕ್ತೋ ಭವತಿ ॥

ಅನು– ಸೂತ್ರದಲ್ಲಿ ಗಹನವಾದ ಅರ್ಥವನ್ನು ಹೊಂದಿರುವುದರಿಂದ ಮೊದಲು ಹೇತುಭಾಗವನ್ನು ವ್ಯಾಖ್ಯಾನ ಮಾಡುವ ಭಾಷ್ಯಕಾರರು ಆ ಹೇತುವಿಗೆ ಅಸಿದ್ಧಿದೋಷ-ವನ್ನು ಪರಿಹರಿಸಲು ''ಏತಸ್ಮಿನ್'' ಎಂದು ಶ್ರುತಿಯನ್ನು ಉದಾಹರಿಸುತ್ತಿದ್ದಾರೆ. 'ಇತ್ಯಂಬರಾಂತಸ್ಯ' ಎಂಬಲ್ಲಿರುವ 'ಇತಿ' ಶಬ್ದದ ಅನಂತರದಲ್ಲಿ 'ವಾಕ್ಯೇ' ಎಂಬ ಪದವು ಶೇಷವಾಗಿದೆ. (ಅಂಬರಾಂತ ಎಂಬ ಬಹುವ್ರೀಹಿಸಮಾಸದ ವಿಗ್ರಹದಲ್ಲಿ) ಅನ್ಯಪದದ ಅರ್ಥವನ್ನು ತೋರಿಸುತ್ತಾ ವಿಗ್ರಹವನ್ನು 'ಅಂಬರ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಅಂಬರಂ' ಎಂದರೆ ಆಕಾಶವು ಯಾವುದಕ್ಕೆ ಅಂತಃ- ಕೊನೆ-ಯಾಗಿರುವುದೋ ಅಂತಹ ಲಕ್ಷ್ಮೀ ಮೊದಲಾದ ಎಲ್ಲ ಪದಾರ್ಥಗಳಿಗೂ ಧಾರಕ ಎಂದು ಹೇಳಿರುವುದರಿಂದ ಎಂದು ಅರ್ಥ. ಯದ್ಯಪಿ 'ಏತಸ್ಮಿನ್' ಎಂಬ ವಾಕ್ಯದಲ್ಲಿ ಅಂಬರಧಾರಕತ್ವವನ್ನು ಮಾತ್ರ ಹೇಳಲಾಗಿದೆ. ಹೊರತು ಅದನ್ನೇ ಕೊನೆಯಾಗುಳ್ಳ ಎಲ್ಲದರ ಧಾರಕತ್ವವನ್ನು ಹೇಳಿಲ್ಲ. ಆದರೂ 'ಯದೂರ್ಧ್ವಂ ... ' (ಬೃ.೫-೮-೭) ಎಂಬ ವಾಕ್ಯದಿಂದ ಆಕಾಶಶಬ್ದವಾಚ್ಯಳಾದ ಚೇತನಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ

ಅನಂತರ 'ಏತಸ್ಮಿನ್' ಎಂಬ ವಾಕ್ಯದಲ್ಲಿ ಅಕ್ಷರನಿಗೆ ಅಂತಹ- ಚೇತನಪ್ರಕೃತ್ಯಾ-ಧಾರತ್ವವನ್ನು ಹೇಳಿರುವುದರಿಂದ ಪ್ರಕೃತಿಯ ದ್ವಾರಾ ಅಕ್ಷರನಿಗೆ ಅಂಬರಾಂತಸರ್ವಾ-ಧಾರತ್ವವನ್ನು ಇಲ್ಲಿ ನಿಶ್ಚಿತವಾಗಿ ಹೇಳಲಾಗಿದೆಯಾದ್ದರಿಂದ ದೋಷವಿಲ್ಲ. ಈ ಅಂಶವು ಸೂತ್ರದಲ್ಲಿ 'ಅಂಬರಾಂತ' ಎಂದು ಅಂತಪದವನ್ನು ಪ್ರಯೋಗಿಸುವುದರಿಂದ ಸೂಚಿತ-ವಾಗಿದೆ. ಸೂತ್ರದಲ್ಲಿ 'ತತ್,ತು' ಎಂದು ಅನುವೃತ್ತಿಯನ್ನು ಹೊಂದಿರುವ ಎರಡು ಪದಗಳನ್ನು ಹೊಂದಿರುವ ಪ್ರತಿಜ್ಞಾಭಾಗವನ್ನು 'ಬ್ರಹ್ಮೈವ' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅಕ್ಷರಂ ಬ್ರಹ್ಮೈವ' - ಅಕ್ಷರವು ಬ್ರಹ್ಮನೇ ಆಗಿದೆ ಎಂದು ಅನ್ವಯ.

ಇದರಿಂದ – ಅಕ್ಷರನಿಗೆ 'ಏತಸ್ಮಿನ್' ಎಂಬುದಾಗಿ ಚಿತ್‌ಪ್ರಕೃತಿಯ ಮೂಲಕ ಆಕಾಶಾಂತ ಸರ್ವಾಧಾರತ್ವವು ಶ್ರುತವಾಗಿರುವುದರಿಂದ ಅಕ್ಷರನು ಬ್ರಹ್ಮನೇ ಆಗಿರು-ವನು ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ.– ಸರ್ವಾಧಾರತ್ವಂ ಕುತೋ ವಿಷ್ಣುತ್ವನಿಶ್ಚಾಯಕಮ್? ಇತ್ಯತಃ ತಸ್ಯ ವಿಷ್ಣುಲಿಂಗತ್ವೇನ ಶ್ರುತಿಸಿದ್ಧತ್ವಾದಿತ್ಯಾಹ – ಯ ಇತಿ ॥

ಅನು– ಸರ್ವಾಧಾರತ್ವವು ಅಕ್ಷರನು ವಿಷ್ಣುವೆಂದು ನಿಶ್ಚಯಿಸಲು ಹೇಗೆ ಕಾರಣವಾಗುವುದು? ಎಂಬ ಶಂಕೆಗೆ ಉತ್ತರವಾಗಿ ಆ ಧರ್ಮವು ವಿಷ್ಣುಲಿಂಗವೆಂದು ಶ್ರುತಿಸಿದ್ಧವಾದುದರಿಂದ ಎಂದು ಉತ್ತರವನ್ನು ''ಯ'' ಎಂಬ ವಾಕ್ಯದಿಂದ ಭಾಷ್ಯಕಾರರು ಹೇಳುತ್ತಿದ್ದಾರೆ.

**ಭಾಷ್ಯಮ್ – 'ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ**

**ದಾಧಾರ ಭುವನಾನಿ ವಿಶ್ವಾ'** (ಋ.೧.೧೫೪.೪)

ಭಾ.ದೀ. – ವ್ಯಾಖ್ಯಾತೇಯಂ ಶ್ರುತಿರ್ಜನ್ಮನಯೇ।

ಜನ್ಮಾಧಿಕರಣದಲ್ಲಿ ಈ ಶ್ರುತಿಯನ್ನು ವ್ಯಾಖ್ಯಾನ ಮಾಡಲಾಗಿದೆ. (ಭಾ.ದೀ. ಕನ್ನಡಾನುವಾದ ೧ಸಂಪುಟ ಪು.೨೦೩)

**ಭಾಷ್ಯಮ್ – 'ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ । ಏಕೋ ದೇವೋ ಬಹುಧಾ ನಿವಿಷ್ಟಃ । ಯದಾ ಭಾರಂ ತಂದ್ರಯತೇ ಸ ಭರ್ತುಮ್ । ಪರಾಽಸ್ಯ ಭಾರಂ ಪುನರಸ್ತಮೇತಿ' ।– (ತೈ.ಆ. ೩-೧೪)**

ಭಾ.ದೀ. – 'ಭರ್ತಾ ಸನ್' ಇತಿ ತೈತ್ತಿರೀಯಾಣಾಂ ಶ್ರುತಿಃ । 'ದೇವಃ' ಪ್ರಾಣಾಖ್ಯೋ ಭಗವಾನ್ ಸ್ವಯಂ ಜಗತಾ ಜೀವೇನ ವಾ ಹೃದಿ ಭ್ರಿಯಮಾಣಃ ತತ್ 'ಬಿಭರ್ತಿ' ಧತ್ತೇ ಪುಷ್ಣಾತಿ ಚ । ತರ್ಹಿ ಜಗದೀಶಯೋಃ ಸಾಮ್ಯಾಪತ್ತಿರಿತ್ಯತ ಆಹ – ಭರ್ತಾ ಸನ್ನಿತಿ ॥ ಜಗತೋ ಮೂಲಭರ್ತಾ ಸನ್ನೇವ ಭ್ರಿಯಮಾಣಃ ನ ಸ್ವಕೀಯಸ್ಥಿತ್ಯೈ ಇತ್ಯರ್ಥಃ ।

ನನ್ವೇಕಸ್ಯೈವ ಭಗವತಃ 'ಭರ್ತಾ ಭ್ರಿಯಮಾಣಃ ಬಿಭರ್ತಿ' ಇತ್ಯನೇಕವಿಧ-ವ್ಯವಹಾರವಿಷಯತ್ವಂ ಕಥಮ್? ಇತ್ಯತ ಆಹ – ಏಕೋ (ದೇವೋ) ಬಹುಧಾ ಇತಿ ॥ ಏಕೋಽಪಿ ಭರ್ತೃತ್ವಾದಿನಾ 'ಬಹುಧಾ' ಬಹುರೂಪೇಣ ಚ 'ನಿವಿಷ್ಟೋ' ವ್ಯಾಪ್ತ ಇತ್ಯರ್ಥಃ । 'ತತ್ರ ಪ್ರವಿಷ್ಟ' ಇತಿ ವಾ । 'ಯದಾ ಭಾರಂ ತಂದ್ರಯತೇ ಸ ಭರ್ತುಂ ಪರಾಸ್ಯ ಭಾರಂ ಪುನರಸ್ತಮೇತಿ' ಇತಿ ವಾಕ್ಯಶೇಷಃ । 'ಸಃ' ವಿಷ್ಣುರ್ಯದಾ ತಂ ಜಗದ್ಭಾರಂ 'ಪರಾಸ್ಯ' ಅಧೋ ನಿಧಾಯ ಪುನರ್ಭರ್ತುಂ 'ತಂದ್ರಯತೇ' ನೇಚ್ಛತಿ ತದಾ ಅಸೌ ಭಾರಃ 'ಅಸ್ತಮೇತಿ' ನಶ್ಯತೀತ್ಯರ್ಥಃ ।

'ಭರ್ತಾ ಸನ್' ಎನ್ನುವುದು ತೈತ್ತಿರೀಯದ ಶ್ರುತಿಯಾಗಿದೆ. 'ದೇವಃ' ಪ್ರಾಣ-ನಾಮಕನಾದ ಭಗವಂತನು ತಾನು ಜಗತ್ತಿನಿಂದ ಅಥವಾ ಜೀವನಿಂದ ಹೃದಯದಲ್ಲಿ 'ಭ್ರಿಯಮಾಣಃ' - ಧರಿಸಲ್ಪಟ್ಟವನಾಗಿ ಆ ಜಗತ್ತನ್ನು ಬಿಭರ್ತಿ -. ಧರಿಸುತ್ತಾನೆ ಮತ್ತು ಪೋಷಿಸುತ್ತಾನೆ. ಹಾಗಾದಪಕ್ಷದಲ್ಲಿ ಜಗತ್ತಿಗೂ ಮತ್ತು ಈಶನಿಗೂ ಸಾಮ್ಯವಿರ-ಬೇಕಾದೀತು? ಎಂಬ ಶಂಕೆಗೆ ಉತ್ತರವಾಗಿ ಶ್ರುತಿಯಲ್ಲಿ 'ಭರ್ತಾ ಸನ್' ಎಂದು ಹೇಳಿರುವರು. ಜಗತ್ತಿಗೆ ಮೂಲ ಭರ್ತೃವಾಗಿಯೇ ಆದರಿಂದ ಧರಿಸಲ್ಪಟ್ಟಿದ್ದಾನೆ ಹೊರತು ತನ್ನ ಇರುವಿಕೆಗೋಸ್ಕರವಾಗಿ ಅಲ್ಲ ಎಂದು ಅರ್ಥ.

ಒಬ್ಬನೇ ಭಗವಂತನು 'ಭರ್ತಾ' ಧಾರಕನು 'ಭ್ರಿಯಮಾಣಃ' - ಧರಿಸಲ್ಪಟ್ಟಿರುವವನು 'ಬಿಭರ್ತಿ' ಧರಿಸುವವನು ಹೀಗೆ ಅನೇಕ ವಿಧವಾಗಿ ವ್ಯವಹಾರವಿಷಯನಾಗಿರುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ "ಏಕೋ ಬಹುಧಾ" ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಒಬ್ಬನೇ ಆಗಿದ್ದರೂ ಭರ್ತೃತ್ವ ಮೊದಲಾದ ಅನೇಕ ಧರ್ಮಗಳನ್ನು 'ಬಹುಧಾ' - ಬಹು ರೂಪಗಳಿಂದಲೂ ಕೂಡ 'ನಿವಿಷ್ಟಃ' ವ್ಯಾಪ್ತನಾಗಿದ್ದಾನೆ ಎಂದು ಅರ್ಥ. ಅಥವಾ ಅದನ್ನು ಪ್ರವೇಶಿಸಿದ್ದಾನೆ ಎಂದು ಅರ್ಥ. 'ಯದಾ ಭಾರಂ ತಂದ್ರಯತೇ ಸ ಭರ್ತುಂ ...' ಎಂದು ಶ್ರುತಿಯಲ್ಲಿ ವಾಕ್ಯಶೇಷವಿದೆ. 'ಸಃ' ಆ ವಿಷ್ಣುವು 'ಯದಾ ಭಾರಂ' ಯಾವಾಗ ಆ ಜಗತ್ತಿನ ಭಾರವನ್ನು ಕೆಳಗಿಳಿಸಿ ಪುನಃ ಅದನ್ನು ಧರಿಸಲು 'ತಂದ್ರಯತೇ' - ಇಚ್ಛಿಸುವುದಿಲ್ಲವೋ ಆಗ ಆ ಭಾರವು 'ಅಸ್ತಮ್ ಏತಿ' ನಾಶವನ್ನು ಹೊಂದುತ್ತದೆ ಎಂದು ಅರ್ಥ.

**ಭಾಷ್ಯಮ್ – 'ಯಸ್ಮಿನ್ನಿದಂ ಸಂಚ ವಿ ಚೈಧಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ'(ಮಹಾನಾ.೧-೨) ಇತ್ಯಾದಿ ಶ್ರುತೇಃ ।**

'ಯಸ್ಮಿನ್ನಿದಂ ಸಂಚ ವಿ ಚೈಧಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ' ಇತ್ಯಾದಿ ಶ್ರುತಿಗಳಿಂದ ಆಕಾಶಾಂತವಾದ ಸರ್ವಲೋಕಕ್ಕೆ ಆಧಾರನಾದುದರಿಂದ ಅಕ್ಷರವು ಬ್ರಹ್ಮನೇ.

ಭಾ.ದೀ. – 'ಯಸ್ಮಿನ್' ಇತ್ಯಪಿ ತೈತ್ತಿರೀಯೇಽನ್ಯದ್ ವಾಕ್ಯಮ್ । ಅತ್ರ ಯಚ್ಛಬ್ದಸ್ಯ 'ತದೇವ ಬ್ರಹ್ಮ ಪರಮಮ್' (ಮಹಾನಾ.೧.೬) ಇತ್ಯುತ್ತರವಾಕ್ಯಸ್ಥತಚ್ಛಬ್ದೇನಾನ್ವಯಃ । 'ಚೌ' ಪ್ರಕಾರಸಮುಚ್ಚಯೇ । ತಥಾ ಚ – 'ಯಸ್ಮಿನ್ನಿದಂ' ಸರ್ವಂ ಜಗತ್ 'ಸಂ' -ಸಮ್ಯಕ್ 'ವಿ' ವಿವಿಧಂ 'ಚೈಧಿ' ಅವರ್ಧತ। ಏಧತೇರ್ಲಿಙಿ ಛಾಂದಸಂ ರೂಪಮೇತತ್। ಯದ್ವಾ ಏಧಿ – ವರ್ಧತೇ। 'ಅಸ್ತಿ' ಇತಿ ವಾಽರ್ಥಃ। ಅಸ್ಮಿನ್ ಪಕ್ಷೇ ಅಸ್ತೇರ್ಲಟಿ ಮಧ್ಯಮಪುರುಷೈಕವಚನೇ ಛಾಂದಸಂ ರೂಪಮ್ । ವಸ್ತುತೋ ಲೋಟಿ ಮಧ್ಯಪುರುಷೈಕವಚನೇ ರೂಪಮೇತತ್ । ಯಸ್ಮಿಂಶ್ಚ 'ವಿಶ್ವೇ' ಸರ್ವೇ ದೇವಾಃ 'ಅಧಿನಿಷೇದುಃ' ಯಮಧ್ಯುಗುಸ್ತದೇವ ಬ್ರಹ್ಮ ಇತ್ಯರ್ಥಃ। 'ಇತ್ಯಾ-

ದಿಶ್ರುತೇಃ' ಇತ್ಯಸ್ಯ 'ಅಂಬರಾಂತಧೃತೇಃ' ಇತ್ಯನೇನಾನ್ವಯಃ। 'ಬ್ರಹ್ಮಣ್ಯವಗತಾಯಾ' ಇತಿ ಶೇಷಃ। ತೃತೀಯಾರ್ಥೇ ಪಂಚಮೀ।

ಆದಿಶಬ್ದೇನ 'ಯೇನಾಽವೃತಂ ಖಂ ಚ ದಿವಂ ಮಹೀಂ ಚ ಯೇನಾಽ-ದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ' (ಮಹಾ.ನಾ.೧-೩) ಇತ್ಯಾದಿಕಮ್, 'ತಮೇವ ಮೃತ್ಯುಮಮೃತಂ ತಮಾಹುಸ್ತಂ ಭರ್ತಾರಂ ತಮು ಗೋಪ್ತಾರಮಾಹುಃ' (ತೈ.ಆ. ೩-೧೪) ಇತ್ಯಾದಿ ಚ ಗೃಹ್ಯತೇ । ತಥಾ ಚ ವಿಷ್ಣುಲಿಂಗತ್ವೇನ ಶ್ರುತಿಸಿದ್ಧಾತ್ ಸರ್ವಾಧಾರಣಾದ್ ವಿಷ್ಣುತ್ವನಿಶ್ಚಯೋ ಭವತ್ಯೇವ ಇತಿ ಭಾವಃ।

'ಯಸ್ಮಿನ್' ಎಂಬ ಶ್ರುತಿಯೂ ಕೂಡ ತೈತ್ತಿರೀಯದಲ್ಲಿರುವ ಇನ್ನೊಂದು ವಾಕ್ಯ-ವಾಗಿದೆ. ಈ ಶ್ರುತಿಯಲ್ಲಿ 'ಯತ್' ಶಬ್ದಕ್ಕೆ 'ತದೇವ ಬ್ರಹ್ಮ ಪರಮಂ' (ಮಹಾ.ನಾ. ೧.೬) ಎಂಬ ಮುಂದಿನ ವಾಕ್ಯದಲ್ಲಿರುವ 'ತತ್' ಶಬ್ದದೊಂದಿಗೆ ಅನ್ವಯವಾಗುವುದು. ಶ್ರುತಿಯಲ್ಲಿರುವ ಎರಡು ಚಶಬ್ದಗಳು ವಿಶೇಷಣಗಳ ಸಮುಚ್ಚಯವನ್ನು ಹೇಳುವುದು. ತಥಾಚ – 'ಯಸ್ಮಿನ್ನಿದಂ' - ಯಾರಲ್ಲಿ ಈ ಸರ್ವಜಗತ್ತು 'ಸಂ ವಿ ಚ' ಅಂದರೆ ಸಮ್ಯಕ್ಕಾಗಿಯೂ ವಿವಿಧವಾಗಿಯೂ 'ಏಧಿ' - ವೃದ್ಧಿಯನ್ನು ಹೊಂದಿತೋ – ಇದು ಏಧ್ ಧಾತುವಿಗೆ ಲಿಙ್ ಲಕಾರದಲ್ಲಿ ಉಂಟಾಗುವ ಛಾಂದಸ ರೂಪವಾಗಿದೆ. ಅಥವಾ - ಏಧಿ ಅಂದರೆ ವರ್ಧತೇ - ವೃದ್ಧಿಯನ್ನು ಪಡೆದಿದೆ. ಎಂದಾಗಲಿ ಅಥವಾ 'ಅಸ್ತಿ' - ಇದೆ ಎಂದಾಗಲೀ ಅರ್ಥ. ಈ ಕೊನೆಯ ಪಕ್ಷದ ಪ್ರಕಾರ ಈ ಶಬ್ದವು ಅಸ್ ಧಾತುವಿನ ಲಟ್ ಲಕಾರದಲ್ಲಿ ಮಧ್ಯಮಪುರುಷ ಏಕವಚನದಲ್ಲಿ ಛಾಂದಸರೂಪವಾಗಿದೆ. ವಾಸ್ತವಿಕವಾಗಿ 'ಅಸ್'ಧಾತುವಿಗೆ ಲೋಟ್ ಲಕಾರದಲ್ಲಿ ಮಧ್ಯಮಪುರುಷ ಏಕ-ವಚನದಲ್ಲಿ ಈ ರೂಪವಿರುವುದು. ಯಸ್ಮಿಂಶ್ಚ - ಮತ್ತು ಯಾರಲ್ಲಿ 'ವಿಶ್ವೇ (ದೇವಾಃ)' - ಎಲ್ಲ ದೇವತೆಗಳೂ, 'ಅಧಿನಿಷೇದುಃ' ಆಶ್ರಯವನ್ನು ಹೊಂದಿರುವರೋ ಅದೇ ಬ್ರಹ್ಮ ಎಂದು ಅರ್ಥ. 'ಇತ್ಯಾದಿ ಶ್ರುತೇಃ' ಎಂಬ ಪದಕ್ಕೆ 'ಅಂಬರಾಂತಧೃತೇಃ' ಎಂಬ ಪದದೊಂದಿಗೆ ಅನ್ವಯ. 'ಬ್ರಹ್ಮಣ್ಯವಗತಾಯಾಃ' - 'ಬ್ರಹ್ಮನಲ್ಲಿ ಇರುವುದೆಂದು ತಿಳಿದಿರುವ' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ಶ್ರುತೇಃ' ಎಂಬಲ್ಲಿರುವ ಪಂಚಮೀ ತೃತೀಯಾವಿಭಕ್ತ್ಯರ್ಥವನ್ನು ಹೇಳುವುದು.

ಇತ್ಯಾದಿ ಎಂಬಲ್ಲಿರುವ ಆದಿಶಬ್ದದಿಂದ 'ಯೇನಾಽವೃತಂ ಖಂ ಚ ದಿವಂ .....' ಇತ್ಯಾದಿ ವಾಕ್ಯಗಳು, ಹಾಗೂ 'ತಮೇವ ಮೃತ್ಯುಮಮೃತಂ ತಮಾಹುಃ ತಂ ಭರ್ತಾರಂ ತಮು ಗೋಪ್ತಾರಮಾಹುಃ' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ.

ತಥಾ ಚ – ವಿಷ್ಣುಲಿಂಗವೆಂದು ಶ್ರುತಿಗಳಲ್ಲಿ ಸಿದ್ಧವಾಗಿರುವ ಸರ್ವಧಾರಣವೆಂಬ ಧರ್ಮದಿಂದ ಅಕ್ಷರನು ವಿಷ್ಣುವೆಂದು ನಿಶ್ಚಯವಾಗಿಯೇ ತೀರುವುದೆಂದು ಭಾವ.

ಭಾ.ದೀ. – ವಿಷ್ಣುವದನ್ಯಸ್ಯಾಪಿ ಸರ್ವಾಧಾರತ್ವಂ ಕಿಂ ನ ಸ್ಯಾದಿತ್ಯತ ಆಹ – ಪೃಥಿವ್ಯಾದಿ ಇತಿ ॥

ವಿಷ್ಣುವಿನಲ್ಲಿರುವಂತೆ ವಿಷ್ಣುಭಿನ್ನನಿಗೂ ಸರ್ವಾಧಾರತ್ವವು ಏಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ ''ಪೃಥಿವ್ಯಾದಿ'' ಎಂಬ ಭಾಷ್ಯವಾಕ್ಯವು ಹೊರಟಿದೆ.

**ಭಾಷ್ಯ – 'ಪೃಥಿವ್ಯಾದಿಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್ ।**
**ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತೌ'**
**ಇತಿ ಚ ಸ್ಕಾಂದೇ ॥ ೧೦ ॥**

'ಪೃಥಿವಿಯನ್ನಾರಂಭಿಸಿ ಪ್ರಕೃತಿಯಲ್ಲಿ ಕೊನೆಗೊಳ್ಳುವ ಅತೀತ ಭವಿಷ್ಯತ್ ಮತ್ತು ವರ್ತಮಾನಕಾಲಕ್ಕೆ ಸೇರಿದ ಯಾವ ವಿಶ್ವ-ವಿದೆಯೋ ಅದನ್ನು ವಿಷ್ಣುವೊಬ್ಬನೇ ಧಾರಣ ಮಾಡಿದ್ದಾನೆ. ಅವ-ನಿಂದ ಭಿನ್ನನಾದ ಯಾರೂ ಈ ವಿಶ್ವದ ಧಾರಣದಲ್ಲಿ ಸಮರ್ಥ-ರಲ್ಲ'' ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

ಭಾ.ದೀ.– ಪ್ರಕೃತ್ಯಂತಪದೇನ ಸೌತ್ರಾಂತಪದಂ ವ್ಯಾಖ್ಯಾತಮ್ । 'ಭೂತಮ್ ' ಅತೀತಂ 'ಭವ್ಯಂ' - ಭವಿಷ್ಯತ್ 'ಭವತ್' ವರ್ತಮಾನಂ 'ಯತ್' ಇದಂ ವಿಶ್ವಂ ತದ್ವಿಷ್ಣುಃ 'ಏಕ ಏವ' ಅಸಹಾಯೋ ಬಿಭರ್ತಿ । ತಸ್ಯ ಧೃತೌ ತಸ್ಮಾದ್ ವಿಷ್ಣೋರನ್ಯಃ 'ಕ್ಷಮಃ' ಸಮರ್ಥೋ ನ ಇತ್ಯರ್ಥಃ । 'ಇತಿ ಸ್ಕಾಂದೇ' ಇತ್ಯಸ್ಯ 'ಉಕ್ತತ್ವಾತ್' ಇತ್ಯಧ್ಯಾಹಾರೇಣ 'ನ ಸಾವಕಾಶತ್ವಂ ಲಿಂಗಸ್ಯ' ಇತಿ ವಾಕ್ಯಶೇಷೇಣಾನ್ವಯಃ।

ಅನು– ಈ ಪುರಾಣವಾಕ್ಯದಲ್ಲಿ 'ಪ್ರಕೃತ್ಯಂತ' ಎಂಬ ಪದದಿಂದ ಸೂತ್ರದ 'ಅಂತ'ಪದವು ವ್ಯಾಖ್ಯಾನಿಸಲ್ಪಟ್ಟಿದೆ. ಭೂತಮ್ ಅಂದರೆ ಅತೀತವಾದುದೆಂದೂ, 'ಭವ್ಯಮ್' ಭವಿಷ್ಯತ್ ಕಾಲಕ್ಕೆ ಸಂಬಂಧಿಸಿದ್ದು, 'ಭವತ್' ವರ್ತಮಾನವಾಗಿರು-ವುದು, 'ಯತ್' - ಯಾವ ವಿಶ್ವವಿದೆಯೋ ಅದನ್ನು 'ವಿಷ್ಣುಃ ಏಕಃ ಏವ' ವಿಷ್ಣುವೊ-ಬ್ಬನೇ ಇತರರ ಸಹಾಯವಿಲ್ಲದೇ ಧಾರಣ ಮಾಡಿದ್ದಾನೆ. ಈ ವಿಶ್ವದ ಧಾರಣದಲ್ಲಿ ತಸ್ಮಾದ್ ಅನ್ಯಃ - ಆ ವಿಷ್ಣುವಿಗಿಂತ ಭಿನ್ನನಾದವನು 'ಕ್ಷಮಃ ನ' ಸಮರ್ಥನಲ್ಲ. 'ಇತಿ ಸ್ಕಾಂದೇ' ಎಂಬ ಪದಗಳಿಗೆ 'ಉಕ್ತತ್ವಾತ್' ಎಂಬ ಪದವನ್ನು ಅಧ್ಯಾಹಾರ ಮಾಡಿ-ಕೊಂಡು 'ನ ಸಾವಕಾಶತ್ವಂ ಲಿಂಗಸ್ಯ' ಎಂಬ ವಾಕ್ಯಶೇಷದೊಂದಿಗೆ ಅನ್ವಯವಾಗು-ವುದು.

ಭಾ.ದೀ. – ಯುಕ್ತ್ಯಂತರೇಣ ವಿಷ್ಣೋರೇವ ಅಕ್ಷರತ್ವಂ ಪ್ರತಿಪಾದಯತ್ ಸೂತ್ರ -ಮುಪನ್ಯಸ್ಯ ವ್ಯಾಚಷ್ಟೇ – ಸಾ ಚೇತಿ ॥

ಅನು– ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಅಕ್ಷರನೆಂದು ಪ್ರತಿಪಾದಿಸುವ ಸೂತ್ರವನ್ನು ಭಾಷ್ಯಕಾರರು ಉಪನ್ಯಾಸ ಮಾಡಿ ''ಸಾ ಚ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂ – ॥ ಓಂ ಸಾ ಚ ಪ್ರಶಾಸನಾತ್ ಓಂ ॥ ೧೧ ॥**

ಆ ಸರ್ವಧಾರಕತ್ವವು 'ಏತಸ್ಯ ವಾ ಅಕ್ಷರಸ್ಯ ...' ಎಂಬ ವಾಕ್ಯದಲ್ಲಿ ಹೇಳಿರುವ 'ಪ್ರಶಾಸನ'ದಿಂದ ತಿಳಿದು ಬರುವುದರಿಂದಲೂ ಅಕ್ಷರವು ಬ್ರಹ್ಮನೇ.

**ಭಾಷ್ಯಮ್ – ಸಾ ಚ ಧೃತಿಃ ಪ್ರಶಾಸನಾದುಚ್ಯತೇ । 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ' ಇತ್ಯಾದಿನಾ । ತಚ್ಚ ಪ್ರಶಾಸನಂ ವಿಷ್ಣೋರೇವ ।**

ಆ ಸರ್ವ ಧೃತಿಃ - ಅಂದರೆ ಸರ್ವಾಧಾರಕತ್ವವಾದರೋ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'' ಇತ್ಯಾದಿ ಶ್ರುತಿಯಿಂದ ಹೇಳಲ್ಪಟ್ಟಿದೆ. ಆ ಪ್ರಶಾಸನ-ವಾದರೋ ವಿಷ್ಣುವಿನದ್ದೇ ಆಗಿದೆ.

ಭಾ.ದೀ. – 'ಸಾ ಚ' ಸರ್ವಧೃತಿರಪಿ ಇತ್ಯಾದಿನಾ ಪ್ರಶಾಸನಾದುಚ್ಯತೇ ಯತಃ ಅತೋಽಪಿ ಬ್ರಹ್ಮಾಕ್ಷರಮ್ ಇತ್ಯನ್ವಯಃ । ಆದಿಶಬ್ದೇನ ಏವಂರೂಪಾಣ್ಯೇಕ-ಪ್ರಕರಣಗತಾನೇಕವಾಕ್ಯಾನಿ ಗೃಹ್ಯಂತೇ।

ಅನೇನ – ಯದಾ 'ಸಾ' ಪೂರ್ವೋಕ್ತಾ ಸರ್ವಧೃತಿರೇವ ಅಕ್ಷರಸ್ಯ ವಿಷ್ಣುತ್ವ-ಸಾಧಿಕಾ, ತದಾ ಸುತರಾಂ, ಯಾ ತು 'ಏತಸ್ಯ' ಇತಿ ಶ್ರುತಿವಾಕ್ಯೇ 'ಅಕ್ಷರಸ್ಯ ಪ್ರಶಾಸನಾದೇವ ಅಸಂಕುಚಿತವಿಷಯಾನನ್ಯಾಯತ್ತಪ್ರಕೃಷ್ಟಾಜ್ಞಾಮಾತ್ರಾದೇವ ಸರ್ವಧೃತಿರುಚ್ಯತೇ ಸಃ - ಇತಿ ಸೂತ್ರಾರ್ಥ ಉಕ್ತೋ ಭವತಿ।

ನನು ಸರ್ವಧೃತಿಹೇತುಪ್ರಶಾಸನಾದೇವ ಕುತೋಽಕ್ಷರಸ್ಯ ವಿಷ್ಣುತ್ವನಿಶ್ಚಯಃ? ಇತ್ಯತಸ್ತಸ್ಯ ವಿಷ್ಣುಕರ್ತೃಕತ್ವಾತ್, ಇತ್ಯಾಹ – ತಚ್ಚೇತಿ ॥ 'ಸರ್ವಧೃತಿಕಾರಣಂ ಪ್ರಶಾಸನಂ ತು' ಇತ್ಯರ್ಥಃ। 'ನ ಕೇವಲಂ ಸರ್ವಧೃತಿಃ, ಕಿಂತು ತದ್ಧೇತುಪ್ರಶಾಸನಂ ಚ' ಇತಿ ಸಮುಚ್ಚಯೇ ವಾ ಚಶಬ್ದಃ । 'ವಿಷ್ಣೋರೇವ' ವಿಷ್ಣುಕರ್ತೃಕಮೇವ । ನ ತ್ವನ್ಯಕರ್ತೃಕಮ್ ಇತಿ ಏವಾರ್ಥಃ। ಏವಕಾರಸ್ಯೋತ್ತರತ್ರೋಪಯೋಗಃ।

ಆ ಸರ್ವಧೃತಿಯೂ ಕೂಡ 'ಇತ್ಯಾದಿನಾ' - ಏತಸ್ಯ ವಾ ಇತ್ಯಾದಿ ಶ್ರುತಿಯಿಂದ ಪ್ರಶಾಸನದ ಮೂಲಕ ಹೇಳಲ್ಪಟ್ಟಿದೆ. ಆದ್ದರಿಂದಲೂ ಅಕ್ಷರನು ಬ್ರಹ್ಮನಾಗಿದ್ದಾನೆ. ಇಲ್ಲಿ ಆದಿಶಬ್ದದಿಂದ ಇದೇ ರೀತಿಯ ಒಂದೇ ಪ್ರಕರಣದಲ್ಲಿರುವ ಅನೇಕ ವಾಕ್ಯಗಳು ಗ್ರಹಿಸಲ್ಪಟ್ಟಿವೆ.

ಇದರಿಂದ – ಯಾವಾಗ 'ಸಾ' ಅಂದರೆ ಹಿಂದೆ ಹೇಳಿದ ಸರ್ವಧೃತಿಯೇ ಅಕ್ಷರನು ವಿಷ್ಣುವೆಂದು ಸಾಧಿಸುವುದೋ, ಹಾಗಿರುವಾಗ ಏತಸ್ಯ ಎಂಬ ಶ್ರುತಿವಾಕ್ಯದಲ್ಲಿ ಅಕ್ಷರನ

ಪ್ರಶಾಸನಾದೇವ - ಅಂದರೆ ವಿಷಯಸಂಕೋಚವಿಲ್ಲದೇ ಅನ್ಯಾಧೀನವಾಗದ ಪ್ರಕರ್ಷ-ದಿಂದ ಕೂಡಿದ ಆಜ್ಞಾಮಾತ್ರದಿಂದ ಸರ್ವಧೃತಿಯು ಹೇಳಲ್ಪಟ್ಟಿದೆಯೋ ಸಾ ಸರ್ವ-ಧೃತಿಯು - ಅದು ಸುತರಾಂ - ಅಕ್ಷರನು ವಿಷ್ಣುವೆಂದು ಸಾಧಿಸುವುದು ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಅಕ್ಷರಕ್ಕೆ ಸರ್ವಧಾರಕತ್ವವನ್ನು ಸಾಧಿಸುವ ಪ್ರಶಾಸನವೆಂಬ ಹೇತುವಿನಿಂದ ಅಕ್ಷರನು ವಿಷ್ಣುವೆಂದು ನಿಶ್ಚಯವಾಗುವುದು ಹೇಗೆ ಎಂಬ ಶಂಕೆಗೆ ಉತ್ತರವಾಗಿ ಆ ಪ್ರಶಾಸನಕ್ಕೆ ವಿಷ್ಣುವೇ ಕರ್ತೃವಾದುದರಿಂದ ಅದು ಸಿದ್ಧವಾಗುವುದು ಎಂದು ''ತಚ್ಚ'' ಎಂಬ ವಾಕ್ಯದಿಂದ ಭಾಷ್ಯದಲ್ಲಿ ಹೇಳಿದೆ. 'ತಚ್ಚ' - ಅಂದರೆ ಸರ್ವಧಾರಣಕ್ಕೆ ಕಾರಣವಾದ ಪ್ರಶಾಸನವಾದರೋ ಎಂದು ಅರ್ಥ. ಅಥವಾ ಸರ್ವಧೃತಿ ಮಾತ್ರವಲ್ಲ ಕಿಂತು ಆ ಸರ್ವಾಧಾರಕತ್ವಕ್ಕೆ ಹೇತುವಾದ ಪ್ರಶಾಸನವೂ ಕೂಡ ಎಂಬುದಾಗಿ ಚಶಬ್ದವು ಸಮುಚ್ಚಯವನ್ನು ಹೇಳುವುದು. ಭಾಷ್ಯದಲ್ಲಿರುವ 'ವಿಷ್ಣೋರೇವ' ಎಂಬ ಪದಕ್ಕೆ 'ವಿಷ್ಣುಕರ್ತೃಕವೇ ಆಗಿರುವುದು' ಎಂದರ್ಥ. ಇಲ್ಲಿ 'ಏವ'ಶಬ್ದಕ್ಕೆ ಅನ್ಯಕರ್ತೃಕವಲ್ಲ ಎಂದು ಅರ್ಥ. ಇಲ್ಲಿ ಪ್ರಯೋಗಿಸಿರುವ ಏವ ಕಾರಕ್ಕೆ ಮುಂದೆ ಉಪಯೋಗವಿದೆ.

ಭಾ.ದೀ. – ಕುತ ಏತತ್ ಜ್ಞಾಯತೇ? ಇತ್ಯತಃ, 'ತಚ್ಚ' ಇತ್ಯನೇನ ಪ್ರತಿ-ಜ್ಞಾತಾರ್ಥೇ ಶ್ರುತಿಂ ಪ್ರಮಾಣಯತಿ – ಸಪ್ತೇತಿ ॥

ಅನು– ಪ್ರಶಾಸನವು ವಿಷ್ಣುಕರ್ತೃಕವೇ ಆಗಿರುವುದೆಂದು ಯಾವ ಆಧಾರದಿಂದ ತಿಳಿದು ಬರುವುದು? ಎಂಬ ಪ್ರಶ್ನೆಗೆ ಉತ್ತರವಾಗಿ ಭಾಷ್ಯದಲ್ಲಿ 'ತಚ್ಚ' ಎಂಬ ವಾಕ್ಯ-ದಿಂದ ಪ್ರತಿಜ್ಞೆ ಮಾಡಲಾದ ವಿಷಯದಲ್ಲಿ ''ಸಪ್ತ'' ಇತ್ಯಾದಿ ಶ್ರುತಿಯನ್ನು ಪ್ರಮಾಣ-ವನ್ನಾಗಿ ಉಲ್ಲೇಖಿಸುತ್ತಿದ್ದಾರೆ.

**ಭಾಷ್ಯಮ್ – 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ'।**

ಭಾ.ದೀ. – ಆ ಋದ್ಧಗರ್ಭಾಃ ಆರ್ಧಗರ್ಭಾಃ । ಬ್ರಹ್ಮಾಂಡಾಖ್ಯಾತಿ-ಸಮೃದ್ಧಗರ್ಭಾಃ । ನಿಗರಣೇನ ಭ್ರಿಯಂತ ಇತಿ ಗರ್ಭಾಃ, ತದಾವರಣಭೂತಾ ಇತಿ

ಯಾವತ್ । 'ರೇತಃ' ಇತಿ ಲಿಂಗವ್ಯತ್ಯಯೇನೈಕವಚನಂ ಪ್ರಥಮಾಬಹುವಚನಾರ್ಥೇ । ತಥಾ ಚ – 'ಭುವನಸ್ಯ' ಲೋಕಸ್ಯ 'ರೇತಸೋ' ರತಿಪ್ರದಾಃ ಸಾರಭೂತಾ ವಾ ।

ಯದ್ವಾ – ಭೂಮತ್ವಾತ್ ಪೂರ್ಣತ್ವಾದ್ ವನನೀಯತ್ವಾದ್ ಭಜನೀಯತ್ವಾದ್ ಭುವನಸ್ಯ ವಿಷ್ಣೋ ರೇತೋರೂಪಾಃ 'ಸಪ್ತ' ಮಹದಹಂಕಾರಪಂಚಮಹಾಭೂತಾಖ್ಯಾಃ ಬ್ರಹ್ಮಾದಯೋ ದೇವಾಃ । ಭುವನಸ್ಯ 'ರೇತೋ' ರೇತಸೋ ಜಗದ್ರತಿಪ್ರದಸ್ಯ ವಿಷ್ಣೋಃ 'ಪ್ರದಿಶಾ' ಆದೇಶೇನಾಽಜ್ಞಯಾ 'ವಿಧರ್ಮಣಿ' ವಿವಿಧವಿಶ್ವಧಾರಣೇ ತಿಷ್ಠಂತಿ – ಇತಿ ಋಙ್ಮಂತ್ರಾರ್ಥಃ ।

ವಿಶ್ವೇಶ್ವರತೀರ್ಥೀಯೇ ತು – 'ಅರ್ಧಸ್ಯ' – ವಿಷ್ಣೋಃ 'ಗರ್ಭಾಃ' ಸಪ್ತ ದೇವಾಃ ಭುವನಸ್ಯ 'ರೇತಃ' ಕಾರಣಮ್ । ಏತೇ ಚ ವಿಷ್ಣೋಃ ಪ್ರದಿಶಾ ವಿಧರ್ಮಣಿ ತಿಷ್ಠಂತೀತ್ಯರ್ಥ ಉಕ್ತಃ ।

ಅನು– ಆರ್ಧಗರ್ಭಾಃ ಎಂದರೆ 'ಆ' ಸಮೀಚೀನವಾಗಿ 'ಋದ್ಧಗರ್ಭಾಃ' - ಬ್ರಹ್ಮಾಂಡವೆಂಬ ಅತಿ ಸಮೃದ್ಧವಾದ ವಸ್ತುವಿನ ಗರ್ಭಗಳಾದ – 'ನಿಗರೇಣ ಭ್ರಿಯಂತೇ ಇತಿ ಗರ್ಭಾಃ' - ಆಚ್ಛಾದಿಸಿ ಭರಣ ಮಾಡಲ್ಪಟ್ಟವೆ ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಗರ್ಭಾಃ ಎಂದರೆ ಬ್ರಹ್ಮಾಂಡಕ್ಕೆ ಆವರಣಭೂತವಾದವುಗಳು ಎಂದು ತಾತ್ಪರ್ಯ. 'ರೇತಃ' ಎಂಬ ಶಬ್ದವು ಲಿಂಗವ್ಯತ್ಯಾಸವನ್ನು ಪಡೆದು ಏಕವಚನಾಂತವಾಗಿದ್ದು ಪ್ರಥಮಾವಿಭಕ್ತಿಯ ಬಹುವಚನದ ಅರ್ಥವನ್ನು ಹೇಳುವುದು. ತಥಾ ಚ – 'ಭುವನಸ್ಯ' ಲೋಕಕ್ಕೆ 'ರೇತಸಃ' ಸುಖವನ್ನು ನೀಡುವ ಅಥವಾ ಸಾರಭೂತವಾದ ಎಂದು ಅರ್ಥ.

ಅಥವಾ - ಭುವನ ಎಂದರೆ ಭೂಮತ್ವಾತ್ - ಪೂರ್ಣನಾದುದರಿಂದ, ವನನೀಯತ್ವಾತ್ - ಭಜನೀಯನಾದ್ದರಿಂದ, ಭುವನವೆಂದೆನಿಸುವ ವಿಷ್ಣುವಿನ ರೇತೋರೂಪವಾಗಿರುವ 'ಸಪ್ತ' ಮಹತ್, ಅಹಂಕಾರ, ಪಂಚಮಹಾಭೂತಗಳೆಂದು ಕರೆಯಲ್ಪಡುವ (ಅವುಗಳ ಅಭಿಮಾನಿದೇವತೆಗಳಾದ) ಬ್ರಹ್ಮಾದಿ ದೇವತೆಗಳು. ಇವರು 'ಭುವನಸ್ಯ ರೇತಃ' ಸರ್ವ ಜಗತ್ತಿಗೆ ಆನಂದಪ್ರದನಾದ ವಿಷ್ಣುವಿನ 'ಪ್ರದಿಶಾ'

ಆದೇಶದಿಂದ ಅಂದರೆ ಆಜ್ಞೆಯಿಂದ 'ವಿಧರ್ಮಣಿ' ವಿವಿಧವಾದ ವಿಶ್ವದ ಧಾರಣದಲ್ಲಿ 'ತಿಷ್ಠಂತಿ' ಇರುವವರು (ವಿವಿಧ ವಿಶ್ವದ ಧಾರಣಕಾರ್ಯವನ್ನು ನಿರ್ವಹಿಸುವವರು) – ಎಂದು ಋಙ್ಮಂತ್ರದ ಅರ್ಥ.

ವಿಶ್ವೇಶ್ವರತೀರ್ಥರ ವ್ಯಾಖ್ಯಾನದಲ್ಲಾದರೋ 'ಅರ್ಧಸ್ಯ' ಅಂದರೆ ಅತಿಶಯವಾದ ಪೂರ್ಣತೆಯನ್ನು ಹೊಂದಿರುವ ವಿಷ್ಣುವಿನ, 'ಗರ್ಭಾಃ ಸಪ್ತ' - ಗರ್ಭರೆನಿಸಿದ ಏಳು ದೇವತೆಗಳು, 'ಭುವನಸ್ಯ ರೇತಃ' - ಈ ಜಗತ್ತಿಗೆ ಕಾರಣರಾಗಿದ್ದಾರೆ. ಇವರು ವಿಷ್ಣುವಿನ 'ಪ್ರದಿಶಾ' ಆದೇಶದಿಂದ 'ವಿಧರ್ಮಣಿ ತಿಷ್ಠಂತಿ' ವಿವಿಧ ಕರ್ಮಗಳನ್ನು ನಿರ್ವಹಿಸು-ತ್ತಿದ್ದಾರೆ ಎಂದು ಅರ್ಥವನ್ನು ಹೇಳಲಾಗಿದೆ.

**ಭಾಷ್ಯಮ್ – 'ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀರವೀವಿಪತ್'** (ಋ.೧.೧೫೫.೬) **ಇತ್ಯಾದಿಶ್ರುತೇಃ ।**

**'ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ'** (ಭಾರತೇ ಸಭಾಪ. ಅ.೮೪. ಶ್ಲೋ.೮); **'ಯೋ ಹೃಚ್ಛಯಸ್ತಮಹಮಿಹ ಬ್ರವೀಮಿ'।**
**'ನ ಕೇವಲಂ ಮೇ ಭವತಶ್ಚ ರಾಜನ್ ಸ ವೈ ಬಲಂ ಬಲಿನಾಂ ಚಾಪರೇಷಾಮ್'** (ಭಾಗ.೭-೮-೮) **ಇತ್ಯಾದೇಶ್ಚ ॥ ೧೧ ॥**

ಭಾ.ದೀ.– 'ಚತುರ್ಭಿಃ' ಇತಿ ವಾಕ್ಯಂ ತು ಜನ್ಮನಯೇ ವ್ಯಾಖ್ಯಾತಮ್ । ಏವಂ- ಜಾತೀಯಕಶ್ರುತಿಃ 'ಆದಿ'ಶಬ್ದಾರ್ಥಃ । 'ಶ್ರುತೇಃ' ಇತ್ಯಸ್ಯ 'ಜ್ಞಾಯತೇ' ಇತ್ಯಧ್ಯಾಹಾರೇಣ 'ತಚ್ಚ' ಇತಿ ಪೂರ್ವವಾಕ್ಯೇನಾನ್ವಯಃ।

ಸರ್ವಧೃತಿಪ್ರಶಾಸನಂ ವಿಷ್ಣೋರಿವ ಅನ್ಯಸ್ಯಾಪಿ ಕಿಂ ನ ಸ್ಯಾದಿತ್ಯತ ಆಹ – ಏಕ ಇತಿ ॥ ಇದಂ ಚ ಭಾರತವಾಕ್ಯಂ ಸಭಾಪರ್ವಗತಮ್ (ವಿದುರವಾಕ್ಯಂ) । 'ಏಕಃ' ನ ತು ದ್ವಿತೀಯೋಽಸ್ತಿ, ಸ ಚ ವಿಷ್ಣುರೇವ ಇತ್ಯರ್ಥಃ । 'ಗರ್ಭೇ ಶಯಾನಂ ಪುರುಷಂ ಕೋಽಸ್ತಿ ಶಾಸ್ತಾ' ಇತಿ ಶಿಷ್ಟವಾಕ್ಯಮ್ । 'ಯೋ ಹೃಚ್ಛಯಃ' ಇತ್ಯನ್ಯದ್ ವಾಕ್ಯಮ್

ಉತ್ತರವಾಕ್ಯಪರ್ಯಾಲೋಚನಯಾ ಪ್ರಕೃತಸಂಗತಮ್ । 'ಯಃ' ಸರ್ವಧೃತಿ-ಹೇತುಪ್ರಶಾಸನಾಯ 'ಹೃಚ್ಛಯಃ' ಸರ್ವಹೃದಯನಿವಾಸೀ ತಮಹಮಿಹ ಸ್ಥಾನೇ ಬ್ರವೀಮಿ - ಇತ್ಯರ್ಥಃ।

'ನ ಕೇವಲಮ್' ಇತ್ಯಾದಿ ಹಿರಣ್ಯಕಶಿಪುಂ ಪ್ರತಿ ಪ್ರಹ್ಲಾದವಚನಮ್ । ಹೇ ರಾಜನ್! ನ ಕೇವಲಂ ಮೇ ಭವತಶ್ಚ 'ಸಃ' ಭಗವಾನ್ 'ಬಲಂ' ಬಲಪ್ರದೋ ಧೃತಿಹೇತುಃ, ಕಿಂತ್ವನ್ಯೇಷಾಂ ಬಲಿನಾಂ ಚ ಬಲಮಿತ್ಯರ್ಥಃ । 'ಇತ್ಯಾದೇಶ್ಚ' ಇತ್ಯಸ್ಯ 'ತಚ್ಚ ಪ್ರಶಾಸನಂ ವಿಷ್ಣೋರೇವೇತಿ ಜ್ಞಾಯತೇ' ಇತ್ಯನೇನಾನ್ವಯಃ । ಅನೇನ 'ವಿಷ್ಣುರೇವ' ಇತ್ಯೇವಕಾರಸ್ಯ ಕೃತ್ಯಂ ಸೂಚಿತಮ್ ।

ಭಾ.ದೀ. – 'ಚತುರ್ಭಿಃ ಎಂಬ ವಾಕ್ಯವಾದರೋ ಜನ್ಮಾಧಿಕರಣದಲ್ಲಿ ವ್ಯಾಖ್ಯಾನಿಸಲ್ಪಟ್ಟಿದೆ.(ಭಾ.ದೀ.ಕನ್ನಡಾನುವಾದ ಸಂ.೧.ಪು.೨೦೪) ಇದರಂತೆ ಇರುವ ಶ್ರುತಿಗಳು 'ಆದಿ'ಶಬ್ದದ ಅರ್ಥವಾಗಿವೆ. 'ಶ್ರುತೇಃ' ಎಂಬ ಪದಕ್ಕೆ 'ಜ್ಞಾಯತೇ' ಎಂಬ ಅಧ್ಯಾಹಾರ ಮಾಡಿಕೊಂಡು ''ತಚ್ಚ'' ಎಂಬ ಹಿಂದಿನ ಭಾಷ್ಯವಾಕ್ಯದೊಂದಿಗೆ ಅನ್ವಯವಾಗುವುದು.

ಸರ್ವಧಾರಕತ್ವಕ್ಕೆ ಹೇತುವಾಗಿರುವ ಪ್ರಶಾಸನವು ವಿಷ್ಣುವಿಗಿರುವಂತೆ ಮತ್ತೊಬ್ಬ-ರಿಗೂ ಯಾಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ ''ಏಕಃ ಶಾಸ್ತಾ'' (ಭಾರತೇ-ಸಭಾಪರ್ವ) ಎಂಬ ವಾಕ್ಯವನ್ನು ಉದಾಹರಿಸಲಾಗಿದೆ. ಈ ವಾಕ್ಯವು ಮಹಾಭಾರತದ ಸಭಾಪರ್ವದಲ್ಲಿರುವ ವಾಕ್ಯವಾಗಿದೆ. ಇಲ್ಲಿ 'ಶಾಸ್ತಾ' ಎಂದರೆ ಸರ್ವಧೃತಿಗೆ ಹೇತುವಾಗಿರುವ ಆಜ್ಞೆಯನ್ನು ಮಾಡುವವನು ಎಂದು ಅರ್ಥ. 'ಏಕಃ' - ಒಬ್ಬನೇ ಹೊರತು ಮತ್ತೊಬ್ಬನಿಲ್ಲ, ಆ ಒಬ್ಬನು ವಿಷ್ಣುವೇ ಆಗಿರುವನು ಎಂದು ಅರ್ಥ. 'ಗರ್ಭೇ ಶಯಾನಂ ಪುರುಷಂ ಕೋಽಸ್ತಿ ಶಾಸ್ತಾ' ಎಂಬುದು ಈ ವಾಕ್ಯದ ಉಳಿದ ಭಾಗವಾಗಿದೆ. 'ಯೋ ಹೃಚ್ಛಯಃ' ಎಂಬ ಇನ್ನೊಂದು ವಾಕ್ಯವು ಮುಂದಿನ ವಾಕ್ಯವನ್ನು ಪರ್ಯಾಲೋಚನೆ ಮಾಡಿದಾಗ ಪ್ರಕೃತಕ್ಕೆ ಸಂಗತವಾಗುವುದು. 'ಯಃ' ಯಾರು ಸರ್ವ ಧಾರಕತ್ವಕ್ಕೆ ಹೇತುವಾದ ಪ್ರಶಾಸನವನ್ನು ಮಾಡುವ ಸಲುವಾಗಿ 'ಹೃಚ್ಛಯಃ' ಸರ್ವರ

ಹೃದಯದಲ್ಲಿ ಇರುವನೋ 'ತಂ ಅಹಂ ಇಹ' ಆ ಅವನನ್ನು ಈ ಸ್ಥಾನದಲ್ಲಿ ನಾನು ಹೇಳುವೆನು – ಎಂದು ಅರ್ಥ.

'ನ ಕೇವಲಮ್' ಎಂಬ ವಾಕ್ಯವು ಹಿರಣ್ಯಕಶಿಪುವನ್ನು ಕುರಿತು ಪ್ರಹ್ಲಾದನು ಹೇಳುವ ವಾಕ್ಯವಾಗಿದೆ. 'ಹೇ ರಾಜನ್' - ನನಗೆ ಮಾತ್ರವಲ್ಲ ನಿನಗೂ 'ಸಃ' - ಆ ಭಗವಂತನು 'ಬಲಂ' - ಬಲಪ್ರದನಾಗಿದ್ದು ಧಾರಣಕ್ಕೆ ಹೇತುವಾಗಿದ್ದಾನೆ ಎಂದಿಷ್ಟೇ ಅಲ್ಲ ಕಿಂತು ಇತರ ಬಲಶಾಲಿಗಳಿಗೂ ಕೂಡ ಅವನು ಬಲಪ್ರದನಾಗಿದ್ದಾನೆ ಎಂದು ಅರ್ಥ. ''ಇತ್ಯಾದೇಶ್ಚ'' ಎಂಬ ಭಾಷ್ಯದ ಪದಗಳಿಗೆ 'ತಚ್ಚ ಪ್ರಶಾಸನಂ ವಿಷ್ಣೋರೇವ ಜ್ಞಾಯತೇ' ಎಂಬ ಭಾಷ್ಯವಾಕ್ಯದೊಂದಿಗೆ ಅನ್ವಯ. ಇದರಿಂದ 'ವಿಷ್ಣೋರೇವ' ಎಂಬಲ್ಲಿರುವ ಏವಕಾರದ ಪ್ರಯೋಜನವನ್ನು ಸೂಚಿಸಿದಂತಾಯಿತು.

ಭಾ.ದೀ. – ಹೇತ್ವಂತರೇಣ ವಿಷ್ಣೋರೇವ ಅಕ್ಷರತ್ವಂ ಪ್ರತಿಪಾದಯತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಅನ್ಯೇತಿ ॥

ವಿಷ್ಣುವಿಗೇ ಅಕ್ಷರತ್ವವಿರುವುದೆಂದು ಮತ್ತೊಂದು ಹೇತುವಿನಿಂದ ಪ್ರತಿಪಾದಿಸುವ ಸೂತ್ರವನ್ನು ಪಠಿಸಿ ಭಾಷ್ಯಕಾರರು ''ಅನ್ಯ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ಅನ್ಯಭಾವವ್ಯಾವೃತ್ತೇಶ್ಚ ಓಂ ॥ ೧೨ ॥**

**ಭಾಷ್ಯಮ್ – 'ಅಸ್ಥೂಲಮನಣು' ಇತ್ಯಾದಿನಾ ಸ್ಥೂಲಾಣ್ವಾದೀನಾಮ್ ಅನ್ಯವಸ್ತುಸ್ವಭಾವಾನಾಂ ವ್ಯಾವೃತ್ತೇಶ್ಚ ।**

'ಅಸ್ಥೂಲಮನಣು ..' ಇತ್ಯಾದಿ ಶ್ರುತಿಗಳಿಂದ ಸ್ಥೂಲತ್ವ, ಅಣುತ್ವ ಮೊದಲಾದ ಇತರ ಎಲ್ಲ ವಸ್ತುಗಳ ಸ್ವಭಾವಗಳ ಅಭಾವವನ್ನು ಅಕ್ಷರನಲ್ಲಿ ಹೇಳಿರುವುದರಿಂದಲೂ ಅಕ್ಷರನು ಬ್ರಹ್ಮನೇ ಆಗಿರುವನು.

ಭಾ.ದೀ. – 'ಆದಿ'ಶಬ್ದೇನ 'ಏತದ್ ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯ-

**ಮತಮೋऽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕಮಶ್ರೋತ್ರಮ-ವಾಗಮನೋऽತೇಜಸ್ಕಮಪ್ರಾಣಮಮುಖಮಮಾತ್ರಮನಂತರಮಬಾಹ್ಯಂ ನ ತದ-ಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ' (ಬೃ.೫-೮-೮) ಇತಿ ಸಮಗ್ರವಾಕ್ಯಂ ಗೃಹ್ಯತೇ। 'ಸ್ಥೂಲಾಣ್ವಾದೀನಾಮ್' ಇತಿ ಭಾವಪ್ರಧಾನೋ ನಿರ್ದೇಶಃ । 'ವ್ಯಾವೃತ್ತೇಃ' ಇತ್ಯನಂತರಂ 'ಕಥನಾತ್' ಇತಿ ಶೇಷಃ । ಚೋ ಹೇತುಸಮುಚ್ಚಯೇ । ಅಸ್ಯಾಪಿ 'ಬ್ರಹ್ಮೈವ ಅಕ್ಷರಮ್' ಇತಿ ಪೂರ್ವೇಣಾನ್ವಯಃ।**

**ಅನೇನ – ನ ಕೇವಲಂ ಪೂರ್ವೋಕ್ತಹೇತುಭ್ಯಾಂ, ಕಿಂತು ಅನ್ಯೇಷಾಂ ಸಕಲವಸ್ತೂನಾಂ ಭಾವಾನಾಂ ಸ್ವರೂಪಾಣಾಂ ಸ್ಥೌಲ್ಯಾದಿಧರ್ಮಾಣಾಂ ವ್ಯಾವೃತ್ತೇಃ ಅನನ್ಯಾಪೇಕ್ಷಾರಹಿತಸ್ಯ ''ಅಸ್ಥೂಲಮ್'' ಇತ್ಯಾದಿನಾ ಅಕ್ಷರೇ ಕಥನಾದಪಿ 'ಅಕ್ಷರಂ ಬ್ರಹ್ಮೈವ' ಇತಿ ಸೂತ್ರಾರ್ಥ ಉಕ್ತೋ ಭವತಿ।**

ಭಾಷ್ಯದಲ್ಲಿ ಇತ್ಯಾದಿನಾ ಎಂಬಲ್ಲಿರುವ ಆದಿಶಬ್ದದಿಂದ - ''ಏತದ್ ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತ-ಮಸ್ನೇಹಮಚ್ಛಾಯಮತಮೋऽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕ-ಮಶ್ರೋತ್ರಮವಾಗಮನೋऽತೇಜಸ್ಕಮಪ್ರಾಣಮಮುಖಮಮಾತ್ರಮನಂತರಮಬಾಹ್ಯಂ ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ'' ಎಂಬ ಸಮಗ್ರವಾಕ್ಯವು ಗ್ರಹಿಸಲ್ಪಡುತ್ತದೆ. 'ಸ್ಥೂಲಾಣ್ವಾದೀನಾಮ್' ಎಂಬ ಪದವು ಸ್ಥೂಲತ್ವ, ಅಣುತ್ವ ಮೊದಲಾದ ಧರ್ಮ-ಗಳನ್ನೇ ಪ್ರಧಾನವಾಗಿ ಹೇಳುವುದು. 'ವ್ಯಾವೃತ್ತೇಃ' ಎಂಬ ಪದದ ನಂತರ 'ಕಥನಾತ್' ಎಂಬ ಪದವು ಶೇಷವಾಗಿದೆ. ವ್ಯಾವೃತ್ತೇಶ್ಚ ಎಂಬಲ್ಲಿರುವ ಚಕಾರವು ಹೇತುವಿನ ಸಮುಚ್ಚಯವನ್ನು ಹೇಳುವುದು. ಈ ಸೂತ್ರಕ್ಕೂ 'ಬ್ರಹ್ಮೈವ ಅಕ್ಷರಮ್' ಎಂಬ ಹಿಂದಿನ ಭಾಷ್ಯದೊಂದಿಗೆ ಅನ್ವಯವಿರುವುದು.

ಇದರಿಂದ ಹಿಂದೆ ಹೇಳಿದ ಎರಡು ಹೇತುಗಳಿಂದ ಮಾತ್ರವಲ್ಲದೇ ಇತರ ಸಕಲ-ವಸ್ತುಗಳ ಭಾವ ಅಂದರೆ ಸ್ವರೂಪವೇ ಆಗಿರತಕ್ಕಂಥ ಸ್ಥೂಲತ್ವ, ಅಣುತ್ವ ಮೊದಲಾದ ಧರ್ಮಗಳ ವ್ಯಾವೃತ್ತೇಃ' - ಅಂದರೆ ಇನ್ನೊಂದರ ಅಪೇಕ್ಷೆಯಿಲ್ಲದೇ ಇರುವ

ಅಭಾವವನ್ನು 'ಅಸ್ಥೂಲಮ್' ಇತ್ಯಾದಿ ಶ್ರುತಿಯಿಂದ ಅಕ್ಷರನಲ್ಲಿ ಹೇಳಿರುವು-ದರಿಂದಲೂ 'ಅಕ್ಷರವು ಬ್ರಹ್ಮನೇ ಆಗಿರುವನು' ಎಂದು ಸೂತ್ರಾರ್ಥವನ್ನು ಹೇಳಿ-ದಂತಾಗುವುದು.

ಭಾ.ದೀ. – ಶ್ರುತ್ಯರ್ಥಸ್ತು – 'ತತ್' ಆಕಾಶಾಶ್ರಯತ್ವೇನ ವಕ್ಷ್ಯಮಾಣಮ್ 'ಅಕ್ಷರಂ' - 'ನ ಕ್ಷರತಿ ಇತ್ಯಕ್ಷರಶಬ್ದವಾಚ್ಯಂ ಬ್ರಹ್ಮ ಏತಲ್ಲಕ್ಷಣಕಂ 'ಬ್ರಾಹ್ಮಣಾಃ' ಜ್ಞಾನಿನೋಽಭಿವದಂತಿ 'ವೈ' ಪ್ರಸಿದ್ಧಮ್ । ತತ್ ಕಿಂ ಲಕ್ಷಣಮ್? ಇತ್ಯತ ಆಹ – ಅಸ್ಥೂಲಮಿತಿ ॥ ಸ್ಥೂಲಮ್ – ಮಹತ್ । ಸ್ವಪ್ನಬುದ್ಧ್ಯಾರ್ಥಾಂತರಂ ತು – 'ಏತತ್' ಅಕ್ಷರಂ ಬ್ರಾಹ್ಮಣಾಃ 'ತತ್' ಚಿತ್‌ಪ್ರಕೃತ್ಯಾಖ್ಯಾಮಿತಿ ವದಂತಿ ಪೂರ್ವಪಕ್ಷಯಂತಿ ತದ್ ಬ್ರಹ್ಮ ಇತ್ಯಭಿವದಂತಿ ಸಿದ್ಧಾಂತಯಂತಿ । ಸಿದ್ಧಾಂತಸಾಧಕಂ ಹೇತುಮೇವಾಽಹ – ಅಸ್ಥೂಲಮಿತ್ಯಾದಿನಾ ಇತಿ ॥ ಅನೇನ 'ಪ್ರಸಿದ್ಧಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾತ್ ಜನಾರ್ದನಃ' ಇತಿ ಬೃಹದ್ಭಾಷ್ಯೋಕ್ತರೀತ್ಯಾ ಪ್ರಸಿದ್ಧಸ್ಥೂಲಾದಿವೈಲಕ್ಷಣ್ಯಮುಚ್ಯತೇ । ಸ್ಥೂಲಾಣ್ವಾದಿಪದಸ್ಯ ಭಾವಪ್ರಧಾನತ್ವೇ ತು ಲೌಕಿಕಸ್ಥೌಲ್ಯಾದಿರಾಹಿತ್ಯಮ್ ಅನೇನೋಕ್ತಂ ಭವತಿ । 'ಅಲೋಹಿತಂ' ಲೋಹಿತಶಬ್ದಿತರಕ್ತಾದ್ಯುಪಲಕ್ಷಿತ-ಪ್ರಾಕೃತರೂಪಸಾಮಾನ್ಯರಹಿತಮ್ । 'ಅಸ್ನೇಹಂ' - ಪ್ರಾಕೃತಸ್ನೇಹರಹಿತಮ್ । 'ಅಚ್ಛಾಯಂ'– 'ಛಾಯಾ ತ್ವವಿದ್ಯಾ ಸಂಪ್ರೋಕ್ತಾ' ಇತಿ ವಚನಾದಜ್ಞಾನರಹಿತಮ್ । ಜೀವದೇಹಸ್ಯೇವ ಛಾಯಾರಹಿತಂ ಚ । 'ಅತಮಃ' ಆವರಣರಹಿತಮ್ । 'ಅವಾಯು' ಪೀಡಾರೂಪಶ್ವಾಸೋಚ್ಛ್ವಾಸರಹಿತಮ್ ।

ಅನು– ಶ್ರುತಿಯ ಅರ್ಥವಾದರೋ – 'ತತ್' - ಆಕಾಶಕ್ಕೆ ಆಶ್ರಯನೆಂದು ಮುಂದೆ ಹೇಳಲಾಗುವ 'ಅಕ್ಷರಮ್' 'ನ ಕ್ಷರತಿ' - ನಾಶಹೊಂದುವುದಿಲ್ಲ ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಅಕ್ಷರಶಬ್ದವಾಚ್ಯವಾದ ಬ್ರಹ್ಮವು ಏತತ್ - ಮುಂದೆ ಹೇಳುವ ಈ ಲಕ್ಷಣವುಳ್ಳದ್ದೆಂದು 'ಬ್ರಾಹ್ಮಣಾಃ ಅಭಿವದಂತಿ ವೈ' ಜ್ಞಾನಿಗಳು ಹೇಳುವರೆಂದು ಪ್ರಸಿದ್ಧವಾಗಿದೆ. ಆ ಲಕ್ಷಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಅಸ್ಥೂಲಂ' ಇತ್ಯಾದಿ-ಯಾಗಿ ಹೇಳಿರುವರು.

ಮತಮೋಽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕಮಶ್ರೋತ್ರಮ-ವಾಗಮನೋಽತೇಜಸ್ಕಮಪ್ರಾಣಮುಖಮಮಾತ್ರಮನಂತರಮಬಾಹ್ಯಂ ನ ತದ-ಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ' (ಬೃ.೫-೮-೮) ಇತಿ ಸಮಗ್ರವಾಕ್ಯಂ ಗೃಹ್ಯತೇ। 'ಸ್ಥೂಲಾಣ್ವಾದೀನಾಮ್' ಇತಿ ಭಾವಪ್ರಧಾನೋ ನಿರ್ದೇಶಃ । 'ವ್ಯಾವೃತ್ತೇಃ' ಇತ್ಯನಂತರಂ 'ಕಥನಾತ್' ಇತಿ ಶೇಷಃ । ಚೋ ಹೇತುಸಮುಚ್ಚಯೇ । ಅಸ್ಯಾಪಿ 'ಬ್ರಹ್ಮೈವ ಅಕ್ಷರಮ್' ಇತಿ ಪೂರ್ವೇಣಾನ್ವಯಃ।

ಅನೇನ – ನ ಕೇವಲಂ ಪೂರ್ವೋಕ್ತಹೇತುಭ್ಯಾಂ, ಕಿಂತು ಅನ್ಯೇಷಾಂ ಸಕಲವಸ್ತೂನಾಂ ಭಾವಾನಾಂ ಸ್ವರೂಪಾಣಾಂ ಸ್ಥೌಲ್ಯಾದಿಧರ್ಮಾಣಾಂ ವ್ಯಾವೃತ್ತೇಃ ಅನನ್ಯಾಪೇಕ್ಷಾರಹಿತಸ್ಯ ''ಅಸ್ಥೂಲಮ್'' ಇತ್ಯಾದಿನಾ ಅಕ್ಷರೇ ಕಥನಾದಪಿ 'ಅಕ್ಷರಂ ಬ್ರಹ್ಮೈವ' ಇತಿ ಸೂತ್ರಾರ್ಥ ಉಕ್ತೋ ಭವತಿ।

ಭಾಷ್ಯದಲ್ಲಿ ಇತ್ಯಾದಿನಾ ಎಂಬಲ್ಲಿರುವ ಆದಿಶಬ್ದದಿಂದ - ''ಏತದ್ ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತ-ಮಸ್ನೇಹಮಚ್ಛಾಯಮತಮೋಽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕ-ಮಶ್ರೋತ್ರಮವಾಗಮನೋಽತೇಜಸ್ಕಮಪ್ರಾಣಮುಖಮಮಾತ್ರಮನಂತರಮಬಾಹ್ಯಂ ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ'' ಎಂಬ ಸಮಗ್ರವಾಕ್ಯವು ಗ್ರಹಿಸಲ್ಪಡುತ್ತದೆ. 'ಸ್ಥೂಲಾಣ್ವಾದೀನಾಮ್' ಎಂಬ ಪದವು ಸ್ಥೂಲತ್ವ, ಅಣುತ್ವ ಮೊದಲಾದ ಧರ್ಮ-ಗಳನ್ನೇ ಪ್ರಧಾನವಾಗಿ ಹೇಳುವುದು. 'ವ್ಯಾವೃತ್ತೇಃ' ಎಂಬ ಪದದ ನಂತರ 'ಕಥನಾತ್' ಎಂಬ ಪದವು ಶೇಷವಾಗಿದೆ. ವ್ಯಾವೃತ್ತೇಶ್ಚ ಎಂಬಲ್ಲಿರುವ ಚಕಾರವು ಹೇತುವಿನ ಸಮುಚ್ಚಯವನ್ನು ಹೇಳುವುದು. ಈ ಸೂತ್ರಕ್ಕೂ 'ಬ್ರಹ್ಮೈವ ಅಕ್ಷರಮ್' ಎಂಬ ಹಿಂದಿನ ಭಾಷ್ಯದೊಂದಿಗೆ ಅನ್ವಯವಿರುವುದು.

ಇದರಿಂದ ಹಿಂದೆ ಹೇಳಿದ ಎರಡು ಹೇತುಗಳಿಂದ ಮಾತ್ರವಲ್ಲದೇ ಇತರ ಸಕಲ-ವಸ್ತುಗಳ ಭಾವ ಅಂದರೆ ಸ್ವರೂಪವೇ ಆಗಿರತಕ್ಕಂಥ ಸ್ಥೂಲತ್ವ, ಅಣುತ್ವ ಮೊದಲಾದ ಧರ್ಮಗಳ ವ್ಯಾವೃತ್ತೇಃ' - ಅಂದರೆ ಇನ್ನೊಂದರ ಅಪೇಕ್ಷೆಯಿಲ್ಲದೇ ಇರುವ

ಅಭಾವವನ್ನು 'ಅಸ್ಥೂಲಮ್' ಇತ್ಯಾದಿ ಶ್ರುತಿಯಿಂದ ಅಕ್ಷರನಲ್ಲಿ ಹೇಳಿರುವುದರಿಂದಲೂ 'ಅಕ್ಷರವು ಬ್ರಹ್ಮನೇ ಆಗಿರುವನು' ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಶ್ರುತ್ಯರ್ಥಸ್ತು – 'ತತ್' ಆಕಾಶಾಶ್ರಯತ್ವೇನ ವಕ್ಷ್ಯಮಾಣಮ್ 'ಅಕ್ಷರಂ' - 'ನ ಕ್ಷರತಿ ಇತ್ಯಕ್ಷರಶಬ್ದವಾಚ್ಯಂ ಬ್ರಹ್ಮ ಏತಲ್ಲಕ್ಷಣಕಂ 'ಬ್ರಾಹ್ಮಣಾಃ' ಜ್ಞಾನಿನೋಽಭಿವದಂತಿ 'ವೈ' ಪ್ರಸಿದ್ಧಮ್ । ತತ್ ಕಿಂ ಲಕ್ಷಣಮ್? ಇತ್ಯತ ಆಹ – ಅಸ್ಥೂಲಮಿತಿ ॥ ಸ್ಥೂಲಮ್ – ಮಹತ್ । ಸ್ವಪ್ನಬುದ್ಧಾರ್ಥಾಂತರಂ ತು – 'ಏತತ್' ಅಕ್ಷರಂ ಬ್ರಾಹ್ಮಣಾಃ 'ತತ್' ಚಿತ್‌ಪ್ರಕೃತ್ಯಾಖ್ಯಾಮಿತಿ ವದಂತಿ ಪೂರ್ವಪಕ್ಷಯಂತಿ ತದ್ ಬ್ರಹ್ಮ ಇತ್ಯಭಿವದಂತಿ ಸಿದ್ಧಾಂತಯಂತಿ । ಸಿದ್ಧಾಂತಸಾಧಕಂ ಹೇತುಮೇವಾಽಹ – ಅಸ್ಥೂಲಮಿತ್ಯಾದಿನಾ ಇತಿ ॥ ಅನೇನ 'ಪ್ರಸಿದ್ಧಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾತ್ ಜನಾರ್ದನಃ' ಇತಿ ಬೃಹದ್ಭಾಷ್ಯೋಕ್ತರೀತ್ಯಾ ಪ್ರಸಿದ್ಧಸ್ಥೂಲಾದಿವೈಲಕ್ಷಣ್ಯಮುಚ್ಯತೇ । ಸ್ಥೂಲಾಣ್ವಾದಿಪದಸ್ಯ ಭಾವಪ್ರಧಾನತ್ವೇ ತು ಲೌಕಿಕಸ್ಥೌಲ್ಯಾದಿರಾಹಿತ್ಯಮ್ ಅನೇನೋಕ್ತಂ ಭವತಿ । 'ಅಲೋಹಿತಂ' ಲೋಹಿತಶಬ್ದಿತರಕ್ತಾದ್ಯುಪಲಕ್ಷಿತ-ಪ್ರಾಕೃತರೂಪಸಾಮಾನ್ಯರಹಿತಮ್ । 'ಅಸ್ನೇಹಂ' - ಪ್ರಾಕೃತಸ್ನೇಹರಹಿತಮ್ । 'ಅಚ್ಛಾಯಂ'- 'ಛಾಯಾ ತ್ವವಿದ್ಯಾ ಸಂಪ್ರೋಕ್ತಾ' ಇತಿ ವಚನಾದಜ್ಞಾನರಹಿತಮ್ । ಜೀವದೇಹಸ್ಯೇವ ಛಾಯಾರಹಿತಂ ಚ । 'ಅತಮಃ' ಆವರಣರಹಿತಮ್ । 'ಅವಾಯು' ಪೀಡಾರೂಪಶ್ವಾಸೋಚ್ಛ್ವಾಸರಹಿತಮ್ ।

ಅನು– ಶ್ರುತಿಯ ಅರ್ಥವಾದರೋ – 'ತತ್' - ಆಕಾಶಕ್ಕೆ ಆಶ್ರಯನೆಂದು ಮುಂದೆ ಹೇಳಲಾಗುವ 'ಅಕ್ಷರಮ್' 'ನ ಕ್ಷರತಿ' - ನಾಶಹೊಂದುವುದಿಲ್ಲ ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಅಕ್ಷರಶಬ್ದವಾಚ್ಯವಾದ ಬ್ರಹ್ಮವು ಏತತ್ - ಮುಂದೆ ಹೇಳುವ ಈ ಲಕ್ಷಣವುಳ್ಳದ್ದೆಂದು 'ಬ್ರಾಹ್ಮಣಾಃ ಅಭಿವದಂತಿ ವೈ' ಜ್ಞಾನಿಗಳು ಹೇಳುವರೆಂದು ಪ್ರಸಿದ್ಧವಾಗಿದೆ. ಆ ಲಕ್ಷಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಅಸ್ಥೂಲಂ' ಇತ್ಯಾದಿಯಾಗಿ ಹೇಳಿರುವರು.

ಸ್ಥೂಲಮ್ - ಎಂದರೆ ಮಹತ್ತು.

ಸ್ವಪ್ನದಲ್ಲಿ ತಿಳಿದ ಈ ವಾಕ್ಯದ ಇನ್ನೊಂದು ಅರ್ಥವಾದರೋ ಹೀಗಿದೆ – 'ಏತತ್' - ಈ ಅಕ್ಷರವನ್ನು ಬ್ರಾಹ್ಮಣರು 'ತತ್' ಯಾವುದನ್ನು ಚಿತ್‌ಪ್ರಕೃತಿ ಸ್ವರೂಪವಾದದ್ದೆಂದು 'ವದಂತಿ' - ಅಂದರೆ ಪೂರ್ವಪಕ್ಷ ಮಾಡುತ್ತಾರೋ 'ತತ್' ಅದನ್ನು ಬ್ರಹ್ಮವೆಂದು ಸಿದ್ಧಾಂತ ಮಾಡುತ್ತಾರೆ. ಸಿದ್ಧಾಂತಸಾಧಕವಾದ ಹೇತುವನ್ನೇ 'ಅಸ್ಥೂಲಮಿತ್ಯಾದಿನಾ' ಎಂದುಹೇಳುತ್ತಿದ್ದಾರೆ. ಇದರಿಂದ 'ಪ್ರಸಿದ್ಧಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾದ್ ಜನಾರ್ದನಃ' ಎಂದು ಬೃಹದ್ಭಾಷ್ಯದಲ್ಲಿ ಹೇಳಿದ ರೀತಿಯಿಂದ 'ಪ್ರಸಿದ್ಧಸ್ಥೂಲಸೂಕ್ಷ್ಮಮೊದಲಾದ ವಸ್ತುಗಳ ವೈಲಕ್ಷಣ್ಯ'ವನ್ನು ಅಕ್ಷರನಲ್ಲಿ ಹೇಳಲಾಗಿದೆ. ಸ್ಥೂಲ, ಅಣು ಮೊದಲಾದ ಪದಗಳು ಸ್ಥೂಲತ್ವ ಮೊದಲಾದ ಧರ್ಮಗಳನ್ನು ಪ್ರಧಾನವಾಗಿ ಹೇಳುವ ಪಕ್ಷದಲ್ಲಿ ಲೋಕದಲ್ಲಿ ಕಂಡು ಬರುವ ಸ್ಥೂಲತ್ವಾದಿರಾಹಿತ್ಯವನ್ನು ಈ ವಾಕ್ಯದಿಂದ ಹೇಳಿದಂತಾಗುವುದು. 'ಅಲೋಹಿತಂ' ಎಂದರೆ ಲೋಹಿತಶಬ್ದದ ಅರ್ಥವಾದ ರಕ್ತರೂಪದಿಂದ ಉಪಲಕ್ಷಣಯಾ ಗ್ರಹಿಸಲ್ಪಡುವ ಪ್ರಾಕೃತರೂಪಗಳೆಲ್ಲದರ ಅಭಾವವು ಹೇಳಲ್ಪಡುವುದು. 'ಅಸ್ನೇಹಮ್' - ಎಂದರೆ ಪ್ರಾಕೃತ ಸ್ನೇಹಗುಣರಹಿತವಾದದ್ದು. 'ಅಚ್ಛಾಯಂ' ಎಂದರೆ 'ಛಾಯಾ ತು ಅವಿದ್ಯಾ ಸಂಪ್ರೋಕ್ತಾ' ಎಂಬ ವಚನನಾನುಸಾರ ಅಜ್ಞಾನರಹಿತವಾದದ್ದು. ಜೀವ ದೇಹಕ್ಕಿರುವಂತೆ ಛಾಯೆಯಿಂದ ರಹಿತವಾದದ್ದು ಕೂಡ ಆಗಿದೆ. 'ಅತಮಃ' - ಆವರಣರಹಿತವಾದದ್ದು. 'ಅವಾಯು' ಎಂದರೆ ಪೀಡಾರೂಪವಾದ ಶ್ವಾಸೋಚ್ಛ್ವಾಸಗಳಿಂದ ರಹಿತವಾದದ್ದು ಎಂದು ಅರ್ಥ.

ಭಾ.ದೀ.– ಯದ್ವಾ – ವ್ಯಾಸತೀರ್ಥೀಯೋಕ್ತರೀತ್ಯಾ ಅವಾಯ್ವನಾಕಾಶಮತೇಜಸ್ಕಮ್ ಇತ್ಯೇತೈಃ ತದಾರಬ್ಧಶರೀರರಹಿತಮ್ ಇತ್ಯುಚ್ಯತೇ । ಅತ ಏವ 'ಅಚ್ಛಾಯಮತಮೋಽವಾಯ್ವನಾಕಾಶಮ್' ಇತ್ಯತ್ರ ಸರ್ವಾತ್ಮನಾ ನಿಷೇಧ ಇತ್ಯುಕ್ತಂ ಸುಧಾಟೀಕಯೋಃ। 'ಅಸಂಗಂ' ಸರ್ವಗತಮಪಿ ತತ್ಕೃತಲೇಪರಹಿತಮ್ । ಅರಸಮ್ ಅಗಂಧಮ್ ಇತ್ಯಾಭ್ಯಾಮುಪಲಕ್ಷಣಯಾ ಪ್ರಾಕೃತರಸಗಂಧಾದಿರಾಹಿತ್ಯಮುಚ್ಯತೇ । 'ಅಚಕ್ಷುಷ್ಕಮ್' ಇತ್ಯಾದಿನಾ ಪ್ರಾಕೃತಸ್ವಭಿನ್ನಚಕ್ಷುರಾದಿರಾಹಿತ್ಯಮ್ । 'ಅತೇಜಸ್ಕಂ' ಪ್ರಾಕೃತವರ್ಚೋರಹಿತಮ್ । 'ಅಪ್ರಾಣಮ್'

ಉಕ್ತಚಕ್ಷುರಾದಿವ್ಯತಿರಿಕ್ತಪ್ರಾಕೃತಜ್ಞಾನೇಂದ್ರಿಯಕರ್ಮೇಂದ್ರಿಯರಹಿತಮ್। ವ್ಯಾಸತೀರ್ಥೀಯೋಕ್ತರೀತ್ಯಾ ಪ್ರಾಣವಾಯುರಹಿತಮಿತಿ ವಾ । 'ಅಮುಖಂ' ಪ್ರಾಕೃತವಿಗ್ರಹರಹಿತಂ ವಾ । 'ಅಮಾತ್ರಂ' - ಪರಿಮಿತಿಶೂನ್ಯಮ್ । 'ಮೀಯಂತೇ ಏಭಿಃ' ಇತಿ ಮಾತ್ರಾ ಇಂದ್ರಿಯಾಣಿ - ಇತಿ ಟೀಕೋಕ್ತೇಃ 'ಅಮಾತ್ರಂ ಚಕ್ಷುರಾದೀಂದ್ರಿಯರಹಿತಮ್' ಇತಿ ವ್ಯಾಸತೀರ್ಥೀಯೋಕ್ತಿಃ । ಸರ್ವಾತ್ಮನಾ ಶರೀರಾರಂಭಕಪಂಚಮಾತ್ರಶೂನ್ಯಂ ವಾ । ನ ವಿದ್ಯತೇಽಂತರಂ ಬಾಹ್ಯಂ ಚ ಯಸ್ಮಾತ್ ತದನಂತರಮಬಾಹ್ಯಮ್, ಇದಮೇವ ಸರ್ವಸ್ಮಾದಂತರಂ ಬಾಹ್ಯಂ ಚ ಇತ್ಯರ್ಥಃ। 'ತತ್' ಬ್ರಹ್ಮ 'ಕಿಂಚನ' ಅನ್ನಾದಿಕಂ ಶುಭಮಶುಭಂ ವಾ –

"ಸಾಶನಾನಶನತ್ವೇನ ನರದೇವೌ ಯಥೋದಿತೌ।
ಅತ್ತಿಂ ವಿನಾಽಪ್ಯದೌರ್ಬಲ್ಯಾತ್ ತಥಾಽನತ್ತಿರ್ಹರೇರ್ಭುಜಃ'

ಇತಿ ಸ್ಮೃತೇರುಪಜೀವನಾರ್ಥಂ 'ನಾಶ್ನಾತಿ' ನಾತ್ತಿ । 'ಕಶ್ಚನ' ಕೋಽಪಿ ಸಮರ್ಥಃ 'ತತ್' ಬ್ರಹ್ಮ 'ನಾಶ್ನಾತಿ' ನ ಸಂಹರತೀತಿ ॥

ಅಥವಾ – ವ್ಯಾಸತೀರ್ಥೀಯ ವ್ಯಾಖ್ಯಾನದಲ್ಲಿ ಹೇಳಿದಂತೆ 'ಅವಾಯು-ಅನಾಕಾಶಮ್- ಅತೇಜಸ್ಕಮ್' ಈ ಪದಗಳಿಂದ ವಾಯು ಮೊದಲಾದವುಗಳಿಂದ ನಿರ್ಮಿತವಾದ ಶರೀರರಹಿತವಾದದ್ದು ಎಂದು ಹೇಳಲಾಗಿದೆ. ಆದ್ದರಿಂದಲೇ 'ಅಚ್ಛಾಯಮ್- ಅತಮಃ- ಅವಾಯು- ಅನಾಕಾಶಮ್' ಎಂಬಲ್ಲಿ (ಸರ್ವಪ್ರಕಾರದಿಂದ) ಛಾಯಾ, ತಮಸ್ಸು ಮೊದಲಾದವುಗಳನ್ನು ಸರ್ವರೀತಿಯಿಂದಲೂ ನಿಷೇಧಿಸಲಾಗಿದೆ ಎಂದು ಸುಧಾಗ್ರಂಥ ಮತ್ತು ತತ್ವಪ್ರಕಾಶಿಕಾ ಗ್ರಂಥಗಳಲ್ಲಿ ಹೇಳಲಾಗಿದೆ. 'ಅಸಂಗಮ್' ಎಂದರೆ ಸರ್ವಗತವಾಗಿದ್ದರೂ ಅದರಿಂದ ಉಂಟಾಗಬಹುದಾದ ಲೇಪದಿಂದ ರಹಿತವಾಗಿದೆ. 'ಅರಸಮ್ - ಅಗಂಧಮ್' ಈ ಎರಡು ಪದಗಳಿಂದ ಪ್ರಾಕೃತವೂ, ಆದ್ದರಿಂದಲೇ ತನ್ನಿಂದ ಭಿನ್ನವೂ ಆದ ಚಕ್ಷುರಾದಿಗಳ ಅಭಾವವನ್ನು ಹೇಳಲಾಗಿದೆ. 'ಅತೇಜಸ್ಕಂ' ಪ್ರಾಕೃತವಾದ ವರ್ಚಸ್ಸಿನಿಂದ ರಹಿತವಾದದ್ದು. 'ಅಪ್ರಾಣಮ್' ಮೇಲೆ ಹೇಳಿದ ಚಕ್ಷುರಾದಿಗಳಿಗಿಂತ ಭಿನ್ನವಾದ ಪ್ರಾಕೃತವಾದ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ರಹಿತವಾದದ್ದು. ಅಥವಾ ವ್ಯಾಸತೀರ್ಥೀಯ ಟಿಪ್ಪಣಿಯಲ್ಲಿ ಹೇಳಿದಂತೆ

ಅಪ್ರಾಣಮ್ ಎಂದರೆ ಪ್ರಾಣವಾಯುರಹಿತವಾದದ್ದು ಎಂದರ್ಥ. 'ಅಮುಖಂ' ಪ್ರಾಕೃತಶರೀರರಹಿತವಾದದ್ದು. 'ಅಮಾತ್ರಂ' ಪರಿಮಿತಿಯಿಂದ ಶೂನ್ಯ- ವಾದದ್ದು. 'ಮೀಯಂತೇ ಏಭಿಃ ಇತಿ ಮಾತ್ರಾಃ - ಇಂದ್ರಿಯಾಣಿ' ಇವುಗಳಿಂದ ತಿಳಿಯಲ್ಪಡುತ್ತವೆ ಎಂಬ ವ್ಯುತ್ಪತ್ತಿಯಂತೆ ಮಾತ್ರಾಃ ಎಂದರೆ ಇಂದ್ರಿಯಗಳು – ಎಂದು ಟೀಕೆಯಲ್ಲಿ ಹೇಳಿರುವುದರಿಂದ 'ಅಮಾತ್ರಂ' ಎಂದರೆ ಚಕ್ಷುರಾದಿ ಇಂದ್ರಿಯಗಳಿಂದ ರಹಿತವಾದದ್ದು ಎಂದು ವ್ಯಾಸತೀರ್ಥೀಯವ್ಯಾಖ್ಯಾನದಲ್ಲಿ ಹೇಳಲಾಗಿದೆ. ಅಥವಾ ಸರ್ವಾತ್ಮನಾ ಶರೀರಜನಕವೆಂದು ಹೇಳಲಾಗುವ ಪಂಚಮಾತ್ರಾಗಳಿಂದ ಶೂನ್ಯ- ವಾದದ್ದು. 'ನ ವಿದ್ಯತೇ ಅಂತರಂ ಬಾಹ್ಯಂ ಚ ಯಸ್ಮಾತ್' ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಅಂತರವೂ ಬಾಹ್ಯವೂ ಯಾವುದಕ್ಕಿಲ್ಲವೋ ಅದು ಅನಂತರಂ, ಅಬಾಹ್ಯಮ್ ಎಂದೆನಿಸಿಕೊಳ್ಳುತ್ತದೆ. ಅಂದರೆ ಇದೇ ಎಲ್ಲಕ್ಕಿಂತಲೂ ಒಳಗಿರತಕ್ಕದ್ದು, ಹಾಗೆಯೇ ಬಾಹ್ಯವೂ ಆಗಿರುವುದು ಎಂದರ್ಥ. 'ತತ್' ಆ ಬ್ರಹ್ಮವು 'ಕಿಂಚನ' ಅನ್ನಾದಿಗಳನ್ನಾಗಲೀ, ಶುಭಾಶುಭಗಳನ್ನಾಗಲೀ –

''ಸಾಶನಾನಶನತ್ವೇನ ನರದೇವೌ ಯಥೋದಿತೌ ।
ಅತ್ತಿಂ ವಿನಾಽಪ್ಯದೌರ್ಬಲ್ಯಾತ್ ತಥಾಽನತ್ತಿರ್ಹರೇರ್ಭುಜಿಃ'

–ಅನ್ನವುಳ್ಳವರೆಂದೂ ಹಾಗೂ ಅನ್ನರಹಿತರೆಂದೂ ಇಬ್ಬರು ನರ-ದೇವರು. ನರಾಕಾರದಿಂದಿರುವ ದೇವತೆಗಳು ಹೀಗೆ ಹೇಳಲ್ಪಟ್ಟಿರುವರೋ ಹಾಗೆಯೇ ಅಶನ- ವಿಲ್ಲದಿದ್ದರೂ ದೌರ್ಬಲ್ಯವಿಲ್ಲದಿರುವುದರಿಂದ ಶ್ರೀಹರಿಯ ಭುಜಿಃ ಭೋಜನವು ಹಾಗೆಯೇ ಅನತ್ತಿ - ಅನ್ನರಹಿತವಾದದ್ದೆಂದು ಹೇಳಲ್ಪಟ್ಟಿದೆ.

ಹೀಗೆ ಸ್ಮೃತಿ ಇರುವುದರಿಂದ ಬ್ರಹ್ಮನು ತನ್ನ ಉಪಜೀವನಕ್ಕಾಗಿ ನಾಶ್ನಾತಿ -ತಿನ್ನುವುದಿಲ್ಲ. 'ಕಶ್ಚನ' ಒಬ್ಬ ಸಮರ್ಥನು ತದ್ ಬ್ರಹ್ಮ- ಆ ಬ್ರಹ್ಮವನ್ನು, ನಾಶ್ನಾತಿ- ಸಂಹಾರ ಮಾಡುವುದಿಲ್ಲ.

ಭಾ.ದೀ. – ಲೌಕಿಕಸ್ಥೌಲ್ಯಾದಿರಾಹಿತ್ಯಂ ಕಥಂ ವಿಷ್ಣುತ್ವನಿಶ್ಚಾಯಕಂ, ತದ್ಧರ್ಮ- ತ್ವೇನಾನಿಶ್ಚಿತತ್ವಾತ್ ಇತ್ಯತ ಆಹ – ಅಸ್ಥೂಲ ಇತಿ ॥

ಲೌಕಿಕವಾದ ಸ್ಥೂಲತ್ವ ಮೊದಲಾದ ಧರ್ಮಗಳು ಇಲ್ಲದಿರುವುದು ವಿಷ್ಣುವೆಂದು ನಿಶ್ಚಯಿಸಲು ಹೇಗೆ ಸಹಾಯಕವಾಗುತ್ತದೆ? ಏಕೆಂದರೆ ಅಂತಹ ಸ್ಥೂಲತ್ವಾದಿ ರಾಹಿತ್ಯವು ವಿಷ್ಣುವಿನ ಧರ್ಮವೆಂದು ನಿಶ್ಚಿತವಾಗಿಲ್ಲ ಎಂಬ ಶಂಕೆಗೆ ಉತ್ತರವಾಗಿ – 'ಅಸ್ಥೂಲಃ' ಇತ್ಯಾದಿ ವಾಕ್ಯವು ಹೊರಟಿದೆ.

**ಭಾಷ್ಯಮ್ -- 'ಅಸ್ಥೂಲೋಽನಣುರಮಧ್ಯಮೋ ಮಧ್ಯಮೋಽ-ವ್ಯಾಪಕೋ ವ್ಯಾಪಕೋ ಯೋಽಸೌ ಹರಿರಾದಿರನಾದಿರವಿಶ್ವೋ ವಿಶ್ವಃ ಸಗುಣೋ ನಿರ್ಗುಣಃ' ಇತ್ಯಾದೇರ್ವಿಷ್ಣೋರೇವ ತೇ ಧರ್ಮಾಃ ।**

> ''ಅಸ್ಥೂಲೋಽನಣುರಮಧ್ಯಮೋ ಮಧ್ಯಮೋಽವ್ಯಾಪಕೋ ವ್ಯಾಪಕೋ ಯೋಽಸೌ ಹರಿರಾದಿರನಾದಿರವಿಶ್ವೋ ವಿಶ್ವಃ ಸಗುಣೋ ನಿರ್ಗುಣಃ'' ಇತ್ಯಾದಿ ಪ್ರಮಾಣದಿಂದ ಆ ಅಸ್ಥೂಲತ್ವಾದಿಗಳು ವಿಷ್ಣು-ವಿನ ಧರ್ಮಗಳೇ ಆಗಿವೆ.

ಭಾ.ದೀ. – 'ಅಸ್ಥೂಲಃ' - ಲೌಕಿಕಮಹತ್ತ್ವರಹಿತಃ, 'ಅನಣುಃ' - ಲೌಕಿಕಾ-ಣುತ್ವರಹಿತಃ, 'ಅಮಧ್ಯಮಃ' ಲೌಕಿಕಮಧ್ಯಮಪರಿಮಾಣರಹಿತಃ । ನ ಚ ಪರಿ-ಮಾಣಾದಿರಾಹಿತ್ಯೇ ವಿಷ್ಣೋರಸ್ವಭಾವತ್ವಾಪತ್ತಿರಿತಿ ವಾಚ್ಯಮ್ । ಲೌಕಿಕಸ್ಥೌಲ್ಯಾದಿ-ರಾಹಿತ್ಯೇಽಪಿ ಅಲೌಕಿಕಪರಿಮಾಣಾದಿಸದ್ಭಾವಾದಿತ್ಯಾಹ – ಮಧ್ಯಮ ಇತ್ಯಾ-ದಿನಾ ॥ ನ ಚಾನೇನ ಸ್ಥೂಲತ್ವಾದೇರನುಕ್ತೇರ್ನ ಚೋಕ್ತಪರಿಹಾರ ಇತಿ ವಾಚ್ಯಮ್ । 'ಮಧ್ಯಮೋ ವ್ಯಾಪಕಃ' ಇತ್ಯಾದ್ಯುಕ್ತೇಃ ಸ್ಥೂಲೋಽಣುಶ್ಚ ಇತ್ಯುಪಲಕ್ಷಕತ್ವಾತ್ । ನ ಚ ಮಧ್ಯಮಪರಿಮಾಣವತ್ತ್ವೇ ವಿಷ್ಣೋರನಿತ್ಯತ್ವಾಪತ್ತಿರಿತಿ ವಾಚ್ಯಮ್ । ಅನಿತ್ಯತ್ವಾನಾಪಾದಕಮಧ್ಯಮಪರಿಮಾಣಾಭ್ಯುಪಗಮಾತ್ ।

ತತ್ತ್ವಪ್ರದೀಪೇ ತು 'ಅಮಧ್ಯಮಃ' ಮಧ್ಯಮಪರಿಮಾಣನಿಯತಿವರ್ಜಿತಃ 'ವ್ಯಾಪ್ತೋಽಣುರ್ಮಧ್ಯಮಸ್ತಥಾ' ಇತ್ಯುಕ್ತೇಃ ಮಧ್ಯೇ ಮೀಯಮಾನತ್ವಾನ್ಮಧ್ಯಮ

**ಇತಿ ವ್ಯಾಖ್ಯಾತಮ್ । ಅಸ್ಮಿನ್ ಪಕ್ಷೇ ನಿಯತಮಧ್ಯಮಪರಿಮಾಣಶೂನ್ಯತ್ವಾತ್ ನಾನಿತ್ಯಮಿತಿ ಪರಿಹಾರೋಽಭಿಪ್ರೇತಃ। 'ನ ವಿದ್ಯತೇಽನ್ಯೋ ವ್ಯಾಪಕೋ ಯಸ್ಮಾಽಸೌ' ಅವ್ಯಾಪಕಃ । 'ಲೋಕವಿಲಕ್ಷಣವ್ಯಾಪಕಃ' ಇತಿ ವಾ । 'ವ್ಯಾಪಕಃ' ಸರ್ವದೇಶಕಾಲವ್ಯಾಪೀ । ಆದಿಃ ಕಾರಣಮ್ ಅನಾದಿಸ್ತಚ್ಛೂನ್ಯ ಉತ್ಪತ್ತಿಶೂನ್ಯ ಇತಿ ವಾ । ನ ವಿದ್ಯತೇ ವಿಶ್ವಃ ಪೂರ್ಣೋ ಯಸ್ಮಾದ್ ಅವಿಶ್ವಃ। ಪೂರ್ಣತ್ವಾದ್ ವಿಶ್ವಃ।**

ಅನು– 'ಅಸ್ಥೂಲಃ' ಎಂದರೆ ಲೌಕಿಕವಾದ ಮಹತ್ವರಹಿತನು. 'ಅನಣುಃ' ಲೌಕಿಕವಾದ ಅಣುತ್ವಶೂನ್ಯನು. 'ಅಮಧ್ಯಮಃ' - ಲೌಕಿಕವಾದ ಮಧ್ಯಮಪರಿಮಾಣವಿಲ್ಲದವನು. ಹೀಗೆ ಪರಿಮಾಣ ಮೊದಲಾದ ಧರ್ಮಗಳಿಲ್ಲದಿದ್ದ ಪಕ್ಷದಲ್ಲಿ ವಿಷ್ಣುವು ಸ್ವರೂಪರಹಿತನಾಗಬೇಕಾದೀತು!! ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಲೌಕಿಕವಾದ ಸ್ಥೂಲತ್ವಮೊದಲಾದವುಗಳು ಇಲ್ಲದಿದ್ದರೂ ಅಲೌಕಿಕವಾದ ಪರಿಮಾಣ ಮೊದಲಾದ ಧರ್ಮಗಳು ಅವನಲ್ಲಿ ಇವೆ ಎಂದು ''ಮಧ್ಯಮ'' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಈ ವಾಕ್ಯದಿಂದ ಸ್ಥೂಲತ್ವಾದಿ ಧರ್ಮಗಳನ್ನು ಹೇಳದಿರುವುದರಿಂದ ಬಂದ ಶಂಕೆಯು ಪರಿಹಾರವಾಗುವುದಿಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ, 'ಮಧ್ಯಮಃ ವ್ಯಾಪಕಃ' ಎಂಬ ಶಬ್ದಗಳು 'ಸ್ಥೂಲ, ಅಣು' ಎಂಬುದಕ್ಕೂ ಉಪಲಕ್ಷಕವಾಗಿವೆ. ಹೀಗೆ ಮಧ್ಯಮಪರಿಮಾಣವಿದ್ದಲ್ಲಿ ವಿಷ್ಣುವು ಅನಿತ್ಯನಾಗಬೇಕಾದೀತು! ಎಂದರೆ ಅದು ಸರಿಯಲ್ಲ. ಏಕೆಂದರೆ, ಅನಿತ್ಯತ್ವವನ್ನು ತಂದು ಕೊಡುವ ಮಧ್ಯಮಪರಿಮಾಣವನ್ನು ವಿಷ್ಣುವಿನಲ್ಲಿ ಒಪ್ಪಿರುವುದಿಲ್ಲ.

ತತ್ವಪ್ರದೀಪದಲ್ಲಾದರೋ 'ವ್ಯಾಪ್ತೋಽಣುರ್ಮಧ್ಯಮಸ್ತಥಾ' ಭಗವಂತನು ವ್ಯಾಪ್ತನು, ಅಣುವು ಹಾಗೂ ಮಧ್ಯಮನೂ ಆಗಿರುವನು ಎಂದು ಹೇಳಿರುವುದರಿಂದ 'ಅಮಧ್ಯಮಃ' – ಅಂದರೆ ಮಧ್ಯಮಪರಿಮಾಣದ ನಿಯಮವಿಲ್ಲದಿರುವವನು ಎಂದು ಅರ್ಥ. 'ಮಧ್ಯೇ ಮೀಯಮಾನತ್ವಾತ್ ಮಧ್ಯಮಃ' - ಶರೀರ ಮಧ್ಯದಲ್ಲಿ ಜ್ಞಾನವಿಷಯನಾಗಿರುವುದರಿಂದ ಮಧ್ಯಮನೆಂದು ವ್ಯಾಖ್ಯಾನ ಮಾಡಲಾಗಿದೆ. ಈ ಪಕ್ಷದಲ್ಲಿ 'ನಿಯಮೇನ ಮಧ್ಯಮಪರಿಮಾಣವಿಲ್ಲದಿರುವುದರಿಂದ ಭಗವಂತನು ಅನಿತ್ಯನಲ್ಲ' ಎಂಬ ಪರಿಹಾರವು ಅಭಿಪ್ರೇತವಾಗಿದೆ. 'ಯಾರಿಗೆ ಮತ್ತೊಬ್ಬ ವ್ಯಾಪಕನಿಲ್ಲವೋ ಅವನು

ಅವ್ಯಾಪಕ'. ಅಥವಾ ಅವ್ಯಾಪಕನೆಂದರೆ 'ಲೋಕವಿಲಕ್ಷಣನಾದ ವ್ಯಾಪಕ'. 'ವ್ಯಾಪಕಃ' - ಸರ್ವದೇಶಕಾಲಗಳನ್ನು ವ್ಯಾಪಿಸಿರುವವನು. 'ಆದಿಃ' ಕಾರಣನಾಗಿರುವವನು. 'ಅನಾದಿಃ' ಕಾರಣರಹಿತನು. ಅಥವಾ ಉತ್ಪತ್ತಿಶೂನ್ಯನು. ಯಾರಿಗಿಂತಲೂ 'ವಿಶ್ವಃ' ಪೂರ್ಣನಾದವನು ಇಲ್ಲವೋ ಅವನು 'ಅವಿಶ್ವ'. ಪೂರ್ಣನಾದುದರಿಂದ ಅವನು 'ವಿಶ್ವ'ನೆಂದೆನಿಸುವನು.

ಭಾ.ದೀ.– ಯದ್ವಾ – 'ಅವಿಶ್ವಃ' ಲೌಕಿಕೇಷು ಅಪ್ರವಿಷ್ಟಃ । 'ವಿಶ್ವಃ' ಜಗದ್ ಹೃದಯಂ ವಾ ಪ್ರವಿಷ್ಟಃ । 'ಸಗುಣಃ' ಜ್ಞಾನಾನಂದಾದಿಗುಣವಾನ್ । 'ನಿರ್ಗುಣಃ' ಸತ್ತ್ವಾದಿಗುಣಹೀನ ಇತ್ಯರ್ಥಃ । 'ಇತ್ಯಾದೇಃ' ಇತಿವಾಕ್ಯಾತ್ । ಆದಿಶಬ್ದೇನ 'ಅಣೋರಣೀಯಾನ್ ಮಹತೋ ಮಹೀಯಾನ್' (ಕಠ. ೨-೨೦) ಇತಿ ಕಠ-ಶ್ರುತಿರ್ಗೃಹ್ಯತೇ । 'ತೇ' ಅಸ್ಥೂಲತ್ವಾದಯಃ । 'ಯತಃ' ಇತಿ, 'ನಿಶ್ಚಿತಾಃ' ಇತಿ ಶೇಷಃ । ಅಸ್ಯ 'ಅತಸ್ತೇಽಕ್ಷರಸ್ಯ ವಿಷ್ಣುತ್ವನಿಶ್ಚಾಯಕಾ ಭವಂತಿ' ಇತ್ಯುಪಸ್ಕೃತವಾಕ್ಯೇನ ಅನ್ವಯಃ ।

ಅಥವಾ 'ಅವಿಶ್ವಃ' ಎಂದರೆ ಲೌಕಿಕಪದಾರ್ಥಗಳ ಮಧ್ಯೆ ಸೇರಿರದವನು. 'ವಿಶ್ವಃ' ಜಗತ್ತನ್ನು ಅಥವಾ ಹೃದಯವನ್ನು ಪ್ರವೇಶಿಸಿರುವವನು. 'ಸಗುಣಃ' - ಜ್ಞಾನಾನಂದಾದಿ ಗುಣವುಳ್ಳವನು. 'ನಿರ್ಗುಣಃ' - ಸತ್ತ್ವ ಮೊದಲಾದ ಪ್ರಾಕೃತಗುಣರಹಿತನು ಎಂದು ಅರ್ಥ. 'ಇತ್ಯಾದೇಃ' - ಎಂಬ ವಾಕ್ಯದಿಂದ. ಇಲ್ಲಿ ಆದಿಶಬ್ದದಿಂದ 'ಅಣೋರಣೀ-ಯಾನ್ ಮಹತೋ ಮಹೀಯಾನ್' ಎಂಬ ಕಠಶ್ರುತಿಯು ಗ್ರಹಿಸಲ್ಪಡುವುದು. 'ತೇ' - ಆ ಅಸ್ಥೂಲತ್ವ ಮೊದಲಾದ ಧರ್ಮಗಳು. ಇಲ್ಲಿ 'ಯತಃ' ಎಂಬ ಪದವು ಹಾಗೂ 'ನಿಶ್ಚಿತಾಃ' ಎಂಬ ಪದವು ಶೇಷವಾಗಿವೆ. ಈ ವಾಕ್ಯಕ್ಕೆ – 'ಅತಸ್ತೇ ಅಕ್ಷರಸ್ಯ ವಿಷ್ಣುತ್ವ-ನಿಶ್ಚಾಯಕಾಃ ಭವಂತಿ' - 'ಆದ್ದರಿಂದ ಆ ಧರ್ಮಗಳು ಅಕ್ಷರನು ವಿಷ್ಣುವೆಂದು ನಿಶ್ಚಯಿಸಲು ಕಾರಣವಾಗುತ್ತವೆ' ಎಂಬ ಅಧ್ಯಾಹಾರ ಮಾಡಿಕೊಳ್ಳುವ ವಾಕ್ಯದಿಂದ ಅನ್ವಯವನ್ನು ಪಡೆಯುವುದು.

ಭಾ.ದೀ. – ನನು ತಥಾಽಪಿ ತೇ ವಿಷ್ಣೋರೇವ ಇತಿ ಕಥಮ್? ಯಸ್ಮಾತ್ ತೇಽಪ್ರಾಕೃತವಿಗ್ರಹೇ ಮಧ್ಯಮಾಕ್ಷರೇಽಪಿ ಸಂತಿ । ನೈಷ ದೋಷಃ – ಯತಃ ತೇ ತತ್ರ

ಭಗವದಪೇಕ್ಷಯೈವ ಸಂತಿ । ಅನ್ಯಾನಪೇಕ್ಷಾ ಏವ ಧರ್ಮಾ ಹಿ ಅತ್ರ ಹೇತುತ್ವೇನ ವಿವಕ್ಷಿತಾಃ।

ಶಂಕೆ – ಆದರೂ ಆ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಇರುವ ಧರ್ಮಗಳು ಎಂದು ಹೇಳುವುದು ಹೇಗೆ? ಏಕೆಂದರೆ, ಆ ಧರ್ಮಗಳು ಅಪ್ರಾಕೃತಶರೀರವನ್ನು ಹೊಂದಿರುವ ಮಧ್ಯಮಾಕ್ಷರಳು ಎನಿಸಿದ ಶ್ರೀತತ್ವದಲ್ಲೂ ಇವೆ.

ಸಮಾಧಾನ – ಇದು ದೋಷವಲ್ಲ. ಏಕೆಂದರೆ, ಆ ಧರ್ಮಗಳು ಶ್ರೀತತ್ವದಲ್ಲಿ ಭಗವಂತನ ಇಚ್ಛಾನುಸಾರವಾಗಿಯೇ ಇವೆ. ಇಲ್ಲಿ ಇನ್ನೊಬ್ಬರ ಇಚ್ಛೆಗೆ ಅಧೀನವಲ್ಲದ ಧರ್ಮಗಳೇ ಅಕ್ಷರತ್ವವನ್ನು ಸಾಧಿಸುವ ಹೇತುಗಳೆಂದು ವಿವಕ್ಷಿತವಾಗಿವೆ.

ಭಾ.ದೀ. – ನನು ಲೌಕಿಕಪರಿಣಾಮಾದಿರಾಹಿತ್ಯಂ ಕಥಂ ವಿಷ್ಣೋ-ರ್ಯುಕ್ತಮ್, ಲೋಕೇ ಸರ್ವಪದಾರ್ಥಾನಾಂ ಪ್ರಾಕೃತಪರಿಮಾಣಸ್ಯೈವ ದರ್ಶ-ನಾತ್ ಇತ್ಯತ ಆಹ – ಅಸ್ಥೂಲ ಇತಿ ॥

ಭಾ.ದೀ. – ವಿಷ್ಣುವಿಗೆ ಲೌಕಿಕವಾದ ಪರಿಮಾಣ ಮೊದಲಾದ ಧರ್ಮಗಳು ಇಲ್ಲದಿರುವುದು ಹೇಗೆ ಯುಕ್ತವಾಗುವುದು? ಏಕೆಂದರೆ ಲೋಕದಲ್ಲಿ ಎಲ್ಲ ಪದಾರ್ಥ-ಗಳಿಗೂ ಪ್ರಾಕೃತ ಪರಿಮಾಣವಿರುವುದೆಂದೇ ಕಂಡಿದೆ? ಎಂಬ ಶಂಕೆಗೆ ಉತ್ತರವಾಗಿ – "ಅಸ್ಥೂಲ" ಎಂಬ ವಾಕ್ಯವು ಹೊರಟಿದೆ.

**ಭಾಷ್ಯಮ್ –**

**'ಅಸ್ಥೂಲೋಽನಣುರೂಪೋಽಸಾವವಿಶ್ವೋ ವಿಶ್ವ ಏವ ಚ ।**
**ವಿರುದ್ಧಧರ್ಮರೂಪೋಽಸಾವೈಶ್ವರ್ಯಾತ್ ಪುರುಷೋತ್ತಮಃ'।**
**ಇತಿ ಚ ಬ್ರಾಹ್ಮೇ ॥ ೧೨ ॥**

॥ ಇತಿ ಅಕ್ಷರಾಧಿಕರಣಮ್ ॥ ೩ ॥

"ಅಸ್ಥೂಲೋಽನಣುರೂಪೋಽಸಾವವಿಶ್ವೋ ವಿಶ್ವ ಏವ ಚ ।
ವಿರುದ್ಧಧರ್ಮರೂಪೋಽಸಾವೈಶ್ವರ್ಯಾತ್ ಪುರುಷೋತ್ತಮಃ'। "

ಪುರುಷೋತ್ತಮನಾದ ಈ ಭಗವಂತನು ಅಸ್ಥೂಲನೂ, ಅನಣು-ಸ್ವರೂಪನೂ, ಅವಿಶ್ವನೂ, ವಿಶ್ವನೂ ಆಗಿರುವನು. ಈ ಭಗವಂತ-ನು ತನ್ನಲ್ಲಿರುವ ಅದ್ಭುತವಾದ ಐಶ್ವರ್ಯದಿಂದಾಗಿ ವಿರುದ್ಧ-ಧರ್ಮಸ್ವರೂಪನು ಆಗಿರುವನು - ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

ಭಾ.ದೀ.– 'ಅಸೌ ಪುರುಷೋತ್ತಮಃ' – ಭಗವಾನ್ 'ಅಸ್ಥೂಲೋಽನಣು-ರೂಪೋ ಭವತಿ' ಪ್ರಾಕೃತಲೌಕಿಕಸ್ಥೂಲಾಣುತ್ವರೂಪಧರ್ಮರಹಿತವಪುರ್ಭವತಿ । ಏವಮ್ 'ಅವಿಶ್ವೋ ವಿಶ್ವಶ್ಚ' ಲೋಕಬಹಿರ್ಭೂತೋ ಲೋಕಾಂತರ್ಗತಶ್ಚ ಭವತಿ। ತಥಾ ವಿರುದ್ಧಧರ್ಮರೂಪಶ್ಚ ಭವತಿ । ಲೋಕೇ ಪರಸ್ಪರಂ ವಿರುದ್ಧಾಃ ಸ್ಥೂಲತ್ವಾ-ಣುತ್ವಾದಯೋ ಧರ್ಮಾಃ ಸ್ವರೂಪಭೂತಾ ಯಸ್ಯ ಸಃ ತಥೋಕ್ತಃ। ಕಥಮಿತ್ಯತೋ ಘಟಕಮಾಹ – ಐಶ್ವರ್ಯಾದಿತಿ ॥ 'ಅಚಿಂತ್ಯೈಶ್ವರ್ಯಸಾಮರ್ಥ್ಯಾತ್' ಇತ್ಯರ್ಥಃ। 'ಐಶ್ವರ್ಯಾದೇವ' ಇತ್ಯನೇನ 'ನಾತ್ರೋಪಪಾದಕಾಂತರಮನ್ವೇಷಣೀಯಮ್' ಇತ್ಯುಕ್ತಂ ಭವತಿ । 'ಇತಿ ಬ್ರಹ್ಮಾಂಡೇ' ಇತ್ಯಸ್ಯ 'ಉಕ್ತತ್ವಾದ್ ಯುಕ್ತಾ' ಇತ್ಯಧ್ಯಾ-ಹಾರೇಣ ತೇ ಧರ್ಮಾಃ ವಿಷ್ಣೋರ್ಯುಕ್ತಾ ಏವ ಇತಿ ಪೂರ್ವವಾಕ್ಯೇನಾನ್ವಯಃ ॥

॥ ಇತಿ ಬ್ರಹ್ಮಸೂತ್ರಭಾಷ್ಯೇ ಅಕ್ಷರಾಧಿಕರಣಮ್ ॥೩॥

'ಅಸೌ ಪುರುಷೋತ್ತಮಃ' ಪುರುಷೋತ್ತಮನಾದ ಭಗವಂತನು 'ಅಸ್ಥೂಲಃ ಅನಣುರೂಪಃ' ಪ್ರಾಕೃತವಾದ ಲೌಕಿಕವಾದ ಸ್ಥೂಲತ್ವ ಅಣುತ್ವ ಮೊದಲಾದ ಧರ್ಮರಹಿತನಾಗಿದ್ದಾನೆ. ಹಾಗೆಯೇ 'ಅವಿಶ್ವಃ ವಿಶ್ವಶ್ಚ' - ಲೋಕಬಹಿರ್ಭೂತನೂ, ಲೋಕಾಂತರ್ಗತನೂ ಆಗಿರುವನು. ಹಾಗೆಯೇ ವಿರುದ್ಧಧರ್ಮಸ್ವರೂಪನೂ ಆಗಿರು-ವನು. ಲೋಕದಲ್ಲಿ ಪರಸ್ಪರವಿರುದ್ಧವಾದ ಸ್ಥೂಲತ್ವ, ಅಣುತ್ವ ಮೊದಲಾದ ಧರ್ಮ-

ಗಳು ಯಾರ ಸ್ವರೂಪವೇ ಆಗಿರುವವೋ ಅವನೆಂದು ''ವಿರುದ್ಧಧರ್ಮರೂಪಃ'' ಎಂಬ ಪದದ ಅರ್ಥವಾಗಿದೆ. ಇದು ಹೇಗೆ ಯುಕ್ತವಾಗುವುದು? ಎಂಬ ಪ್ರಶ್ನೆಗೆ ಉತ್ತರವಾಗಿ ಅಂತಹ ಸ್ವಭಾವವಿರುವುದನ್ನು ಸಮರ್ಥಿಸುವ ಭಗವಂತನ ವೈಶಿಷ್ಟ್ಯವನ್ನು – ''ಐಶ್ವರ್ಯಾತ್'' ಎಂಬ ಪದದಿಂದ ಹೇಳಲಾಗಿದೆ. ನಮ್ಮ ತರ್ಕಕ್ಕೆ ಮೀರಿದ ಐಶ್ವರ್ಯ ಅಂದರೆ ಸಾಮರ್ಥ್ಯವಿರುವುದರಿಂದ ಎಂದು ಅರ್ಥ. 'ಐಶ್ವರ್ಯಾದೇವ' ಎಂದು ಹೇಳಿರುವುದರಿಂದ ಈ ವಿಷಯದಲ್ಲಿ ಮತ್ತೊಂದು ಉಪಪಾದಕವನ್ನು ಅನ್ವೇಷಿಸಬೇಕಾಗಿಲ್ಲ ಎಂದು ಹೇಳಿದಂತಾಗುವುದು. 'ಇತಿ ಬ್ರಾಹ್ಮೇ' ಎಂಬ ಪದಗಳಿಗೆ 'ಉಕ್ತತ್ವಾದ್ ಯುಕ್ತಾಃ' - ಹೇಳಿರುವುದರಿಂದ ಯುಕ್ತವಾಗಿದೆ' ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಂಡು, 'ತೇ ಧರ್ಮಾಃ ವಿಷ್ಣೋಯುಕ್ತಾ ಏವ' ಆ ಧರ್ಮಗಳು ವಿಷ್ಣುವಿನಲ್ಲಿ ಯುಕ್ತವೇ ಆಗಿವೆ ಎಂಬ ಪೂರ್ವವಾಕ್ಯದಿಂದ ಅನ್ವಯವಾಗುವುದು.

॥ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ಅಕ್ಷರಾಧಿಕರಣವು ಮುಗಿಯಿತು ॥

* * * * * *

## ೪. ಅಥ ಸದಧಿಕರಣಮ್

ಭಾ.ದೀ.– ಅತ್ರಾಧಿಕರಣೇಽನೇಕಪ್ರಕರಣಾತ್ಮಕಂ 'ಸದೇವ' ಇತ್ಯಾದಿಸ್ಥಾನಂ ಸಮನ್ವೀಯತೇ । ಶ್ರುತ್ಯಾದಿಸಂಗತಿಂ ವಿಷಯವಾಕ್ಯಮುದಾಹೃತ್ಯ ವಿಷಯಾದಿಕಂ ಚ ಸೂಚಯತಿ – ಸದಿತಿ ॥

ಈ ಅಧಿಕರಣದಲ್ಲಿ ಅನೇಕ ಪ್ರಕರಣ ಸ್ವರೂಪವಾಗಿರುವ 'ಸದೇವ' ಇತ್ಯಾದಿ ಸ್ಥಾನವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಶ್ರುತಿ ಮೊದಲಾದವುಗಳ ಸಂಗತಿ-ಯನ್ನು ಮತ್ತು ವಿಷಯವಾಕ್ಯವನ್ನು ಉದಾಹರಿಸಿ ವಿಷಯ ಮೊದಲಾದವುಗಳನ್ನು ''ಸತ್'' ಎಂಬ ವಾಕ್ಯದಿಂದ ಸೂಚಿಸಲಾಗಿದೆ.

**ಭಾಷ್ಯಮ್ – 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿನಾ ಸತಃ ಸ್ರಷ್ಟೃತ್ವಮುಚ್ಯತೇ ।**

'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ವಾಕ್ಯಗಳಿಂದ ಸಚ್ಛಬ್ದ-ವಾಚ್ಯನಿಗೆ ಸೃಷ್ಟಿಕಾರಣತ್ವವನ್ನು ಹೇಳಲಾಗಿದೆ.

ಭಾ.ದೀ. – 'ಇತ್ಯಾದಿನಾ' ಛಂದೋಗವಾಕ್ಯೇನ । ಆದಿಶಬ್ದೇನ 'ಏಕ-ಮೇವಾದ್ವಿತೀಯಮ್' (ಛಾಂ.೬.೨.೧), 'ತತ್ ತೇಜೋಽಸೃಜತ' (೬.೨), 'ಸನ್ಮೂಲಾಃ ಸೋಮ್ಯೇಮಾಃ' (ಛಾಂ.೬.೮.೬), 'ಸತಾ ಸೋಮ್ಯ ಸದಾ ಸಂಪನ್ನೋ ಭವತಿ' (ಛಾಂ.೬.೮.೧) ಇತ್ಯಾದಿಕಂ ಗೃಹ್ಯತೇ । 'ತಚ್ಚ' ಇತ್ಯತಃ 'ತತ್' ಇತ್ಯಾ-ಕೃಷ್ಯತೇ । ತಥಾ ಚ– ಇತ್ಯಾದಿನಾ ಸತಃ ತತ್ ಜನ್ಮನಯೋಕ್ತಂ 'ಸ್ರಷ್ಟೃತ್ವಮ್' ಅನನ್ಯಾಧೀನಕಾರಣತ್ವಮ್ । ಉಪಲಕ್ಷಣಮೇತತ್ । ಸರ್ವೋತ್ತಮತ್ವ- ಸರ್ವಾ-ಧಾರತ್ವ-ಸುಪ್ತಿಗಮ್ಯತ್ವಾದಿಕಂ ಚ 'ಉಚ್ಯತೇ' - ಪ್ರತಿಪಾದ್ಯತೇ – ಇತಿ ಯೋಜನಾ ।

ಅನೇನ ಜನ್ಮಾಧಿಕರಣೋಕ್ತಕಾರಣತ್ವಸ್ಯ ವಿಷ್ಣ್ವನ್ಯಸ್ಮಿನ್ ಪ್ರಧಾನೇ ಆಕ್ಷೇಪಾತ್ ತೇನಾಸ್ಯ ಆಕ್ಷೇಪಿಕೀ ಸಂಗತಿರುಕ್ತಾ ಭವತಿ । ತಥಾ ವಿಷಯವಾಕ್ಯಂ, ಸದಾಖ್ಯೋ ವಿಷಯಶ್ಚೋಕ್ತಃ ।

''ಇತ್ಯಾದಿನಾ'' ಎಂದರೆ ಇವೇ ಮೊದಲಾದ ಛಾಂದೋಗ್ಯವಾಕ್ಯದಿಂದ ಎಂದರ್ಥ. ಇತ್ಯಾದಿ ಎಂಬಲ್ಲಿರುವ ಆದಿಶಬ್ದದಿಂದ 'ಏಕಮೇವಾದ್ವಿತೀಯಮ್', 'ತತ್ ತೇಜೋಽ-ಸೃಜತ', 'ಸನ್ಮೂಲಾಃ ಸೋಮ್ಯೇಮಾಃ', 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತ್ಯಾದಿ ವಾಕ್ಯಗಳು ಗ್ರಹಿಲಸ್ಪಡುತ್ತವೆ. ''ತಚ್ಚ'' ಎಂಬ ಮುಂದಿನ ಭಾಷ್ಯವಾಕ್ಯದಿಂದ ತತ್ ಎಂಬ ಪದವನ್ನು ಈ ವಾಕ್ಯಕ್ಕೆ ತಂದು ಸೇರಿಸಬೇಕು. ತಥಾ ಚ - ಇತ್ಯಾದಿ ವಾಕ್ಯಗಳಿಂದ ಸತಃ ಸಚ್ಛಬ್ದವಾಚ್ಯನಿಗೆ 'ತತ್' ಜನ್ಮಾಧಿಕರಣದಲ್ಲಿ ಹೇಳಲಾಗಿರುವ 'ಸ್ರಷ್ಟೃತ್ವಮ್' ಇನ್ನೊಬ್ಬರ ಅಧೀನಕ್ಕೆ ಒಳಗಾಗದ ಕಾರಣತ್ವವನ್ನು - ಇದು ಉಪ-ಲಕ್ಷಣ- ಸರ್ವೋತ್ತಮತ್ವ, ಸರ್ವಾಧಾರತ್ವ, ಸುಪ್ತಿಗಮ್ಯತ್ವ ಮೊದಲಾದವುಗಳು 'ಉಚ್ಯತೇ' ಪ್ರತಿಪಾದಿಸಲ್ಪಟ್ಟಿವೆ ಎಂದು ವಾಕ್ಯಗಳ ಯೋಜನೆ.

ಇದರಿಂದ ಜನ್ಮಾಧಿಕರಣದಲ್ಲಿ ಹೇಳಿದ ಕಾರಣತ್ವವು ವಿಷ್ಣುಭಿನ್ನವಾದ ಪ್ರಕೃತಿಯಲ್ಲಿ ಇರುವುದೆಂದು ಆಕ್ಷೇಪ ಮಾಡುವುದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದಂತಾಗುವುದು. ಹಾಗೆಯೇ ವಿಷಯವಾಕ್ಯ ಮತ್ತು ಸತ್ ಎಂದು ಕರೆಯಲ್ಪಡುವ ವಿಷಯವೂ ಕೂಡ ಇಲ್ಲಿ ಹೇಳಲ್ಪಟ್ಟಿದೆ.

ಭಾ.ದೀ. – 'ಸದೇವ' ಇತ್ಯುದ್ದಾಲಕವಾಕ್ಯಮ್ । ಹೇ 'ಸೋಮ್ಯ' - ಭಕ್ತಿ-ಜ್ಞಾನಲಕ್ಷಣಸೋಮಾರ್ಹ ಶ್ವೇತಕೇತೋ! 'ಇದಮ್' ಅಸ್ಯ ಜಗತಃ 'ಅಗ್ರೇ' ತತ್ಸೃಷ್ಟೇಃ ಪೂರ್ವಂ ಪ್ರಲಯೇ ಸಚ್ಛಬ್ದೋಕ್ತಂ ಬ್ರಹ್ಮೈವಾಽಸೀತ್, 'ಸ್ವಾತಂತ್ರ್ಯೇಣ' ಇತಿ ಶೇಷಃ। ತತ್ತತ್ 'ಏಕಮೇವಾದ್ವಿತೀಯಂ' ಸ್ವಾವಯವಭೇದಶೂನ್ಯಂ ಸರ್ವೋತ್ತಮಂ ಭವತಿ। ಪ್ರಜಾಃ 'ಸನ್ಮೂಲಾಃ' ಸದ್ ಬ್ರಹ್ಮೈವ ಮೂಲಂ ಯಾಸಾಂ ತಾಃ, ತಥೋಕ್ತಾಃ । 'ತದಾ' ಸುಪ್ತೌ ಸತಾ ಸಂಪನ್ನೋ ಭವತಿ ಸುಪ್ತಃ – ಇತಿ ಸಿದ್ಧಾಂತೇ ಶ್ರುತ್ಯರ್ಥಃ।

ಬ್ರಹ್ಮಲಕ್ಷಣಾಭಿಧಾಯಕಾನೇಕವಾಕ್ಯಸಂಗ್ರಾಹಕಾದಿಶಬ್ದಪ್ರಯೋಗೇನ ಸಿದ್ಧಾಂತೇಽಪ್ಯತ್ರ ಪ್ರಧಾನಸ್ಯ ಪ್ರತಿಪಾದ್ಯತ್ವಾಭ್ಯುಪಗಮೇನಾನಿಷ್ಟಾಭಾವಾದ್ ಅಧಿಕರಣವೈಯರ್ಥ್ಯಮ್ ಇತಿ ಶಂಕಾ ನಿರಸ್ತಾ ಭವತಿ। ಅತ್ರ ಪ್ರಕರಣೇ ಶ್ರುತಾನಾಂ

ಬ್ರಹ್ಮಲಕ್ಷಣಾನಾಂ ಪ್ರಧಾನೇಽಸಂಭವೇನ ಬ್ರಹ್ಮಣೋಽಪಿ ಪ್ರತಿಪಾದ್ಯತ್ವೇನ ಪ್ರಧಾನಮಾತ್ರಸ್ಯ ಪ್ರತಿಪಾದ್ಯತ್ವಾನಭ್ಯುಪಗಮಾತ್ ।

'ಸದೇವ' ಎಂಬ ವಾಕ್ಯವು ಉದ್ದಾಲಕರ ವಾಕ್ಯವಾಗಿದೆ. ಹೇ 'ಸೋಮ್ಯ' ಭಕ್ತಿ-ಜ್ಞಾನಗಳೆಂಬ ಸೋಮಕ್ಕೆ ಅರ್ಹನಾದ ಶ್ವೇತಕೇತುವೇ! 'ಇದಂ' - ಈ ಜಗತ್ತಿನ 'ಅಗ್ರೇ' - ಅಂದರೆ ಈ ಜಗತ್ತಿನ ಸೃಷ್ಟಿಗಿಂತ ಪೂರ್ವದಲ್ಲಿ ಅಂದರೆ ಪ್ರಲಯದಲ್ಲಿ 'ಸತ್ 'ಶಬ್ದದಿಂದ ಹೇಳಲ್ಪಡುವ ಬ್ರಹ್ಮನೇ ಇದ್ದನು. ಇಲ್ಲಿ 'ಸ್ವಾತಂತ್ರ್ಯೇಣ' - ಅಂದರೆ ಸ್ವತಂತ್ರವಾಗಿ ಎಂಬ ಪದವು ಶೇಷವಾಗಿದೆ.

ಆ ಸತ್‌ಪದಾರ್ಥವು 'ಏಕಮೇವಾದ್ವಿತೀಯಮ್' - 'ತನ್ನ ಅವಯವಗಳಿಂದ ಭೇದರಹಿತವಾಗಿದ್ದು ಸರ್ವೋತ್ತಮವಾಗಿದೆ'. ಪ್ರಜೆಗಳು 'ಸನ್ಮೂಲಾಃ' - ಸತ್ ಬ್ರಹ್ಮೈವ ಮೂಲಮ್ ಯಾಸಾಂ ತಾಃ ಎಂಬ ವಿಗ್ರಹಕ್ಕನುಸಾರವಾಗಿ - ಸಚ್ಛಬ್ದವಾಚ್ಯ-ನಾದ ಬ್ರಹ್ಮನನ್ನೇ ಮೂಲವಾಗಿ ಉಳ್ಳವರು. 'ತದಾ' ಆ ಸುಪ್ತಿಕಾಲದಲ್ಲಿ 'ಸತಾ ಸಂಪನ್ನೋ ಭವತಿ' ಸಚ್ಛಬ್ದವಾಚ್ಯನಾದ ಬ್ರಹ್ಮನನ್ನು ಹೊಂದುವನು ಎಂದು ಸಿದ್ಧಾಂತ-ದಲ್ಲಿ ಈ ಶ್ರುತಿಯ ಅರ್ಥ.

ಸಿದ್ಧಾಂತದಲ್ಲೂ ಕೂಡ ಈ ವಾಕ್ಯಗಳಲ್ಲಿ ಪ್ರಧಾನವು ಪ್ರತಿಪಾದಿಸಲ್ಪಟ್ಟಿದೆ ಎಂದು ಗೊತ್ತಿರುವುದರಿಂದ ಯಾವುದೇ ಅನಿಷ್ಟಾಪತ್ತಿ ಇಲ್ಲದಿರುವ ಕಾರಣ ಈ ಅಧಿಕರಣವು ವ್ಯರ್ಥವೆಂಬ ಶಂಕೆಯು ಭಾಷ್ಯದಲ್ಲಿ ಬ್ರಹ್ಮನ ಲಕ್ಷಣವನ್ನು ಹೇಳುವ ಅನೇಕ ವಾಕ್ಯ-ಗಳನ್ನು ಸಂಗ್ರಹಿಸುವ 'ಆದಿ'ಶಬ್ದವನ್ನು ಪ್ರಯೋಗಿಸಿರುವುದರಿಂದ ನಿರಾಕೃತವಾ-ಗುವುದು. ಏಕೆಂದರೆ ಈ ಪ್ರಕರಣದಲ್ಲಿ ಕೇಳಿಬರುವ ಬ್ರಹ್ಮನ ಲಕ್ಷಣಗಳು ಪ್ರಕೃತಿಯಲ್ಲಿ ಅಸಂಭಾವಿತವಾದುದರಿಂದ ಬ್ರಹ್ಮನೂ ಇಲ್ಲಿ ಪ್ರತಿಪಾದ್ಯನಾಗಿರುವುದರಿಂದ ಕೇವಲ ಪ್ರಕೃತಿಯು ಇಲ್ಲಿ ಪ್ರತಿಪಾದ್ಯವಾಗಿದೆ ಎಂಬುದನ್ನು ಅಂಗೀಕರಿಸಲಾಗಿಲ್ಲ.

ಭಾ.ದೀ. – ಸಯುಕ್ತಿಕಂ ಪೂರ್ವಪಕ್ಷಯತಿ – ತಚ್ಚೇತಿ ॥

ಯುಕ್ತಿಸಹಿತವಾದ ಪೂರ್ವಪಕ್ಷವನ್ನು 'ತಚ್ಚ' ಎಂಬ ವಾಕ್ಯದಿಂದ ತೋರಿಸು-ತ್ತಿದ್ದಾರೆ.

**ಭಾಷ್ಯಮ್ – ತಚ್ಚ ಸತ್ 'ಬಹು ಸ್ಯಾಂ ಪ್ರಜಾಯೇಯ' ಇತಿ ಪರಿಣಾಮಪ್ರತೀತೇರ್ನ ವಿಷ್ಣುಃ।**

ಆ ಸಚ್ಛಬ್ದವಾಚ್ಯವಾದರೋ 'ಬಹು ಸ್ಯಾಂ ಪ್ರಜಾಯೇಯ' (ಛಾಂ. ೬-೨-೩) ಎಂಬ ವಾಕ್ಯದಲ್ಲಿ ಸಚ್ಛಬ್ದವಾಚ್ಯಕ್ಕೆ ಪರಿಣಾಮವನ್ನು ತಿಳಿಸುವುದರಿಂದ ವಿಷ್ಣುವಲ್ಲ.

ಭಾ.ದೀ.– 'ಚ'ಶಬ್ದಃ ಪ್ರಧಾನಮಿತಿ ಪದಾಕರ್ಷಕಃ, ಅವಧಾರಣೇ ಚ। 'ತತ್' ಇತ್ಯಾವೃತ್ತಂ ವಿಪರಿಣಮ್ಯತೇ । ತಥಾ ಚ 'ತತ್' ಛಾಂದೋಗ್ಯೇ ಶ್ರುತಂ ಸತ್ ಪ್ರಧಾನಮೇವ ಭವೇತ್, ನ ತು ವಿಷ್ಣುಃ। ಕುತಃ? 'ತಸ್ಯ' ಸತೋಃ 'ಬಹು ಸ್ಯಾಮ್' ಇತ್ಯುತ್ತರವಾಕ್ಯೇನ ಬಹುಭಾವಾಖ್ಯಪರಿಣಾಮಸ್ಯ ವಿಕಾರಸ್ಯ ಪ್ರತೀತೇಃ – ಇತಿ ಯೋಜನಾ । 'ಪ್ರಜಾಯೇಯ' ಪ್ರಜನಯೇಯಂ ಜಗತ್ಸ್ರಜಾನಿ । ತದರ್ಥಂ 'ಬಹು ಸ್ಯಾಮ್' ನಿಯಾಮಕಬಹುರೂಪೀ ಭವೇಯಮಿತಿ । 'ಬಹು ಸ್ಯಾಮ್' ತದರ್ಥಂ ಪ್ರಜಾಯೇಯೇತಿ ವಾ ಶ್ರುತ್ಯರ್ಥಃ।

ತಚ್ಚ ಎಂಬಲ್ಲಿ 'ಚ'ಶಬ್ದವು 'ಪ್ರಧಾನಂ' ಎಂಬ ಪದವನ್ನು ಈ ವಾಕ್ಯದಲ್ಲಿ ಆಕರ್ಷಿಸಲು ಕಾರಣವಾಗುವುದಲ್ಲದೇ ಅವಧಾರಣವನ್ನೂ ಹೇಳುವುದು. 'ತತ್' ಶಬ್ದವು ಆವೃತ್ತಿಯನ್ನು ಪಡೆದು ವಿಭಕ್ತಿಯ ವ್ಯತ್ಯಾಸವನ್ನು ಪಡೆಯುವುದು. ತಥಾ ಚ – 'ತತ್' ಛಾಂದೋಗ್ಯದಲ್ಲಿ ಕೇಳಿ ಬರುವ ಸತ್' ಶಬ್ದವಾಚ್ಯವು ಪ್ರಧಾನವೇ ಆಗಿರುವುದು, ಹೊರತು ವಿಷ್ಣುವಲ್ಲ. ಏಕೆಂದರೆ, 'ತಸ್ಯ' ಆ ಸತ್‌ಪದಾರ್ಥಕ್ಕೆ 'ಬಹು ಸ್ಯಾಮ್' – 'ಬಹುಪದಾರ್ಥಗಳು ಆಗುವೆನು' ಎಂಬ ಮುಂದಿನ ವಾಕ್ಯದಿಂದ ಬಹುಭಾವ ಅಂದರೆ ಅನೇಕ ವಸ್ತುರೂಪವಾಗುವಿಕೆ ಎಂಬ ಪರಿಣಾಮವು ಅಂದರೆ ವಿಕಾರವು ಇಲ್ಲಿ ತಿಳಿದುಬರುತ್ತಿದೆ – ಎಂದು ಪದಗಳ ಯೋಜನೆ. 'ಪ್ರಜಾಯೇಯ' ಅಂದರೆ 'ಪ್ರಜನಯೇಯಂ' ಜಗತ್ತನ್ನು ಸೃಷ್ಟಿಸುವೆನು ಎಂದು ಅರ್ಥ. ಅದಕ್ಕಾಗಿ 'ಬಹು ಸ್ಯಾಮ್' ಅನೇಕ ಪದಾರ್ಥಗಳನ್ನು ನಿಯಮನಮಾಡುವ ಬಹುರೂಪವುಳ್ಳವನಾಗುವೆನು ಎಂದು

ಅಥವಾ 'ಬಹು ಸ್ಯಾಮ್' ನಿಯಾಮಕ ಬಹುರೂಪಗಳನ್ನು ಹೊಂದುವೆನು. ಅದಕ್ಕಾಗಿ 'ಪ್ರಜಾಯೇಯ' – ಜಗತ್ತನ್ನು ಸೃಷ್ಟಿಸುವೆನು ಎಂದು ಶ್ರುತಿಯ ಅರ್ಥ.

ಭಾ.ದೀ. – 'ವಿಕಾರಿತ್ವಪ್ರತೀತಾವಪಿ ಕುತೋಽಯಂ ನ ವಿಷ್ಣುಃ' ಇತ್ಯತ ಆಹ – ಸ ಹೀತಿ ॥

ಸತ್ ಪದಾರ್ಥಕ್ಕೆ ವಿಕಾರವಾಗುವುದೆಂದು ಇಲ್ಲಿ ತೋರಿದರೂ ಅದು ವಿಷ್ಣು-ವೇಕಾಗಬಾರದು? ಎಂಬ ಶಂಕೆಗೆ ಉತ್ತರವಾಗಿ – ''ಸ ಹಿ'' ಎಂದು ಭಾಷ್ಯವಾಕ್ಯ ಹೊರಟಿದೆ.

**ಭಾಷ್ಯಮ್ – ಸ ಹಿ 'ಅವಿಕಾರಸ್ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ' ಇತ್ಯಾದಿನಾಽವಿಕಾರಃ ಪ್ರಸಿದ್ಧ ಇತಿ ।**

ಆ ವಿಷ್ಣುವಾದರೋ ''ಅವಿಕಾರಸ್ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ'' ಇತ್ಯಾದಿ ಪ್ರಮಾಣಗಳಿಂದ ವಿಕಾರರಹಿತನೆಂದು ಪ್ರಸಿದ್ಧ-ನಾಗಿದ್ದಾನೆ.

ಭಾ.ದೀ. – 'ಹಿ' ಯಸ್ಮಾತ್ 'ಸಃ' ವಿಷ್ಣುಃ 'ಅವಿಕಾರಃ ಸದಾ' ಇತ್ಯಾದಿ-ಪ್ರಮಾಣೈರವಿಕಾರಃ 'ಪ್ರಸಿದ್ಧಃ' ತತ್ತ್ವೇನ ನಿಶ್ಚಿತಃ, ತಸ್ಮಾತ್ ತದಸಂಭವಾತ್ ಪ್ರಧಾನೇ ಚ ತತ್ಸಂಭವಾದ್ ಅತ್ರ ಚ ವಿಕಾರಪ್ರತೀತೇಃ ತತ್ ಸತ್ ನ ವಿಷ್ಣುಃ, ಕಿಂತು ಪ್ರಧಾನಮೇವ – ಇತಿ ಯೋಜನಾ । ಶ್ರುತೌ ದ್ವಿತೀಯಸ್ಯ ಸದಾಶಬ್ದಸ್ಯ 'ಸದಾಽ-ವಿಕಾರಃ' ಇತ್ಯನ್ವಯಃ। ಆದ್ಯಸ್ಯ ತು ಸದಾ 'ಶುದ್ಧಃ' ನಿರ್ಮಲ ಇತಿ।

''ಹಿ'' ಯಾವ ಕಾರಣದಿಂದ ಆ ವಿಷ್ಣುವು 'ಅವಿಕಾರಃ ಸದಾ' ಇತ್ಯಾದಿ ಪ್ರಮಾಣಗಳಿಂದ 'ಅವಿಕಾರಃ ಪ್ರಸಿದ್ಧಃ' – ವಿಕಾರರಹಿತನೆಂದು ನಿಶ್ಚಿತನಾಗಿರುವನೋ, ಆ ವಿಕಾರವು ಅವನಲ್ಲಿ ಅಸಂಭಾವಿತವಾದುದರಿಂದ ಪ್ರಧಾನದಲ್ಲಾದರೋ ಅದು (ವಿಕಾರವು) ಸಂಭಾವಿತವಾದುದರಿಂದ ಈ ವಾಕ್ಯದಲ್ಲಾದರೋ ವಿಕಾರವು ಕಂಡು ಬರುವುದರಿಂದ ಆ ಸತ್ ಪದಾರ್ಥವು ವಿಷ್ಣುವಲ್ಲ, ಕಿಂತು ಪ್ರಧಾನವೇ ಆಗಿದೆ –

ಎಂದು ಪದಗಳ ಯೋಜನೆ. ಶ್ರುತಿಯಲ್ಲಿ ಎರಡನೆಯ ಸದಾ ಶಬ್ದಕ್ಕೆ 'ಸದಾಽವಿಕಾರಃ' ಎಂದು ಅನ್ವಯ. ಮೊದಲನೆಯ ಸದಾ ಶಬ್ದಕ್ಕಾದರೋ 'ಸದಾ ಶುದ್ಧಃ' ಸರ್ವಕಾಲದಲ್ಲೂ ನಿರ್ಮಲನಾಗಿರುವನು ಎಂದು ಅನ್ವಯ.

ಭಾ.ದೀ. – ಸಿದ್ಧಾಂತಯತ್ ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ಕೊಟ್ಟು ''ಅತಃ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತೋ ಬ್ರವೀತಿ –**

**॥ ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ ॥ ೧೩ ॥**

**'ತದೈಕ್ಷತ' ಇತೀಕ್ಷತಿಕರ್ಮವ್ಯಪದೇಶಾತ್ ಸ ಏವ ವಿಷ್ಣುರತ್ರೋಚ್ಯತೇ ।**

ಈ ಪೂರ್ವಪಕ್ಷವನ್ನು ನಿರಾಕರಿಸುವ ಸಲುವಾಗಿ ಸೂತ್ರಕಾರರು ''ಓಂ ಈಕ್ಷತಿ ಕರ್ಮವ್ಯಪದೇಶಾತ್ ಸಃ'' ಎಂದು ಹೇಳುತ್ತಿದ್ದಾರೆ. 'ತದೈಕ್ಷತ' ಎಂಬ ವಾಕ್ಯದಲ್ಲಿ 'ಐಕ್ಷತ' ಎಂಬ ಪದದಿಂದ ಆಲೋಚನರೂಪಕ್ರಿಯೆಗೆ ಕರ್ತೃವೆಂದು ಸತ್‌ಪದಾರ್ಥವನ್ನು ಹೇಳಿರುವುದರಿಂದ ಸತ್‌ಶಬ್ದದಿಂದ ಇಲ್ಲಿ ಹೇಳಲ್ಪಡುವವನು ಆ ವಿಷ್ಣುವೇ ಹೊರತು ಪ್ರಕೃತಿಯಲ್ಲ.

ಭಾ.ದೀ. – ಸೂತ್ರೋಕ್ತಂ ವ್ಯಪದೇಶಂ ದರ್ಶಯತಿ – ತದಿತಿ ॥ 'ಈಕ್ಷತಿ' ಇತಿ ಧಾತುನಿರ್ದೇಶೇನ ತದರ್ಥೇಕ್ಷಣಕ್ರಿಯಾ ಲಕ್ಷ್ಯತೇ । 'ಈಕ್ಷತಿಕರ್ಮ' ಇತಿ ಸಾಮಾನಾಧಿಕರಣ್ಯಂ ತತ್ಕರ್ತೃತ್ವಪರಮ್ । ತಥಾ ಚ 'ತದೈಕ್ಷತ' ಇತಿ ಶ್ರುತೌ ಈಕ್ಷಣಾಖ್ಯವ್ಯಾಪಾರೇ ಕರ್ತೃತ್ವೋಕ್ತೇರಿತ್ಯರ್ಥಃ।

ಯದ್ವಾ, 'ಕರ್ಮ'ಶಬ್ದೇನ ಸೃಷ್ಟ್ಯಾದಿಕ್ರಿಯಾ ಉಚ್ಯತೇ । ತಥಾತ್ವೇ ವೈಯಧಿಕರಣ್ಯಮ್ । 'ಈಕ್ಷತಿಪೂರ್ವಕಸೃಷ್ಟ್ಯಾದಿವ್ಯಪದೇಶಾತ್' ಇತ್ಯರ್ಥಃ । ಸಮನ್ವಯ-

**ಸೂತ್ರಾತ್ 'ತತ್' ಇತ್ಯಸ್ಯ ಅನುಷಂಗಸಂಭವೇಽಪಿ 'ಏಕೋ ನಾರಾಯಣ ಆಸೀತ್ ಸ ಮುನಿರ್ಭೂತ್ವಾ' ಇತ್ಯಾದಿಸಮಾಖ್ಯಾಮಪಿ ಪ್ರಮಾಣೀಕರ್ತುಂ 'ಸಃ' ಇತ್ಯು-ಕ್ತಮ್ । ತದನೂದ್ಯ 'ವಿಷ್ಣುಃ' ಇತಿ ವ್ಯಾಖ್ಯಾತಮ್ । 'ವಿಷ್ಣುರೇವ' ಇತ್ಯನ್ವಯಃ । 'ಏವ' ಇತಿ ತುಶಬ್ದಾರ್ಥಃ । ಅನೇನ ಸಮನ್ವಯಸೂತ್ರಾತ್ ತುಶಬ್ದಮಾತ್ರಮ್ ಅನುವರ್ತನೀಯಮಿತಿ ಸೂಚಿತಮ್ ।**

ಸೂತ್ರದಲ್ಲಿ ಹೇಳುವ ವ್ಯಪದೇಶವನ್ನು ಎಂದರೆ ಶಬ್ದಪ್ರಯೋಗವನ್ನು ಭಾಷ್ಯಕಾರರು "ತತ್" ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಭಾಷ್ಯದಲ್ಲಿ 'ಈಕ್ಷತಿ' ಎಂದು ಧಾತುವನ್ನು ಸೂಚಿಸುವ ಶಬ್ದದಿಂದ ಆ ಧಾತುವಿನ ಅರ್ಥವಾದ ಈಕ್ಷಣ ಎಂಬ ಕ್ರಿಯೆಯು ಲಕ್ಷಣಾವೃತ್ತಿಯಿಂದ ಉಕ್ತವಾಗಿದೆ. 'ಈಕ್ಷತಿಕರ್ಮ' ಎಂದರೆ ಈಕ್ಷಣರೂಪ-ವಾದ ಕ್ರಿಯೆ ಎಂಬುದಾಗಿ ಸಾಮಾನಾಧಿಕರಣ್ಯವು ಎಂದರೆ ಈಕ್ಷತಿಪದಾರ್ಥ ಮತ್ತು ಕರ್ಮಪದಾರ್ಥಗಳಿಗೆ ಅಭೇದವು ವಿವಕ್ಷಿತವಾಗಿದ್ದಪಕ್ಷದಲ್ಲಿ ಈಕ್ಷತಿಕರ್ಮ ಎಂಬ ಪದವು ಆ ಈಕ್ಷಣಕ್ರಿಯಾಕರ್ತೃತ್ವವನ್ನು ಹೇಳುವ ತಾತ್ಪರ್ಯವುಳ್ಳದ್ದು. ತಥಾ ಚ – 'ಈಕ್ಷತಿಕರ್ಮವ್ಯಪದೇಶಾತ್' ಅಂದರೆ 'ತದೈಕ್ಷತ' ಎಂಬ ಶ್ರುತಿಯಲ್ಲಿ ಈಕ್ಷಣವೆಂಬ ಕ್ರಿಯೆಯ ಕರ್ತೃತ್ವವನ್ನು ಹೇಳಿರುವುದರಿಂದ ಎಂದು ಅರ್ಥ.

ಅಥವಾ ಇಲ್ಲಿ 'ಕರ್ಮ'ಶಬ್ದದಿಂದ ಸೃಷ್ಟ್ಯಾದಿಕ್ರಿಯೆಯು ಹೇಳಲ್ಪಟ್ಟಿದೆ. ಹೀಗೆ ಅಭಿಪ್ರಾಯವಿದ್ದಾಗ ಈಕ್ಷತಿ ಪದದ ಅರ್ಥಕ್ಕೂ ಕರ್ಮಪದದ ಅರ್ಥಕ್ಕೂ ವೈಯಧಿ-ಕರಣ್ಯ ಅಂದರೆ ಅಭೇದವು ವಿವಕ್ಷಿತವಲ್ಲ. 'ಈಕ್ಷತಿಕರ್ಮವ್ಯಪದೇಶಾತ್' ಎಂಬ ಪದಕ್ಕೆ ಈ ಪಕ್ಷದಲ್ಲಿ ಈಕ್ಷಣಪೂರ್ವಕವಾದ ಸೃಷ್ಟಿ ಮೊದಲಾದವುಗಳನ್ನು ಹೇಳಿರುವುದರಿಂದ ಎಂದರ್ಥ. 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ 'ತತ್'ಪದವನ್ನು ಇಲ್ಲಿ ಅನುವೃತ್ತಿಮಾಡಿಕೊಳ್ಳಲು ಸಾಧ್ಯವಿರುವುದಾದರೂ 'ಏಕೋ ನಾರಾಯಣ ಆಸೀತ್ ಸ ಮುನಿರ್ಭೂತ್ವಾ' ಇತ್ಯಾದಿ ಸಮಾಖ್ಯೆಯನ್ನು ಅಂದರೆ 'ತದೈಕ್ಷತ' ಎಂಬ ಶ್ರುತಿ ಹೇಳುವ ವಿಷಯವನ್ನೇ ಪ್ರತಿಪಾದಿಸುವ ಇನ್ನೊಂದು ಶ್ರುತಿಯನ್ನು ಇಲ್ಲಿ ಪ್ರಮಾಣವಾಗಿ ಸೂಚಿಸಲು ಸೂತ್ರದಲ್ಲಿ "ಸಃ" ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಸೂತ್ರದ 'ಸಃ' ಎಂಬ ಪದವನ್ನು ಅನುವಾದ ಮಾಡಿ ಭಾಷ್ಯದಲ್ಲಿ "ವಿಷ್ಣುಃ" ಎಂದು ವ್ಯಾಖ್ಯಾನ

ಮಾಡಲಾಗಿದೆ. ''ವಿಷ್ಣುರೇವ'' ಎಂದು ಏವ ಶಬ್ದಕ್ಕೆ ಅನ್ವಯ. 'ಏವ' ಎಂಬ ಪದವು ಸಮನ್ವಯಸೂತ್ರದಿಂದ ಅನುವೃತ್ತಿ ಮಾಡಿಕೊಂಡಿರುವ 'ತು'ಶಬ್ದದ ಅರ್ಥವಾಗಿದೆ. ಇದರಿಂದ – ಸಮನ್ವಯಸೂತ್ರದಿಂದ ತು ಶಬ್ದವನ್ನು ಮಾತ್ರ ಅನುವೃತ್ತಿಮಾಡಿಕೊಳ್ಳ-ಬೇಕೆಂದು ಸೂಚಿತವಾಗುವುದು.

ಭಾ.ದೀ. – ಸೂತ್ರೇ ಸಮನ್ವೇತವ್ಯಾನುಕ್ತೇರಾಹ – ಅತ್ರೇತಿ ॥ 'ಸದೇವ ಇತ್ಯಾದಿಸ್ಥಾನೇ' ಇತ್ಯರ್ಥಃ । 'ಸಚ್ಛಬ್ದೇನ' ಇತಿ ಶೇಷಃ । ತಥಾ ಚ – ಅತ್ರ ಪ್ರಕರಣ-ಜಾತೇ ಯ ಉಚ್ಯತೇ ಸ ವಿಷ್ಣುರೇವ ನ ತು ಪ್ರಧಾನಮ್ ಇತಿ ಸಾಧ್ಯವಾಕ್ಯಾರ್ಥಃ ।

ಅನೇನ – ಅತ್ರ 'ಸದೇವ' ಇತ್ಯಾದಿಸ್ಥಾನೇ ಸಚ್ಛಬ್ದೇನೋಚ್ಯಮಾನಃ ಸ ವಿಷ್ಣುರೇವ, ನ ಪ್ರಧಾನಮ್ । ಕುತಃ? 'ಈಕ್ಷತಿಕರ್ಮವ್ಯಪದೇಶಾತ್ ಸಃ' ತತಃ 'ತದೈಕ್ಷತ' ಇತೀಕ್ಷಣಾಖ್ಯಕ್ರಿಯಾಕರ್ತೃತ್ವಶ್ರವಣಾತ್ ಈಕ್ಷಿತೃತ್ವಸ್ರಷ್ಟೃತ್ವಾದಿಕ್ರಿಯಯೋ-ರ್ವಾ ಶ್ರವಣಾಜ್ಜಡಪ್ರಕೃತೌ ಚ ತದಸಂಭವಾತ್ ಇತಿ ಸೂತ್ರಾರ್ಥ ಉಕ್ತೋ ಭವತಿ ।

ಸೂತ್ರೇ 'ಸಚ್ಛಬ್ದೇನ' ಇತಿ ಶೇಷಂ ವಿನಾ 'ಸಃ' ಇತ್ಯಸ್ಯಾಽವೃತ್ತಿಃ, ತತ್ರ ಏಕಸ್ಯ ಪ್ರತೀಕಗ್ರಹಣಾರ್ಥತ್ವಮ್ – ಇತಿ ಪಕ್ಷೇ ಈಕ್ಷತಿಕರ್ಮವ್ಯಪದೇಶಾತ್ 'ಸಃ' 'ಸೋಽಕಾಮಯತ' (ತೈ.೨.೬) ಇತ್ಯಾದಿಪ್ರಕರಣಪ್ರತಿಪಾದ್ಯಃ ಸ ವಿಷ್ಣುರೇವ ಭವೇತ್, ನ ಪ್ರಧಾನಮ್- ಇತ್ಯರ್ಥೋಽವಸೇಯಃ ।

ಸೂತ್ರದಲ್ಲಿ ಸಮನ್ವಯ ಮಾಡಲ್ಪಡುವ ಪದವನ್ನು ಹೇಳದೇ ಇರುವುದರಿಂದ ಭಾಷ್ಯದಲ್ಲಿ ''ಅತ್ರ'' ಎಂದು ಹೇಳಿದೆ. 'ಅತ್ರ' ಎಂದರೆ 'ಸದೇವ ಇತ್ಯಾದಿ ಅನೇಕ-ಪ್ರಕರಣಗಳ ಸಮೂಹರೂಪವಾದ ಸ್ಥಾನದಲ್ಲಿ' ಎಂದು ಅರ್ಥ. 'ಸಚ್ಛಬ್ದೇನ' ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾ ಚ – ಈ ಪ್ರಕರಣಗಳ ಸಮೂಹರೂಪವಾದ ಸ್ಥಾನದಲ್ಲಿ (ಈ ಪ್ರಕರಣ ಸಮೂಹದಲ್ಲಿ) ಸತ್ ಶಬ್ದದಿಂದ ಯಾರು ಹೇಳಲ್ಪಡುವನೋ ಅವನು ವಿಷ್ಣುವೇ ಹೊರತು ಪ್ರಕೃತಿಯಲ್ಲ - ಎಂದು ಈ ಸೂತ್ರದಿಂದ ಸಾಧಿಸಲ್ಪಡುವ ವಾಕ್ಯಾರ್ಥವಾಗಿದೆ.

ಇದರಿಂದ – ಈ ಸದೇವ ಇತ್ಯಾದಿ ಸ್ಥಾನವೆಂದು ಹೇಳಲ್ಪಡುವ ಪ್ರಕರಣ ಸಮೂಹದಲ್ಲಿ ಸಚ್ಛಬ್ದದಿಂದ ಹೇಳಲ್ಪಡುವವನು 'ಸಃ' ಆ ವಿಷ್ಣುವೇ ಆಗಿದ್ದಾನೆ. ಹೊರತು ಪ್ರಧಾನವಲ್ಲ. ಏಕೆಂದರೆ? 'ಈಕ್ಷತಿಕರ್ಮವ್ಯಪದೇಶಾತ್ ಸಃ' ಅನಂತರ 'ತದೈಕ್ಷತ' - ಎಂಬುದಾಗಿ ಈಕ್ಷಣವೆಂಬ ಕ್ರಿಯೆಯನ್ನು ಕುರಿತು ಸಚ್ಛಬ್ದವಾಚ್ಯನು ಕರ್ತೃವೆಂದು ಶ್ರುತವಾಗಿರುವುದರಿಂದ ಅಥವಾ ಈಕ್ಷಣ ಮತ್ತು ಸೃಷ್ಟ್ಯಾದಿ ಕ್ರಿಯೆಗಳು ಶ್ರುತವಾಗಿರುವುದರಿಂದ ಜಡಪ್ರಕೃತಿಯಲ್ಲಾದರೋ ಅದು ಅಸಂಭಾವಿತವಾದುದರಿಂದ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಸೂತ್ರದಲ್ಲಿ 'ಸಚ್ಛಬ್ದೇನ' ಎಂಬ ಶೇಷವನ್ನು ಸೇರಿಸದೇ 'ಸಃ' ಎಂಬ ಪದಕ್ಕೆ ಆವೃತ್ತಿಯನ್ನು ಮಾಡತಕ್ಕದ್ದು, ಮತ್ತು ಆ ಆವೃತ್ತಗೊಂಡ ಶಬ್ದಗಳಲ್ಲಿ ಒಂದು ಪದ ಪ್ರತೀಕವನ್ನು ಗ್ರಹಿಸುವ ಉದ್ದೇಶವುಳ್ಳದ್ದು ಎಂಬ ಪಕ್ಷದಲ್ಲಿ – ಈಕ್ಷತಿಕರ್ಮವನ್ನು ಹೇಳಿರುವುದರಿಂದ 'ಸಃ' ಅಂದರೆ 'ಸೋಽಕಾಮಯತ' ಇತ್ಯಾದಿ ಪ್ರಕರಣಗಳಲ್ಲಿ ಪ್ರತಿಪಾದ್ಯನಾದವನು 'ಸಃ' ವಿಷ್ಣುವೇ ಆಗುವನು ಪ್ರಧಾನವಲ್ಲ ಎಂದು ಸೂತ್ರದ ಅರ್ಥವೆಂದು ತಿಳಿಯತಕ್ಕದ್ದು.

ಭಾ.ದೀ. – ನನ್ವೀಕ್ಷಣಕರ್ತೃತ್ವಂ ವಿಷ್ಣುವತ್ ಪ್ರಧಾನಸ್ಯ ಕಿಂ ನ ಸ್ಯಾತ್? ಇತ್ಯತಃ ಚೇತನಸ್ಯಾಪೀಹ ಹೇತುತ್ವೇನಾಭಿಮತಂ ಮುಖ್ಯೇಕ್ಷಣಂ ನ ಸಂಭವತಿ, ಕಿಮು ಜಡಸ್ಯ? ಇತ್ಯಾಶಯೇನ ತತ್ರ ಪ್ರಮಾಣಮಾಹ – ನೇತಿ ॥

ಇಲ್ಲಿ ಶ್ರುತವಾಗಿರುವ ಈಕ್ಷಣಕ್ರಿಯಾ ಕರ್ತೃತ್ವವು ವಿಷ್ಣುವಿಗೆ ಇರುವಂತೆ ಪ್ರಕೃತಿಗೂ ಏಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ ಚೇತನಕ್ಕೂ ಇಲ್ಲಿ ಹೇತುವಾಗಿ ಅಭಿಪ್ರೇತವಾಗಿರುವ ಮುಖ್ಯವಾದ ಈಕ್ಷಣಕ್ರಿಯೆಯು ಸಂಭಾವಿತವಾಗದಿರುವಾಗ ಜಡಕ್ಕೆ ಅದು ಅಸಂಭಾವಿತವೆಂದು ಹೇಳುವುದೇನು? ಎಂಬ ಆಶಯದಿಂದ ಆ ವಿಷಯದಲ್ಲಿ ''ನ'' ಎಂದು ಪ್ರಮಾಣವನ್ನು ಹೇಳಲಾಗಿದೆ.

**ಭಾಷ್ಯಮ್ – 'ನಾನ್ಯೋಽತೋಽಸ್ತಿ ದ್ರಷ್ಟಾ', 'ನಾನ್ಯದತೋಽಸ್ತಿ ದ್ರಷ್ಟೃ' ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣಮ್ ।**

"ನಾನ್ಯೋಽತೋಽಸ್ತಿ ದ್ರಷ್ಟಾ', 'ನಾನ್ಯದತೋಽಸ್ತಿ ದ್ರಷ್ಟೃ"
ಇತ್ಯಾದಿ ಶ್ರುತಿಗಳಿಂದ ವಿಷ್ಣುವಿಗೇ ಸ್ವಾತಂತ್ರ್ಯೇಣ ಈಕ್ಷಣಕರ್ತೃತ್ವ-
ವೆಂಬ ಧರ್ಮವು ಇರುವುದು.

ಭಾ.ದೀ. – 'ಅತೋ' ಬ್ರಹ್ಮಣಃ ಸಕಾಶಾತ್ 'ಅನ್ಯಃ' ಸ್ವಾತಂತ್ರ್ಯೇಣ 'ದ್ರಷ್ಟಾ ದ್ರಷ್ಟೃ' ಚ ನಾಸ್ತೀತಿ ವಾಜಸನೇಯಪ್ರಕರಣದ್ವಯಗತವಾಕ್ಯದ್ವಯಸ್ಯಾರ್ಥಃ।

'ಆದಿ'ಶಬ್ದೇನ ಏವಂಜಾತೀಯಕಂ ವಾಕ್ಯಂ ಗೃಹ್ಯತೇ । 'ತಸ್ಯ' ವಿಷ್ಣೋರೇವ । 'ಹಿ'ಶಬ್ದಃ ಪ್ರಸಿದ್ಧೌ। ಸ್ವಾತಂತ್ರ್ಯೇಣ ಈಕ್ಷಣಕರ್ತೃತ್ವಲಕ್ಷಣಂ ಲಿಂಗಮ್, 'ಉಕ್ತಮ್' ಇತಿ ಶೇಷಃ । ಅಸ್ಯ 'ತಸ್ಮಾತ್ ನ ಲಿಂಗಸ್ಯಾನ್ಯಗಾಮಿತ್ವಂ ಮಂತವ್ಯಮ್' ಇತ್ಯುಪ-ಸ್ಕೃತವಾಕ್ಯೇನಾನ್ವಯಃ।

'ಅತಃ' - ಬ್ರಹ್ಮನ ದೆಸೆಯಿಂದ, 'ಅನ್ಯಃ' - ಭಿನ್ನನಾದವನು 'ದ್ರಷ್ಟಾ ದ್ರಷ್ಟೃ' ಸ್ವಾತಂತ್ರ್ಯೇಣ ದರ್ಶನಕರ್ತೃವು ಇಲ್ಲ ಎಂಬುದಾಗಿ ಬೃಹದಾರಣ್ಯಕದ ಎರಡು ಪ್ರಕರಣ-ಗಳಲ್ಲಿ ಬರುವ ಎರಡು ವಾಕ್ಯಗಳ ಅರ್ಥವಾಗಿದೆ.

'ಇತ್ಯಾದಿನಾ' ಎಂಬ ಭಾಷ್ಯದಲ್ಲಿರುವ 'ಆದಿ'ಶಬ್ದದಿಂದ ಇದೇ ರೀತಿಯ ಶ್ರುತಿವಾಕ್ಯಗಳು ಗ್ರಹಿಸಲ್ಪಡುತ್ತವೆ. 'ತಸ್ಯ' - ಎಂದರೆ ವಿಷ್ಣೋರೇವ - ವಿಷ್ಣುವಿಗೆ ಮಾತ್ರ ಎಂದು ಅರ್ಥ. ಭಾಷ್ಯದಲ್ಲಿ 'ಹಿ'ಶಬ್ದವು ಪ್ರಸಿದ್ಧಿಯನ್ನು ಸೂಚಿಸುವುದು. ತಲ್ಲಕ್ಷಣಂ – 'ಸ್ವಾತಂತ್ರ್ಯೇಣ ಈಕ್ಷಣಕರ್ತೃತ್ವ' ವೆಂಬ ಲಕ್ಷಣವು ಅಂದರೆ ಲಿಂಗವು ಉಕ್ತವಾಗಿದೆ. ಇಲ್ಲಿ 'ಉಕ್ತವಾಗಿದೆ' ಎಂಬ ಪದವು ಶೇಷವಾಗಿದೆ. ಈ ವಾಕ್ಯಕ್ಕೆ 'ತಸ್ಮಾತ್ ನ ಲಿಂಗಸ್ಯ ಅನ್ಯಗಾಮಿತ್ವಂ ಮಂತವ್ಯಮ್' - ಆದ್ದರಿಂದ ಇಲ್ಲಿ ಹೇಳಿರುವ ಲಿಂಗಕ್ಕೆ ಅನ್ಯನಿಷ್ಠತ್ವ-ವನ್ನು ತಿಳಿಯತಕ್ಕದ್ದಲ್ಲ' ಎಂಬ ಅಧ್ಯಾಹಾರ ಮಾಡಿಕೊಳ್ಳುವ ವಾಕ್ಯದೊಂದಿಗೆ ಅನ್ವಯ -ವಿರುವುದು.

ಭಾ.ದೀ. – ನನು ವಿಷ್ಣೋರವಿಕಾರಿತಯಾ ಸಿದ್ಧತ್ವೇನ ತತ್ರ ಬಹುಭಾವಾಖ್ಯ-ವಿಕಾರಾನ್ವಯಾಯೋಗಾತ್ ನಿರವಕಾಶವಿಕಾರಿತ್ವಲಿಂಗೇನ ಅತ್ರ ಈಕ್ಷತಿರ್ಗೌಣೋ

ವ್ಯಾಖ್ಯೇಯಃ । 'ಸತ್ತ್ವಾತ್ ಸಂಜಾಯತೇ ಜ್ಞಾನಮ್' (ಗೀ.೧೪.೧೭) ಇತಿ ಸ್ಮರಣಾತ್ ಜ್ಞಾನೋಪಾದಾನತಯಾ ಸಿದ್ಧೇ ಪ್ರಧಾನೇ ತತ್ಕರ್ತೃತ್ವಾಸಂಭವೇನ ತತ್ರ ತಸ್ಯಾಮುಖ್ಯತ್ವಾದಿತ್ಯತ ಆಹ – ಬಹುತ್ವಂ ಚೇತಿ ॥

ಇಲ್ಲಿ ವಿಷ್ಣುವು ವಿಕಾರರಹಿತನೆಂದು ಸಿದ್ಧವಾಗಿರುವುದರಿಂದ ಅವನಿಗೆ ಬಹುಭಾವ ಎಂಬ ವಿಕಾರದ ಸಂಬಂಧವಾಗುವ ಸಾಧ್ಯವಿಲ್ಲದಿರುವುದರಿಂದ ಇಲ್ಲಿ ಶ್ರುತವಾಗಿರುವ ವಿಕಾರಿತ್ವಲಿಂಗವು ವಿಷ್ಣುವಿನಲ್ಲಿ ಅವಕಾಶವನ್ನು ಹೊಂದಲು ಸಾಧ್ಯವಿಲ್ಲದ ಪ್ರಯುಕ್ತ ಈ ಶ್ರುತಿಯಲ್ಲಿ ಹೇಳಿರುವ ಈಕ್ಷಣಕ್ರಿಯೆಯು ಅಮುಖ್ಯವಾದ ಈಕ್ಷಣವೆಂದೇ ವ್ಯಾಖ್ಯಾನ ಮಾಡಬೇಕು. ಏಕೆಂದರೆ, 'ಸತ್ತ್ವಾತ್ ಸಂಜಾಯತೇ ಜ್ಞಾನಮ್' ಎಂಬ ಸ್ಮೃತಿವಾಕ್ಯ-ವನ್ನು ಅನುಸರಿಸಿ ಜ್ಞಾನಕ್ಕೆ ಉಪಾದಾನಕಾರಣವೆಂದು ಸಿದ್ಧವಾಗಿರುವ ಪ್ರಧಾನದಲ್ಲಿ ಈಕ್ಷಣಕರ್ತೃತ್ವವು ಇರುವುದು ಸಾಧ್ಯವಿಲ್ಲವಾದುದರಿಂದ, ಅಲ್ಲಿ ಅದು ಅಮುಖ್ಯ-ವೆಂದೇ ಹೇಳಬೇಕು ಎಂಬ ಶಂಕೆಗೆ ಉತ್ತರವಾಗಿ ''ಬಹುತ್ವಂ ಚ'' ಎಂದು ಹೇಳ-ಲಾಗಿದೆ.

## ಭಾಷ್ಯಮ್ – ಬಹುತ್ವಂ ಚಾವಿಕಾರೇಣೈವೋಕ್ತಂ 'ಅಜಾಯಮಾನೋ ಬಹುಧಾ ವಿಜಾಯತೇ' ಇತಿ ॥ ೧೩॥

॥ ಇತಿ ಬ್ರಹ್ಮಸೂತ್ರಭಾಷ್ಯೇ ಸದಧಿಕರಣಮ್ ॥ ೪ ॥

ವಿಷ್ಣುವಿಗೆ ವಿಕಾರವಿಲ್ಲದೇ ಬಹುತ್ವವನ್ನು 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ವಾಕ್ಯದಿಂದ ಹೇಳಲಾಗಿದೆ.

ಭಾ.ದೀ.– ಚಸ್ತ್ವರ್ಥಃ ।'ಅವಿಕಾರೇಣ' ವಿಕಾರಿತ್ವಂ ವಿನೈವ 'ಸ್ವರೂಪಬಹುತ್ವೇ-ನೈವ' ಇತ್ಯರ್ಥಃ । ಇತ್ಯಾದಿನೋಕ್ತಮ್ ಇತ್ಯನ್ವಯಃ । ತಥಾ ಚ ಬಹುತ್ವಸ್ಯ ಸಾವ-ಕಾಶತ್ವಾನ್ನ ತದ್ಬಲೇನ ಈಕ್ಷತೇರ್ಗೌಣತ್ವಂ ಕಲ್ಪನೀಯಮಿತಿ ಭಾವಃ ।

ಯದ್ವಾ – 'ಬಹುತ್ವಂ' 'ಬಹು ಸ್ಯಾಮ್' ಇತಿ ಬಹುಭಾವವಚನಮ್ 'ಉಕ್ತಮ್' ವ್ಯಾಖ್ಯಾತಮ್ । ತಥಾ ಚ – ಇತ್ಯೇವಮಾದಿಪ್ರಮಾಣವಾಕ್ಯೇನ 'ಬಹು

ಸ್ಯಾಮ್' ಇತಿ ಬಹುಭಾವವಚನಮ್ 'ಅವಿಕಾರೇಣ' ವಿಕಾರಂ ವಿನೈವ ನಿಯಾಮಕಸ್ವರೂಪಬಹುತ್ವೇನೈವ ಮುಖ್ಯಪ್ರತಿಪಾದ್ಯೇನೈವ ಯುಕ್ತಮಿತ್ಯುಕ್ತಮ್ – ಇತಿ ಯೋಜನಾ । ತಥಾ ಚ – ಸಿದ್ಧಾಂತೇ 'ಬಹು ಸ್ಯಾಮ್' ಇತ್ಯಸ್ಯ ತತ್ತನ್ನಿಯಾಮಕಸ್ವರೂಪಬಹುಭಾವಸಂಕಲ್ಪೋಽರ್ಥ ಇತ್ಯುಕ್ತಂ ಭವತಿ । ನ ಚೈವಂ ನಿಯಾಮಕಸ್ವರೂಪಬಹುಭಾವಸಂಕಲ್ಪಾನಂತರಂ ನಿಯಮ್ಯಸೃಷ್ಟಿರಯುಕ್ತಾ ಇತಿ ಯಾವತ್ । ಗುರುತ್ವರಾಜತ್ವಾದೇಃ ಶಿಷ್ಯಭೃತ್ಯಸಾಪೇಕ್ಷತ್ವೇನ ತತ್ಸಂಕಲ್ಪಾನಂತರಂ ತತ್ಸಾಪೇಕ್ಷನಿಯಮ್ಯಸೃಷ್ಟೇಃ ಯುಕ್ತತ್ವಾತ್ । 'ಅಜಾಯಮಾನಃ' ಅವಿಕುರ್ವಾಣಃ ಇತಿ ಶ್ರುತ್ಯರ್ಥಸ್ತು ದ್ಯುಭ್ವಾದಿನಯೇಽಭಿಹಿತಃ ।

॥ ಇತಿ ಸದಧಿಕರಣಮ್ ॥

ಇಲ್ಲಿ 'ಚ'ಕಾರವು 'ತು' ಶಬ್ದದ ಅರ್ಥವುಳ್ಳದ್ದು. ಭಾಷ್ಯದಲ್ಲಿರುವ ಅವಿಕಾರೇಣ ಎಂಬುದಕ್ಕೆ ವಿಕಾರವಿಲ್ಲದೇ ಸ್ವರೂಪದಲ್ಲಿ ಬಹುತ್ವವಿದ್ದ ಕಾರಣದಿಂದಲೇ ಎಂದು ಅರ್ಥ. 'ಇತ್ಯಾದಿನಾ ಉಕ್ತಮ್' ಎಂಬ ಪದಗಳ ಅನ್ವಯ. ತಥಾ ಚ – ಬಹುತ್ವವು ವಿಷ್ಣುವಿನಲ್ಲೂ ಅವಕಾಶ ಪಡೆಯುವುದರಿಂದ ಬಹುತ್ವದ ನಿಮಿತ್ತದಿಂದ ಈಕ್ಷತಿಯು ಗೌಣವೆಂದು ಕಲ್ಪಿಸತಕ್ಕದ್ದಲ್ಲ ಎಂದು ಭಾವ. ಅಥವಾ ಭಾಷ್ಯದಲ್ಲಿ ಬಹುತ್ವಮ್ - ಅಂದರೆ 'ಬಹು ಸ್ಯಾಮ್' ಎಂಬ ಬಹುಭಾವವನ್ನು ಹೇಳುವ ವಾಕ್ಯವು ಉಕ್ತಮ್' - ವ್ಯಾಖ್ಯಾನಿಸಲ್ಪಟ್ಟಿದೆ ಎಂದು ಅರ್ಥ.

ತಥಾ ಚ – 'ಅಜಾಯಮಾನಃ' ಇತ್ಯಾದಿ ಪ್ರಮಾಣವಾಕ್ಯದಿಂದ 'ಬಹು ಸ್ಯಾಮ್' ಎಂದು ಬಹುಭಾವವನ್ನು ಹೇಳಿರುವ ವಾಕ್ಯವು ಅವಿಕಾರೇಣ ಅಂದರೆ ವಿಕಾರವಿಲ್ಲದೇ ನಿಯಾಮಕವಾದ ಭಗವಂತನ ಸ್ವರೂಪಗಳ ಬಹುತ್ವದಿಂದಲೇ ಮುಖ್ಯಪ್ರತಿಪಾದ್ಯನಾದ ವಿಷ್ಣುವಿಗೆ ಯುಕ್ತವಾಗಿದೆ ಎಂದು ಹೇಳಲ್ಪಟ್ಟಿದೆ – ಎಂದು ಪದಗಳ ಯೋಜನೆ. ತಥಾ ಚ – ಸಿದ್ಧಾಂತದಲ್ಲಿ 'ಬಹು ಸ್ಯಾಮ್' ಇತ್ಯಾದಿ ವಾಕ್ಯಕ್ಕೆ ಆಯಾಯ ಪದಾರ್ಥದ ನಿಯಾಮಕವಾದ ಸ್ವರೂಪಗಳ ಬಹುಭಾವವನ್ನು ಹೊಂದುವೆನು ಎಂಬ ಸಂಕಲ್ಪವು ಅರ್ಥವಾಗಿದೆ ಎಂದು ಹೇಳಿದಂತಾಗುವುದು.

'ನಿಯಾಮಕವಾದ ಸ್ವರೂಪಗಳ ಬಾಹುಲ್ಯವನ್ನು ಪಡೆಯುವೆನು' ಎಂಬ ಸಂಕಲ್ಪ ಮಾಡಿದ ನಂತರ ನಿಯಮ್ಯವಾದ ಪದಾರ್ಥಗಳ ಸೃಷ್ಟಿಮಾಡುವುದು ಯುಕ್ತವಲ್ಲ ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಗುರುತ್ವವು ಶಿಷ್ಯಸಾಪೇಕ್ಷವಾಗಿರುವುದರಿಂದ ಹಾಗೆಯೇ ರಾಜತ್ವವು ಭೃತ್ಯಸಾಪೇಕ್ಷವಾಗಿರುವುದರಿಂದ 'ಗುರುವಾಗುವೆನು ಅಥವಾ ರಾಜನಾಗುವೆನು' ಎಂದು ಸಂಕಲ್ಪ ಮಾಡಿದ ನಂತರ ಶಿಷ್ಯರೇ ಮೊದಲಾದವರನ್ನು ಸಂಪಾದಿಸುವಂತೆ ನಿಯಾಮಕತ್ವವು ನಿಯಮ್ಯವನ್ನು ಸಾಪೇಕ್ಷಿಸುವುದರಿಂದ 'ನಿಯಾಮಕವಾದ ಬಹುರೂಪಗಳನ್ನು ಪಡೆಯುವೆನು' ಎಂದು ಸಂಕಲ್ಪಿಸಿದ ನಂತರ ಅದು ಅಪೇಕ್ಷಿಸುವ ನಿಯಮ್ಯಗಳನ್ನು ಸೃಷ್ಟಿಮಾಡುವುದು ಯುಕ್ತವೇ ಆಗಿದೆ.

'ಅಜಾಯಮಾನಃ' ಅಂದರೆ ಯಾವುದೇ ವಿಕಾರವನ್ನು ಪಡೆಯದೇ ಎಂದು ಅರ್ಥ. ಈ ಶ್ರುತಿಯ ಅರ್ಥವಾದರೋ ದ್ಯುಭ್ವಾದ್ಯಧಿಕರಣದಲ್ಲಿ ಹೇಳಲ್ಪಟ್ಟಿದೆ.

॥ ಭಾಷ್ಯದೀಪಿಕೆಯ ಕನ್ನಡಾನುವಾದದಲ್ಲಿ ಸದಧಿಕರಣವು ಮುಗಿಯಿತು ॥

## ೫. ದಹರಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಸರ್ವಾಧಾರತಯಾऽನ್ವೇಷ್ಟವ್ಯತಯಾ ಚ ಸಾಕ್ಷಾದ್ ವಾ ವ್ಯವಧಾನೇನ ವಾ ಸಾಮಾನ್ಯತೋ ಹೃತ್ಪದ್ಮಸ್ಥತ್ವಲಿಂಗಸ್ಯ ಬ್ರಹ್ಮಣಿ ಸಮನ್ವಯಃ ಕ್ರಿಯತೇ । ಶ್ರುತ್ಯಾದಿಸಂಗತಿಂ ವಿಷಯವಾಕ್ಯಮುದಾಹೃತ್ಯ ವಿಷಯಾ-ದಿಕಂ ಚ ಸೂಚಯನ್ ಸಯುಕ್ತಿಕಂ ಪೂರ್ವಪಕ್ಷಯತಿ – ಚಂದ್ರೇತಿ ॥

ಅನು – ಈ ಅಧಿಕರಣದಲ್ಲಿ ಸರ್ವಾಧಾರನಾಗಿರುವನೆಂದು ಹಾಗೂ ಮನನ ವಿಷಯನಾಗಿರುವನೆಂದು ಸಾಕ್ಷಾತ್ತಾಗಿ ಅಥವಾ ಪರಂಪರಯಾ ಸಾಮಾನ್ಯತಃ ಹೃತ್ಪದ್ಮಸ್ಥತ್ವ ಎಂಬ ಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವು ಮಾಡಲ್ಪಡುವುದು. ಶ್ರುತಿಸಂಗತಿ ಮೊದಲಾದವುಗಳನ್ನು ವಿಷಯವಾಕ್ಯವನ್ನು ಉದಾಹರಿಸಿ ವಿಷಯ ಮೊದಲಾದವು-ಗಳನ್ನು ಸೂಚಿಸುತ್ತಾ ಯುಕ್ತಿಸಹಿತವಾಗಿ ಭಾಷ್ಯಕಾರರು ''ಚಂದ್ರಾದಿತ್ಯ'' ಎಂಬ ವಾಕ್ಯದಿಂದ ಪೂರ್ವಪಕ್ಷವನ್ನುಮಾಡುತ್ತಿದ್ದಾರೆ.

**ಭಾಷ್ಯಮ್ – ಚಂದ್ರಾದಿತ್ಯಾದ್ಯಾಧಾರತ್ವಂ ವಿಷ್ಣೋರುಕ್ತಮ್ । ತಚ್ಚ 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋऽಸ್ಮಿನ್ನಂತರ ಆಕಾಶಃ ....ಕಿಂ ತದತ್ರ ವಿದ್ಯತೇ....'** (ಛಾಂ.೮-೧-೨); **'ಉಭೇ ಅಸ್ಮಿನ್ ದ್ಯಾವಾ ಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮ-ಸಾವುಭೌ । ವಿದ್ಯುನ್ನಕ್ಷತ್ರಾಣಿ'** (ಛಾಂ.ಉ. ೮-೧-೩) **ಇತ್ಯಾದಿ-ನಾऽऽಕಾಶಸ್ಯ ಪ್ರತೀಯತೇ ।**

ಚಂದ್ರ ಸೂರ್ಯ ಮೊದಲಾದವರಿಗೆ ಆಧಾರನಾಗಿರುವಿಕೆಯು ವಿಷ್ಣುವಿಗೆ ಇರುವುದೆಂದು ಹೇಳಲಾಗಿದೆ. ಆ ಆಧಾರತ್ವವಾದರೋ ಆಕಾಶಕ್ಕೆ ಇರುವುದೆಂದು 'ಅಥ ಯದಿದಮಸ್ಮಿನ್ ಬ್ರಹ್ಮಪುರೇ

ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ....
ಕಿಂ ತದತ್ರ ವಿದ್ಯತೇ....' ''ಉಭೇ ಅಸ್ಮಿನ್ ದ್ಯಾವಾ ಪೃಥಿವೀ ಅಂತ-
ರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರ-
ಮಸಾವುಭೌ । ವಿದ್ಯುನ್ನಕ್ಷತ್ರಾಣಿ'' ಇತ್ಯಾದಿ ವಾಕ್ಯದಿಂದ ತಿಳಿದು
ಬರುತ್ತಿದೆ.

ಭಾ.ದೀ. – 'ಏತಸ್ಯ ವಾ ಅಕ್ಷರಸ್ಯ' (ಬೃ.೫-೮-೯) ಇತ್ಯಾದಿನಾ ಇತಿ ವರ್ತತೇ। 'ಆದಿ'ಪದೇನ ದ್ಯಾವಾಪೃಥಿವ್ಯಾದಿಕಂ ಗೃಹ್ಯತೇ । ತತಃ ಕಿಮ್? ಇತ್ಯತ ಆಹ – ತಚ್ಚೇತಿ ॥ 'ತತ್' ಇತ್ಯಾವರ್ತತೇ। 'ಚಃ' ಸಮುಚ್ಚಯೇಽವಧಾರಣೇ ಚ। ತಥಾ ಚ – 'ತತ್ರ' ಛಂದೋಗಶ್ರುತೌ ಯತ್ ಅಕ್ಷರನಯೋದಾಹೃತವಾಕ್ಯೋಕ್ತಂ ಚಂದ್ರಾ-ದಿತ್ಯಾಧಾರತ್ವಂ ತದೇವ ತಥಾ ತತ್ಸಮಾನಾಧಿಕರಣಂ ಹೃತ್ಪದ್ಮಸ್ಥತ್ವಂ ಚ ಆಕಾಶಸ್ಯ 'ಅಥ' ಇತ್ಯಾದಿನಾ ವಾಕ್ಯೇನ ಪ್ರತೀಯತೇ – ಇತಿ ಯೋಜನಾ।

ಯದ್ಯಪಿ ಬೃಹದ್ಭಾಷ್ಯೇ ಅಕ್ಷರನಯೋದಾಹೃತಬೃಹದಾರಣ್ಯಕಶ್ರುತಿಗತ-ಸೂರ್ಯಚಂದ್ರಪದಯೋಃ ಬ್ರಹ್ಮರುದ್ರಪರತಯಾ ವ್ಯಾಕೃತತ್ವಾತ್ ಏವಮನು-ವಾದೋಽನುಪಪನ್ನಃ । ತಥಾಽಪಿ ತಯೋಃ ಪ್ರಸಿದ್ಧಚಂದ್ರಸೂರ್ಯಪರತ್ವಸ್ಯಾಪಿ ಅನುಮತತ್ವಾತ್ ಏವಮುಕ್ತಿಃ।

ಯದ್ವಾ ಅತ್ರ ಭಾಷ್ಯೇಽಪಿ ಚಂದ್ರಾದಿತ್ಯಪದೇ ರುದ್ರಬ್ರಹ್ಮಪರೇ । ಅತ ಏವ ತತ್ತ್ವಪ್ರದೀಪೇಽಕ್ಷರನಯೇ 'ಅಹಂ ಸೋಮಮ್' (ಋ.೧೦.೧೨೫.೨) ಇತಿ ವಚನೇ ಸೋಮಶಬ್ದೋ ರುದ್ರಪರತಯಾ ವ್ಯಾಖ್ಯಾತಃ। ತಥಾ ಚ ನ ಕೋಽಪಿ ವಿರೋಧಃ । ಅನೇನ ಅಕ್ಷರನಯೋಕ್ತಚಂದ್ರಾದಿತ್ಯಾದ್ಯಾಧಾರತ್ವಸ್ಯ ಸಾಕ್ಷಾದ್ ಹೃತ್ಪದ್ಮಸ್ಥಾಕಾಶನಿಷ್ಠತಾಕ್ಷೇಪಾತ್ ತೇನ ಅಸ್ಯ ಆಕ್ಷೇಪಿಕೀಸಂಗತಿರುಕ್ತಾ ಭವತಿ।

ಚಂದ್ರ ಆದಿತ್ಯಾದಿ ಆಧಾರತ್ವವು ವಿಷ್ಣುವಿಗೆ ಹೇಳಲಾಗಿದೆ ಎಂಬ ವಾಕ್ಯಕ್ಕೆ - 'ಏತಸ್ಯ ವಾ ಅಕ್ಷರಸ್ಯ' ಇತ್ಯಾದಿ ವಾಕ್ಯದಿಂದ- ಎಂಬ ಪದಗಳನ್ನು ಸೇರಿಸಬೇಕು. 'ಚಂದ್ರಾ-

ದಿತ್ಯಾದಿ' ಎಂಬಲ್ಲಿರುವ ಆದಿಪದದಿಂದ ದ್ಯಾವಾಪೃಥಿವ್ಯಾದಿಗಳು ಗ್ರಹಿಸಲ್ಪಡುತ್ತವೆ. ಆದರಿಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ''ತಚ್ಚ'' ಎಂದು ಹೇಳಲಾಗಿದೆ. ಇಲ್ಲಿ 'ತತ್' ಆವೃತ್ತಿಯನ್ನು ಪಡೆಯುತ್ತದೆ. 'ಚ'ಕಾರವು ಸಮುಚ್ಚಯ ಮತ್ತು ಅವಧಾರಣ ಎರಡನ್ನೂ ಹೇಳುವುದು. ತಥಾ ಚ – ಆ ತತ್ - 'ತತ್ರ' ಆ ಛಂದೋಗಶ್ರುತಿಯಲ್ಲಿ ಅಕ್ಷರಾಧಿಕರಣದಲ್ಲಿ ಉದಾಹರಿಸಲ್ಪಟ್ಟಿರುವ ವಾಕ್ಯದಲ್ಲಿ ಹೇಳಲಾಗಿರುವ ಚಂದ್ರ-ಸೂರ್ಯಾದ್ಯಾಧಾರತ್ವವು ಯಾವುದಿದೆಯೋ ಅದೇ ಹಾಗೆಯೇ ಅದರ ಜೊತೆಗೆ ಹೇಳಲಾಗಿರುವ ಹೃತ್ಪದ್ಮಸ್ಥತ್ವವೂ ಕೂಡ ಆಕಾಶಕ್ಕೆ ಇರುವುದೆಂದು ''ಅಥ'' ಇತ್ಯಾದಿ ವಾಕ್ಯದಿಂದ ತಿಳಿದುಬರುತ್ತಿದೆ ಎಂದು ಯೋಜನೆ.

ಯದ್ಯಪಿ – ಬೃಹದಾರಣ್ಯಕಭಾಷ್ಯದಲ್ಲಿ ಅಕ್ಷರಾಧಿಕರಣದಲ್ಲಿ ಉದಾಹರಿಸಲಾದ ಬೃಹದಾರಣ್ಯಕಶ್ರುತಿಯಲ್ಲಿರುವ ಸೂರ್ಯ, ಚಂದ್ರ ಪದಗಳಿಗೆ ಬ್ರಹ್ಮರುದ್ರರನ್ನು ಹೇಳುವ ತಾತ್ಪರ್ಯ ಇರುವುದೆಂದು ವ್ಯಾಖ್ಯಾನ ಮಾಡಲಾಗಿರುವುದರಿಂದ ಇಲ್ಲಿ ಹೀಗೆ ಅನುವಾದ ಮಾಡುವುದು ಯುಕ್ತವಲ್ಲ. ಆದರೂ ಆ ಪದಗಳಿಗೆ ಪ್ರಸಿದ್ಧಚಂದ್ರ-ಸೂರ್ಯರನ್ನು ಹೇಳುವ ತಾತ್ಪರ್ಯವಿರುವುದೆಂದು ಒಪ್ಪಿರುವುದರಿಂದ ಹೀಗೆ ಹೇಳಲಾಗಿದೆ.

ಅಥವಾ – ಈ ಭಾಷ್ಯದಲ್ಲೂ ಕೂಡ ಚಂದ್ರ, ಆದಿತ್ಯಪದಗಳು ಕ್ರಮವಾಗಿ ರುದ್ರ, ಬ್ರಹ್ಮರನ್ನು ಹೇಳುವ ಅಭಿಪ್ರಾಯವುಳ್ಳವು. ಆದ್ದರಿಂದಲೇ ತತ್ವಪ್ರದೀಪದಲ್ಲಿ ಅಕ್ಷರಾಧಿಕರಣದಲ್ಲಿ 'ಅಹಂ ಸೋಮಂ' ಎಂಬ ವಾಕ್ಯದಲ್ಲಿ ಸೋಮಶಬ್ದವು ರುದ್ರಪರವೆಂದು ವ್ಯಾಖ್ಯಾತವಾಗಿದೆ. ತಥಾ ಚ ಯಾವ ವಿರೋಧವೂ ಇಲ್ಲ. ಇದರಿಂದ ಅಕ್ಷರಾಧಿಕರಣದಲ್ಲಿ ಹೇಳಿರುವ ಚಂದ್ರಾದಿತ್ಯಾದ್ಯಾಧಾರತ್ವವು ಸಾಕ್ಷಾತ್ ಹೃತ್ಪದ್ಮದಲ್ಲಿ-ರುವ ಆಕಾಶದಲ್ಲಿರುವುದೆಂದು ಆಕ್ಷೇಪಿಸುವ ಕಾರಣ ಆ ಅಧಿಕರಣದಿಂದ ಈ ಅಧಿ-ಕರಣಕ್ಕೆ ಆಕ್ಷೇಪಿಕೀ ಸಂಗತಿಯನ್ನು ಹೇಳಿದಂತಾಗುವುದು.

ಭಾ.ದೀ. – ಏವಂ ಸರ್ವಾಧಾರತ್ವಾನ್ವೇಷ್ಟವ್ಯತ್ವಸಮಾನಾಧಿಕರಣಃ ಸಾಕ್ಷಾದ್ ವ್ಯವಧಾನೇನ ವಾ ಸಾಮಾನ್ಯತೋ ಹೃತ್ಪದ್ಮಸ್ಥತ್ವರೂಪೋ ವಿಷಯಶ್ಚ ದರ್ಶಿತಃ। ನ ಚೈವಂ 'ಚಂದ್ರಾದಿತ್ಯ' ಇತಿ ಭಾಷ್ಯೇಣ ಸ ಚಂದ್ರಾದಿತ್ಯಾದ್ಯಾಧಾರಃ ಕಿಂ

ದಹರಾಕಾಶಃ ಸ್ಯಾತ್? ಆಹೋಸ್ವಿತ್ ತತ್ಸ್ಥಃ ಕಶ್ಚಿತ್? ಇತಿ ತತ್ತ್ವಪ್ರದೀಪೇನ ಚ ವಿರೋಧಃ ಇತಿ ವಾಚ್ಯಮ್ । ತಯೋರಕ್ಷರಾಧಿಕರಣಾಕ್ಷೇಪೇಣಾತ್ರ ಪೂರ್ವಪಕ್ಷಃ ಇತಿ ದರ್ಶಯಿತುಂ ಪ್ರವೃತ್ತತ್ವೇನ ವಿಷಯಪ್ರದರ್ಶನಾಯಾಪ್ರವೃತ್ತತ್ವಾತ್ । 'ಆಕಾಶಸ್ಯ' ಇತ್ಯನೇನ ಪ್ರಸಿದ್ಧಭೂತಾಕಾಶಸ್ಯೈವ ಸರ್ವಾಧಾರತಯಾ ಸಾಕ್ಷಾದ್ ಹೃತ್ಪದ್ಮಸ್ಥತ್ವಮಿತಿ ಪೂರ್ವಃ ಪಕ್ಷಃ ಪ್ರದರ್ಶಿತಃ । ತಥಾ ಪ್ರಶ್ನಪ್ರತಿವಚನಪೂರ್ವಕಂ ಸಾಕ್ಷಾದಾಕಾಶಸ್ಯೈವ ಅತ್ರ ಸರ್ವಾಧಾರತಯಾ ಹೃತ್ಪದ್ಮಸ್ಥತ್ವಕಥನಾತ್ ಇತಿ-ಪೂರ್ವಪಕ್ಷಯುಕ್ತಿಶ್ಚ ಪ್ರದರ್ಶಿತಾ ಭವತಿ।

ಅತ್ರ ಯದ್ಯಪಿ 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ ತಸ್ಮಿನ್ ಯದಂತಃ ತದನ್ವೇಷ್ಟವ್ಯಂ ತದ್ ವಾವ ವಿಜಿಜ್ಞಾಸಿತವ್ಯಮಿತಿ । ತಂ ಚೇದ್ ಬ್ರೂಯುಃ ... ಕಿಂ ತದತ್ರ ವಿದ್ಯತೇ ಯದ-ನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ । ಸ ಬ್ರೂಯಾದ್ ಯಾವಾನ್ ವಾಽಯಮಾಕಾಶಸ್ತಾವಾನ್ ಏಷೋಽಂತರ್ಹೃದಯ ಆಕಾಶಃ । ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ । ವಿದ್ಯುನ್ನಕ್ಷತ್ರಾಣಿ' (ಛಾಂ.೮-೧-೨) ಇತ್ಯಾದಿ ಸಮಗ್ರವಾಕ್ಯಮುದಾಹರ್ತವ್ಯಮ್, ನ ತು ವಿಚ್ಛಿದ್ಯ । ತಥಾಽಪಿ ಅಪೇ-ಕ್ಷಿತಾಂಶೋದಾಹರಣೇನೈವ ಪೂರ್ತೇಃ ವಿಷಯಪೂರ್ವಪಕ್ಷಯುಕ್ತ್ಯಾದೇಃ ಏತಾ-ವತೈವ ಜ್ಞಾತುಂ ಶಕ್ಯತ್ವಾತ್ ಉಪಯುಕ್ತಮಾತ್ರಮುದಾಹೃತಮ್।

ಯದ್ಯಪಿ 'ಯದಿದಮಸ್ಮಿನ್' ಇತಿ ಶ್ರುತಿಪಾಠಃ । ತಥಾಽಪಿ ಸಮಾನ-ಜಾತೀಯಶ್ರುತ್ಯಂತರೋಪಸಂಗ್ರಹಾಯ ಏವಮುದಾಹೃತಮಿತಿ ಧ್ಯೇಯಮ್।

ಇದೇ ರೀತಿಯಾಗಿ ಸರ್ವಾಧಾರತ್ವ-ಅನ್ವೇಷ್ಟವ್ಯತ್ವಗಳ ಜೊತೆಯಲ್ಲೇ ಹೇಳಲಾ-ಗಿರುವ ಸಾಕ್ಷಾತ್ ಅಥವಾ ಪರಂಪರೆಯಾ ಸಾಮಾನ್ಯತಃ ಹೃತ್ಪದ್ಮಸ್ಥತ್ವವು ಈ ಅಧಿಕರಣದ ವಿಷಯವೆಂದು ಇಲ್ಲಿ ತಿಳಿಸಲಾಗಿದೆ. ಹೀಗೆ ಹೇಳಿದಲ್ಲಿ "ಚಂದ್ರಾದಿತ್ಯ" ಎಂಬ ಭಾಷ್ಯವಾಕ್ಯದಿಂದ ಆ ಚಂದ್ರಾದಿತ್ಯ ಮೊದಲಾದವರಿಗೆ ಆಧಾರವಾಗಿರುವುದು ದಹರಾ-

ಕಾಶವೋ ಅಥವಾ ಅದರಲ್ಲಿರುವ ಮತ್ತೊಬ್ಬನೋ? ಎಂದು ಶಂಕಿಸುವ ತತ್ತ್ವ-ಪ್ರದೀಪದಿಂದ ವಿರೋಧ ಬರುವುದು ಎಂದು ಹೇಳತಕ್ಕದ್ದಲ್ಲ. ಏಕೆಂದರೆ, ತತ್ತ್ವ-ಪ್ರದೀಪದಲ್ಲಿ ಆ ವಾಕ್ಯಗಳು, ಅಕ್ಷರಾಧಿಕರಣವನ್ನು ಆಕ್ಷೇಪಿಸುವ ಮೂಲಕ ಇಲ್ಲಿ ಪೂರ್ವಪಕ್ಷವನ್ನು ಮಾಡಲಾಗುವುದು ಎಂದು ತೋರಿಸಲು ಹೊರಟಿರುವುದರಿಂದ ವಿಷಯಸೂಚನೆಗಾಗಿ ಆ ವಾಕ್ಯಗಳು ಪ್ರವೃತ್ತವಾಗಿಲ್ಲ. ಭಾಷ್ಯದಲ್ಲಿ ''ಆಕಾಶಸ್ಯ'' ಎಂಬ ಪದದಿಂದ ಪ್ರಸಿದ್ಧವಾದ ಭೂತಾಕಾಶವೇ ಸರ್ವಾಧಾರವಾಗಿ ಸಾಕ್ಷಾತ್ ಹೃತ್ಪದ್ಮಸ್ಥವಾಗಿದೆ ಎಂಬ ಪೂರ್ವಪಕ್ಷವು ಪ್ರದರ್ಶಿತವಾಗಿದೆ. ಹಾಗೆಯೇ ''ಪ್ರಶ್ನೋತ್ತರಗಳ ಮೂಲಕ ಸಾಕ್ಷಾತ್ ಆಕಾಶಕ್ಕೇ ಸರ್ವಾಧಾರತ್ವೇನ ಹೃತ್ಪದ್ಮಸ್ಥತ್ವವನ್ನು ಹೇಳಿರುವುದರಿಂದ'' ಎಂಬ ಪೂರ್ವಪಕ್ಷಯುಕ್ತಿಯೂ ಪ್ರದರ್ಶಿತವಾಗಿದೆ.

ಇಲ್ಲಿ ಯದ್ಯಪಿ '''ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ ತಸ್ಮಿನ್ ಯದಂತಃ ತದನ್ವೇಷ್ಟವ್ಯಂ ತದ್ ವಾವ ವಿಜಿಜ್ಞಾಸಿತವ್ಯಮಿತಿ । ತಂ ಚೇದ್ ಬ್ರೂಯುಃ ... ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ । ಸ ಬ್ರೂಯಾದ್ ಯಾವಾನ್ ವಾಽಯಮಾಕಾಶ-ಸ್ತಾವಾನ್ ಏಷೋಽಂತರ್ಹೃದಯ ಆಕಾಶಃ । ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ । ವಿದ್ಯುನ್ನಕ್ಷತ್ರಾಣಿ''' ಇತ್ಯಾದಿ ಸಮಗ್ರವಾಕ್ಯವನ್ನು ಉದಾಹರಿಸಬೇಕಾಗಿತ್ತು ಹೊರತು ಆ ವಾಕ್ಯವನ್ನು ವಿಚ್ಛೇದ ಮಾಡಿ ಉದಾಹರಿಸಬಾರದಿತ್ತು. ತಥಾಪಿ ಪ್ರಕೃತ ಅಪೇಕ್ಷಿತವಾದ ವಾಕ್ಯದ ಅಂಶಗಳನ್ನು ಉದಾಹರಿಸುವುದರಿಂದಲೇ ಬೇಕಾದ ವಿಷಯವು ಲಭಿಸುವು-ದರಿಂದ ವಿಷಯ, ಪೂರ್ವಪಕ್ಷ, ಪೂರ್ವಪಕ್ಷ ಯುಕ್ತಿ ಮೊದಲಾದವುಗಳನ್ನು ಇಷ್ಟರಿಂದಲೇ ತಿಳಿಯಲು ಸಾಧ್ಯವಿರುವುದರಿಂದ ಎಷ್ಟು ಉಪಯುಕ್ತವೋ ಅಷ್ಟನ್ನು ಮಾತ್ರ ಉದಾಹರಿಸಲಾಗಿದೆ.

ಯದ್ಯಪಿ ಶ್ರುತಿಯಲ್ಲಿ ''ಯದಿದಮಸ್ಮಿನ್'' ಎಂದು ಪಾಠವಿರುವುದು. ಆದರೂ ಸಮಾನವಿಷಯಕವಾದ ಮತ್ತೊಂದು ಶ್ರುತಿಯನ್ನು ಸಂಗ್ರಹಮಾಡುವುದಕ್ಕೋಸ್ಕರವಾಗಿ ಹೀಗೆ ವಾಕ್ಯವನ್ನು ಉದಾಹರಿಸಲಾಗಿದೆ ಎಂದು ತಿಳಿಯಬೇಕು.

ಭಾ.ದೀ. – ಶ್ರುತೌ 'ಅಥ'ಶಬ್ದಃ ಪ್ರಮೇಯಾಂತರಾರಂಭಾರ್ಥಃ । 'ಬ್ರಹ್ಮ-ಪುರಮ್' ಇತ್ಯೇತದ್ 'ಬ್ರಹ್ಮಣಃ ಪುರಂ ನಿವಾಸಸ್ಥಾನಮ್' ಇತಿ 'ಬ್ರಹ್ಮೈವ ಪೂರ್ಣತ್ವಾತ್ ಪುರಮ್' ಇತಿ ಚ ದ್ವೇಧಾ ವ್ಯಾಖ್ಯೇಯಮ್ । 'ಅಂತರ್ಹೃದಯೇ' ಇತಿ ಸಪ್ತಮ್ಯಂತಮ್ । 'ಆಕಾಶಃ' ಇತಿ ಪ್ರಥಮಾಂತಮ್ । ತಥಾ ಚ – ಏತಸ್ಮಿನ್ ಬ್ರಹ್ಮಪುರೇ ಶರೀರೇ ಯತ್ ಪುರಂ ಬ್ರಹ್ಮಾಸ್ತಿ 'ಅಸ್ಮಿನ್' ತಸ್ಮಿನ್ ಬ್ರಹ್ಮಣಿ 'ದಹರಂ' ದಭ್ರಮ್ ಅಲ್ಪಂ 'ಪುಂಡರೀಕಮ್' ಅಬ್ಜಂ 'ವೇಶ್ಮ' ತಸ್ಯ ಸದ್ಮರೂಪಮಸ್ತಿ ಅಸ್ಮಿನ್ 'ಅಂತರ್ದಹರಃ' ಅಲ್ಪೋ ಭೂತಾಕಾಶೋಽಸ್ತಿ । ಕಿಂ ಚಾತಃ 'ತಸ್ಮಿನ್' ಆಕಾಶೇಽಂತಃ ಯದ್ ವರ್ತತೇ 'ತದನ್ವೇಷ್ಟವ್ಯಂ' ಜ್ಞಾತವ್ಯಂ ಮಾರ್ಗಿತವ್ಯಂ ವಾ ।

ಶ್ರುತಿಯಲ್ಲಿ 'ಅಥ'ಶಬ್ದವು ಮತ್ತೊಂದು ಪ್ರಮೇಯದ ನಿರೂಪಣೆಯ ಆರಂಭ-ವನ್ನು ಹೇಳುವುದು. 'ಬ್ರಹ್ಮಪುರಂ' ಎಂಬ ಪದವನ್ನು 'ಬ್ರಹ್ಮಣಃ ಪುರಂ' - ಬ್ರಹ್ಮನ ನಿವಾಸಸ್ಥಾನವು ಎಂದೂ, 'ಬ್ರಹ್ಮೈವ ಪುರಮ್' - ಬ್ರಹ್ಮನೇ ಪೂರ್ಣನಾದ ಕಾರಣ ಪುರವೆಂದೆನಿಸುವನು ಎಂದೂ ಎರಡು ವಿಧವಾಗಿ ವ್ಯಾಖ್ಯಾನ ಮಾಡಬೇಕು. 'ಅಂತ-ರ್ಹೃದಯ ಆಕಾಶಃ' ಎಂಬಲ್ಲಿ ಅಂತರ್ಹೃದಯೇ ಎಂದು ಸಪ್ತಮ್ಯಂತವಾದ ಪದವಿದೆ. 'ಆಕಾಶಃ' ಎಂದು ಪ್ರಥಮಾವಿಭಕ್ತ್ಯಂತವಾದ ಪದವಿದೆ. ತಥಾ ಚ – 'ಏತಸ್ಮಿನ್ ಬ್ರಹ್ಮಪುರೇ' - ಈ ಬ್ರಹ್ಮನ ನಿವಾಸಸ್ಥಾನವಾದ ಶರೀರದಲ್ಲಿ ಯಾವ ಬ್ರಹ್ಮಪುರಂ - ಪುರಂ ಬ್ರಹ್ಮ - ಪೂರ್ಣವಾದ ಬ್ರಹ್ಮನು ಇರುವನೋ, 'ಅಸ್ಮಿನ್' – ಆ ಬ್ರಹ್ಮನಲ್ಲಿ 'ದಹರಂ' – ದಭ್ರಮ್ ಅಂದರೆ ಅಲ್ಪವಾದ 'ಪುಂಡರೀಕಮ್' – ಕಮಲರೂಪವಾದ, 'ವೇಶ್ಮ' – ಅವನ ಸದನರೂಪವಾದದ್ದು ಇದೆ. 'ಅಸ್ಮಿನ್ ಅಂತರ್ದಹರಃ ಆಕಾಶಃ' - ಇದರಲ್ಲಿ ಅಲ್ಪವಾದ ಭೂತಾಕಾಶವಿದೆ. ಇದರಿಂದೇನು? ಎಂದರೆ 'ತಸ್ಮಿನ್' - ಆ ಆಕಾಶದಲ್ಲಿ, ಯದಂತಃ – ಒಳಗೆ ಯಾವುದು ಇರುವುದೋ, ತದನ್ವೇಷ್ಟವ್ಯಮ್ - ಅದು ತಿಳಿಯಲ್ಪಡಬೇಕಾದದ್ದು. ಅಥವಾ ನಮ್ಮಿಂದ ಅನ್ವೇಷಿಸಲ್ಪಡಬೇಕಾದದ್ದು .

ಭಾ.ದೀ. – ನನು 'ನ ಘಟಾದಿವದನ್ವೇಷಣಂ ಯುಕ್ತಮ್, ಅಪ್ರತ್ಯಕ್ಷತ್ವಾತ್' ಇತ್ಯತಃ, ತದೇವ ವಿವೃಣೋತಿ – ತದ್ವಾವೇತಿ ॥ 'ವಾವ' ಇತ್ಯವಧಾರಣೇ । ತಥಾ ಚ

– ತದೇವ 'ವಿಜಿಜ್ಞಾಸಿತವ್ಯಂ' ವಿಚಾರಿತವ್ಯಮ್ - ಇತಿ ಗುರುಣೋಕ್ತೇ 'ತಂ' ಗುರುಂ ಪ್ರತಿ 'ಚೇತ್' ಯದಿ ಶಿಷ್ಯಾಃ 'ಬ್ರೂಯುಃ' ಪೃಚ್ಛೇಯುಃ । ಕಿಮಿತಿ? 'ಅತ್ರ' ಭೂತಾಕಾಶೇ ಯದನ್ವೇಷ್ಟವ್ಯಂ ಯದ್ ವಾವ ವಿಜಿಜ್ಞಾಸಿತವ್ಯಮ್ ಇತ್ಯುಕ್ತಮ್ 'ತತ್' ಆಧೇಯಸ್ವರೂಪಂ 'ಕಿಂ' ಕಿಂಮಹಿಮಂ ಚ - ಇತಿ ॥

ನ ಚ ಬ್ರಹ್ಮಪುರೇ 'ಬ್ರಹ್ಮಣೋ ವೇಶ್ಮ' ಇತ್ಯುಕ್ತ್ಯೈವ ಆಕಾಶಸ್ಯ ಬ್ರಹ್ಮತ್ವ-ನಿಶ್ಚಯಾತ್ ಪ್ರಶ್ನಾಯೋಗಃ? ಇತಿ ವಾಚ್ಯಮ್ । ಅನ್ಯಪುರೇಽಪಿ ಅನ್ಯಸ್ಯ ವೇಶ್ಮಸಂಭವಾತ್ ಅನ್ಯವೇಶ್ಮನ್ಯಪಿ ಅನ್ಯಸ್ಯಾವಸ್ಥಾನಸಂಭವಾತ್ ತದುಕ್ತೇಃ ಅನಿಶ್ಚಾಯಕತ್ವಾತ್ ।

ಏವಂ ಶಿಷ್ಯೈಃ ಪೃಷ್ಟೇ 'ಸಃ' ಗುರುರ್ಬ್ರೂಯಾತ್ । ಕಿಮಿತಿ? ಹೃದೋಽಂತಃ ಅಂತರ್ಹೃತ್ ತಸ್ಮಿನ್ನಯತೇ ಅಸ್ತಿ - ಇತಿ ವ್ಯುತ್ಪತ್ತ್ಯಾ 'ಅಂತರ್ಹೃದಯೇ' ತಚ್ಛಬ್ದ-ಬೋಧ್ಯೇ ಹೃತ್ಪದ್ಮಗತಭೂತಾಕಾಶೇ ದ್ಯಾವಾಪೃಥಿವ್ಯಾದ್ಯಾಶ್ರಯಃ 'ಆಕಾಶಃ' ತದಾಖ್ಯಃ ಪರಮಾತ್ಮಾ ಅಸ್ತೀತಿ ।

ನನು 'ಅಣೌ ತಸ್ಮಿನ್ ಕಥಂ ದ್ಯಾವಾಪೃಥಿವ್ಯಾದ್ಯವಸ್ಥಿತಿಃ?' ಇತ್ಯತಃ ತಸ್ಯ ವ್ಯಾಪ್ತತ್ವಮಾಹ – ಯಾವಾನಿತಿ ॥ 'ಅಯಂ' ಬಹಿಃಸ್ಥಿತಃ 'ಆಕಾಶಃ' ತದಾಖ್ಯೋ ಭಗವಾನ್ ಗುಣತಃ ಪರಿಮಾಣತಶ್ಚ ಯಾವಾನ್, ಏಷ ಆಂತರೋಽಪಿ ತಾವಾ-ನೇವ । ತಥಾ ಚ – ಅಣಾವಪಿ ರೂಪೇ ಈಶಶಕ್ತ್ಯಾ ಮಹತ್ತ್ವಸ್ಯಾಪಿ ಸತ್ತ್ವಾದ್ ವ್ಯಾಪ್ತಸ್ಯ ತಸ್ಯಾನೇಕಾಧಾರತ್ವಂ ಯುಜ್ಯತ ಏವ - ಇತಿ ಭಾವಃ । ಅನ್ಯಪರಿತ್ಯಾಗೇನ ಅಸ್ಯೈವ ಜಿಜ್ಞಾಸ್ಯತ್ವೇ ಕೋ ಹೇತುಃ? ಇತ್ಯತೋಽಸ್ಯ ಸರ್ವಾಧಾರತ್ವಾಖ್ಯಂ ಮಹಿಮಾನಮಾಹ – ಉಭ ಇತ್ಯಾದಿನಾ ॥ ಅಸ್ಮಿನ್ನಂತರೇ ಯೇ 'ಉಭೇ' ಮುಕ್ತಾ-ಮುಕ್ತೇ ದ್ಯಾವಾಪೃಥಿವ್ಯೌ ದೇವ್ಯೌ 'ಸಮಾಹಿತೇ' ಸಮವಸ್ಥಿತೇ ಏವಮುಭಯವಿಧೌ ಅಗ್ನಿಶ್ಚ ವಾಯುಶ್ಚ ಇತ್ಯೇತೌ ದೇವೌ ಸಮಾಶ್ರಿತೌ । ತಥಾ ಉಭೌ ಮುಕ್ತಾಮುಕ್ತೌ ಸೂರ್ಯಾಚಂದ್ರಮಸೌ ವಿದ್ಯುತ್ ನಕ್ಷತ್ರಾಣಿ ಚ ಸಮಾಶ್ರಿತಾನಿ - ಇತಿ ಛಾಂದೋಗ್ಯಭಾಷ್ಯರೀತ್ಯಾ ಶ್ರುತ್ಯರ್ಥಃ ।

''ಅದನ್ನು ಘಟ ಮೊದಲಾದವುಗಳನ್ನು ಅನ್ವೇಷಿಸುವಂತೆ ಅನ್ವೇಷಣ ಮಾಡು–ವುದು ಯುಕ್ತವಲ್ಲ. ಏಕೆಂದರೆ, ಅದು ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗಿಲ್ಲ'' ಎಂಬ ಶಂಕೆಗೆ ಉತ್ತರವಾಗಿ ಆ ಅನ್ವೇಷಣೆಯನ್ನೇ ''ತದ್ವಾವ'' ಎಂಬ (ಉಪನಿಷದ್) ವಾಕ್ಯವು ವಿವರಿಸುತ್ತಿದೆ. ''ವಾವ'' ಎಂಬ ಶಬ್ದವು ಅವಧಾರಣವನ್ನು ಹೇಳುವುದು. ತಥಾ ಚ ತದ್ವಾವ – ಅದನ್ನೇ 'ವಿಜಿಜ್ಞಾಸಿತವ್ಯಮ್' – ವಿಚಾರ ಮಾಡತಕ್ಕದ್ದು ಎಂದು ಗುರುವು ಹೇಳಿದಾಗ 'ತಂ' - ಆ ಗುರುವನ್ನು ಕುರಿತು, ಶಿಷ್ಯರು 'ಚೇತ್ ಬ್ರೂಯುಃ' – ಪ್ರಶ್ನೆ ಕೇಳಿದರೆ. ಏನೆಂದು ಕೇಳಿದರು? ಎಂದರೆ, 'ಅತ್ರ' – ಈ ಭೂತಾಕಾಶದಲ್ಲಿ 'ಯದ–ನ್ವೇಷ್ಟವ್ಯಮ್ ಯದ್ವಾವ ವಿಜಿಜ್ಞಾಸಿತವ್ಯಮ್' –ಯಾವುದನ್ನು ಅನ್ವೇಷಿಸಬೇಕು? ಯಾವುದನ್ನು ವಿಚಾರಿಸಬೇಕು? ಎಂದು ಹೇಳಲಾಯಿತೋ, 'ತತ್ ಕಿಮ್?' ಆ ಅಲ್ಲಿರತಕ್ಕಂಥಹ ವಸ್ತುವಿನ ಸ್ವರೂಪವೇನು? ಮತ್ತು ಅದರ ಮಹಿಮೆಯೇನು? ಎಂದು.

ಇಲ್ಲಿ 'ಬ್ರಹ್ಮಪುರೇ ವೇಶ್ಮ' – 'ಬ್ರಹ್ಮನ ನಿವಾಸಸ್ಥಾನವಾದ ಶರೀರದಲ್ಲಿ' (ಬ್ರಹ್ಮನ ಸದನವೆಂಬ ಶಬ್ದಗಳಿಂದಲೇ) ಎಂಬುದರಿಂದಲೇ ಆ ಆಕಾಶವು ಬ್ರಹ್ಮವೆಂದು ನಿಶ್ಚಯವಾಗುವುದರಿಂದ ಈ ಪ್ರಶ್ನೆಯೇ ಉದ್ಭವಿಸುವುದಿಲ್ಲ - ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಮತ್ತೊಬ್ಬನ ಪುರದಲ್ಲಿ ಇನ್ನೊಬ್ಬನ ಗೃಹ ಇರುವ ಸಂಭವವಿರುವುದರಿಂದ ಮತ್ತೊಬ್ಬರ ಗೃಹದಲ್ಲಿ ಇನ್ನೊಬ್ಬ ಇರಲು ಸಾಧ್ಯವಿರುವುದರಿಂದ ಬ್ರಹ್ಮನ ಸದನ ಎಂಬ ವಚನವು ನಿರ್ಣಾಯಕವಾಗುವುದಿಲ್ಲ.

ಹೀಗೆ ಶಿಷ್ಯರು ಪ್ರಶ್ನಿಸಿದಾಗ 'ಸಃ ಬ್ರೂಯಾತ್' - ಆ ಗುರುವು ಹೇಳುತ್ತಾನೆ. ಏನೆಂದು? 'ಹೃದಃ ಅಂತಃ - ಅಂತರ್ಹೃತ್ – ಹೃದಯದ ಒಳಭಾಗ ಅಂತರ್ಹೃತ್ ಎನಿಸುವುದು. ಅಲ್ಲಿ ಆಯತೇ – ಅಂದರೆ ಇರುವವನು ಎಂಬ ವ್ಯುತ್ಪತ್ತಿಗನುಸಾರವಾಗಿ ಅಂತರ್ಹೃದಯೇ - ಅಂತರ್ಹೃದಯ ಎಂಬ ಶಬ್ದವು ತಿಳಿಸುವ ಹೃತ್ಪದ್ಮದಲ್ಲಿರುವ ಭೂತಾಕಾಶದಲ್ಲಿ ದ್ಯಾವಾಪೃಥಿವೀ ಮೊದಲಾದವುಗಳಿಗೆ ಆಶ್ರಯನಾದ ಆಕಾಶಃ – ಆಕಾಶನೆಂದು ಹೆಸರುಳ್ಳ ಪರಮಾತ್ಮನು ಇದ್ದಾನೆ. – ಎಂದು.

ಅಣುವಾದ ಆ ಆಕಾಶದಲ್ಲಿ ದ್ಯಾವಾಪೃಥಿವೀ ಮೊದಲಾದವುಗಳು ಇರಲು ಹೇಗೆ ಸಾಧ್ಯ ? ಎಂಬ ಶಂಕೆಗೆ ಸಮಾಧಾನವಾಗಿ ಆ ಆಕಾಶವು ವ್ಯಾಪ್ತವಾದುದೆಂದು

''ಯಾವಾನ್'' ಎಂಬ ವಾಕ್ಯದಿಂದ ಶ್ರುತಿಗಳು ಹೇಳುತ್ತಿವೆ. 'ಅಯಂ' - ಅಂದರೆ ಶರೀರದ ಹೊರಭಾಗದಲ್ಲಿರುವ ಈ 'ಆಕಾಶಃ' - ಆಕಾಶ ನಾಮಕನಾದ ಭಗವಂತನು ಗುಣಗಳಿಂದ ಮತ್ತು ಪರಿಮಾಣದಿಂದ 'ಯಾವಾನ್' ಎಷ್ಟಿರುವನೋ ಏಷಃ - ಈ ಒಳಗಿರುಪವನೂ 'ತಾವಾನ್' - ಅಷ್ಟೇ ಇರುವನು. ತಥಾ ಚ – ಅಣುವಾದ ರೂಪದಲ್ಲೂ ಭಗವಂತನ ಶಕ್ತಿಯಿಂದ ಮಹತ್ತ್ವವು ಇರುವುದರಿಂದ ವ್ಯಾಪ್ತನಾದ ಆ ಆಕಾಶನಾಮಕ ಭಗವಂತನಿಗೆ ಅನೇಕ ವಸ್ತುಗಳ ಆಧಾರತ್ವವು ಯುಕ್ತವಾಗಿಯೇ ಇರುವುದು ಎಂದು ಭಾವ. ಇತರ ವಸ್ತುಗಳನ್ನು ಬಿಟ್ಟು ಇವನನ್ನೇ ಜಿಜ್ಞಾಸೆ ಮಾಡಲು ಏನು ಕಾರಣ? ಎಂಬ ಪ್ರಶ್ನೆಗೆ ಉತ್ತರವಾಗಿ ಆ ಆಕಾಶನಾಮಕ ಭಗವಂತನಿಗೆ ಇರುವ ಸರ್ವಾಧಾರತ್ವವೆಂಬ ಮಹಿಮೆಯನ್ನು ''ಉಭೇ'' ಇತ್ಯಾದಿ ವಾಕ್ಯವು ಹೇಳುತ್ತಿದೆ. 'ಅಸ್ಮಿನ್ ಅಂತಃ' - ಒಳಗಿರುವ ಇವನಲ್ಲಿ ಯಾವ 'ಉಭೇ' – ಮುಕ್ತರು ಮತ್ತು ಅಮುಕ್ತರು ಆದ ದ್ಯಾವಾಪೃಥಿವೀಗಳಿಗೆ ಅಭಿಮಾನಿಗಳಾದ ದೇವತೆಗಳು 'ಸಮಾಹಿತೇ' – ಆಶ್ರಿತರಾಗಿ ಇರುವರೋ ಹಾಗೆಯೇ 'ಉಭೇ' ಮುಕ್ತರು ಮತ್ತು ಅಮುಕ್ತರೆಂದು ಎರಡು ವಿಧರಾದ 'ಅಗ್ನಿಶ್ಚ ವಾಯುಶ್ಚ' ಅಗ್ನಿ ಮತ್ತು ವಾಯು ಎಂಬ ದೇವತೆಗಳು 'ಸಮಾಹಿತೇ' ಆಶ್ರಿತರಾಗಿರುವರು. ಹಾಗೆಯೇ 'ಉಭೌ' – ಮುಕ್ತರೂ ಹಾಗೂ ಅಮುಕ್ತರಾದ 'ಸೂರ್ಯ ಮತ್ತು ಚಂದ್ರರು, ವಿದ್ಯುತ್ ನಕ್ಷತ್ರಗಳು ಇವುಗಳಿಗೆ ಅಭಿ- ಮಾನಿಗಳಾದ ದೇವತೆಗಳು ಆಶ್ರಿತರಾಗಿರುವರು ಎಂದು ಛಾಂದೋಗ್ಯಭಾಷ್ಯದ ರೀತ್ಯಾ ಈ ಶ್ರುತಿಯ ಅರ್ಥವಿರುವುದು.

ಭಾ.ದೀ. – ನ್ಯಾಯವಿವರಣೇ ತದ್ವಿವರಣರೂಪಟೀಕಾಯಾಂ – 'ತಸ್ಮಿನ್ ಯದಂತಃ' ಇತ್ಯತ್ರ 'ಹೃತ್ಪದ್ಮಸ್ಥಾಕಾಶಗತಂ ಬ್ರಹ್ಮಾನ್ವೇಷ್ಟವ್ಯಮ್' ಇತ್ಯುಕ್ತಮ್ । ನ ಚ ಪದ್ಮಸ್ಥಸ್ಯ ಬ್ರಹ್ಮತ್ವಾಸಿದ್ಧಿಃ । ಶರೀರಪುಂಡರೀಕಯೋರ್ಬ್ರಹ್ಮ ಪ್ರತಿ ಪುರತ್ವವೇಶ್ಮತ್ವೋಕ್ತ್ಯಾ ಏವ ಅನ್ವೇಷ್ಟವ್ಯಸ್ಯ ಬ್ರಹ್ಮತ್ವಸಿದ್ಧೇಃ । ತಥಾ ಚ – 'ಪದ್ಮೇ ಬ್ರಹ್ಮಾಸ್ತಿ' ಇತ್ಯುಕ್ತೇಽಪಿ ತದ್ ಬ್ರಹ್ಮ ಕಿಂಪ್ರಕಾರಮ್? ಇತಿ ಭಾವೇನ ಪುನಃ 'ಕಿಂ ತದತ್ರ ವಿದ್ಯತೇ' ಇತಿ ಪೃಷ್ಟೇ ತತ್ಪ್ರಕಾರಜ್ಞಾಪನಾಯ 'ಯಾವಾನ್' ಇತ್ಯಾದ್ಯಾಹ ಗುರುಃ । ಅನೇನ ಚ – ಯದ್ ಬ್ರಹ್ಮಾನ್ವೇಷ್ಟವ್ಯತಯೋಕ್ತಂ ತದ್ ಬ್ರಹ್ಮ ಅಂತರ್ಹೃದಯೇ ಯಾವಾನ್ ಏಷ

ಪ್ರಸಿದ್ಧಾಕಾಶಃ ತಾವಾನ್ ಸರ್ವೋऽಪ್ಯಾಕಾಶೋ ವರ್ತತೇ । ತಸ್ಮಿಂಶ್ಚ ಆಕಾಶೇ ಪೃಥಿವ್ಯಾದಿಕಂ ಸರ್ವಂ ಸಮಾಶ್ರಿತಮ್ । ಅಪಹತಪಾಪ್ಮತ್ವಾದಿಗುಣಕಂ ಚ ತತ್ – ಇತ್ಯೇವಮಾಕಾಶಾದಿಸರ್ವಾಶ್ರಯತ್ವಾತ್ ಅಪಹತಪಾಪ್ಮತ್ವಾದಿಪ್ರಕಾರ ಉಕ್ತೋ ಭವತೀತಿ ಪ್ರಕಾರಾಂತರೇಣ ವ್ಯಾಖ್ಯಾತಮ್ ।

ನ್ಯಾಯವಿವರಣದಲ್ಲಿ ಮತ್ತು ಅದರ ವಿವರಣರೂಪವಾದ ಟೀಕೆಯಲ್ಲಿ – 'ತಸ್ಮಿನ್ ಯದಂತಃ' ಎಂಬ ವಾಕ್ಯದಲ್ಲಿ ಹೃತ್ಪದ್ಮದಲ್ಲಿ ಯಾವ ಆಕಾಶವಿದೆಯೋ ಅಲ್ಲಿರುವ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕು - ಎಂದು ಹೇಳಲಾಗಿದೆ. ಹೀಗೆ ಹೇಳಿದರೆ ಹೃತ್ಪದ್ಮಲ್ಲಿರುವವನು ಬ್ರಹ್ಮನೆಂದು ಸಿದ್ಧವಾಗಲಾರದು ಎಂದು ಶಂಕಿಸತಕ್ಕದ್ದಲ್ಲ. ಶರೀರ ಮತ್ತು ಪದ್ಮಗಳು ಬ್ರಹ್ಮನಿಗೆ ಕ್ರಮವಾಗಿ ಪುರವೂ ಸದನವೂ ಆಗಿರುವುದೆಂದು ಹೇಳಿರುವುದರಿಂದಲೇ ಜಿಜ್ಞಾಸ್ಯನು ಬ್ರಹ್ಮನೆಂದು ಸಿದ್ಧನಾಗುವನು. ತಥಾ ಚ – 'ಪದ್ಮದಲ್ಲಿ ಬ್ರಹ್ಮನಿರುವನು' ಎಂದು ಹೇಳಿದರೂ ಆ ಬ್ರಹ್ಮನು ಹೇಗಿರುವನು? ಎಂಬ ಭಾವದಿಂದ ಪುನಃ 'ಕಿಂ ತದತ್ರ ವಿದ್ಯತೇ' – ಅಲ್ಲಿರುವುದು ಏನು? ಎಂದು ಪ್ರಶ್ನೆ ಮಾಡಿದಾಗ; ಆ ಬ್ರಹ್ಮನ ವಿಶೇಷಣಗಳನ್ನು ತಿಳಿಸುವ ಸಲುವಾಗಿ ಗುರುವು 'ಯಾವಾನ್' ಇತ್ಯಾದಿಯಾಗಿ ಉತ್ತರಿಸುವನು. ಇದರಿಂದ – ಯಾವ ಬ್ರಹ್ಮವು ಜಿಜ್ಞಾಸ್ಯವೆಂದು ಹೇಳಲಾಯಿತೋ ಆ ಬ್ರಹ್ಮನು ಹೃದಯದ ಒಳಭಾಗದಲ್ಲಿ ಪ್ರಸಿದ್ಧವಾದ ಈ ಆಕಾಶವು ಎಷ್ಟಿರುವುದೋ ಅಷ್ಟೇ ಇರುವನು. ಆ ಆಕಾಶದಲ್ಲಿ ಪೃಥಿವ್ಯಾದಿ ಎಲ್ಲವೂ ಸಮಾಶ್ರಿತವಾಗಿದೆ. ಆ ಬ್ರಹ್ಮವು ಅಪಹತಪಾಪ್ಮತ್ವ ಮೊದಲಾದ ಗುಣಗಳನ್ನೂ ಹೊಂದಿದೆ ಎಂಬುದಾಗಿ ಆಕಾಶಾದಿಸರ್ವಾಶ್ರಯತ್ವ ಅಪಹತಪಾಪ್ಮತ್ವಾದಿಪ್ರಕಾರಗಳನ್ನು ಹೊಂದಿರುವವನೆಂದು ಹೇಳಿದಂತಾಗುವುದು ಎಂಬುದಾಗಿ ಇನ್ನೊಂದು ರೀತಿಯಿಂದ ವ್ಯಾಖ್ಯಾನ ಮಾಡಲ್ಪಟ್ಟಿದೆ.

ಭಾ.ದೀ. – ಪೂರ್ವಪಕ್ಷೀ ತು – 'ಹೃದಯ ಆಕಾಶೇ' ಇತಿ ಪದಂ ಸಪ್ತಮ್ಯಂತಂ ಕೃತ್ವಾ ದಹರಾಕಾಶಸ್ಥೋ ವ್ಯಾಪ್ತಾಕಾಶೋऽನ್ವೇಷ್ಟವ್ಯಃ ಇತಿ ವಾ ಆಕಾಶ ಇತಿ ಪ್ರಥಮಾಂತಂ ಕೃತ್ವಾ ಪ್ರಾಗುಕ್ತದಹರಭೂತಾಕಾಶಮನೂದ್ಯ 'ಯಾವಾನ್'

ಇತ್ಯನೇನ ಬಾಹ್ಯಾಕಾಶತುಲ್ಯತಯಾ ತಂ ವಿಶಿಷ್ಯ ಜಿಜ್ಞಾಸ್ಯತ್ವೇನ ತತ್ರ ದ್ಯಾವಾ-ಪೃಥಿವ್ಯಾದಿಕಮ್ ಉಚ್ಯತೇ – ಇತ್ಯಾಹ ।

ಪೂರ್ವಪಕ್ಷಿಯಾದರೋ 'ಹೃದಯ ಆಕಾಶೇ' ಎಂಬ ಪದವನ್ನು ಸಪ್ತಮ್ಯಂತವಾದ ಪದವೆಂದು ಭಾವಿಸಿ ದಹರಾಕಾಶದಲ್ಲಿರುವ ವ್ಯಾಪ್ತಾಕಾಶವು ಜಿಜ್ಞಾಸ್ಯವಾದದ್ದು ಎಂಬುದಾಗಿ,

ಅಥವಾ ಆಕಾಶಪದವು ಪ್ರಥಮಾವಿಭಕ್ತ್ಯಂತವೆಂದು ಮಾಡಿಕೊಂಡು ಹಿಂದೆ ಹೇಳಿದ ಅಲ್ಪವಾದ ಭೂತಾಕಾಶವನ್ನು ಅನುವಾದ ಮಾಡಿ 'ಯಾವಾನ್' ಎಂಬ ಆದರಿಂದ ಬಾಹ್ಯಾಕಾಶತುಲ್ಯವಾದುದೆಂದು ಅದನ್ನು ಹೇಳಿ, ಜಿಜ್ಞಾಸಾ ವಿಷಯವೆಂದು ಅಲ್ಲಿ ದ್ಯಾವಾಪೃಥಿವ್ಯಾದಿಗಳನ್ನು ಹೇಳಲಾಗಿದೆ - ಎಂದು ಹೇಳುವನು.

ಭಾ.ದೀ. – ನನು 'ಅಸ್ತು ; ಆಕಾಶಸ್ಯ ಸರ್ವಾಧಾರತಯಾ ಹೃತ್ಪದ್ಮಸ್ಥತ್ವಂ , ತಸ್ಯ ಚ ಆಕಾಶಸ್ಯ 'ಆಕಾಶಸ್ತಲ್ಲಿಂಗಾತ್' (ಬ್ರ.ಸೂ.೧.೧.೨೨) ಇತಿ ನ್ಯಾಯೇನ ವಿಷ್ಣುತ್ವೇನ ವಿಷ್ಣೋರೇವ ಹೃತ್ಪದ್ಮಸ್ಥತ್ವಂ ಸಿದ್ಧ್ಯತಿ' ಇತ್ಯತ ಆಹ – ಸ ಚೇತಿ ॥

ಅನು– ಆಕಾಶವು ಸರ್ವಾಧಾರವಾಗಿ ಹೃತ್ಪದ್ಮಸ್ಥವಾಗಿರಲಿ, ಆದರೆ ಆ ಆಕಾಶವು ''ಆಕಾಶಸ್ತಲ್ಲಿಂಗಾತ್'' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ವಿಷ್ಣುವೇ ಆಗಿರು-ವುದರಿಂದ ವಿಷ್ಣುವೇ ಹೃತ್ಪದ್ಮಸ್ಥನು ಎಂದು ಸಿದ್ಧವಾಗುವುದು ಎಂಬ ಶಂಕೆಗೋಸ್ಕರವಾಗಿ ಪೂರ್ವಪಕ್ಷಿಯು ''ಸ ಚ'' ಎಂದು ಹೇಳುವನು.

**ಭಾಷ್ಯಮ್ – ಸ ಚಾಕಾಶೋ ನ ವಿಷ್ಣುಃ । 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್' ಇತಿ ಶ್ರುತೇರಿತಿ ।**

ಅನು– 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿ-ಷ್ಠಿತಮ್' ಎಂದು ಶ್ರುತಿ ಇರುವುದರಿಂದ ಆ ಆಕಾಶವಾದರೋ ವಿಷ್ಣುವಲ್ಲ.

ಭಾ.ದೀ. – ಚಸ್ತ್ವರ್ಥಃ, ಪ್ರತಿಜ್ಞಾಸಮುಚ್ಚಯೇ ವಾ । ತಥಾ ಚ – 'ಯಃ ಸರ್ವಾಧಾರತಯಾ ಹೃತ್ಪದ್ಮಸ್ಥತ್ವೇನ ಚ ಶ್ರುತ್ಯುಕ್ತಃ, 'ಸ ಚಾಽಕಾಶೋ ನ ವಿಷ್ಣುಃ' ಭೂತಮೇವ ನ ತು ವಿಷ್ಣುಃ – ಇತ್ಯರ್ಥಃ।

ಕುತೋ ವಾ ನ ವಿಷ್ಣುಃ? ಇತ್ಯತ ಆಹ – ತಸ್ಯಾಂತ ಇತಿ ॥ 'ಸ ಚ' ಇತ್ಯನುಷಕ್ತಶ್ಚಶಬ್ದೋಽತ್ರ ಬುದ್ಧ್ಯಾ ವಿವಿಕ್ತಸುಷಿರಪದೇನ ಅನ್ವೀಯತೇಽವಧಾರಣೇ ಚಾಯಮ್ । ಶ್ರುತಿಸಮಾನೋಕ್ತ್ಯುಪಲಕ್ಷಣಂ ಚೈತತ್ । ತಥಾ ಚ – 'ತಸ್ಯಾಂತೇ' ಇತಿ ವಾಕ್ಯೇ 'ಸುಷಿರಪದಶ್ರುತೇಃ' ಸುಷಿರಶಬ್ದಶ್ರವಣಾತ್ ಸುಷಿರಸ್ಯ ಛಿದ್ರಾತ್ಮಕ-ಪ್ರಸಿದ್ಧಾಕಾಶಸ್ಯೈವ ಶ್ರುತೇಃ ಸರ್ವಾಧಾರತಯಾ ಹೃತ್ಪದ್ಮಸ್ಥತ್ವೋಕ್ತೇಃ ತತ್ಸಮಾಖ್ಯಾ-ನಾದಿತ್ಯರ್ಥಃ। ತಸ್ಯ 'ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಮ್' ಇತಿ ಪೂರ್ವವಾಕ್ಯೇ ಪ್ರಕೃತಸ್ಯ ಹೃತ್ಪದ್ಮಕೋಶಸ್ಯ 'ಅಂತೇ' ಅಂತರೇ ತನ್ಮಧ್ಯೇ ಸೂಕ್ಷ್ಮಂ 'ಸುಷಿರಂ' ಛಿದ್ರಮಸ್ತಿ, ತಸ್ಮಿನ್ 'ಸರ್ವಂ' ಜಗತ್ ಪ್ರತಿಷ್ಠಿತಮ್ ಇತಿ ತೈತ್ತಿರೀಯ-ಶ್ರುತ್ಯರ್ಥಃ।

ಇಲ್ಲಿ ಚಕಾರವು ತುಶಬ್ದದ ಅರ್ಥವನ್ನು ಹೇಳುವುದು. ಅಥವಾ ಪ್ರತಿಜ್ಞೆಯ ಸಮುಚ್ಚಯವನ್ನು ಹೇಳುವುದು. ತಥಾ ಚ – ಯಾರು ಸರ್ವಾಧಾರನೆಂದು ಹೃತ್ಪದ್ಮಸ್ಥನೆಂದೂ ಶ್ರುತಿಯಲ್ಲಿ ಹೇಳಲ್ಪಟ್ಟಿರುವನೋ 'ಸ ಚಾಽಕಾಶೋ ನ ವಿಷ್ಣುಃ' ಆ ಆಕಾಶವು ಭೂತಾಕಾಶವೇ ಹೊರತು ವಿಷ್ಣುವಲ್ಲ ಎಂದರ್ಥ.

ಆ ಆಕಾಶವು ವಿಷ್ಣುವೇಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ''ತಸ್ಯಾಂತಃ'' ಎಂಬ ವಾಕ್ಯವು ಹೊರಟಿದೆ. 'ಸ ಚ' ಎಂಬಲ್ಲಿಂದ ಅನುವೃತ್ತಿಯನ್ನು ಪಡೆದಿರುವ ಚಶಬ್ದವು ಇಲ್ಲಿ ಮನಸ್ಸಿನಿಂದಲೇ ಬೇರ್ಪಡಿಸಲಾದ ಸುಷಿರಪದದಿಂದ ಅನ್ವಯವನ್ನು ಹೊಂದು-ವುದು. ಮತ್ತು ಅವಧಾರಣಾರ್ಥವನ್ನು ಹೇಳುವುದು. 'ತಸ್ಯಾಂತೇ' ಎಂಬ ಶ್ರುತಿಯು ಸಮಾನಾರ್ಥಕವಾದ ಬೇರೆ ವಾಕ್ಯಗಳಿಗೂ ಉಪಲಕ್ಷಕವಾಗಿದೆ. ತಥಾ ಚ 'ತಸ್ಯಾಂತೇ' ಎಂಬ ವಾಕ್ಯದಲ್ಲಿ 'ಸುಷಿರಪದಶ್ರುತೇಃ' ಸುಷಿರಶಬ್ದವು ಕೇಳಿ ಬರುವುದರಿಂದ - ಸುಷಿರ ಅಂದರೆ ಛಿದ್ರರೂಪವಾದ ಪ್ರಸಿದ್ಧಾಕಾಶವೇ ಶ್ರುತವಾಗಿರುವುದರಿಂದ- ಸರ್ವಾಧಾರ-

ವೆಂದು ಹೃತ್ಪದ್ಮಸ್ಥವೆಂದು ಹೇಳಲ್ಪಟ್ಟಿರುವುದರಿಂದ ಅಂತಹ ಸಮಾನಾರ್ಥಕವಾದ ಶ್ರುತಿ ಇರುವುದರಿಂದ ಎಂದು ಅರ್ಥ. 'ತಸ್ಯ' ಅಂದರೆ 'ಪದ್ಮಕೋಶ....' ಎಂಬ ಹಿಂದಿನ ವಾಕ್ಯದಲ್ಲಿ ಪ್ರಕೃತವಾಗಿರುವ (ಪ್ರಸ್ತುತವಾಗಿರುವ) ಹೃತ್ಪದ್ಮಕೋಶದ 'ಅಂತೇ' ಒಳಗೆ, ಅದರ ಮಧ್ಯದಲ್ಲಿ 'ಸೂಕ್ಷ್ಮಂ ಸುಷಿರಂ' – ಸೂಕ್ಷ್ಮವಾದ ಛಿದ್ರವು ಇರುವುದು. 'ತಸ್ಮಿನ್ ಸರ್ವಂ ಪ್ರತಿಷ್ಠಿತಮ್' – ಅಲ್ಲಿ ಸಮಸ್ತ ಜಗತ್ತೂ ಆಶ್ರಿತವಾಗಿರುವುದು ಎಂದು ತೈತ್ತಿರೀಯಶ್ರುತಿಯ ಅರ್ಥ.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ಕೊಟ್ಟು ''ಅತಃ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತ ಆಹ – ॥ ಓಂ ದಹರ ಉತ್ತರೇಭ್ಯಃ ಓಂ ॥ ೧೪ ॥**

**'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಸ್ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಇತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯೋ ದಹರೇ ವಿಷ್ಣುರೇವ ।**

ಈ ಪೂರ್ವಪಕ್ಷದ ನಿರಾಕರಣೆಗಾಗಿ ಓಂ ದಹರ ಉತ್ತರೇಭ್ಯಃ ಓಂ ಎಂಬ ಸೂತ್ರವು ಪ್ರವೃತ್ತವಾಗಿದೆ. ''ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯ-ಕಾಮಸ್ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ'' ಇತ್ಯಾದಿ -ಯಾಗಿ ಮುಂದೆ ಶ್ರುತವಾಗಿರುವ ಗುಣಗಳಿಂದ ಆ ದಹರಾಕಾಶ-ದಲ್ಲಿ ಇರುವವನು ವಿಷ್ಣುವೇ ಆಗಿರುವನು.

ಭಾ.ದೀ.– 'ಇತ್ಯಾದಿಭ್ಯಃ' 'ಇತ್ಯಾದಿರೂಪೇಭ್ಯಃ 'ಉತ್ತರೇಭ್ಯಃ' ವಿಷಯ-ವಾಕ್ಯಾಂತರಭಾವಿಭ್ಯಃ; 'ಶಬ್ದೇಭ್ಯಃ ಉಕ್ತೇಭ್ಯಃ' ಇತಿ ಶೇಷಃ । 'ಇತ್ಯಾದ್ಯುತ್ತರ-

ವಾಕ್ಯೇಭ್ಯಃ' ಇತಿ ಪರ್ಯವಸಿತಾರ್ಥಃ । ಯದ್ವಾ 'ಗುಣೇಭ್ಯಃ' ಗುಣವಚನೇಭ್ಯಃ ಇತ್ಯರ್ಥಃ । ಹೇತ್ವಸಿದ್ಧಿಪರಿಹಾರಾಯ ಶ್ರುತ್ಯುದಾಹರಣಮ್ । 'ಆದಿ'ಪದೇನ 'ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಇತ್ಯಾದಿಕಂ ಗೃಹ್ಯತೇ । 'ಗುಣೇಭ್ಯಃ' ಇತ್ಯನೇನ ಉತ್ತರಪದಮುತ್ತರತ್ರ ಶ್ರುತಾನೇಕಶಬ್ದವಾಚ್ಯಗುಣೋಪಲಕ್ಷಕಮಿತ್ಯುಕ್ತಂ ಭವತಿ । 'ದಹರೇ' 'ಹೃತ್ಪದ್ಮಗತಾಲ್ಪಾಕಾಶೇ' ಇತ್ಯನೇನ ಸೂತ್ರೇ 'ದಹರೇ' ಇತಿ ಸಪ್ತಮ್ಯಂತಂ ಪದಂ, ನ ಪರಮತ ಇವ ಪ್ರಥಮಾಂತಮ್ ಇತ್ಯುಕ್ತಂ ಭವತಿ । 'ಸ್ಥಿತಃ ಅನ್ವೇಷ್ಟವ್ಯತಯೋಕ್ತಃ' ಇತಿ ಶೇಷಃ । ಸಮನ್ವಯಸೂತ್ರಾದನುವೃತ್ತಸ್ಯ ವಿಧೇಯಪರಸ್ಯ 'ತತ್ತು' ಇತ್ಯಸ್ಯಾರ್ಥಃ 'ವಿಷ್ಣುರೇವ' ಇತಿ ।

ಅನೇನ – 'ಯಃ' ಇತಿ ದಹರವಾಕ್ಯಾದುತ್ತರವಾಕ್ಯೇ ಶ್ರುತೇಭ್ಯೋ ಗುಣೇಭ್ಯೋ 'ದಹರೇ' ವಿಜಿಜ್ಞಾಸ್ಯತಯೋಕ್ತಃ 'ತತ್ತು' ವಿಷ್ಣುರೇವ ನ ಭೂತಾಕಾಶಾದಿಃ – ಇತಿ ಸೂತ್ರಾರ್ಥ ಉಕ್ತೋ ಭವತಿ ।

''ಇತ್ಯಾದಿಭ್ಯಃ'' - ಇತ್ಯಾದಿಯಾದ, 'ಉತ್ತರೇಭ್ಯಃ' - ವಿಷಯವಾಕ್ಯದ ಅನಂತರ ಇರುವ, ಇಲ್ಲಿ 'ಶಬ್ದೇಭ್ಯಃ ಉಕ್ತೇಭ್ಯಃ' ಎಂಬ ಪದಗಳು ಶೇಷವಾಗಿವೆ. 'ಇತ್ಯಾದಿ ಮುಂದಿನ ವಾಕ್ಯಗಳಿಂದ' ಎಂದು ಒಟ್ಟು ಸಾರವಾಗಿದೆ. ಅಥವಾ 'ಗುಣೇಭ್ಯಃ' - ಗುಣಗಳನ್ನು ಹೇಳುವ ವಚನಗಳಿಂದ ಎಂದು ಅರ್ಥ. ಮುಂದಿನ ವಾಕ್ಯಗಳಲ್ಲಿ ಈ ಗುಣಗಳನ್ನು ಹೇಳದಿರುವುದರಿಂದ ಹೇತುವು ಅಸಿದ್ಧವಾಗಿದೆ ಎಂಬ ಶಂಕೆಯ ಪರಿಹಾರಕ್ಕಾಗಿ ಭಾಷ್ಯದಲ್ಲಿ ಶ್ರುತಿಯನ್ನು ಉದಾಹರಿಸಲಾಗಿದೆ. 'ಇತ್ಯಾದಿಭ್ಯಃ' ಎಂಬಲ್ಲಿ ಆದಿಪದದಿಂದ 'ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಭಾಷ್ಯದಲ್ಲಿ 'ಗುಣೇಭ್ಯಃ' ಎಂಬ ಪದದಿಂದ ಸೂತ್ರದ 'ಉತ್ತರ'ಪದವು ಮುಂದೆ ಶ್ರುತಿಯಲ್ಲಿ ಕೇಳಿಬರುವ ಅನೇಕ ಶಬ್ದಗಳಿಂದ ಉಕ್ತವಾಗಿರುವ ಗುಣಗಳನ್ನು ಲಕ್ಷಣಾವೃತ್ತಿಯಿಂದ ಹೇಳುತ್ತದೆ ಎಂದು ತಿಳಿಸಿದಂತಾಗುವುದು. ಭಾಷ್ಯದಲ್ಲಿ 'ದಹರೇ' - 'ಹೃತ್ಪದ್ಮದಲ್ಲಿರುವ

ಅಲ್ಪಾಕಾಶದಲ್ಲಿ' ಎಂಬ ಪದದಿಂದ ಸೂತ್ರದಲ್ಲಿ 'ದಹರೇ' ಎಂಬ ಸಪ್ತಮೀವಿಭಕ್ತ್ಯಂತ-ವಾದ ಪದವಿರುವುದೇ ಹೊರತು ಪರಮತದಲ್ಲಿ ಹೇಳುವಂತೆ ಪ್ರಥಮಾವಿಭಕ್ತ್ಯಂತವಾದ ಪದವಿಲ್ಲ ಎಂದು ಹೇಳಿದಂತಾಗುವುದು. 'ಸ್ಥಿತಃ, ಅನ್ವೇಷ್ಟವ್ಯತಯಾ, ಉಕ್ತಃ' - ಎಂಬ ಪದಗಳು ಇಲ್ಲಿ ಶೇಷವಾಗಿವೆ. ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ ವಿಧೇಯವೆಂದು ಹೇಳುವ ತಾತ್ಪರ್ಯವುಳ್ಳ 'ತತ್ ತು' ಎಂಬ ಪದಗಳ ಅರ್ಥವನ್ನು 'ವಿಷ್ಣೋರೇವ' ಎಂದು ಹೇಳಲಾಗಿದೆ.

ಇದರಿಂದ – 'ಯಃ' ಎಂಬ ದಹರವಾಕ್ಯಕ್ಕಿಂತ ಮುಂದಿರುವ ವಾಕ್ಯದಲ್ಲಿ ಶ್ರುತವಾಗಿರುವ ಗುಣಗಳಿಂದ 'ದಹರೇ' ಅಲ್ಪಾಕಾಶದಲ್ಲಿ ಇರುವ ವಿಜಿಜ್ಞಾಸ್ಯನೆಂದು ಸಿದ್ಧನಾಗಿರುವವನು 'ತತ್ ತು' ವಿಷ್ಣುವೇ ಹೊರತು ಭೂತಾಕಾಶ ಮೊದಲಾದವುಗಳಲ್ಲ - ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಯೋ ಹೃತ್ಪದ್ಮಾಕಾಶಗತಃ ಪರಮಾತ್ಮಾ 'ನ ವಧೇನಾಸ್ಯ ಹನ್ಯತೇ' (ಛಾಂ.೮.೧.೫) ಇತಿ ಪ್ರಾಕ್ ಶರೀರಸ್ಯ ನಾಶೇನ ಅವಧ್ಯೇನತ್ವೋಕ್ತಃ ಸಃ 'ಅಪಹತಪಾಪ್ಮಾ' ನಿತ್ಯಮೇವ ಸ್ವತೋಽಪಹತಪಾಪ್ಮಾ ಪಾಪಾತ್ಯಂತಾಭಾವವಾನ್ ಇತಿ ಯಾವತ್ । ಅತ ಏವ ನ ತತ್ಕಾರ್ಯಂ ಜರಾದಿಕಮಸ್ಯ ಇತ್ಯುಚ್ಯತೇ – ವಿಜರ ಇತ್ಯಾದಿನಾ ॥ 'ಅವಿಜಿಘತ್ಸಃ' ಬುಭುಕ್ಷಾರಹಿತಃ । 'ಅಪಿಪಾಸಃ' ಪಾನೇಚ್ಛಾರಹಿತ ಇತಿ । 'ಬುಭುಕ್ಷಾದಿನಾ ಪೀಡಾಭಾವ ಉಚ್ಯತೇ' ಇತಿ ಜ್ಞಾನಪಾದೀಯಟೀಕೋ-ಕ್ತೇರ್ನ ಅದನಪಾನೇಚ್ಛಾಭಾವೋಽಭಿಧೀಯತೇ, ಪ್ರಮಾಣಬಾಧಿತತ್ವಾತ್ । ಕಿಂತು ತತ್ಪೀಡಾಭಾವಃ । ಅತ್ರ ಹೇತುಃ – ಸತ್ಯಕಾಮ ಇತಿ ॥ 'ತಸ್ಯ ಯದಿಷ್ಟಂ ತತ್ ಸ್ವತ ಏವ ಭವೇತ್' - ಇತಿ ಸತ್ಯಕಾಮಃ । ತತ್ರಾಪಿ ಹೇತುಃ – 'ಸತ್ಯಸಂಕಲ್ಪಃ' ಅಪ್ರತಿಹತ-ಸಂಕಲ್ಪಃ - ಇತಿ । ಯ ಏವಂಭೂತಃ ಸೋಽನ್ವೇಷ್ಟವ್ಯಃ ಇತಿಶ್ರುತ್ಯರ್ಥಃ ।

ಅನು– ಯಃ - ಹೃತ್ಪದ್ಮಗತ ಆಕಾಶದಲ್ಲಿರುವ ಯಾವ ಪರಮಾತ್ಮನು, 'ನ ವಧೇನಾಸ್ಯ ಹನ್ಯತೇ' ಎಂದು ಹಿಂದೆ ಶರೀರದ ನಾಶವನ್ನು ಹೊಂದುವವನಲ್ಲ ಎಂದು ಹೇಳಲ್ಪಟ್ಟಿದ್ದಾನೋ 'ಸಃ' - ಅವನು 'ಅಪಹತಪಾಪ್ಮಾ' ನಿತ್ಯವೂ ಸ್ವಾಭಾವಿಕವಾಗಿ

'ಅಪಹತಪಾಪ್ಮಾ' ಅಂದರೆ ಪಾಪಾತ್ಯಂತಾಭಾವವುಳ್ಳವನು ಎಂದು ಅಭಿಪ್ರಾಯ. ಆದ್ದರಿಂದಲೇ ಅವನಿಗೆ ಪಾಪದ ಕಾರ್ಯವಾದ ಮುಪ್ಪು ಮೊದಲಾದವುಗಳು ಇಲ್ಲವೆಂದು 'ವಿಜರ' ಇತ್ಯಾದಿ ವಾಕ್ಯದಿಂದ ಹೇಳಲಾಗಿದೆ. 'ಅವಿಜಿಘತ್ಸಃ' - ಹಸಿವೆ-ಯಿಲ್ಲದವನು. 'ಅಪಿಪಾಸಃ' - ಪಾನ ಮಾಡಬೇಕೆಂಬ ಇಚ್ಛೆ ಇಲ್ಲದವನು. 'ಬುಭುಕ್ಷಾದಿನಾ ಪೀಡಾಭಾವಃ ಉಚ್ಯತೇ' ಎಂದು ಜ್ಞಾನಪಾದದ ತತ್ವಪ್ರಕಾಶಿಕೆಯಲ್ಲಿ ಹೇಳಿರುವುದರಿಂದ ತಿನ್ನುವ ಅಥವಾ ಕುಡಿಯುವ ಇಚ್ಛೆಯಿಲ್ಲದಿರುವುದು ಇಲ್ಲಿ ಹೇಳಲ್ಪಟ್ಟಿಲ್ಲ. ಏಕೆಂದರೆ, ಹಾಗೆ ಇಚ್ಛೆಯಿಲ್ಲದೇ ಇರುವುದು ಪ್ರಮಾಣಬಾಧಿತವಾಗಿದೆ. ಆದ್ದರಿಂದ ಹಸಿವೆ ಬಾಯಾರಿಕೆ ಮೊದಲಾದವುಗಳಿಂದ ಉಂಟಾಗುವ ಪೀಡೆಯಿಲ್ಲ-ದವನು ಎಂದು ಈ ಪದಗಳ ಅರ್ಥ. ಅಂತಹ ಪೀಡೆ ಇಲ್ಲದೇ ಇರುವುದಕ್ಕೆ ಹೇತುವನ್ನು ''ಸತ್ಯಕಾಮಃ'' ಎಂಬ ಪದದಿಂದ ಹೇಳಲಾಗಿದೆ. ಅವನಿಗೆ ಯಾವುದು ಇಷ್ಟವೋ ಅದು ಅವನಿಗೆ ಸ್ವಾಭಾವಿಕವಾಗಿಯೇ ಇರುವುದು ಎಂದು ಸತ್ಯಕಾಮ ಪದದ ಅರ್ಥ. ಅವನು ಸತ್ಯಕಾಮನೆಂಬ ವಿಷಯದಲ್ಲೂ ಹೇತುವನ್ನು ''ಸತ್ಯಸಂಕಲ್ಪಃ'' ಎಂಬ ಪದದಿಂದ ಹೇಳಲಾಗಿದೆ. ಸಂಕಲ್ಪಕ್ಕೆ ಯಾವುದೇ ಪ್ರತಿರೋಧವಿಲ್ಲದಿರುವವನು ಎಂದು ಅರ್ಥ. ಯಾರು ಹೀಗಿರುವನೋ ಅವನನ್ನು ಜಿಜ್ಞಾಸೆ ಮಾಡಬೇಕು – ಎಂದು ಶ್ರುತಿಯ ಅರ್ಥ.

ಭಾ.ದೀ. – ಅಪಹತಪಾಪ್ಮತ್ವಾದಿಕಂ ಕಥಂ ವಿಷ್ಣುತ್ವನಿಶ್ಚಾಯಕಂ, ತದ್ಗತತ್ವೇನ ಅಸಿದ್ಧತ್ವಾತ್ ಇತ್ಯತ ಆಹ – ಯ ಇತಿ ॥

ಅಪಹತಪಾಪ್ಮತ್ವ ಮೊದಲಾದವುಗಳು ದಹರಾಕಾಶದಲ್ಲಿರುವವನು ವಿಷ್ಣುವೆಂದೇ ನಿಶ್ಚಯಿಸಲು ಹೇಗೆ ಸಾಧಕವಾಗುವವು? ಏಕೆಂದರೆ ಆ ಧರ್ಮಗಳು ಅವನಲ್ಲಿರು-ವುದೆಂದು ಸಿದ್ಧವಾಗಿಲ್ಲ ಎಂಬ ಶಂಕೆಗೆ ಉತ್ತರವಾಗಿ ''ಯಃ'' ಇತ್ಯಾದಿ ಭಾಷ್ಯವು ಹೊರಟಿದೆ.

**ಭಾಷ್ಯಮ್ – 'ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ', 'ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ' ಇತ್ಯಾದಿನಾ ವಿಷ್ಣೋರೇವ ಹಿ ತೇ ಗುಣಾಃ ।**

'ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯು-ಮತ್ಯೇತಿ', 'ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ' ಇತ್ಯಾದಿ ಶ್ರುತಿಗಳಿಂದ ಆ ಗುಣಗಳು ವಿಷ್ಣುವಿನ ಗುಣಗಳೇ ಆಗಿವೆ.

ಭಾ.ದೀ. – ಬೃಹದಾರಣ್ಯಕಶ್ರುತಿರಿಯಮ್ । ಯಃ 'ಅಶನಾಯಾ' - ಅಶನೇಚ್ಛಾ। 'ಪಿಪಾಸಾ' - ಪಾನೇಚ್ಛಾ। ತೇ 'ಅತ್ಯೇತಿ' ಅತಿಕ್ರಮ್ಯ ವರ್ತತೇ। ಯಶ್ಚ 'ಶೋಕಂ'- ದುಃಖಂ 'ಮೋಹಂ' - ಮೂರ್ಛಾಂ 'ಜರಾಂ' -ಮರಣಂ ಚಾಪಿ ಅತ್ಯೇತೀತ್ಯರ್ಥಃ। ಅತ್ರತ್ಯ ಅಸ್ಯ ಯಚ್ಛಬ್ದಸ್ಯ 'ತಮಾತ್ಮಾನಂ ವಿದಿತ್ವಾ' ಇತಿ ತಚ್ಛ್ರುತಿಸ್ಥ-ತಚ್ಛಬ್ದೇನ ಅನ್ವಯಃ।

'ಸ ಏಷಃ' ಇತಿ ಛಂದೋಗಶ್ರುತಿಃ । 'ಸ ಏಷಃ' ಪರಮಾತ್ಮಾ 'ಪಾಪ್ಮಭ್ಯಃ' ಪಾಪೇಭ್ಯಃ 'ಉದಿತಃ' ನಿತ್ಯಂ ಸ್ವತ ಏವೋದ್ಗತಃ ಪಾಪರಹಿತ ಇತ್ಯರ್ಥಃ।

'ಇತ್ಯಾದಿನಾ' ವಾಕ್ಯೇನ ಆದಿಶಬ್ದೇನ ಸತ್ಯಕಾಮತ್ವಾದಿಗುಣಾಂತರಬೋಧಕ-ವಾಕ್ಯಾನಿ ಗೃಹ್ಯಂತೇ । 'ಹಿ'ಶಬ್ದೋ ಯತ ಇತ್ಯರ್ಥೇ । ತೇ 'ಅಪಹತಪಾಪ್ಮತ್ವಾದಿ-ರೂಪೋತ್ತರವಾಕ್ಯೋಕ್ತಾಃ । 'ಸಿದ್ಧಾಃ' ಇತಿ ಶೇಷಃ । 'ತಸ್ಮಾನ್ನ ತೇಷಾಂ ವಿಷ್ಣು-ಲಿಂಗತ್ವಾನಿಶ್ಚಯಃ' ಇತಿ ವಾಕ್ಯಶೇಷೇಣ ಅಸ್ಯಾನ್ವಯಃ । ಅನ್ಯತ್ರ ಪಾಪಾದ್ಯಭಾವಸ್ಯ ಕಥಂಚಿದ್ ಯೋಗೇಽಪಿ ಸರ್ವಥಾ ಸತ್ಯಕಾಮತ್ವಾದಿಕಂ ನ ಯುಜ್ಯತ ಇತಿ ಜ್ಞಾಪನಾಯ ಆದಿಶಬ್ದಬಹುವಚನಯೋಃ ಪ್ರಯೋಗಃ।

''ಯಃ'' ಎಂಬ ಶ್ರುತಿಯು ಬೃಹದಾರಣ್ಯಕಶ್ರುತಿಯಾಗಿದೆ. ಯಃ 'ಅಶನಾಯಾ ಪಿಪಾಸೇ' ಅಂದರೆ ತಿನ್ನುವ ಇಚ್ಛೆ, ಪಾನ ಮಾಡುವ ಇಚ್ಛೆ ಇವುಗಳನ್ನು 'ಅತ್ಯೇತಿ' ಅತಿಕ್ರಮಿಸಿ ಇರುವನೋ. ಮತ್ತು ಯಾರು 'ಶೋಕಂ ಮೋಹಂ ಜರಾಂ' ದುಃಖ, ಮೂರ್ಛೆ, ಮರಣ ಇವುಗಳನ್ನು ಅತಿಕ್ರಮಿಸಿ ಇರುವನೋ - ಎಂದು ಅರ್ಥ. ಇಲ್ಲಿರುವ 'ಯತ್'ಶಬ್ದಕ್ಕೆ 'ತಮಾತ್ಮಾನಂ ವಿದಿತ್ವಾ' ಎಂದು ಅದೇ ಶ್ರುತಿಯಲ್ಲಿರುವ ತಚ್ಛಬ್ದದೊಂದಿಗೆ ಅನ್ವಯವಾಗುವುದು.

'ಸ ಏಷಃ' ಎಂಬ ವಾಕ್ಯವು ಛಂದೋಗಶ್ರುತಿಯಾಗಿದೆ. 'ಸ ಏಷಃ' - ಆ ಪರಮಾತ್ಮನು, 'ಪಾಪ್ಮಭ್ಯಃ' - ಪಾಪಗಳಿಂದ , ಉದಿತಃ = ಎಲ್ಲ ಕಾಲಗಳಲ್ಲೂ ಸ್ವಾಭಾವಿಕವಾಗಿಯೇ ಉದ್ಗತನಾಗಿದ್ದಾನೆ ಎಂದರೆ ಪಾಪರಹಿತನಾಗಿದ್ದಾನೆ ಎಂದರ್ಥ.

ಭಾಷ್ಯದಲ್ಲಿ 'ಇತ್ಯಾದಿನಾ' ಎಂಬಲ್ಲಿರುವ ಆದಿಶಬ್ದದಿಂದ ಸತ್ಯಕಾಮತ್ವ ಮೊದಲಾದ ಇತರ ಗುಣಗಳನ್ನು ಬೋಧಿಸುವ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಭಾಷ್ಯದಲ್ಲಿರುವ 'ಹಿ'ಶಬ್ದವು 'ಯತಃ' ಎಂಬ ಅರ್ಥವನ್ನು ಹೇಳುವುದು. 'ತೇ' ಅಂದರೆ 'ಅಪಹತಪಾಪ್ಮತ್ವ ಮೊದಲಾದ ಮುಂದಿನ ವಾಕ್ಯದಲ್ಲಿ ಹೇಳಿರುವ' ಎಂದು ಅರ್ಥ. 'ಸಿದ್ಧಾಃ' ಎಂಬ ಪದವು ಇಲ್ಲಿ ಶೇಷವಾಗಿದೆ. 'ತಸ್ಮಾತ್ ನ ತೇಷಾಂ ವಿಷ್ಣುಲಿಂಗತ್ವಾ-ನಿಶ್ಚಯಃ' – ಆದ್ದರಿಂದ ಅವುಗಳು ವಿಷ್ಣುಲಿಂಗಗಳು ಎಂಬ ನಿಶ್ಚಯವಿಲ್ಲ ಎಂದು ಹೇಳಲಾಗದು - ಎಂಬ ವಾಕ್ಯಶೇಷದೊಂದಿಗೆ ಭಾಷ್ಯದ ವಾಕ್ಯಕ್ಕೆ ಅನ್ವಯವಾಗುವುದು. ವಿಷ್ಣುಭಿನ್ನರಲ್ಲಿ ಪಾಪಾದಿಗಳ ಅಭಾವವು ಕಥಂಚಿತ್ ಇರುವುದಾದರೂ ಸತ್ಯಕಾಮತ್ವ ಮೊದಲಾದ ಗುಣಗಳು ಸರ್ವಥಾ ಇರಲಾರವು ಎಂದು ತಿಳಿಸಲು ಇತ್ಯಾದಿನಾ ಎಂಬಲ್ಲಿ ಆದಿಶಬ್ದವನ್ನು ಗುಣಾಃ ಎಂಬಲ್ಲಿ ಬಹುವಚನವನ್ನು ಪ್ರಯೋಗಿಸಲಾಗಿದೆ.

ಭಾ.ದೀ. – ತಥಾಽಪಿ ನೈತೇ ಗುಣಾ ವಿಷ್ಣೋರೇವ, ರಮಾದಿಷ್ವಪಿ ಸಂಭವಾತ್ ಇತ್ಯತ ಆಹ – ನಿತ್ಯೇತಿ ॥

ಆದರೂ ಈ ಗುಣಗಳು ವಿಷ್ಣುವಿನಲ್ಲಿ ಮಾತ್ರ ಸಂಬಂಧಪಟ್ಟವವೆಂದು ಹೇಳಲಾಗದು. ಏಕೆಂದರೆ, ರಮಾದಿಗಳಲ್ಲೂ ಕೂಡ ಈ ಗುಣಗಳು ಇರಲು ಸಾಧ್ಯವಿದೆ ಎಂಬ ಶಂಕೆಗೆ ಉತ್ತರವಾಗಿ – ''ನಿತ್ಯ'' ಎಂದು ಹೇಳಲಾಗಿದೆ.

**ಭಾಷ್ಯಮ್ - 'ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ ।**
**ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ' ಇತಿ ಪಾದ್ಮೇ ।**
**ಸಾಪೇಕ್ಷನಿರಪೇಕ್ಷಯೋಶ್ಚ ನಿರಪೇಕ್ಷಂ ಸ್ವೀಕರ್ತವ್ಯಮ್ ॥**

''ಇನ್ನೊಬ್ಬರ ಅಪೇಕ್ಷೆಯಿಲ್ಲದೇ ಹಸಿವು ಮೊದಲಾದ ದೋಷ-

ಗಳಿಂದ ಸರ್ವಕಾಲದಲ್ಲೂ ರಹಿತನಾದವನು ಶ್ರೀಹರಿಯೊಬ್ಬನೇ ಮತ್ತೊಬ್ಬರಿಲ್ಲ; ಶ್ರೀಹರಿಯಿಂದ ಭಿನ್ನರು ಹಸಿವು ನೀರಡಿಕೆ ಮೊದ -ಲಾದವುಗಳನ್ನು ಅವನ ಅನುಗ್ರಹದಿಂದ ಮಾತ್ರವೇ ದಾಟ-ಬಲ್ಲರು'' ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ಅನ್ಯಾಧೀನ ಹಾಗೂ ಅನನ್ಯಾನಧೀನವಾದ ಧರ್ಮಗಳ ಮಧ್ಯೆ ಅನನ್ಯಾನಧೀನವಾದ ಧರ್ಮಗಳನ್ನೇ ಸ್ವೀಕರಿಸಬೇಕು.

ಭಾ.ದೀ. – 'ಸ್ವತಃ' ಅನ್ಯಾನಪೇಕ್ಷಯಾ ನಿತ್ಯಂ ತೀರ್ಣಾ ಅಶನಾದಯೋ ಯೇನ ಸ ಹರಿರೇಕ ಏವ, ನಾನ್ಯೋऽಸ್ತಿ । ಹರೇರನ್ಯೇ ರಮಾಬ್ರಹ್ಮಾದಯಸ್ತು 'ಅಶನಾಯಾದಿಕಾನ್' ಅಶನಪಾನೇಚ್ಛಾಶೋಕಾದಿದೋಷಾನ್ 'ತತ್ಪ್ರಸಾದಾತ್' ತಸ್ಯ ಹರೇರನುಗ್ರಹಾದೇವ 'ತರಂತಿ' ಅತಿಯಂತಿ, ನ ಸ್ವತ ಇತ್ಯರ್ಥಃ । 'ಹಿ'ಶಬ್ದಃ ಪ್ರಸಿದ್ಧೌ । 'ಪಾದ್ಮೇ' 'ಉಕ್ತಮ್' ಇತಿ ಶೇಷಃ । ಅತಃ 'ನಿರಪೇಕ್ಷಗುಣಾನಾಮ್ ಅನ್ಯತ್ರಾಭಾವಾದ್ ವಿಷ್ಣೋರೇವ' ಇತ್ಯುಕ್ತಮ್ – ಇತಿ ಭಾವಃ ।

ನನು ರಮಾದಿಷು ಅಪಹತಪಾಪ್ಮತ್ವಾದೀನಾಮ್ ಅನ್ಯಾನಧೀನಾನಾಮ-ಭಾವೇऽಪಿ ಯಥಾ ಕಥಂಚಿತ್ ಸತ್ತ್ವಾತ್ ಅನ್ಯಗತೈಸ್ತೈಃ ಕಥಂ ವಿಷ್ಣುತ್ವನಿಶ್ಚಯಃ? ಇತ್ಯತ ಆಹ – ಸಾಪೇಕ್ಷೇತಿ ॥ 'ಸಾಪೇಕ್ಷಮ್' ಅನ್ಯಾಧೀನಂ, 'ನಿರಪೇಕ್ಷಂ' – ಅನ್ಯಾನಧೀನಂ ತಯೋರ್ಮಧ್ಯೇ – ಇತ್ಯರ್ಥಃ । ಚೋऽವಧಾರಣೇ, ನಿರಪೇಕ್ಷ-ಮೇವ ಇತಿ ಸಂಬಧ್ಯತೇ । ಅಪಹತಪಾಪ್ಮತ್ವಾದಿಕಮ್' ಇತಿ ವಿಶೇಷ್ಯಂ ಪ್ರಕೃತತ್ವಾ-ಲ್ಲಭ್ಯತೇ । 'ಸ್ವೀಕರ್ತವ್ಯಂ' 'ಲಿಂಗತ್ವೇನ' ಇತಿ ಶೇಷಃ । ತಥಾ ಚ – ವಿವಕ್ಷಿತಲಿಂಗಸ್ಯ ಅನ್ಯತ್ರಾಭಾವಾತ್ ತೇನ ವಿಷ್ಣುತ್ವನಿಶ್ಚಯೋ ಭವತ್ಯೇವ – ಇತಿ ಭಾವಃ ।

'ಸ್ವತಃ' - ಇನ್ನೊಬ್ಬರ ಅಪೇಕ್ಷೆಯಿಲ್ಲದೇ ಸರ್ವಕಾಲದಲ್ಲೂ ಹಸಿವು, ನೀರಡಿಕೆ ಮೊದಲಾದವುಗಳನ್ನು ದಾಟಿದವನು ಹರಿಯೊಬ್ಬನೇ ಮತ್ತೊಬ್ಬರಿಲ್ಲ. ಶ್ರೀಹರಿಗಿಂತ ಭಿನ್ನರಾದ ರಮಾಬ್ರಹ್ಮಾದಿಗಳು 'ಅಶನಾಯಾದಿಕಾನ್' - ತಿನ್ನುವ ಇಚ್ಛೆ, ಪಾನಮಾಡುವ ಇಚ್ಛೆ, ಶೋಕ ಮೊದಲಾದ ದೋಷಗಳನ್ನು, 'ತತ್ಪ್ರಸಾದಾತ್' ಆ

ಹರಿಯ ಅನುಗ್ರಹದಿಂದಲೇ 'ತರಂತಿ' ದಾಟುವರು ಹೊರತು ಸ್ವತಃ - ದಾಟಲಾರರು ಎಂದು ಅರ್ಥ. 'ತರಂತಿ ಹಿ' ಎಂಬಲ್ಲಿ ಹಿಶಬ್ದವು ಪ್ರಸಿದ್ಧಿಯನ್ನು ಹೇಳುವುದು. 'ಪಾದ್ಮೇ' ಎಂಬ ಪದದ ನಂತರ 'ಉಕ್ತಮ್' ಎಂಬ ಪದವು ಶೇಷವಾಗಿದೆ. ಆದ್ದರಿಂದ ಇತರರಿಗೆ ಅಧೀನವಲ್ಲದ ಗುಣಗಳು ಬೇರೆಡೆಯಲ್ಲಿ ಇಲ್ಲದಿರುವುದರಿಂದ 'ವಿಷ್ಣೋರೇವ' ಎಂದು ಹೇಳಲಾಗಿದೆ ಎಂದು ಭಾವ.

ರಮಾದಿ ದೇವತೆಗಳಲ್ಲಿ ಅನ್ಯಾಧೀನವಲ್ಲದ ಅಪಹತಪಾಪ್ಮತ್ವಾದಿಗಳು ಇಲ್ಲ-ದಿದ್ದರೂ 'ಯಥಾ ಕಥಂಚಿತ್' ಆ ಗುಣಗಳು ಅವರಲ್ಲೂ ಇರುವುದರಿಂದ ಇನ್ನೊಬ್ಬರಲ್ಲಿ ಇರುವ ಅಂಥ ಗುಣಗಳಿಂದ ಇಲ್ಲಿ ಉಕ್ತನಾದವನು ವಿಷ್ಣುವೇ ಎಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ – ''ಸಾಪೇಕ್ಷ'' ಎಂಬ ವಾಕ್ಯವು ಹೊರಟಿದೆ. ''ಸಾಪೇಕ್ಷಂ'' ಅಂದರೆ ಅನ್ಯಾಧೀನವಾದದ್ದು. ''ನಿರಪೇಕ್ಷಂ'' ಎಂದರೆ ಅನ್ಯಾಧೀನವಲ್ಲದ್ದು. ಇವುಗಳ ಮಧ್ಯೆ ಎಂದು ಅರ್ಥ. ಚಶಬ್ದವು ಅವಧಾರಣಾ-ರ್ಥಕವಾಗಿದ್ದು, ನಿರಪೇಕ್ಷಮೇವ ಎಂದು ಸಂಬಂಧವನ್ನು ಪಡೆಯುವುದು. 'ಅಪಹತ-ಪಾಪ್ಮತ್ವಾದಿಕಂ' ಎಂಬ ವಿಶೇಷ್ಯವಾಚಕ ಪದವು ಪ್ರಸ್ತುತವಾದುದರಿಂದ ಇಲ್ಲಿ ಲಭಿಸುತ್ತದೆ. 'ಸ್ವೀಕರ್ತವ್ಯಮ್' ಎಂಬ ಪದದ ನಂತರ 'ಲಿಂಗತ್ವೇನ' ಎಂಬ ಪದವು ಶೇಷವಾಗಿದೆ. ತಥಾ ಚ – ಇಲ್ಲಿ ವಿವಕ್ಷಿತವಾಗಿರುವ ಲಿಂಗಗಳು ಬೇರೆಲ್ಲೂ ಇಲ್ಲದಿರು-ವುದರಿಂದ ಆ ಲಿಂಗಗಳಿಂದ ಹೃತ್ಪದ್ಮಗತಅಲ್ಪಾಕಾಶದಲ್ಲಿರುವವನು ವಿಷ್ಣುವೇ ಎಂದು ನಿಶ್ಚಯವು ಆಗಿಯೇ ತೀರುವುದು - ಎಂದು ಭಾವ.

ಭಾ.ದೀ. – ಕಿಂಚ ಸಾಪೇಕ್ಷತ್ವನಿರಪೇಕ್ಷತ್ವಾದಿವಿಶೇಷಿತಾನಾಮ್ ಅಪಹತ-ಪಾಪ್ಮತ್ವಾದೀನಾಮ್ ಅಭಾವರೂಪಾಣಾಮ್ ಅನ್ಯತ್ರ ಆಕಾಶಾದೌ ಸಾಕ್ಷಾದ್ ವಾ ಅಭಿಮಾನಿದ್ವಾರಾ ವಾ ಯಥಾಕಥಂಚಿದ್ ವೃತ್ತಾವಪಿ ನ ಕಥಂಚಿದನ್ಯತ್ರ ಸತ್ಯಕಾಮತ್ವಾದ್ಯಸ್ತೀತಿ ಯುಕ್ತಃ ತೇನ ವಿಷ್ಣುತ್ವನಿಶ್ಚಯ - ಇತ್ಯಾಹ – ಸತ್ಯಕಾಮ ಇತಿ ॥

ಕಿಂಚ - ಅನ್ಯಾಧೀನತ್ವ, ಅನನ್ಯಾಧೀನತ್ವ ಮೊದಲಾದ ವಿಶೇಷಣಗಳಿಂದ ಕೂಡಿದ ಅಪಹತಪಾಪ್ಮತ್ವ ಮೊದಲಾದ ಅಭಾವರೂಪವಾದ ಧರ್ಮಗಳು ಆಕಾಶ ಮೊದಲಾದ ಇತರಸ್ಥಳಗಳಲ್ಲಿ ಸಾಕ್ಷಾತ್ತಾಗಿ ಅಥವಾ ಅಭಿಮಾನಿದ್ವಾರಾ ಯಥಾಕಥಂಚಿತ್ ಇರು-

ವುದಾದರೂ ಸತ್ಯಕಾಮತ್ವ ಮೊದಲಾದ ಧರ್ಮಗಳು ಅನ್ಯತ್ರ ಯಾವುದೇ ವಿಧದಿಂದ ಇರಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ಧರ್ಮಗಳಿಂದ ದಹರಾಕಾಶದಲ್ಲಿರುವವನು ವಿಷ್ಣುವೆಂದು ನಿಶ್ಚಯಿಸುವುದು ಯುಕ್ತವಾಗಿದೆ ಎಂದು ''ಸತ್ಯಕಾಮಃ'' ಎಂಬ ಭಾಷ್ಯ-ದಿಂದ ಹೇಳುತ್ತಿದ್ದಾರೆ.

**ಭಾಷ್ಯಮ್ –**

**'ಸತ್ಯಕಾಮೋಽಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಮ್ ।**
**ಸತ್ಯಕಾಮತ್ವಮನ್ಯೇಷಾಂ ಭವೇತ್ ತತ್ಕಾಮ್ಯಕಾಮಿತಾ'**

**– ಇತಿ ಚ ಸ್ಕಾಂದೇ ॥ ೧೪ ॥**

''ಅವ್ಯಯನಾದ ವಿಷ್ಣುವನ್ನು ಬಿಟ್ಟು ಮತ್ತೊಬ್ಬ ಸತ್ಯಕಾಮ ಇಲ್ಲ; ಇತರರಿಗೆ ಸತ್ಯಕಾಮತ್ವವೆಂದರೆ ವಿಷ್ಣುವಿನ ಇಚ್ಛೆಗೆ ಅನುಗುಣವಾಗಿ ಇಚ್ಛೆಯನ್ನು ಹೊಂದಿರುವುದೇ ಆಗಿದೆ'' - ಎಂದೂ ಸ್ಕಾಂದ-ಪುರಾಣದಲ್ಲಿ ಹೇಳಿದೆ.

ಭಾ.ದೀ. – 'ಅವ್ಯಯಮ್' ಅಕ್ಷೀಣಕಾಮಮಮೋಘಕಾಮಂ ಸತ್ಯಕಾಮಂ, ವಿಷ್ಣುಮ್ 'ಋತೇ' ವಿನಾ, 'ಪರಃ' ಅನ್ಯಃ ಸತ್ಯಕಾಮಃ ಸತ್ಯಸಂಕಲ್ಪಶ್ಚ ನಾಸ್ತಿ। ವಿಷ್ಣೌ ತದ್ಭಾವಸ್ಯ ತದನ್ಯಸ್ಮಿನ್ ತದಭಾವಸ್ಯ ಚ ಪ್ರತಿಪಾದನಾಯ ವಕ್ರೋಕ್ತಿಃ । ವಿಷ್ಣೋ-ರನ್ಯೇಷಾಂ ರಮಾದೀನಾಂ ಕ್ವಚಿದಾಗಮೇ ಪ್ರತೀಯಮಾನಮಪಿ ಸತ್ಯಕಾಮತ್ವಂ 'ತತ್ಕಾಮ್ಯಕಾಮಿತಾ' ವಿಷ್ಣುಕಾಮನಾವಿಷಯವಿಷಯಕಕಾಮನಾವತ್ತ್ವರೂಪ-ಮೇವ ಭವೇತ್ ನ ಮುಖ್ಯಮಿತ್ಯರ್ಥಃ । ತಥಾ ಚ – ಅಪಹತಪಾಪ್ಮತ್ವಂ ಸ್ವತಃ ಪರಾಧೀನಂ ಚೇತಿ ಯಥಾ ದ್ವಿವಿಧಂ, ನ ತಥಾ ಸತ್ಯಕಾಮತ್ವಂ ಕಿಂ ತು ಏಕವಿಧಮ್, ತಚ್ಚ ಮುಖ್ಯಂ ವಿಷ್ಣಾವೇವ, ಅನ್ಯತ್ರ ತು ಪಾರಿಭಾಷಿಕಮಿತಿ ಭಾವಃ।

'ಸ್ಕಾಂದೇ' 'ಉಕ್ತಮ್' ಇತಿ ಶೇಷಃ । ಅತಃ ಸತ್ಯಕಾಮತ್ವಾದಿವಿವಕ್ಷಯಾ 'ವಿಷ್ಣೋರೇವ ಹಿ ತೇ ಗುಣಾಃ' ಇತ್ಯುಕ್ತಂ ಯುಕ್ತಮಿತಿ ಭಾವಃ।

'ಅವ್ಯಯಮ್' ಎಂದೂ ಕ್ಷೀಣವಾಗದ ಕಾಮನೆಯುಳ್ಳ ಅಥವಾ ವ್ಯರ್ಥವಾಗದ ಕಾಮನೆಯುಳ್ಳ ವಿಷ್ಣುವನ್ನು 'ಋತೇ' - ಬಿಟ್ಟು, 'ಪರಃ' - ಮತ್ತೊಬ್ಬನು ಸತ್ಯಕಾಮನು ಅಂದರೆ ಸತ್ಯಸಂಕಲ್ಪನು ಇಲ್ಲ. ವಿಷ್ಣುವಿನಲ್ಲಿ ಸತ್ಯಕಾಮತ್ವ ಇರುವುದನ್ನು ಇತರರಲ್ಲಿ ಅದಿಲ್ಲದಿರುವುದನ್ನು ಪ್ರತಿಪಾದಿಸುವ ಸಲುವಾಗಿ 'ಸತ್ಯಕಾಮತ್ವವು ವಿಷ್ಣುವಿನಲ್ಲಿದೆ ಎಂದು ನೇರವಾಗಿ ಹೇಳದೇ ಅವನನ್ನು ಬಿಟ್ಟು ಉಳಿದವರಲ್ಲಿ ಇಲ್ಲ ಎಂದು ವಕ್ರವಾಗಿ ಹೇಳಲಾಗಿದೆ. ವಿಷ್ಣುಭಿನ್ನರಾದ ರಮಾ ಮೊದಲಾದವರಲ್ಲಿ ಕೆಲವು ಆಗಮಗಳಲ್ಲಿ ಇರುವುದೆಂದು ತೋರುವ ಸತ್ಯಕಾಮತ್ವವು 'ತತ್ಕಾಮ್ಯಕಾಮಿತ' - ಅಂದರೆ ವಿಷ್ಣುವಿನ ಕಾಮನೆಗೆ ವಿಷಯವಾದದ್ದು ಯಾವುದೋ ತದ್ವಿಷಯಕವಾದ ಕಾಮನೆಯನ್ನು ಹೊಂದಿರುವುದೇ ಆಗಿದೆ ಹೊರತು ಮುಖ್ಯವಾದ ಸತ್ಯಕಾಮತ್ವ ಇಲ್ಲ. ತಥಾ ಚ – ಅಪಹತಪಾಪ್ಮತ್ವವು ಸ್ವತಂತ್ರವಾದದ್ದು, ಪರಾಧೀನವಾದದ್ದು ಎಂಬುದಾಗಿ ಹೇಗೆ ಎರಡು ವಿಧವಾಗಿದೆಯೋ ಹಾಗೆ ಸತ್ಯಕಾಮತ್ವವು ಎರಡುವಿಧವಲ್ಲ. ಕಿಂತು ಒಂದೇ ವಿಧವಾಗಿದೆ. ಅದಾದರೋ ಮುಖ್ಯವಾದದ್ದು ವಿಷ್ಣುವಿನಲ್ಲೇ. ಅನ್ಯತ್ರ ಇರತಕ್ಕ ಸತ್ಯಕಾಮತ್ವವು ಪಾರಿಭಾಷಿಕವಾದುದೆಂದು ಭಾವ.

'ಸ್ಕಾಂದೇ' ಎಂಬ ಪದದ ನಂತರ 'ಉಕ್ತಮ್' ಎಂಬ ಪದವು ಶೇಷವಾಗಿದೆ. ಆದ್ದರಿಂದ ಸತ್ಯಕಾಮತ್ವ ಮೊದಲಾದ ಗುಣಗಳ ವಿವಕ್ಷೆಯಿಂದ ವಿಷ್ಣುವಿಗೇ ಆ ಗುಣ-ಗಳು ಸಂಬಂಧಿಸಿವೆ ಎಂದು ಹೇಳಿದ್ದು ಯುಕ್ತವೆಂದು ಭಾವ.

ಭಾ.ದೀ. – ಯುಕ್ತ್ಯಂತರೇಣ ವಿಷ್ಣೋರ್ಹೃತ್ಪದ್ಮಸ್ಥತ್ವಂ ಪ್ರತಿಪಾದಯತ್ಸೂತ್ರಮ್ ಉಪನ್ಯಸ್ಯ ಅಸಿದ್ಧಿಪರಿಹಾರಾಯ ಶ್ರುತ್ಯುದಾಹರಣಪೂರ್ವಕಂ ವ್ಯಾಚಷ್ಟೇ – ಗತೀತಿ ॥

ಮತ್ತೊಂದು ಯುಕ್ತಿಯಿಂದ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಪ್ರತಿಪಾದಿಸುವ ಸೂತ್ರ-ವನ್ನು ಉಪನ್ಯಾಸ ಮಾಡಿ, ಆ ಸೂತ್ರದಲ್ಲಿ ಹೇಳುವ ಯುಕ್ತಿಗೆ ಅಸಿದ್ಧಿದೋಷವನ್ನು ಪರಿಹರಿಸಲು ಶ್ರುತಿಯನ್ನು ಉದಾಹರಿಸುತ್ತಾ ಸೂತ್ರವನ್ನು ''ಗತಿ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ –**

**॥ ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ ॥ ೧೫ ॥**

**'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' ಇತಿ ಸುಪ್ತಸ್ಯ ತದ್ಗತಿರ್ಬ್ರಹ್ಮಶಬ್ದಶ್ಚೋಚ್ಯತೇ ।**

'ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' ಎಂಬು-ದಾಗಿ ಸುಪ್ತನಾದ ಜೀವನಿಗೆ ಹೃತ್ಪದ್ಮಸ್ಥನ ಪ್ರಾಪ್ತಿಯಾಗುವುದೆಂದು ಹಾಗೂ ಅವನನ್ನು ಕುರಿತು ಬ್ರಹ್ಮಶಬ್ದವನ್ನು ಹೇಳಲಾಗಿದೆ.

ಭಾ.ದೀ. – 'ಇಮಾಃ' ಸುಪ್ತಾಃ ಪ್ರಜಾಃ 'ಅಹರಹಃ' ಪ್ರತಿದಿನಮ್ ಏತಂ 'ಗಚ್ಛಂತ್ಯಃ' ಪ್ರಾಪ್ಯಮಾಣಾಃ 'ಏತಂ' ಬ್ರಹ್ಮಲೋಕಂ ಬ್ರಹ್ಮಣೋ ವಿಷ್ಣೋರಾವಾಸ-ಸ್ಥಾನಭೂತಂ ಹೃತ್ಪದ್ಮಂ ತದ್‌ದ್ವಾರಾ ತತ್ರತ್ಯಂ ಬ್ರಹ್ಮ ಸಾಕ್ಷಾತ್ ಲೋಕಪದೋಕ್ತಂ ಬ್ರಹ್ಮಾಖ್ಯಮಾಶ್ರಯಂ ವಾ 'ನ ವಿಂದಂತಿ' ನ ವಿಜಾನಂತಿ, 'ಸ ಏಷ ಆತ್ಮಾ ಹೃದಿ' ಇತಿ ಶ್ರುತ್ಯರ್ಥಃ । ಇತೀತಿ ॥ ಇತಿ ಛಾಂದೋಗ್ಯವಾಕ್ಯೇ 'ಸುಪ್ತಸ್ಯ' – ಚೇತನಸ್ಯ 'ತದ್ಗತಿಃ' ಅಹರಹೋ ಹೃದ್ಗತಂ ಬ್ರಹ್ಮಲೋಕಂ ಪ್ರತಿ ಗತಿಃ ಪ್ರಾಪ್ತಿಃ 'ಉಚ್ಯತೇ' ವ್ಯಪದಿಶ್ಯತೇ – ಇತ್ಯರ್ಥಃ ।

'ಬ್ರಹ್ಮಶಬ್ದಃ' ಇತ್ಯತ್ರಾಪಿ 'ತತ್' ಇತಿ ಪದಂ ಬುದ್ಧ್ಯಾ ವಿವಿಚ್ಯ ವಿಪರಿಣಾಮೇನ ಸಂಬಧ್ಯತೇ । ತಥಾ ಚ – ತಸ್ಮಿನ್ ಪ್ರಾಪ್ಯಮಾಣೇ ಹೃದ್ಗತೇ ಬ್ರಹ್ಮಲೋಕೇ 'ಬ್ರಹ್ಮಶಬ್ದಃ' 'ಉಚ್ಯತೇ' ಶ್ರೂಯತೇ ಇತ್ಯರ್ಥಃ । 'ಉಚ್ಯತೇ ಚ' ಇತ್ಯಪಿ ಸಂಬಂಧಃ । ಚಃ ಸಮುಚ್ಚಯೇ । 'ಯತಃ' ಇತಿ ಶೇಷಃ । ಅಸ್ಯ 'ಅತೋಽಪಿ ದಹರೇ ವಿಷ್ಣುರೇವ' ಇತಿ ಪ್ರಧಾನಸಾಧ್ಯೇನಾನ್ವಯಃ ।

'ಇಮಾಃ' – ಸುಪ್ತರಾದ ಜೀವರು, 'ಅಹರಹಃ' – ಪ್ರತಿದಿನವೂ, 'ಏತಂ' – ಇವನನ್ನು 'ಗಚ್ಛಂತ್ಯಃ' – ಹೊಂದತಕ್ಕವರಾಗಿ 'ಏತಂ ಬ್ರಹ್ಮಲೋಕಂ' – ಬ್ರಹ್ಮ ಅಂದರೆ

ವಿಷ್ಣುವಿನ ಆವಾಸಸ್ಥಾನವಾಗಿರುವ ಹೃತ್ಪದ್ಮವನ್ನಾಗಲೀ ಅದರ ಮೂಲಕವಾಗಿ ಅದರಲ್ಲಿರುವ ಬ್ರಹ್ಮಲೋಕಂ – ಲೋಕಪದವು ಹೇಳುವ ಬ್ರಹ್ಮನೆಂಬ ಆಶ್ರಯವನ್ನಾಗಲೀ 'ನ ವಿಂದಂತಿ' – ತಿಳಿಯುವುದಿಲ್ಲ. ಅಂತಹ ಆತ್ಮನು ಹೃದಯದಲ್ಲಿರುವನು ಎಂದು ಶ್ರುತಿಯ ಅರ್ಥ. ''ಇತಿ'' ಅಂದರೆ ಈ ಛಾಂದೋಗ್ಯವಾಕ್ಯದಲ್ಲಿ. 'ಸುಪ್ತಸ್ಯ' – ಸುಪ್ತ್ಯವಸ್ಥೆಯಲ್ಲಿರುವ ಚೇತನನಿಗೆ, 'ತದ್ಗತಿಃ' ಪ್ರತಿದಿನವೂ ಹೃದಯದಲ್ಲಿರುವ ಬ್ರಹ್ಮವೆಂಬ ಆಶ್ರಯದ ಗತಿಃ – ಅಂದರೆ ಪ್ರಾಪ್ತಿಯು, 'ಉಚ್ಯತೇ' – ಹೇಳಲ್ಪಟ್ಟಿದೆ ಎಂದು ಅರ್ಥ.

'ಬ್ರಹ್ಮಶಬ್ದಃ' – ಬ್ರಹ್ಮಶಬ್ದಃ ಎಂಬಲ್ಲಿ ತತ್ ಎಂಬ ಪದವು ಬುದ್ಧಿಯಿಂದ ಬೇರ್ಪಡಿಸಿ ವಿಭಕ್ತಿವ್ಯತ್ಯಾಸದೊಂದಿಗೆ ಸಂಬಂಧವನ್ನು ಹೊಂದುತ್ತದೆ. ತಥಾ ಚ – ತತ್ ಎಂದರೆ ಆ ಹೊಂದಲಾಗುವ ಹೃದಯದಲ್ಲಿರುವ ಬ್ರಹ್ಮಲೋಕದ ವಿಷಯದಲ್ಲಿ 'ಬ್ರಹ್ಮಶಬ್ದಃ ಉಚ್ಯತೇ' – ಬ್ರಹ್ಮಶಬ್ದವು ಶ್ರುತವಾಗಿದೆ ಎಂದು ಅರ್ಥ. 'ಉಚ್ಯತೇ ಚ' ಎಂದು ಚಕಾರವು ಸಂಬಂಧವನ್ನು ಹೊಂದುವುದು. 'ಚಃ' ಚಕಾರವು ಸಮುಚ್ಚಯವನ್ನು ಹೇಳುವುದು. 'ಯತಃ' ಎಂಬ ಪದವು ಶೇಷವಾಗಿದೆ. 'ಅಸ್ಯ' – ಈ ವಾಕ್ಯಕ್ಕೆ 'ಆದ್ದರಿಂದಲೇ ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿದ್ದಾನೆ' ಎಂದು ಪ್ರಧಾನಸಾಧ್ಯವನ್ನು ಹೇಳುವ ವಾಕ್ಯದೊಂದಿಗೆ ಅನ್ವಯವಾಗುವುದು.

ಭಾ.ದೀ. – ಸುಪ್ತಪ್ರಾಪ್ಯತ್ವಂ ಕುತೋ ವಿಷ್ಣುತ್ವನಿಶ್ಚಾಯಕಮ್? ಇತ್ಯತ ಆಹ – ಸತೇತಿ ॥

ಸುಪ್ತಜೀವನಿಂದ ಹೊಂದಲ್ಪಡುವಿಕೆ ಎಂಬ ಧರ್ಮವು ಹೃತ್ಪದ್ಮಸ್ಥನು ವಿಷ್ಣುವೆಂದು ನಿಶ್ಚಯಿಸಲು ಹೇಗೆ ಕಾರಣವಾಗುತ್ತದೆ? ಎಂಬ ಶಂಕೆಗೆ ಉತ್ತರವಾಗಿ ''ಸತಾ'' ಎಂಬ ವಾಕ್ಯವು ಹೊರಟಿದೆ.

**ಭಾಷ್ಯಮ್ – 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತಿ ಶ್ರುತೇಸ್ತಂ ಹಿ ಸುಪ್ತೋ ಗಚ್ಛತಿ ।**

''ಸತಾ ಸೋಮ್ಯ ತದಾ ಸಂಪನ್ನೋ ಭವತಿ'' ಎಂಬ ಶ್ರುತಿಯಿಂದ ಸುಪ್ತಜೀವನು ಆ ಬ್ರಹ್ಮನನ್ನೇ ಹೊಂದುವನು ಎನ್ನುವುದು ಪ್ರಸಿದ್ಧ-ವಾದ ವಿಷಯ.

ಭಾ.ದೀ. – ಹೇ 'ಸೋಮ್ಯ!' ಭಕ್ತಿಜ್ಞಾನಾರ್ಹ! ಶ್ವೇತಕೇತೋ! 'ತದಾ' ಸುಪ್ತಿಕಾಲೇ 'ಸತಾ' ಬ್ರಹ್ಮಣಾ 'ಸಂಪನ್ನಃ' ಸಂಗತೋ ಭವತೀತ್ಯರ್ಥಃ । ಉದ್ದಾಲಕ-ವಾಕ್ಯಮೇತತ್ । 'ಶ್ರುತೇಃ' ಇತಿ ಪಂಚಮೀ । 'ತಂ' ವಿಷ್ಣುಮ್ । 'ಹಿ'ಶಬ್ದಃ ಪ್ರಸಿದ್ಧೌ । 'ಗಚ್ಛತಿ' ಪ್ರಾಪ್ನೋತಿ । 'ಇತಿ ಜ್ಞಾಯತೇ' ಇತಿ ಶೇಷಃ । ತಥಾ ಚ – ಸುಖಪ್ರಾಪ್ಯತ್ವಸ್ಯ ವಿಷ್ಣುಲಿಂಗತ್ವೇನ ಶ್ರುತಿಪ್ರಸಿದ್ಧತ್ವಾತ್ ತೇನ ವಿಷ್ಣುತ್ವನಿಶ್ಚಯೋ ಭವತಿ - ಇತಿ ಭಾವಃ ।

'ಹೇ ಸೌಮ್ಯ' – ಭಕ್ತಿ ಮತ್ತು ಜ್ಞಾನಗಳಿಗೆ ಅರ್ಹನಾದ ಶ್ವೇತಕೇತುವೇ! 'ತದಾ' ಆ ಸುಪ್ತಿಕಾಲದಲ್ಲಿ 'ಸತಾ' - ಬ್ರಹ್ಮನಿಂದ 'ಸಂಪನ್ನೋ ಭವತಿ' – ಸಂಬಂಧವನ್ನು ಹೊಂದುವನು – ಎಂದು ಅರ್ಥ. ಇದು ಉದ್ದಾಲಕರ ವಾಕ್ಯವಾಗಿದೆ. 'ಶ್ರುತೇಃ' ಎಂಬ ಪದವು ಪಂಚಮೀ ವಿಭಕ್ತ್ಯಂತವಾಗಿದೆ. 'ತಂ' ಅಂದರೆ ವಿಷ್ಣುವನ್ನು. ಹಿಶಬ್ದವು ಪ್ರಸಿದ್ಧಿಯನ್ನು ಹೇಳುವುದು. 'ಗಚ್ಛತಿ' – ಹೊಂದುತ್ತಾನೆ. 'ಇತಿ ಜ್ಞಾಯತೇ' ಎಂಬ ಪದಗಳು ಇಲ್ಲಿ ಶೇಷವಾಗಿವೆ. ತಥಾ ಚ – ಸುಪ್ತಪ್ರಾಪ್ಯತ್ವವು ವಿಷ್ಣುಲಿಂಗವೆಂದು ಶ್ರುತಿಯಿಂದ ಪ್ರಸಿದ್ಧವಾಗಿರುವುದರಿಂದ ಆ ಲಿಂಗದಿಂದ ವಿಷ್ಣುವೆಂದು ನಿಶ್ಚಯ-ವಾಗುತ್ತದೆ ಎಂದು ಭಾವ.

ಭಾ.ದೀ. – 'ಲಿಂಗಂ ಚ ತಥಾ ಹಿ ದೃಷ್ಟಮ್' ಇತಿ ಸೂತ್ರಶೇಷಂ ಹೇತ್ವಂತರ-ಪರತಯಾ ವ್ಯಾಚಷ್ಟೇ – ಅರಶ್ಚೇತಿ ॥

'ಲಿಂಗಂ ಚ ತಥಾ ಹಿ ದೃಷ್ಟಮ್' ಎಂಬ ಸೂತ್ರದ ಉಳಿದ ಭಾಗವನ್ನು ಮತ್ತೊಂದು ಹೇತುವನ್ನು ಹೇಳುವ ತಾತ್ಪರ್ಯವುಳ್ಳದ್ದೆಂದು ''ಅರಶ್ಚ'' ಎಂಬ ವಾಕ್ಯ-ದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – 'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ' ಇತಿ ಲಿಂಗಂ ಚ ತಥಾ ದೃಷ್ಟಮ್ ।**

ಹಾಗೆಯೇ "ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ" – ಎಂಬ ಶ್ರುತಿಯಲ್ಲಿ ಹೇಳಿರುವ ಲಿಂಗವೂ ಹೃತ್ಪದ್ಮಸ್ಥನಲ್ಲಿ ಶ್ರುತ-ವಾಗಿದೆ.

ಭಾ.ದೀ. – 'ಚ'ಶಬ್ದೋ ಹೇತುಸಮುಚ್ಚಯೇ । ಯಥಾ ಸುಪ್ತಗಮ್ಯತ್ವಮ್ 'ಅಹರಹಃ' ಇತಿ ಶ್ರುತೌ ಹೃತ್ಪದ್ಮಸ್ಥೇ ದೃಷ್ಟಮ್, ತಥಾ ಅರ-ಣ್ಯನಾಮಾಮೃತ-ಸಮುದ್ರದ್ವಯಾಶ್ರಯಲೋಕವತ್ತ್ವರೂಪಂ ಲಿಂಗಮಪಿ 'ಅರಶ್ಚ' ಇತಿ ಶ್ರುತೌ ಹೃತ್ಪದ್ಮಸ್ಥೇ ದೃಷ್ಟಂ ಶ್ರುತಮಿತಿ । ಉಪಮಾಯಾಂ ತಥಾಶಬ್ದಃ । ಅನೇನ ಅಸಿದ್ಧಿಃ ಪರಿಹೃತಾ ।

ನ ಚ ಗತಿಶಬ್ದಯೋರಿವ ಅಸ್ಯ ಸನ್ನಿಧೌ ಹೃತ್ಪದ್ಮಸ್ಥಸ್ಯಾನುಕ್ತೇಃ ಅಸಿದ್ಧ್ಯನಿವೃತ್ತಿಃ ಇತಿ ವಾಚ್ಯಮ್ । ಹೃತ್ಪದ್ಮಸ್ಥಸ್ಯ ಬ್ರಹ್ಮಣ ಆವಾಸತ್ವೇನ ನಿಮಿತ್ತೇನ ತಲ್ಲೋಕಭೂತೇ ಹೃತ್ಪದ್ಮೇ 'ಏತಂ ಬ್ರಹ್ಮಲೋಕಮ್' ಇತಿ ಪ್ರಯುಕ್ತಸ್ಯ ಬ್ರಹ್ಮಲೋಕಶಬ್ದಸ್ಯ ಅರ-ಣ್ಯಾಶ್ರಯಲೋಕೇಽಪಿ ಪ್ರಯೋಗಾತ್ ತನ್ಮುಖೇನ ತಾದೃಶಲೋಕವತ್ತ್ವರೂಪ-ಲಿಂಗಸ್ಯ ಹೃತ್ಪದ್ಮಸ್ಥಬ್ರಹ್ಮನಿಷ್ಠಾಯಾಃ ಪ್ರಾಪ್ತತ್ವಾತ್ । 'ದೃಷ್ಟಮ್' ಇತ್ಯನಂತರಂ 'ಯತಃ' ಇತಿ ಶೇಷಃ । ಅಸ್ಯ 'ಅತೋಽಪಿ ದಹರೇ ವಿಷ್ಣುರೇವ' ಇತಿ ಪ್ರತಿಜ್ಞಾ-ವಾಕ್ಯೇನ ಅನ್ವಯಃ ।

ಶ್ರುತೌ 'ಹವಾ' ಇತಿ ನಿಪಾತೌ ಪ್ರಸಿದ್ಧಿದ್ಯೋತಕೌ । ಸಮುದ್ರಯೋರ-ನ್ಯೋನ್ಯಸಮುಚ್ಚಯೇ ಚಶಬ್ದೌ । ತಥಾ ಚ – ಬ್ರಹ್ಮಣೋ ವಿಷ್ಣೋರ್ಲೋಕೇ ಶ್ವೇತದ್ವೀಪೇ ಅರಣ್ಯಾಖ್ಯಾರ್ಣವೌ ಸುಧಾಸಮುದ್ರೌ ಅರ್ಣವೋಪಮೇ ಸುಧಾಸರಸೀ ವಾ ಸ್ತ ಇತಿ ಶ್ರುತ್ಯರ್ಥಃ ।

'ಇತಿ ಲಿಂಗಂ ಚ' ಎಂಬಲ್ಲಿರುವ 'ಚ'ಶಬ್ದ ಮತ್ತೊಂದು ಹೇತುವಿನ ಸಮುಚ್ಚಯ-ವನ್ನು ಹೇಳುವುದು. ಹೇಗೆ 'ಅಹರಹಃ' ಎಂಬ ಶ್ರುತಿಯಲ್ಲಿ ಸುಪ್ತಗಮ್ಯತ್ವವೆಂಬ ಲಿಂಗವು ಹೃತ್ಪದಸ್ಥನಲ್ಲಿ ಇರುವುದೆಂದು ದೃಷ್ಟಮ್ - ಶ್ರುತವಾಗಿದೆಯೋ ಹಾಗೆಯೇ

ಅರ ಮತ್ತು ಣ್ಯ ಎಂಬ ಎರಡು ಅಮೃತಸಮುದ್ರದಲ್ಲಿರುವ ಲೋಕವನ್ನು ಹೊಂದುವಿಕೆ ಎಂಬ ಲಿಂಗವೂ ಅರಶ್ಚ ಎಂಬ ಶ್ರುತಿಯಲ್ಲಿ ಹೃತ್ಪದ್ಮಸ್ಥನವಿಷಯದಲ್ಲಿ ದೃಷ್ಟ - ಅಂದರೆ ಶ್ರುತವಾಗಿದೆ. ಸೂತ್ರಭಾಷ್ಯಗಳಲ್ಲಿ 'ತಥಾ' ಶಬ್ದವು ಉಪಮಾರ್ಥಕವಾದುದು. ಇದರಿಂದ ಹೇತುವಿಗೆ ಅಸಿದ್ಧಿದೋಷವು ಪರಿಹೃತವಾಗುವುದು.

ಶಂಕೆ – ಸುಪ್ತಪ್ರಾಪ್ತಿ ಮತ್ತು ಬ್ರಹ್ಮಶಬ್ದಗಳ ಸಮೀಪದಲ್ಲಿ ಹೃತ್ಪದ್ಮಸ್ಥನನ್ನೇ ಹೇಳಿರುವಂತೆ ಅರಶ್ಚ ಎಂಬ ಶ್ರುತಿ ಹೇಳುವ ಲಿಂಗದ ಸಮೀಪದಲ್ಲಿ ಹೃತ್ಪದ್ಮಸ್ಥನನ್ನು ಹೇಳದಿರುವುದರಿಂದ ಅಸಿದ್ಧಿದೋಷವು ಪರಿಹಾರವಾಗುವುದಿಲ್ಲ.

ಸಮಾಧಾನ – ಇದು ಸರಿಯಲ್ಲ. ಹೃತ್ಪದ್ಮಸ್ಥನಾದ ಬ್ರಹ್ಮನಿಗೆ ಆವಾಸವಾಗಿರುವ ಕಾರಣ ಅವನ ಲೋಕವೆಂದೆನಿಸುವ ಹೃತ್ಪದ್ಮವನ್ನು ಕುರಿತು 'ಏತಂ ಬ್ರಹ್ಮಲೋಕಮ್' ಎಂಬ ಶ್ರುತಿಯಲ್ಲಿ ಪ್ರಯೋಗಿಸಿರುವ ಬ್ರಹ್ಮಲೋಕಶಬ್ದದಲ್ಲಿ ಅರ, ಣ್ಯಗಳಿಗೆ ಆಶ್ರಯ-ವಾದ ಲೋಕದ ವಿಷಯದಲ್ಲೂ ಪ್ರಯೋಗಿಸಿರುವುದರಿಂದ ಅದರ ಮೂಲಕ ಅಂತಹ ಲೋಕವನ್ನು ಹೊಂದುವಿಕೆ ಎಂಬ ಲಿಂಗಕ್ಕೆ ಹೃತ್ಪದ್ಮಸ್ಥನಾದ ಬ್ರಹ್ಮನಲ್ಲಿ ಇರುವಿಕೆಯು ಪ್ರಾಪ್ತವಾಗುವುದು. ಭಾಷ್ಯದಲ್ಲಿ 'ದೃಷ್ಟಮ್' ಎಂಬ ಪದದ ನಂತರ 'ಯತಃ' ಎಂಬ ಪದವು ಶೇಷವಾಗಿದೆ. ಈ ವಾಕ್ಯಕ್ಕೆ 'ಆದ್ದರಿಂದಲೂ ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿರುವನು' ಎಂಬ ಪ್ರತಿಜ್ಞಾವಾಕ್ಯದೊಂದಿಗೆ ಅನ್ವಯವಿರುವುದು.

ಶ್ರುತಿಯಲ್ಲಿ 'ಹ, ವಾ' ಎಂಬ ಎರಡು ನಿಪಾತಗಳೆಂದು ಕರೆಯಲ್ಪಡುವ ಶಬ್ದಗಳು ಪ್ರಸಿದ್ಧಿಯನ್ನು ಸೂಚಿಸುತ್ತವೆ. ಸಮುದ್ರಗಳ ಪರಸ್ಪರಸಮುಚ್ಚಯವನ್ನು ಶ್ರುತಿಯಲ್ಲಿರುವ ಎರಡು ಚಶಬ್ದಗಳು ಹೇಳುತ್ತವೆ. ತಥಾ ಚ – ಬ್ರಹ್ಮಲೋಕೇ ಅಂದರೆ ವಿಷ್ಣುವಿನ ಲೋಕವಾದ ಶ್ವೇತದ್ವೀಪದಲ್ಲಿ ಅರ, ಣ್ಯ ಎಂದು ಕರೆಯಲ್ಪಡುವ 'ಅರ್ಣವೌ' – ಎರಡು ಸುಧಾಸಮುದ್ರಗಳು ಅಥವಾ ಸಮುದ್ರದಂತಿರುವ ಎರಡು ಸುಧಾಸರೋವರ-ಗಳು ಇವೆ ಎಂದು ಶ್ರುತಿಯ ಅರ್ಥ.

ಭಾ.ದೀ. – ನನು ಹೃತ್ಪದ್ಮಸ್ಥಸ್ಯ ಅರ-ಣ್ಯಾಶ್ರಯಲೋಕವತ್ತ್ವಲಿಂಗಶ್ರವಣೇಽಪಿ ಕುತೋಽಯಂ ವಿಷ್ಣುಃ? ಇತ್ಯತೋಽರ-ಣ್ಯಾಶ್ರಯತ್ವಸ್ಯ ವಿಷ್ಣುಲೋಕೈಕಲಿಂಗತ್ವೇನ

ಸ್ಮೃತಿಸಿದ್ಧತ್ವಾತ್ ಇತ್ಯಾಶಯೇನ ಸೌತ್ರಹಿಶಬ್ದಾಭಿಪ್ರೇತಾಂ ಸ್ಮೃತಿಂ ದರ್ಶಯತಿ – ಅರಶ್ಚೇತಿ ॥

ಹೃತ್ಪದ್ಮಸ್ಥನಿಗೆ ಅರ-ಣ್ಯಾಶ್ರಯಲೋಕವತ್ತ್ವವೆಂಬ ಲಿಂಗವಿರುವುದೆಂದು ಶ್ರುತ-ವಾಗಿದ್ದರೂ ಅದರಿಂದ ಹೃತ್ಪದ್ಮಸ್ಥನು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಅರ, ಣ್ಯಾಶ್ರಯತ್ವವು ವಿಷ್ಣುಲೋಕಕ್ಕೆ ಮಾತ್ರ ಸಂಬಂಧಿಸಿದ ಲಿಂಗವೆಂದು ಸ್ಮೃತಿ ವಾಕ್ಯದಿಂದ ಸಿದ್ಧವಾಗಿದೆ; ಆದ್ದರಿಂದ ಅಂತಹ ಲೋಕವತ್ತ್ವವೆಂಬ ಲಿಂಗದಿಂದ ವಿಷ್ಣುವೇ ಇಲ್ಲಿ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ ಎಂಬ ಆಶಯದಿಂದ ಸೂತ್ರದ 'ಹಿ'ಶಬ್ದಕ್ಕೆ ವಿವಕ್ಷಿತವಾದ ಸ್ಮೃತಿಯನ್ನು ಭಾಷ್ಯದಲ್ಲಿ ''ಅರಶ್ಚ'' ಎಂದು ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾ-ಭಿಮತಪ್ರದೌ ದ್ವೌ' ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣತ್ವೇನೋ-ಚ್ಯತೇ ॥೧೫॥**

''ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ'' ಇತ್ಯಾದಿವಚನದಿಂದ ವಿಷ್ಣುವಿಗೇ ಸುಧಾಸಮುದ್ರದ್ವಯಾ-ಶ್ರಯಲೋಕವತ್ತ್ವವು ಲಿಂಗವಾಗಿರುವುದೆಂದು ಹೇಳಲ್ಪಟ್ಟಿದೆ.

ಭಾ.ದೀ. – 'ವೈ'ಶಬ್ದಃ ಪ್ರಸಿದ್ಧೌ । ಚಶಬ್ದೌ ಪರಸ್ಪರಸಮುಚ್ಚಯೇ । 'ತತ್ರೈವ' – ಕ್ಷೀರಾಬ್ಧಿಮಧ್ಯಸ್ಥಿತವಿಷ್ಣುಲೋಕ ಏವ 'ಸರ್ವಾಭಿಮತಪ್ರದೌ' - ಸರ್ವೇಷ್ಟಕರೌ ಸ್ತ ಇತ್ಯರ್ಥಃ । ಏವಕಾರೋಽನ್ಯತ್ರ ಸತ್ತ್ವವ್ಯಾವರ್ತಕಃ । ತೇನ ಅರ-ಣ್ಯಾಶ್ರಯ-ಲೋಕವತ್ತ್ವಲಿಂಗಸ್ಯ ವಿಷ್ಣುನಿಷ್ಠತ್ವೇನಾವ್ಯಭಿಚಾರಃ ಸಿಧ್ಯತಿ । ಅತ ಏವ ಭಾಷ್ಯೇ 'ತಸ್ಯೈವ' ಇತ್ಯೇವಕಾರಃ । 'ಇತ್ಯಾದಿನಾ' ಪುರುಷೋತ್ತಮಧ್ಯಾನಚಕ್ರವಾಕ್ಯೇನ 'ತಸ್ಯೈವ' ವಿಷ್ಣೋರೇವ 'ತತ್' ಸುಧಾರ್ಣವದ್ವಯಾಶ್ರಯಲೋಕವತ್ತ್ವಂ 'ಲಕ್ಷಣತ್ವೇನ' ಲಿಂಗತ್ವೇನ 'ಉಚ್ಯತೇ' ಪ್ರತಿಪಾದ್ಯತ ಇತ್ಯರ್ಥಃ । 'ಹಿ' ಯಸ್ಮಾತ್

ಇತ್ಯರ್ಥೇ । 'ತಸ್ಮಾದೇತಲ್ಲಿಂಗಬಲಾದ್ ವಿಷ್ಣುತ್ವನಿಶ್ಚಯೋ ಯುಕ್ತಃ' ಇತಿ ವಾಕ್ಯಶೇಷಃ।

ಸ್ಮೃತಿಯಲ್ಲಿರುವ ವೈಶಬ್ದವು ಪ್ರಸಿದ್ಧಿಯನ್ನು ಹೇಳುತ್ತದೆ. ಅಲ್ಲಿರುವ ಎರಡು ಚ-ಶಬ್ದಗಳು ಪರಸ್ಪರಸಮುಚ್ಚಯವನ್ನು ಹೇಳುತ್ತವೆ. ''ತತ್ರೈವ'' – ಕ್ಷೀರಸಾಗರದ ಮಧ್ಯದಲ್ಲಿರುವ ವಿಷ್ಣುಲೋಕದಲ್ಲಿಯೇ ''ಸರ್ವಾಭಿಮತಪ್ರದೌ'' – ಅಭೀಷ್ಟವಾದ ಎಲ್ಲವನ್ನೂ ನೀಡುವ ಎರಡು ಸಮುದ್ರಗಳು ಇವೆ ಎಂದು ಅರ್ಥ.

ತತ್ರೈವ ಎಂಬಲ್ಲಿರುವ 'ಏವ'ಕಾರವು ಬೇರೆಡೆಯಲ್ಲಿ ಆ ಸಮುದ್ರಗಳ ಇರುವಿಕೆ-ಯನ್ನು ನಿಷೇಧಿಸುತ್ತದೆ. ಆದರಿಂದ 'ಅರ-ಣ್ಯಾಶ್ರಯಲೋಕವತ್ತ್ವ' ಎಂಬ ಲಿಂಗವು ಬೇರೆಲ್ಲೂ ಇಲ್ಲದೇ ವಿಷ್ಣುವಿನಲ್ಲೇ ಇರುವುದೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ ಭಾಷ್ಯದಲ್ಲಿ ''ತಸ್ಯೈವ'' ಎಂದು ಏವಕಾರವನ್ನು ಹೇಳಲಾಗಿದೆ. ''ಇತ್ಯಾದಿನಾ'' – ಎಂದರೆ 'ಪುರುಷೋತ್ತಮಧ್ಯಾನಚಕ್ರ ಎಂಬ ಗ್ರಂಥದ ವಾಕ್ಯದಿಂದ'. ''ತಸ್ಯೈವ'' – ವಿಷ್ಣುವಿಗೇ, ''ತತ್'' ಸುಧಾಸಮುದ್ರದ್ವಯ-ಆಶ್ರಯಲೋಕವತ್ತ್ವವು ಲಕ್ಷಣತ್ವೇನ ಲಿಂಗವಾಗಿರುವುದೆಂದು ''ಉಚ್ಯತೇ'' – ಪ್ರತಿಪಾದಿಸಲ್ಪಟ್ಟಿದೆ ಎಂದು ಅರ್ಥ. ''ಹಿ'' ಶಬ್ದವು ''ಯಾವ ಕಾರಣದಿಂದ' ಎಂಬ ಅರ್ಥವನ್ನು ಹೇಳುವುದು. 'ತಸ್ಮಾತ್ಏತಲ್ಲಿಂಗ-ಬಲಾತ್ ವಿಷ್ಣುತ್ವನಿಶ್ಚಯಃ ಯುಕ್ತಃ' – 'ಆದುದರಿಂದ ಈ ಲಿಂಗದ ಬಲದಿಂದ ಹೃತ್ಪದ್ಮಸ್ಥನು ವಿಷ್ಣುವೆಂದು ನಿಶ್ಚಯಿಸುವುದು ಯುಕ್ತವಾಗಿದೆ ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಭಾ.ದೀ. – ಯದ್ವಾ, ಬ್ರಹ್ಮಲೋಕಮಿತಿ ಹೃತ್ಪದ್ಮಸ್ಯ ವಿಷ್ಣುಲೋಕತ್ವೋಕ್ತೇಃ ತದಂತರ್ಗತೋ ವಿಷ್ಣುಃ ಇತ್ಯುಕ್ತಮ್, ಬ್ರಹ್ಮಲೋಕಪದಂ ಕುತೋ ವಿಷ್ಣುಲೋಕ-ವಾಚೀ? ಇತ್ಯತ ಆಹ – ಅರಶ್ಚೇತಿ ॥ ಬ್ರಹ್ಮಲೋಕಪದಸ್ಯ ವಿಷ್ಣುಲೋಕೇ 'ಅರಶ್ಚ' ಇತಿ ವಾಕ್ಯೇ ಪ್ರಯೋಗಾತ್ ಅತ್ರ ಹೃತ್ಪದ್ಮೇ ಪ್ರಯುಕ್ತಮ್ 'ಏತಂ ಬ್ರಹ್ಮಲೋಕಮ್' ಇತಿ ಪದಮಪಿ ವಿಷ್ಣುಲೋಕಪರಮೇವ । ನ ಚ 'ಅರಶ್ಚ' ಇತಿ ಶ್ರುತಾವಪಿ ಬ್ರಹ್ಮಲೋಕಪದಂ ಕುತೋ ವಿಷ್ಣುಲೋಕಪರಮ್? ಇತಿ ವಾಚ್ಯಮ್ । ಯತಃ ತತ್ರ

ಅರಣ್ಯಾಶ್ರಯತ್ವಲಿಂಗಂ ಶ್ರುತಮ್ ಇತ್ಯರ್ಥಃ । ಅಥಾಪಿ ಅರಣ್ಯಾಶ್ರಯತ್ವಸ್ಯ ಭಗವಲ್ಲೋಕಲಿಂಗತ್ವಂ ಕುತಃ? ಇತ್ಯತ ಆಹ – ಅರಶ್ಚೇತಿ ॥ ಅಸ್ಮಿನ್ ಪಕ್ಷೇ ಸೌತ್ರಂ ಲಿಂಗಪದಂ ಹೃತ್ಪದ್ಮಸ್ಥಸ್ಯ ಬ್ರಹ್ಮತ್ವರೂಪಪ್ರಧಾನಸಾಧ್ಯೇ ಹೇತುತ್ವಾಭಾವಾತ್ ಸೂತ್ರೇ ಲಿಂಗಶಬ್ದೇನ ಪೃಥಗುಕ್ತಿಃ । ಪೂರ್ವವ್ಯಾಖ್ಯಾನೇಽಪಿ ಗತಿಶಬ್ದಯೋರಿವಾಸ್ಯ ಲಿಂಗಸ್ಯ ವಿಷ್ಣುನಿಷ್ಠತಾಯಾ ಉಪಪಾದನಸಾಪೇಕ್ಷತ್ವೇನ ಸ್ಪಷ್ಟತ್ವಾಭಾವಾತ್ 'ಗತಿಶಬ್ದಲಿಂಗೈಃ' ಇತ್ಯನುಕ್ತ್ವಾ 'ಲಿಂಗಂ ಚ' ಇತಿ ಪೃಥಗುಕ್ತಿರ್ಯುಕ್ತಾ ।

ಅಥವಾ 'ಬ್ರಹ್ಮಲೋಕಮ್' ಎಂಬುದಾಗಿ ಹೃತ್ಪದ್ಮವನ್ನು ವಿಷ್ಣುಲೋಕ ಎಂದು ಹೇಳಿರುವುದರಿಂದ ಅದರ ಅಂತರ್ಗತನಾದವನು ವಿಷ್ಣುವೆಂದು ಹೇಳಿದಂತಾಯಿತು. ಬ್ರಹ್ಮಲೋಕಪದವು ವಿಷ್ಣುಲೋಕವನ್ನು ಹೇಳುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ''ಅರಶ್ಚ'' ಎಂದು ಹೇಳಲಾಗಿದೆ. ಅರಶ್ಚ ಎಂಬ ವಾಕ್ಯದಲ್ಲಿ ಬ್ರಹ್ಮಲೋಕಪದವನ್ನು ವಿಷ್ಣುಲೋಕ ಎಂಬರ್ಥದಲ್ಲಿ ಪ್ರಯೋಗ ಮಾಡಿರುವುದರಿಂದ ಪ್ರಕೃತ ಹೃತ್ಪದ್ಮದಲ್ಲಿ ಪ್ರಯೋಗಿಸಲ್ಪಟ್ಟಿರುವ 'ಏತಂ ಬ್ರಹ್ಮಲೋಕಂ' ಎಂಬ ಪದವು ವಿಷ್ಣುಲೋಕಪರವೇ ಆಗಿದೆ. ಅರಶ್ಚ'' ಎಂಬ ಶ್ರುತಿಯಲ್ಲೂ ಕೂಡ ಬ್ರಹ್ಮಲೋಕಪದವು ವಿಷ್ಣುಲೋಕಪರವೆಂದು ಹೇಗೆ ಹೇಳುವುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಆ ವಾಕ್ಯದಲ್ಲಿ ಅರ-ಣ್ಯಾಶ್ರಯತ್ವ ಎಂಬ ಲಿಂಗವು ಶ್ರುತವಾಗಿದೆ ಎಂದು ಅರ್ಥ. ಆದರೂ ಅರ-ಣ್ಯಾಶ್ರಯತ್ವ ಎಂಬ ಧರ್ಮವು ಭಗವಲ್ಲೋಕದ ಲಿಂಗವೆಂದು ಹೇಳಲು ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ ''ಅರಶ್ಚ'' ಎಂಬ ವಾಕ್ಯವು ಹೊರಟಿದೆ. ಈ ಪಕ್ಷದಲ್ಲಿ ಸೂತ್ರದಲ್ಲಿರುವ ಲಿಂಗಪದವು ಹೃತ್ಪದ್ಮಸ್ಥನು ಬ್ರಹ್ಮನೆಂದು ಸಾಧಿಸುವ ಬ್ರಹ್ಮಲೋಕಪದವೆಂಬ ಹೇತುವಿಗೆ ವಿಷ್ಣುಲೋಕಪರತ್ವವನ್ನು ಸಮರ್ಥಿಸುವ ಅರ-ಣ್ಯಾಶ್ರಯತ್ವವೆಂಬ ಹೇತುವನ್ನು ಹೇಳುವ ತಾತ್ಪರ್ಯವನ್ನು ಹೊಂದಿದೆ. ಆದ್ದರಿಂದಲೇ ಈ ಲಿಂಗವು 'ಹೃತ್ಪದ್ಮನು ಬ್ರಹ್ಮನಾಗಿದ್ದಾನೆ' ಎಂಬ ಪ್ರಧಾನಸಾಧ್ಯವನ್ನು ಕುರಿತು ಹೇತುವಾಗದೇ ಅಂತಹ ಹೇತುವಿನಲ್ಲಿರುವ ವಿಶೇಷವನ್ನು ಸಾಧಿಸುವ ಕಾರಣ ಸೂತ್ರದಲ್ಲಿ ಈ ಲಿಂಗವನ್ನು ಪ್ರತ್ಯೇಕವಾಗಿ ಲಿಂಗಶಬ್ದದಿಂದ ಹೇಳಲಾಗಿದೆ. ಹಿಂದಿನ ವ್ಯಾಖ್ಯಾನದಲ್ಲೂ ಕೂಡ ಗತಿ ಮತ್ತು ಶಬ್ದಗಳು ಹೇಗೆ ಹೃತ್ಪದ್ಮಸ್ಥನನ್ನು ವಿಷ್ಣುವೆಂದು

ಸ್ಪಷ್ಟವಾಗಿ ಸಾಧಿಸುತ್ತವೆಯೋ ಹಾಗೆ ಈ ಲಿಂಗವು ಹೃತ್ಪದ್ಮಸ್ಥನು ವಿಷ್ಣುವೆಂದು ಸಾಧಿಸಲು ಉಪಪಾದನವನ್ನು ಅಪೇಕ್ಷಿಸುವ ಮೂಲಕ ಸ್ಪಷ್ಟತೆ ಇಲ್ಲದಿರುವುದರಿಂದ ''ಗತಿಶಬ್ದ-ಲಿಂಗ್ಯೈಃ'' ಎಂದು ಹೇಳದೇ 'ಲಿಂಗಂ ಚ' ಎಂದು ಪ್ರತ್ಯೇಕವಾಗಿ ಹೇಳಿರುವುದು ಯುಕ್ತವಾಗಿದೆ.

ಭಾ.ದೀ. – ಅನೇನ ನ ಕೇವಲಮುತ್ತರೇಭ್ಯೋ ಗುಣೇಭ್ಯಃ, ಕಿಂತು ಗತಿ-ಶಬ್ದಾಭ್ಯಾಂ ಚ 'ಅಹರಹಃ' ಇತಿ ವಾಕ್ಯೇ ಹೃತ್ಪದ್ಮಸ್ಥನಿಷ್ಠತಯಾ ಶ್ರುತಾಭ್ಯಾಂ ಸುಪ್ತಪ್ರಾಪ್ಯತ್ವ-ಬ್ರಹ್ಮಶಬ್ದಾಭ್ಯಾಂ ಚ 'ದಹರೇ ವಿಷ್ಣುರೇವ' ಇತಿ ಜ್ಞಾಯತೇ । ನ ಕೇವಲಮೇತಾಭ್ಯಾಮೇವ, ಕಿಂತು ಯತಃ 'ಅರಶ್ಚ' ಇತಿ ಶ್ರುತೌ 'ತಥಾ' - ಗತಿಶಬ್ದಯೋರಿವ 'ಹಿ' ವಿಷ್ಣುಲಿಂಗತ್ವೇನ ಸ್ಮೃತಿಸಿದ್ಧಮ್ ಅರ-ಣ್ಯಾಶ್ರಯಲೋಕ-ವತ್ತ್ವರೂಪಂ ಲಿಂಗಂ ಹೃತ್ಪದ್ಮಸ್ಥೇ ವಿಷ್ಣುಲೋಕೇ ಪ್ರಯುಕ್ತಬ್ರಹ್ಮಲೋಕಪದಸ್ಯ ಹೃತ್ಪದ್ಮೇ ಪ್ರಯೋಗಾತ್ 'ದೃಷ್ಟಮ್' - ಶ್ರುತಮ್, ಅತೋಽಪಿ ದಹರೇ ವಿಷ್ಣು-ರೇವ।

ಯದ್ವಾ – ಕುತೋಽತ್ರ ಪ್ರಯುಕ್ತಸ್ಯ ಬ್ರಹ್ಮಲೋಕಪದಸ್ಯ ವಿಷ್ಣುಲೋಕ-ಪರತ್ವಮ್? 'ಅರಶ್ಚ' ಇತಿ ವಾಕ್ಯೇ ವಿಷ್ಣುಲೋಕೇ ಬ್ರಹ್ಮಲೋಕಪದಪ್ರಯೋ-ಗಾತ್ । ಅತ್ರಾಪಿ 'ಏತಂ ಬ್ರಹ್ಮಲೋಕಮ್' ಇತಿ ತಸ್ಯೈವ ಪ್ರಯೋಗಾತ್ । ನ ಚ ತತ್ರಾಪಿ ವಿಷ್ಣುಲೋಕಪರತ್ವಂ ಕುತಃ? ''ಯತಃ ಅರ-ಣ್ಯಾಶ್ರಯತ್ವಂ ಲಿಂಗಂ 'ದೃಷ್ಟಮ್' ಶ್ರುತಮ್ ಅತಃ'' - ಇತಿ ಸೂತ್ರಾರ್ಥ ಉಕ್ತೋ ಭವತಿ।

ಇದರಿಂದ ಮುಂದಿನ ವಾಕ್ಯದಲ್ಲಿ ಹೇಳಿದ ಗುಣಗಳಿಂದ ಮಾತ್ರವಲ್ಲದೇ, 'ಗತಿಶಬ್ದಾಭ್ಯಾಂ ಚ' – 'ಅಹರಹಃ' ಎಂಬ ವಾಕ್ಯದಲ್ಲಿ ಹೃತ್ಪದ್ಮದಲ್ಲಿ ಇರುವುದೆಂದು ಶ್ರುತವಾಗಿರುವ ಸುಪ್ತಪ್ರಾಪ್ಯತ್ವ ಮತ್ತು ಬ್ರಹ್ಮಶಬ್ದಗಳಿಂದಲೂ ಕೂಡ ದಹರಾ-ಕಾಶದಲ್ಲಿರುವವನು ವಿಷ್ಣುವೇ ಎಂದು ತಿಳಿದು ಬರುವುದು. ಕೇವಲ ಸುಪ್ತಪ್ರಾಪ್ತಿತ್ವಾತ್ ಮತ್ತು ಬ್ರಹ್ಮಶಬ್ದ ಇವೆರಡರಿಂದ ಮಾತ್ರವಲ್ಲ; ಕಿಂತು 'ಅರಶ್ಚ' ಎಂಬ ಶ್ರುತಿಯಲ್ಲಿ 'ತಥಾ' - ಗತಿ ಮತ್ತು ಶಬ್ದಗಳಂತೆ 'ಹಿ' ವಿಷ್ಣುವಿನ ಅಸಾಧಾರಣಧರ್ಮವೆಂದು

ಸ್ಮೃತಿಗಳಿಂದ ಸಿದ್ಧವಾಗಿರುವ ಅರ-ಣ್ಯಾಶ್ರಯಲೋಕವತ್ವ ಎಂಬ ಲಿಂಗವು ಹೃತ್ಪದ್ಮದಲ್ಲಿರುವ ವಿಷ್ಣುಲೋಕವನ್ನು ಕುರಿತು ಪ್ರಯುಕ್ತವಾದ ಬ್ರಹ್ಮಲೋಕಪದವನ್ನು ಹೃತ್ಪದ್ಮದಲ್ಲಿ ಪ್ರಯೋಗಿಸಲಾಗಿದೆ. ಹೀಗೆ 'ದೃಷ್ಟಮ್' - ಅಂದರೆ ಶ್ರುತವಾಗಿರುವ ಕಾರಣದಿಂದಲೂ ದಹರದಲ್ಲಿರುವವನು ವಿಷ್ಣುವೇ ಆಗಿರುವನು.

ಅಥವಾ – ಇಲ್ಲಿ ಪ್ರಯೋಗಿಸಲಾಗಿರುವ ಬ್ರಹ್ಮಲೋಕಪದಕ್ಕೆ ವಿಷ್ಣುಲೋಕದಲ್ಲಿ ತಾತ್ಪರ್ಯವಿರುವುದು ಹೇಗೆ? ಎಂದರೆ 'ಅರಶ್ಚ' ಎಂಬ ವಾಕ್ಯದಲ್ಲಿ ವಿಷ್ಣಲೋಕವನ್ನು ಕುರಿತು ಬ್ರಹ್ಮಲೋಕಪದವನ್ನು ಪ್ರಯೋಗಿಸಿರುವುದರಿಂದ ಬ್ರಹ್ಮಲೋಕಶಬ್ದಕ್ಕೆ ವಿಷ್ಣುಲೋಕವನ್ನು ಹೇಳುವ ತಾತ್ಪರ್ಯವಿದೆಯೆಂದು ಸಿದ್ಧವಾಗುವುದು. ಪ್ರಕೃತ 'ಏತಂ ಬ್ರಹ್ಮಲೋಕಮ್' ಎಂಬ ವಾಕ್ಯದಲ್ಲೂ ಬ್ರಹ್ಮಲೋಕಪದವನ್ನೇ ಪ್ರಯೋಗಿಸಿರು-ವುದರಿಂದ ವಿಷ್ಣುಲೋಕವೇ ಇಲ್ಲಿ ವಿವಕ್ಷಿತವಾಗಿರುವುದೆಂದು ಸಿದ್ಧವಾಗುತ್ತದೆ. 'ಅರಶ್ಚ' ಎಂಬ ವಾಕ್ಯದಲ್ಲೂ ಬ್ರಹ್ಮಲೋಕಶಬ್ದಕ್ಕೆ ವಿಷ್ಣುಲೋಕವನ್ನು ಹೇಳುವ ತಾತ್ಪರ್ಯವಿ-ರುವುದು ಹೇಗೆ ಎಂದರೆ ಆ ವಾಕ್ಯದಲ್ಲಿ ಅರ-ಣ್ಯಾಶ್ರಯತ್ವ ಎಂಬ ಲಿಂಗವು 'ದೃಷ್ಟಮ್' – ಶ್ರುತವಾಗಿದೆ. ಆದ್ದರಿಂದ ಅರಶ್ಚ ಎಂಬ ವಾಕ್ಯದಲ್ಲಿ ಬ್ರಹ್ಮಲೋಕಶಬ್ದಕ್ಕೆ ವಿಷ್ಣುಲೋಕ-ಪರತ್ವವಿದೆ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಹೇತ್ವಂತರೇಣ ವಿಷ್ಣೋರ್ಹೃತ್ಪದ್ಮಸ್ಥತ್ವಂ ಪ್ರತಿಪಾದಯತ್ಸೂತ್ರಮ್ ಉಪನ್ಯಸ್ಯ ವ್ಯಾಚಷ್ಟೇ – ಧೃತೇರಿತಿ ॥

ಇನ್ನೊಂದು ಹೇತುವಿನಿಂದ ವಿಷ್ಣುವಿಗೆ ಹೃತ್ಪದ್ಮಸ್ಥತ್ವವು ಇರುವುದೆಂದು ಪ್ರತಿಪಾದಿ-ಸುವ ಸೂತ್ರವನ್ನು ಭಾಷ್ಯಕಾರರು ಉಪನ್ಯಾಸ ಮಾಡಿ "ಧೃತೇಃ" ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ ॥೧೬**

**'ಏಷ ಸೇತುರ್ವಿಧೃತಿಃ' ಇತಿ ಧೃತೇಃ ।**

"ಏಷ ಸೇತುರ್ವಿಧೃತಿಃ" ಎಂಬ ವಾಕ್ಯದಲ್ಲಿ ಹೃತ್ಪದ್ಮಸ್ಥನಿಗೆ ಸರ್ವಾ-

ಧಾರತ್ವವೆಂಬ ಧೃತಿಯು ಶ್ರುತವಾಗಿರುವುದರಿಂದ, ದಹರಾಕಾಶ-ದಲ್ಲಿರುವವನು ವಿಷ್ಣುವೇ ಆಗಿದ್ದಾನೆ.

ಭಾ.ದೀ. – 'ಇತಿ ಧೃತೇಃ' ಇತ್ಯಸ್ಯ 'ಅಸ್ಮಿನ್ನಸ್ಯ' ಇತಿ ಪದಾನುವರ್ತನೇನ ಇತ್ಯಸ್ಮಿನ್ ವಾಕ್ಯೇ 'ಅಸ್ಯ ಹೃತ್ಪದ್ಮಸ್ಥಸ್ಯ ಧೃತಿಪದೋಕ್ತಸರ್ವಾಧಾರತ್ವಶ್ರುತೇಃ' ಇತ್ಯರ್ಥಃ। ಅಸ್ಯ 'ದಹರೇ ವಿಷ್ಣುರೇವ' ಇತಿ ಪ್ರತಿಜ್ಞಾವಾಕ್ಯೇನ ಅನ್ವಯಃ। ಶ್ರುತೌ ವಿಧೃತಿಃ ಸೇತುರಿತ್ಯನ್ವಯಃ। ತತ್ರ ವಿಧೃತಿರಿತ್ಯೇತತ್ ಸೇತುತ್ವೇ ಹೇತುಃ। ತಥಾ ಚ – ಯ ಆತ್ಮಾ ಹೃತ್ಪದ್ಮಸ್ಥತ್ವೇನೋಕ್ತಃ ಸ ಏಷ 'ಏಷಾಂ' ಭೂರಾದಿಲೋಕಾನಾಮ್ 'ಅಸಂಭೇದಾಯ' ಅಸಾಂಕರ್ಯಾಯ ಅವಿದಾರಣಾಯೇತಿ, ವ್ಯಾಸತೀರ್ಥ-ಯೋಕ್ತರೀತ್ಯಾ 'ವರ್ಣಾಶ್ರಮಸಾಂಕರ್ಯಾಭಾವಾಯ' ಇತಿ ವಾ, 'ವಿಧೃತಿಃ' ಧಾರಣಪೋಷಣಸಮರ್ಥೋಽತ ಏವ ಸೇತುರಿವ 'ಸೇತುಃ' -ಆಶ್ರಯ ಇತ್ಯರ್ಥಃ। ಧಾರಕತ್ವಂ ಚ ನ ಧಾರ್ಯಾದ್ ಬಹಿಷ್ಠತಯಾ, ಕಿಂತು ಅಂತಃಕೃತಜಗತ್ತ್ವೇನ, 'ಶ್ರಿತಮಸ್ಮಿನ್ ಜಗತ್ ಸರ್ವಮಿತಿ ಸೇತುರಿತೀರಿತಃ' ಇತ್ಯುಕ್ತೇಃ (ಛಾಂ.ಉ.ಭಾ.) ಇತ್ಯುಕ್ತೇಃ ಮುಖ್ಯಾರ್ಥ ಏವ ವಾ ಸೇತುಶಬ್ದಃ।

ಯದ್ಯಪಿ 'ಸ ಸೇತುರ್ವಿಧೃತಿಃ' ಇತಿ ಛಂದೋಗಶ್ರುತಿಪಾಠಃ । ತಥಾಽಪಿ ಶಾಖಾಂತರಾಣಾಮಪಿ ಅತ್ರೋಪಸಂಗ್ರಹಾಯೈವ ಇಯಮುಕ್ತಿಃ । 'ಏವಮನ್ಯ-ತ್ರಾಪಿ' ಇತಿ ಸಂಪ್ರದಾಯವಿದಃ।

ಭಾಷ್ಯದಲ್ಲಿರುವ ''ಇತಿ ಧೃತೇಃ'' ಎಂಬ ಪದಗಳಿಗೆ ''ಅಸ್ಮಿನ್ನಸ್ಯ'' ಎಂಬ ಪದ-ಗಳೊಂದಿಗೆ ಅನ್ವಯ ಮಾಡುವುದರಿಂದ 'ಅಸ್ಮಿನ್' ಈ ವಾಕ್ಯದಲ್ಲಿ 'ಅಸ್ಯ' ಹೃತ್ಪದ್ಮಸ್ಥನಿಗೆ 'ಧೃತೇಃ' ಧೃತಿಪದವು ಹೇಳುವ ಸರ್ವಾಧಾರತ್ವವು ಶ್ರುತವಾಗಿರುವುದರಿಂದ - ಎಂದು ಅರ್ಥ. ಈ ವಾಕ್ಯಕ್ಕೆ 'ದಹರೇ ವಿಷ್ಣುರೇವ' ದಹರಾಕಾಶದಲ್ಲಿರುವುದು ವಿಷ್ಣುವೇ ಎಂಬ ಪ್ರತಿಜ್ಞಾವಾಕ್ಯದೊಂದಿಗೆ ಅನ್ವಯವಾಗುವುದು. 'ಏಷ ಸೇತುಃ' ಎಂಬ ಶ್ರುತಿಯಲ್ಲಿ 'ವಿಧೃತಿಃ ಸೇತುಃ' ಎಂದು ಪದಗಳಿಗೆ ಅನ್ವಯ. ಇಲ್ಲಿ 'ವಿಧೃತಿಃ' ಎಂಬ ಪದವು ಹೇಳುವ ಸರ್ವಾಧಾರತ್ವವು ಸೇತುತ್ವವನ್ನು ಕುರಿತು ಹೇತುವಾಗಿದೆ. ತಥಾ ಚ – ಯಾವ ಆತ್ಮನು

ಹೃತ್ಪದ್ಮಸ್ಥನೆಂದು ಹೇಳಲ್ಪಟ್ಟಿರುವನೋ, ಅವನೇ 'ಏಷಾಮ್' ಈ ಭೂ ಮೊದಲಾದ ಲೋಕಗಳ 'ಅಸಂಭೇದಾಯ' - ಅಂದರೆ ಅಸಾಂಕರ್ಯಾಯ - ಅವಿದಾರಣಾಯ - ಅಂದರೆ ನಾಶವಾಗದೇ ಇರಲು ಅಥವಾ ವ್ಯಾಸತೀರ್ಥೀಯ ವ್ಯಾಖ್ಯಾನದಲ್ಲಿ ಹೇಳಿರು-ವಂತೆ ವರ್ಣಾಶ್ರಮಗಳ ಸಾಂಕರ್ಯವಿಲ್ಲದೇ ಇರುವುದಕ್ಕೋಸ್ಕರ 'ವಿಧೃತಿಃ' - ಧಾರಣ ಮತ್ತು ಪೋಷಣಗಳನ್ನು ಮಾಡುವ ಸಾಮರ್ಥ್ಯವುಳ್ಳವನು. ಆದ್ದರಿಂದಲೇ 'ಸೇತುಃ' -ಸೇತುವೆಯಂತೆ ಆಶ್ರಯನು ಎಂದರ್ಥ.

ವಿಷ್ಣುವಿಗೆ ಇರುವ ಧಾರಕತ್ವವೂ ಕೂಡ ಧಾರ್ಯವಾದ ಜಗತ್ತಿನ ಹೊರಗೆ ಇದ್ದು ಧರಿಸುವುದಲ್ಲ; ಕಿಂತು, ಜಗತ್ತನ್ನೇ ತನ್ನೊಳಗೆ ಇಟ್ಟುಕೊಂಡಿರುವುದರಿಂದ, ಏಕೆಂದರೆ 'ಶ್ರಿತಮಸ್ಮಿನ್ ಜಗತ್ಸರ್ವಮ್ ಇತಿ ಸೇತುರಿತೀರಿತಃ' ಅಂದರೆ ಇವನಲ್ಲಿ ಸರ್ವಜಗತ್ತೂ ಆಶ್ರಿತವಾಗಿರುವುದರಿಂದ ಇವನು ಸೇತುವೆಂದು ಹೇಳಲ್ಪಟ್ಟಿದ್ದಾನೆ. ಅಥವಾ ಇಲ್ಲಿ ಸೇತುಶಬ್ದವು ಮುಖ್ಯಾರ್ಥವನ್ನೇ ಹೇಳುವುದು.

ಯದ್ಯಪಿ ಛಂದೋಗಶ್ರುತಿಯಲ್ಲಿ 'ಸ ಸೇತುರ್ವಿಧೃತಿಃ' ಪಾಠವಿದೆ. ಆದರೂ ಇತರ ಶಾಖೆಗಳನ್ನೂ ಇಲ್ಲಿ ಸಂಗ್ರಹ ಮಾಡುವ ಅಭಿಪ್ರಾಯದಿಂದ ಹೀಗೆ ಹೇಳಲಾಗಿದೆ. ಇದೇ ರೀತಿಯಾಗಿ ಇತರ ಸ್ಥಳಗಳಲ್ಲೂ ತಿಳಿಯತಕ್ಕದ್ದೆಂದು ಸಂಪ್ರದಾಯವಿದರು ಹೇಳುವರು.

ಭಾ.ದೀ. – ಏವಂ ಸೇತುಸಮುಚ್ಚಾಯಕಸೌತ್ರಚಶಬ್ದಸ್ಯ ಯಥಾಶ್ರುತಾ-ನ್ವಯೇನ ಲಿಂಗೋಕ್ತಿಪರತಯಾ 'ಧೃತೇಶ್ಚ' ಇತ್ಯಂಶಂ ವ್ಯಾಖ್ಯಾಯ, ಇದಾನೀಂ ಸಮಗ್ರಂ ಸೂತ್ರಂ ಸಮಾನೋಕ್ತಿರೂಪಸಮಾಖ್ಯಾಪರತಯಾ ವ್ಯಾಚಷ್ಟೇ – ಏಷ ಇತಿ ||

ಹೀಗೆ ಸೇತುವಿನ ಸಮುಚ್ಚಯವನ್ನು ಹೇಳುವ ಸೂತ್ರದಲ್ಲಿರುವ ಚಶಬ್ದಕ್ಕೆ ಯಥಾಶ್ರುತವಾಗಿ ಅನ್ವಯವನ್ನು ಮಾಡಿ ಧಾರಕತ್ವವೆಂಬ ಲಿಂಗವನ್ನು ಹೇಳುವ ಅಭಿಪ್ರಾಯವುಳ್ಳದ್ದೆಂದು ''ಧೃತೇಶ್ಚ'' ಎಂಬ ಸೂತ್ರಾಂಶವನ್ನು ವ್ಯಾಖ್ಯಾನ ಮಾಡಿ ಈಗ ಸಮಗ್ರಸೂತ್ರವನ್ನು ಸಮಾಖ್ಯಾ ಅಂದರೆ ಸಮಾನವಿಷಯಕವಾದ ವಾಕ್ಯವನ್ನು ಸೂಚಿಸುವ ತಾತ್ಪರ್ಯವುಳ್ಳದ್ದಾಗಿ ''ಏಷಃ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡು-ತ್ತಿದ್ದಾರೆ.

**ಭಾಷ್ಯಮ್ – 'ಏಷ ಭೂತಾಧಿಪತಿರೇಷ ಭೂತಪಾಲಃ' ಇತ್ಯಾದ್ಯಸ್ಯ ಮಹಿಮ್ನೋऽಸ್ಮಿನ್ನುಪಲಬ್ಧೇಃ ।**

'ಏಷ ಭೂತಾಧಿಪತಿಃ, ಏಷ ಭೂತಪಾಲಃ' – ಎಂಬುದಾಗಿ ಭಗವಂತನಿಗೆ ಸರ್ವಾಧಾರತ್ವಮಹಿಮೆಯನ್ನು ಹೇಳುವ ಸಮಾಖ್ಯಾ -ವಾಕ್ಯವಿರುವುದರಿಂದಲೂ ದಹರಾಕಾಶದಲ್ಲಿರುವವನು ವಿಷ್ಣುವೇ ಆಗಿರುವನು.

ಭಾ.ದೀ.– 'ಧೃತೇಃ' ಇತಿ ಪದಮತ್ರಾನುಷಜ್ಯತೇ । ಅಸ್ಮಿನ್ ಪಕ್ಷೇ ಸೌತ್ರಚಶಬ್ದ 'ಉಪಲಬ್ಧೇಶ್ಚ' ಇತ್ಯನ್ವೇತಿ । ತಥಾ ಚ – ನ ಕೇವಲಂ ಧೃತೇರ್ಲಿಂಗಾತ್, ಕಿಂತು ಧೃತೇಃ - ಧೃತಿಯುಕ್ತಾಯಾಃ ತದ್ಬೋಧಿಕಾಯಾ ಉಪಲಬ್ಧೇಃ ವಾಜಸನೇಯಕೇ – 'ಯ ಏಷೋऽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ' (ಬೃ.೬.೪.೨೧) ಇತ್ಯಾದ್ಯುಕ್ತ್ವಾ ಆಮ್ನಾತಾಯಾಃ 'ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧಾರಣ ಏಷಾಂ ಲೋಕಾನಾಮ್ ಅಸಂಭೇದಾಯ' ಇತ್ಯುಕ್ತೇಃ ಸಮಾನೋಕ್ತೇಶ್ಚ ದಹರೇ ವಿಷ್ಣುರೇವ – ಇತಿ ಯೋಜನಾ ।

ಸಮಾಖ್ಯಾಯಾಃ ಕುತೋ ವಿಷ್ಣುಪರತ್ವಮ್? ಇತ್ಯತ ಆಹ – ಏಷ ಇತಿ ॥ 'ಇತ್ಯಾದಿ' ಇತಿ ಲುಪ್ತತೃತೀಯವಿಭಕ್ತಿಕೋ ನಿರ್ದೇಶಃ । ಆದಿಶಬ್ದೇನ 'ಏಷ ಸರ್ವಸ್ಯ ವಶೀ ಏಷ ಸರ್ವಸ್ಯಾಧಿಪತಿರೇಷ ಸರ್ವೇಶ್ವರಃ' (ಬೃ.೬.೪.೨೧) ಇತಿ ಪೂರ್ವ-ವಾಕ್ಯಮ್ 'ಏಷ ಸೇತುರ್ವಿಧಾರಣ ಏಷಾಂ ಲೋಕಾನಾಮಸಂಭೇದಾಯ' ಇತ್ಯುತ್ತರವಾಕ್ಯಂ ಚ ಗೃಹ್ಯತೇ । ಅತ ಏವ ಮಧ್ಯಸ್ಥವಾಕ್ಯಗ್ರಹಣಂ ಕೃತಮ್ । 'ಅಸ್ಯ ಮಹಿಮ್ನಃ' ಇತಿ ವ್ಯಧಿಕರಣಷಷ್ಠ್ಯೌ । 'ಉಪಲಬ್ಧೇಃ' ಇತಿ ಆವೃತ್ತಮತ್ರ ಅನ್ವೇತಿ । ತಥಾ ಚ – 'ಅಸ್ಮಿನ್' ವಾಜಸನೇಯಕೇ 'ಏಷ ಭೂತಾಧಿಪತಿಃ' ಇತ್ಯಾದಿನಾ ವಾಕ್ಯೇನ 'ಅಸ್ಯ' ವಿಷ್ಣೋರ್ಭೂತಾಧಿಪತಿತ್ವಾದಿಮಹಿಮ್ನಃ 'ಅಸ್ಮಿನ್' ದಹರಾಕಾಶಗತೇ ವಸ್ತುನಿ 'ಉಪಲಬ್ಧೇಃ' ಉಕ್ತತ್ವಾದಿತಿ ಯೋಜನಾ ।

'ಧೃತೇಃ' ಎಂಬ ಪದವು ಇಲ್ಲಿ ಅನುವೃತ್ತಿಯನ್ನು ಪಡೆಯುವುದು. ಈ ಪಕ್ಷದಲ್ಲಿ ಧೃತೇಶ್ಚ ಎಂದು ಸೂತ್ರದಲ್ಲಿರುವ ಚಶಬ್ದವು 'ಉಪಲಬ್ಧೇಶ್ಚ' ಎಂದು ಅನ್ವಯವನ್ನು ಪಡೆಯುವುದು. ತಥಾ ಚ – ಧೃತಿ ಎಂಬ ಲಿಂಗದಿಂದ ಮಾತ್ರವಲ್ಲ ಕಿಂತು 'ಧೃತೇಃ' ಧೃತಿಯಿಂದ ಕೂಡಿರುವ ಅಂದರೆ ಧೃತಿಯನ್ನು ಬೋಧಿಸುವ ಸಮಾನವಿಷಯವನ್ನು ಹೇಳುವ 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ' ಇತ್ಯಾದಿ ವಾಕ್ಯವನ್ನು ಹೇಳಿದ ನಂತರ ಹೇಳಲ್ಪಟ್ಟಿರುವ 'ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಏಷ ಭೂತಪಾಲಃ ಏಷ ಸೇತುರ್ವಿಧಾರಣ ಏಷಾಂ ಲೋಕಾನಾಮಸಂಭೇದಾಯ' ಎಂಬ ವಾಕ್ಯವು ಬೃಹದಾರಣ್ಯಕದಲ್ಲಿ ಉಪಲಬ್ಧೇಃ - ದೃಷ್ಟವಾಗಿರುವುದರಿಂದಲೂ ದಹರಾಕಾಶದಲ್ಲಿರುವವನು ವಿಷ್ಣುವೇ ಎಂದು ಯೋಜನೆ.

ಈ ಸಮಾಖ್ಯಾಶ್ರುತಿಗೆ ವಿಷ್ಣುವಿನಲ್ಲಿ ತಾತ್ಪರ್ಯವಿರುವುದೆಂದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ''ಏಷ'' ಎಂಬ ವಾಕ್ಯವು ಹೊರಟಿದೆ. 'ಇತ್ಯಾದ್ಯಸ್ಯ' ಎಂಬ ಭಾಷ್ಯದ ಪದದಲ್ಲಿ 'ಇತ್ಯಾದಿ' ಎಂಬ ಪದವು ತೃತೀಯಾವಿಭಕ್ತಿ ಲೋಪವನ್ನು ಹೊಂದಿ-ರುವ ಪದವಾಗಿದೆ. ಇಲ್ಲಿರುವ ಆದಿಶಬ್ದದಿಂದ 'ಏಷ ಸರ್ವಸ್ಯ ವಶೀ ಏಷ ಸರ್ವಸ್ಯಾಧಿ -ಪತಿರೇಷ ಸರ್ವೇಶ್ವರಃ' ಎಂಬ ಹಿಂದಿನ ವಾಕ್ಯ ಹಾಗೂ 'ಏಷ ಸೇತುರ್ವಿಧಾರಣ ಏಷಾಂ ಲೋಕಾನಾಮಸಂಭೇದಾಯ' ಎಂಬ ಮುಂದಿನ ವಾಕ್ಯವು ಗ್ರಹಿಸಲ್ಪಡುವುದು. ಈ ಕಾರಣದಿಂದಲೇ ಇವೆರಡರ ಮಧ್ಯದಲ್ಲಿರುವ ವಾಕ್ಯವನ್ನು ಭಾಷ್ಯದಲ್ಲಿ ಗ್ರಹಿಸ-ಲಾಗಿದೆ. 'ಅಸ್ಯ ಮಹಿಮ್ನಃ' ಎಂಬ ಪದಗಳಲ್ಲಿರುವ ಷಷ್ಠೀವಿಭಕ್ತಿಗಳು ವ್ಯಧಿ-ಕರಣಗಳಾಗಿವೆ ಅಂದರೆ ಭಿನ್ನಪದಾರ್ಥಗಳನ್ನು ಹೇಳುವ ಪದಗಳಿಗೆ ಸಂಬಂಧಿಸಿವೆ. 'ಉಪಲಬ್ಧೇಃ' ಎಂಬ ಪದವು ಆವೃತ್ತಿಯನ್ನು ಪಡೆದು ಇಲ್ಲಿ ಅನ್ವಯವನ್ನು ಹೊಂದು-ವುದು. ತಥಾ ಚ – 'ಅಸ್ಮಿನ್' ಈ ಬೃಹದಾರಣ್ಯಕದಲ್ಲಿ 'ಏಷ ಭೂತಾಧಿಪತಿಃ' ಇತ್ಯಾದಿ ವಾಕ್ಯದಿಂದ 'ಅಸ್ಯ' ವಿಷ್ಣುವಿನ 'ಮಹಿಮ್ನಃ' ಭೂತಾಧಿಪತಿತ್ವ ಮೊದಲಾದ ಮಹಿಮೆಯು 'ಅಸ್ಮಿನ್' ದಹರಾಕಾಶದಲ್ಲಿರುವ ವಸ್ತುವಿನಲ್ಲಿ 'ಉಪಲಬ್ಧೇಃ' ಉಕ್ತ-ವಾಗಿರುವುದರಿಂದ ಎಂದು ಯೋಜನೆ.

ಭಾ.ದೀ. – ಯ ಏಷ ಸರ್ವಸ್ಯಾಧಿಪತಿಃ, ಯಶ್ಚ ಏಷ ಸರ್ವೇಶ್ವರೋ, ಯಶ್ಚೈಷ ಪ್ರಸಿದ್ಧೋ 'ಭೂತಾಧಿಪತಿಃ' ಭೂತ ಏವಾಧಿಪತಿಃ ನಾಸ್ಯಾಧಿಪತ್ಯಮಾದಿಮತ್,

ಯಶ್ಚ ಏಷ ಭೂತ ಏವ ಪಾಲಕೋ, ಯಶ್ಚ ಏಷಾಂ ಭೂತಾದಿಲೋಕಾನಾಮ್ 'ಅಸಂಭೇದಾಯ' ಅಮೇಲನಾಯ ಏಷಾಂ 'ವಿಧಾರಣಃ' ವಿಧಾರಣಸಮರ್ಥಃ, ನ ಕೇವಲಂ ಸಾಮರ್ಥ್ಯಮಾತ್ರಂ ಕಿಂತು ಯ ಏಷಾಂ ಲೋಕಾನಾಂ 'ಸೇತುಃ' ಆಶ್ರಯಶ್ಚ, ತಮೇತಂ ಭಗವಂತಂ ಬ್ರಾಹ್ಮಣಾ ವಿವಿದಿಷಂತಿ – ಇತಿ ಶ್ರುತ್ಯರ್ಥಃ।

ಯಾರು 'ಏಷ ಸರ್ವಸ್ಯ ಅಧಿಪತಿಃ' - ಸರ್ವಕ್ಕೂ ಅಧಿಪತಿಯೂ ಮತ್ತು 'ಏಷ ಸರ್ವೇಶ್ವರಃ' - ಸರ್ವೇಶ್ವರನೆಂದು ಸಿದ್ಧನಾಗಿರುವನೋ, ಅವನೇ 'ಭೂತಾಧಿಪತಿಃ' – ಭೂತ ಏವ ಅಧಿಪತಿಃ - ಇವನು ಅನಾದಿಕಾಲದಿಂದಲೂ ಅಧಿಪತಿಯಾಗಿರುವನು, ಅಂದರೆ ಇವನ ಆಧಿಪತ್ಯವು ಆದಿಯುಳ್ಳದ್ದಲ್ಲ. ಹಾಗೆಯೇ 'ಭೂತಪಾಲಃ' ಅನಾದಿ-ಕಾಲದಿಂದಲೂ ಪಾಲಕನೇ ಆಗಿರುವನು ಮತ್ತು ಯಾರು 'ಏಷಾಂ' - ಭೂ ಮೊದ-ಲಾದ ಲೋಕಗಳಿಗೆ 'ಅಸಂಭೇದಾಯ' - ಪರಸ್ಪರ ಮೇಲನವಾಗದಂತೆ, 'ವಿಧಾರಣಃ' ಅವುಗಳ ಧಾರಣವನ್ನು ಮಾಡಲು ಸಮರ್ಥನೋ, ಕೇವಲ ಸಾಮರ್ಥ್ಯಮಾತ್ರವಲ್ಲ ಕಿಂತು ಯಾರು ಈ ಎಲ್ಲ ಲೋಕಗಳಿಗೆ 'ಸೇತುಃ' - ಆಶ್ರಯನೂ ಆಗಿರುವನೋ ಅಂತಹ ಈ ಭಗವಂತನನ್ನು 'ಬ್ರಾಹ್ಮಣಾಃ ವಿವಿದಿಷಂತಿ' - ಬ್ರಾಹ್ಮಣರು ತಿಳಿಯಲು ಬಯಸುವರು ಎಂದು ಶ್ರುತ್ಯರ್ಥವು.

ಭಾ.ದೀ. – ಅನೇನ – ನ ಕೇವಲಂ ಪೂರ್ವೋಕ್ತಹೇತುಭ್ಯಃ ಕಿಂತು ಧೃತೇಶ್ಚಾಸ್ಮಿನ್ ಪ್ರಕರಣೇ 'ಸ ಸೇತುರ್ವಿಧೃತಿಃ' ಇತಿ ಸರ್ವಾಧಾರತ್ವಲಿಂಗ-ಶ್ರವಣಾದಪಿ ದಹರಪದ್ಮಸ್ಥೋ ವಿಷ್ಣುರೇವ। ನ ಚಾಸ್ಯ ಹೃತ್ಪದ್ಮಸ್ಥತ್ವಂ ಕುತಃ? ಇತಿ ವಾಚ್ಯಮ್ । 'ಅಸ್ಯ' ಹೃತ್ಪದ್ಮಸ್ಥಸ್ಯ 'ಮಹಿಮ್ನಃ' ಅಪಹತಪಾಪ್ಮತ್ವಾದೇರ್ಲಕ್ಷಣಸ್ಯ 'ಅಸ್ಮಿನ್' ಸರ್ವಾಧಾರೇ 'ಸರ್ವೇ ಪಾಪ್ಮನೋಽತೋ ನಿವರ್ತಂತೇ' (ಛಾಂ.-೮.೪.೧) ಇತ್ಯನೇನ 'ಉಪಲಬ್ಧೇಃ' - ಉಕ್ತತ್ವಾತ್ । ನ ಕೇವಲಂ ಧೃತಿಲಿಂಗಾತ್, ಕಿಂತು ಧೃತೇರ್ಧೃತಿಯುಕ್ತಾಯಾ ಉಪಲಬ್ಧೇರುಕ್ತೇಃ। 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ... ಏಷ ಸೇತುರ್ವಿಧಾರಣಃ' ಇತಿ ವಾಜಸನೇಯಸಮಾ-ಖ್ಯಾಯಾಶ್ಚ ದಹರೇ ವಿಷ್ಣುರೇವ । ಸಮಾಖ್ಯಾಯಾ ಅಪಿ ಕುತೋ ವಿಷ್ಣು-

ವಿಷಯತ್ವಮ್? 'ಅಸ್ಮಿನ್' ವಾಜಸನೇಯಕೇ 'ಅಸ್ಯ' ವಿಷ್ಣೋಃ 'ಮಹಿಮ್ನೋ' ಭೂತಾಧಿಪತಿತ್ವಾದೇರುಕ್ತತ್ವಾತ್ - ಇತಿ ಸೂತ್ರಾರ್ಥ ಉಕ್ತೋ ಭವತಿ ।

ಯದ್ಯಪಿ 'ಅಸ್ಯ ಮಹಿಮ್ನಃ' ಇತ್ಯಾದ್ಯಂಶೋ ಭಾಷ್ಯೇ 'ಧೃತೇಶ್ಚ' ಇತ್ಯಸ್ಯ ಲಿಂಗಪರತಯಾ ಯೋಜನಾಯಾಂ ನಾನ್ವಿತಃ । ತಥಾಽಪಿ ಟೀಕಾಯಾಂ - 'ಸರ್ವೇ ಪಾಪ್ಮನೋಽತಃ' ಇತಿ ತಲ್ಲಕ್ಷಣೋಕ್ತೇಶ್ಚ - ಇತ್ಯುಕ್ತತ್ವಾತ್ ಲಿಂಗಸ್ಯ ಹೃತ್ಪದ್ಮಸ್ಥತ್ವ-ರೂಪಧರ್ಮೋಪಪಾದಕತಯಾಽಪಿ ಯೋಜನೀಯಃ ।

ಇದರಿಂದ – ಹಿಂದೆ ಹೇಳಿದ ಹೇತುಗಳಿಂದ ಮಾತ್ರವಲ್ಲ, ಕಿಂತು 'ಧೃತೇಶ್ಚ' - ಈ ಪ್ರಕರಣದಲ್ಲಿ 'ಸ ಸೇತುರ್ವಿಧೃತಿಃ' ಎಂದು ಸರ್ವಾಧಾರತ್ವವೆಂಬ ಲಿಂಗವು ಶ್ರುತವಾಗಿ-ರುವುದರಿಂದಲೂ ದಹರಪದ್ಮಸ್ಥನು ವಿಷ್ಣುವೇ ಆಗಿರುವನು.

ವಿಷ್ಣುವಿಗೆ ಹೃತ್ಪದ್ಮಸ್ಥತ್ವವು ಇರುವುದೆಂದು ಹೇಳುವುದು ಹೇಗೆ? ಎಂದು ಶಂಕಿಸ-ತಕ್ಕದ್ದಲ್ಲ. ಏಕೆಂದರೆ, 'ಅಸ್ಯ' – ಈ ಹೃತ್ಪದ್ಮಸ್ಥನಿಗೆ ಸಂಬಂಧಿಸಿದ 'ಮಹಿಮ್ನಃ' - ಅಪಹತಪಾಪ್ಮತ್ವಮೊದಲಾದ ಲಕ್ಷಣವು 'ಅಸ್ಮಿನ್' ಈ ಸರ್ವಾಧಾರನಲ್ಲಿ ಇರುವು-ದೆಂದು 'ಸರ್ವೇ ಪಾಪ್ಮನೋಽತೋ ನಿವರ್ತಂತೇ' ಎಂಬ ವಾಕ್ಯದಿಂದ 'ಉಪಲಬ್ಧೇಃ' - ಉಕ್ತವಾಗಿದೆ. ಕೇವಲ ಸರ್ವಾಧಾರತ್ವವೆಂಬ ಲಿಂಗದಿಂದ ಮಾತ್ರವಲ್ಲ ಕಿಂತು ಧೃತೇಃ - ಧೃತಿಯನ್ನು ಹೇಳುವ 'ಉಪಲಬ್ಧೇಃ' ಅಂದರೆ 'ಯ ಏಷೋಽಂತರ್ಹೃದಯ ....' ಎಂದು ಬೃಹದಾರಣ್ಯಕವಾಕ್ಯದ ಸಮಾಖ್ಯಾ ಇರುವುದರಿಂದಲೂ ದಹರಾಕಾಶ-ದಲ್ಲಿರುವವನು ವಿಷ್ಣುವೇ. ಸಮಾಖ್ಯಾಶ್ರುತಿಯಲ್ಲೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂದು ಹೇಳಲು ಹೇಗೆ ಸಾಧ್ಯ? ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ 'ಅಸ್ಮಿನ್' ಈ ಬೃಹದಾರಣ್ಯಕವಾಕ್ಯದಲ್ಲಿ 'ಅಸ್ಯ' ವಿಷ್ಣುವಿಗೆ 'ಮಹಿಮ್ನಃ' ಭೂತಾಧಿಪತಿತ್ವವೇ ಮೊದಲಾದ ಮಹಿಮೆಗಳು ಉಕ್ತವಾಗಿರುವುದರಿಂದ ಎಂಬುದಾಗಿ ಸೂತ್ರಾರ್ಥವನ್ನು ಹೇಳಿದಂತಾಗುವುದು.

ಯದ್ಯಪಿ - 'ಅಸ್ಯ ಮಹಿಮ್ನಃ' ಎಂಬ ಅಂಶವು ಭಾಷ್ಯದಲ್ಲಿ 'ಧೃತೇಶ್ಚ' ಎಂಬ ಅಂಶವನ್ನು ಲಿಂಗಪರವಾಗಿ ಯೋಜನೆ ಮಾಡಿದಾಗ ಅನ್ವಿತವಾಗಿಲ್ಲ. ಆದರೂ

ತತ್ವಪ್ರಕಾಶಿಕೆಯಲ್ಲಿ 'ಸರ್ವೇ ಪಾಪ್ಮನೋಽತಃ' ಎಂಬುದಾಗಿ ಬ್ರಹ್ಮನ ಲಕ್ಷಣವನ್ನು ಹೇಳಿರುವುದರಿಂದಲೂ ಎಂಬುದಾಗಿ ವ್ಯಾಖ್ಯಾನ ಮಾಡಿರುವುದರಿಂದ ಲಿಂಗವು ಹೃತ್ಪದ್ಮಸ್ಥತ್ವವೆಂಬ ಪಕ್ಷದ ಧರ್ಮವಾಗಿದೆ ಎಂಬುದನ್ನು ಸಮರ್ಥನೆ ಮಾಡುವ ತಾತ್ಪರ್ಯವನ್ನು ಹೊಂದಿರುವುದೆಂದು ಯೋಜನೆ ಮಾಡಬೇಕು.

**ಭಾ.ದೀ.– ಯದುಕ್ತಂ 'ಸರ್ವಾಧಾರತ್ವಲಿಂಗಶ್ರವಣಾತ್ ಹೃತ್ಪದ್ಮಸ್ಥೋ ವಿಷ್ಣುಃ' ಇತಿ, ತತ್ರ ಸರ್ವಾಧಾರತ್ವಂ ಕುತೋ ವಿಷ್ಣುತ್ವನಿಶ್ಚಾಯಕಂ, ತತ್ಸಮಾನಾಧಿಕರಣತ್ವೇನ ಅಸಿದ್ಧತ್ವಾತ್? ಇತ್ಯತ ಆಹ – ಏತಸ್ಮಿನ್ನಿತಿ ॥**

ಸರ್ವಾಧಾರತ್ವಲಿಂಗವು ಶ್ರುತವಾಗಿರುವುದರಿಂದ ಹೃತ್ಪದ್ಮಸ್ಥನು ವಿಷ್ಣುವೆಂದು ಹೇಳಲಾಯಿತು. ಅಲ್ಲಿ ಸರ್ವಾಧಾರತ್ವವು ವಿಷ್ಣುತ್ವವನ್ನು ನಿರ್ಣಯಿಸುವುದೆಂದು ಹೇಳುವುದು ಹೇಗೆ? ಏಕೆಂದರೆ, ವಿಷ್ಣುವಿನಲ್ಲಿ ಸರ್ವಾಧಾರತ್ವವಿರುವುದೆಂದು ಸಿದ್ಧ-ವಾಗಿಲ್ಲ ಎಂಬ ಶಂಕೆಗೆ ಉತ್ತರವಾಗಿ 'ಏತಸ್ಮಿನ್' ಎಂಬ ಭಾಷ್ಯವಾಕ್ಯವು ಪ್ರವೃತ್ತವಾಗಿದೆ.

**ಭಾಷ್ಯಮ್ – 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ'** (ಬೃ.೫.೮.೧೧), **'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ'** (ಬೃ.೫.೮.೯), **'ಸ ಹಿ ಸರ್ವಾಧಿಪತಿಃ ಸ ಹಿ ಸರ್ವಪಾಲಃ ಸ ಈಶಃ ಸ ವಿಷ್ಣುಃ', 'ಪತಿಂ ವಿಶ್ವಸ್ಯಾತ್ಮೇಶ್ವರಮ್'** (ಮಹಾನಾ.೧೧) **ಇತ್ಯಾದಿ ಶ್ರುತಿಭ್ಯಸ್ತಸ್ಯ ಹ್ಯೇಷ ಮಹಿಮಾ ।**

'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ', 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ', 'ಸ ಹಿ ಸರ್ವಾಧಿಪತಿಃ ಸ ಹಿ ಸರ್ವಪಾಲಃ ಸ ಈಶಃ ಸ ವಿಷ್ಣುಃ', 'ಪತಿಂ ವಿಶ್ವಸ್ಯಾತ್ಮೇಶ್ವರಮ್' ಇತ್ಯಾದಿ ಶ್ರುತಿಗ-ಳಿಂದ ಸರ್ವಾಧಾರತ್ವವೆಂಬ ಮಹಿಮೆಯು ವಿಷ್ಣುವಿನ ಮಹಿಮೆಯೇ ಆಗಿರುವುದು.

ಭಾ.ದೀ.– 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ' ಇತಿ ಪ್ರತೀಕಗ್ರಹಣೇನ 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ, ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ' ಇತ್ಯಾದಿ ಬಹುವಾಕ್ಯಾನಿ ಸೂಚಯತಿ। ಇಮಾನಿ ಅಕ್ಷರನಯೇ ವ್ಯಾಕೃತಾನಿ।

''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ'' ಎಂಬ ಪ್ರತೀಕವನ್ನು ಭಾಷ್ಯದಲ್ಲಿ ಗ್ರಹಿಸಿರುವುದರಿಂದ ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ, ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ'' ಇತ್ಯಾದಿ ಬಹುವಾಕ್ಯಗಳು ಸೂಚಿತವಾಗಿವೆ. ಈ ವಾಕ್ಯಗಳು ಅಕ್ಷರಾಧಿಕರಣದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿವೆ. (ಸೂತ್ರ . ೧.೩.೧೦)

ಭಾ.ದೀ. – ನನು ಸಮಾಖ್ಯಾಶ್ರುತ್ಯುಕ್ತಃ ಸರ್ವೇಶ್ವರತ್ವಾದಿಮಹಿಮಾ ಕುತೋ ವಿಷ್ಣೋರವಗತಃ? ಇತ್ಯತ ಆಹ – ಸ ಹೀತಿ ॥ 'ಸ ಹಿ' ಇತ್ಯಾರಭ್ಯ 'ಸ ವಿಷ್ಣುಃ' ಇತ್ಯಂತಮೇಕಂ ವಾಕ್ಯಂ ಶ್ರುತ್ಯಂತರಗತಮ್ । 'ಸಃ' - ಪ್ರಕೃತಃ । 'ಹಿ' ಪ್ರಸಿದ್ಧೌ। 'ಪತಿಂ ವಿಶ್ವಸ್ಯ' ಇತಿ ನಾರಾಯಣಾನುವಾಕಸ್ಥಂ ವಾಕ್ಯಮ್ । 'ವಿಶ್ವಸ್ಯ' - ಅಚೇತನಪ್ರಪಂಚಸ್ಯ ಪತಿಂ 'ಆತ್ಮೇಶ್ವರಂ' - ಚೇತನೇಶ್ವರಂ ನಾರಾಯಣಂ ತದ್ವಿಶ್ವಮುಪಜೀವತಿ - ಇತ್ಯರ್ಥಃ।

ಇತ್ಯಾದೀತಿ ॥ 'ಏವಮಾದಿಶ್ರುತಿವಾಕ್ಯೇಭ್ಯಃ' ಇತ್ಯರ್ಥಃ । 'ಆದಿ'ಶಬ್ದೇನ ಏತಜ್ಜಾತೀಯಂ ಗೃಹ್ಯತೇ । ತೃತೀಯಾರ್ಥೇ ಪಂಚಮೀ । 'ತಸ್ಯ' ವಿಷ್ಣೋಃ 'ಹಿ' ಪ್ರಸಿದ್ಧೌ ಹೇತೌ ವಾ । 'ಏಷ ಸರ್ವೇಶ್ವರಃ' (ಬೃ.೬.೪.೨೨) ಇತ್ಯಾದಿ ಮಹಿಮಾ । 'ಅವಗತಃ' ಇತಿ ಶೇಷಃ। 'ತಸ್ಮಾತ್ ನ ಏತೇಷಾಂ ವಿಷ್ಣುತ್ವರೂಪಸಾಧ್ಯಸಾಮಾನಾಧಿಕರಣ್ಯಾಸಿದ್ಧಿಃ' ಇತಿ ವಾಕ್ಯಶೇಷಃ।

ಸಮಾಖ್ಯಾಶ್ರುತಿಯಲ್ಲಿ ಹೇಳಲಾಗಿರುವ ಸರ್ವೇಶ್ವರತ್ವಾದಿ ಮಹಿಮೆಗಳು ವಿಷ್ಣುವಿಗೆ ಸಂಬಂಧಿಸಿರುವುದೆಂದು ಹೇಗೆ ತಿಳಿದು ಬರುವುದು? ಎಂಬ ಶಂಕೆಗೆ ಉತ್ತರವಾಗಿ

ಭಾಷ್ಯದಲ್ಲಿ ''ಸ ಹಿ'' ಎಂದು ಹೇಳಲಾಗಿದೆ. ಭಾಷ್ಯದಲ್ಲಿ 'ಸ ಹಿ' ಎಂದು ಆರಂಭ ಮಾಡಿ 'ಸ ವಿಷ್ಣುಃ' ಎಂಬಲ್ಲಿ ಕೊನೆಗೊಳ್ಳುವ ವಾಕ್ಯವು ಇನ್ನೊಂದು ಶ್ರುತಿ- ಯಲ್ಲಿರುವ ಒಂದೇ ವಾಕ್ಯವಾಗಿದೆ. 'ಸಃ' ಅಂದರೆ ಪ್ರಕೃತನಾದವನು ಎಂದರ್ಥ. 'ಹಿ'- ಶಬ್ದವು ಪ್ರಸಿದ್ಧಿಯನ್ನು ಹೇಳುವುದು. 'ಪತಿಂ ವಿಶ್ವಸ್ಯ' ಎಂಬ ವಾಕ್ಯವು ನಾರಾಯಣಾ- ನುವಾಕದಲ್ಲಿರುವ ವಾಕ್ಯವಾಗಿದೆ. 'ವಿಶ್ವಸ್ಯ' - ಅಚೇತನ ಪ್ರಪಂಚಕ್ಕೆ, 'ಪತಿಮ್' - ಸ್ವಾಮಿಯಾಗಿರುವ, 'ಆತ್ಮೇಶ್ವರಂ' - ಎಲ್ಲ ಚೇತನರಿಗೆ ಸ್ವಾಮಿಯಾಗಿರುವ ನಾರಾ- ಯಣನನ್ನು 'ತದ್ವಿಶ್ವಂ ಉಪಜೀವತಿ' -ಆ ವಿಷ್ಣುವನ್ನು ವಿಶ್ವವು ಆಶ್ರಯಿಸಿಕೊಂಡಿದೆ ಎಂದು ಅರ್ಥ.

''ಇತ್ಯಾದಿ'' – ಎಂದರೆ ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಎಂದು ಅರ್ಥ. 'ಇತ್ಯಾದಿ' ಎಂಬಲ್ಲಿರುವ ಆದಿಶಬ್ದದಿಂದ ಇದೇ ಜಾತಿಗೆ ಸೇರಿರುವ ವಾಕ್ಯಗಳು ಗ್ರಹಿಸ- ಲ್ಪಡುತ್ತವೆ. 'ಶ್ರುತಿಭ್ಯಃ' ಎಂಬಲ್ಲಿರುವ ಪಂಚಮೀ ವಿಭಕ್ತಿಯು ತೃತೀಯಾವಿಭಕ್ತ್ಯರ್ಥ- ವನ್ನು ಹೇಳುವುದು. 'ತಸ್ಯ' ಆ ವಿಷ್ಣುವಿನ, 'ಹಿ' ಶಬ್ದವು ಪ್ರಸಿದ್ಧಿಯನ್ನು ಹೇಳುವುದು. ಅಥವಾ ಹೇತುವನ್ನು ಹೇಳುವ ಅಭಿಪ್ರಾಯವುಳ್ಳದ್ದು. 'ಏಷ ಸರ್ವೇಶ್ವರಃ' ಇತ್ಯಾದಿ ಮಹಿಮೆಯು. 'ಅವಗತಃ' ಎಂಬ ಪದವು ಇಲ್ಲಿ ಶೇಷವಾಗಿದೆ. 'ತಸ್ಮಾತ್ - ನ ಏತೇಷಾಂ ವಿಷ್ಣುತ್ವರೂಪಸಾಧ್ಯಸಾಮಾನ್ಯಾಧಿಕರಣ್ಯಾಸಿದ್ಧಿಃ'- 'ಆದ್ದರಿಂದ ಇಲ್ಲಿ ಹೇಳಲಾದ ಲಿಂಗಗಳಿಗೆ ವಿಷ್ಣುತ್ವವೆಂಬ ಸಾಧ್ಯದ ಸಾಮಾನಾಧಿಕರಣ್ಯವು ಸಿದ್ಧವಾಗಿಲ್ಲ- ವೆಂದು ಹೇಳತಕ್ಕದ್ದಲ್ಲ' ಎಂದು ವಾಕ್ಯಶೇಷವಾಗಿದೆ.

ಭಾ.ದೀ. – ನನು ಸರ್ವೇಶ್ವರತ್ವಾದಿಕಂ ವಿಷ್ಣುವದನ್ಯಸ್ಯಾಪಿ ಕಿಂ ನ ಸ್ಯಾತ್ ಇತ್ಯತ ಆಹ – ಸರ್ವೇಶ ಇತಿ ॥

ಸರ್ವೇಶ್ವರತ್ವಾದಿಗಳು ವಿಷ್ಣುವಿಗೆ ಇರುವಂತೆ ಇತರರಿಗೂ ಏಕಿರಬಾರದು? ಎಂಬ ಶಂಕೆಗೆ ಉತ್ತರವಾಗಿ – ''ಸರ್ವೇಶಃ' ಎಂಬ ವಾಕ್ಯ ಹೊರಟಿದೆ.

**ಭಾಷ್ಯಮ್ – 'ಸರ್ವೇಶೋ ವಿಷ್ಣುರೇವೈಕೋ ನಾನ್ಯೋಽಸ್ತಿ ಜಗತಃ ಪತಿಃ' ಇತಿ ಸ್ಕಾಂದೇ ॥ ೧೬ ॥**

''ಸರ್ವೇಶೋ ವಿಷ್ಣುರೇವೈಕೋ ನಾನ್ಯೋಽಸ್ತಿ ಜಗತಃ ಪತಿಃ''
ವಿಷ್ಣುವೊಬ್ಬನೇ ಸರ್ವೇಶ್ವರನಾಗಿರುವನು; ಜಗತ್ತಿಗೆ ಸ್ವಾಮಿಯಾದ-
ವನು ಮತ್ತೊಬ್ಬನಿಲ್ಲ - ಎಂದೂ ಸ್ಕಾಂದಪುರಾಣದಲ್ಲಿದೆ.

ಭಾ.ದೀ.– ಅತ್ರ ಸರ್ವಜಗಚ್ಛಬ್ದೌ ಚೇತನಾಚೇತನಪ್ರಪಂಚಪರೌ। ಯದ್ವಾ– 'ಜಗತಃ ಪತಿಃ' ಇತಿ ಪ್ರತಿಯೋಗಿತ್ವೇನೈವೋಕ್ತಸ್ಯ ಅನುವಾದಃ। ಅಥವಾ 'ಪತಿಃ' - ಪಾಲಕಃ। ತಥಾ ಚ – ಸರ್ವೇಶ್ವರಃ ಸರ್ವಪಾಲಕಶ್ಚ ವಿಷ್ಣುರೇಕ ಏವ ನಾನ್ಯೋಽಸ್ತಿ - ಇತ್ಯರ್ಥಃ। 'ಇತಿ ಸ್ಕಾಂದೇ' ಇತ್ಯಸ್ಯ ಏವಕಾರೋಕ್ತಪದಾಧ್ಯಾಹಾರೇಣ 'ತಸ್ಯ ಹಿ ಏಷ ಮಹಿಮಾ' ಇತಿ ಪೂರ್ವೇಣಾನ್ವಯಃ। 'ತಸ್ಮಾತ್ ನೈತಲ್ಲಿಂಗಾನಾಮನ್ಯತ್ರ ಸಾವಕಾಶತ್ವಂ ಶಂಕ್ಯಮ್' ಇತಿ ವಾಕ್ಯಶೇಷಃ।

ಇಲ್ಲಿ 'ಸರ್ವ' ಮತ್ತು 'ಜಗತ್' ಶಬ್ದಗಳು ಚೇತನಾಚೇತನಾತ್ಮಕವಾದ ಪ್ರಪಂಚ-ವನ್ನು ಹೇಳುವ ತಾತ್ಪರ್ಯವನ್ನು ಹೊಂದಿವೆ. ಅಥವಾ – 'ಜಗತಃ ಪತಿಃ' ಎಂಬ ಪದಗಳು 'ಸರ್ವೇಶಃ' ಎಂಬ ಪದದಿಂದ ಹೇಳಿರುವುದನ್ನೇ ಅನುವಾದ ಮಾಡುತ್ತಿವೆ. ಅಥವಾ 'ಪತಿಃ' ಎಂದರೆ ಪಾಲಕ. ತಥಾ ಚ – ಸರ್ವೇಶ್ವರನೂ ಸರ್ವಪಾಲಕನೂ ವಿಷ್ಣುವೊಬ್ಬನೇ ಹೊರತು ಇನ್ನೊಬ್ಬರಿಲ್ಲ - ಎಂದು ಅರ್ಥ. 'ಇತಿ ಸ್ಕಾಂದೇ' ಎಂಬ ಪದಗಳಿಗೆ 'ಏವ'ಕಾರವನ್ನು ಅಧ್ಯಾಹಾರ ಮಾಡಿಕೊಂಡು 'ತಸ್ಯ ಹಿ ಏಷ ಮಹಿಮಾ' ಎಂಬ ಹಿಂದಿನ ವಾಕ್ಯದೊಂದಿಗೆ ಅನ್ವಯವಾಗುವುದು. 'ತಸ್ಮಾತ್ ನೈತಲ್ಲಿಂಗಾನಾಮ್ ಅನ್ಯತ್ರ ಸಾವಕಾಶತ್ವಂ ಶಂಕ್ಯಮ್' – 'ಆದ್ದರಿಂದ ಈ ಲಿಂಗಗಳಿಗೆ ವಿಷ್ಣುವನ್ನು ಬಿಟ್ಟು ಇತರರಲ್ಲಿ ಅವಕಾಶವಿದೆಯೆಂದು ಶಂಕಿಸತಕ್ಕದ್ದಲ್ಲ' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಭಾ.ದೀ. – ಸಮಾಖ್ಯಾಂತರರೂಪಪ್ರಯುಕ್ತ್ಯಂತರೇಣ ವಿಷ್ಣೋರ್ಹೃತ್ಪದ್ಮಗತಾ-ಕಾಶಸ್ಥತ್ವಂ ಸಾಧಯತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಪ್ರಸಿದ್ಧೇಶ್ಚೇತಿ॥

'ಇನ್ನೊಂದು ಸಮಾಖ್ಯೆ' ಎಂಬ ಹೇತ್ವಂತರದಿಂದ ವಿಷ್ಣುವಿಗೆ ಹೃತ್ಪದ್ಮದಲ್ಲಿರುವ ಆಕಾಶಸ್ಥತ್ವವನ್ನು ಸಾಧಿಸುವ ಸೂತ್ರವನ್ನು ಪಠಿಸಿ – ''ಪ್ರಸಿದ್ಧೇಶ್ಚ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್– ॥ ಓಂ ಪ್ರಸಿದ್ಧೇಶ್ಚ ಓಂ ॥ ೧೭ ॥**

**'ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾ-ಸಿತವ್ಯಮ್'** (ಮಹಾನಾ.೧೦-೭) **ಇತಿ ಪ್ರಸಿದ್ಧೇಶ್ಚ ।**

''ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾ-ಸಿತವ್ಯಮ್'' - ಎಂಬ ವಾಕ್ಯದಲ್ಲಿ ಹೃತ್ಪದ್ಮಸ್ಥತ್ವವು ವಿಷ್ಣುವಿಗೆ ಇರು-ವುದೆಂದು ಪ್ರಸಿದ್ಧಿ ಇರುವ ಕಾರಣ ಆ ಸಮಾಖ್ಯೆಯ ಆಧಾರದಿಂದ ದಹರಪದ್ಮಸ್ಥನು ವಿಷ್ಣುವೇ ಆಗಿರುವನು.

ಭಾ.ದೀ. – 'ಇತಿ' ಇತ್ಯನಂತರಂ 'ಶ್ರುತೌ' ಇತಿ ಶೇಷಃ । 'ತಸ್ಯ' ಇತ್ಯನು-ವರ್ತತೇ । 'ತಸ್ಯ' - ವಿಷ್ಣೋಃ 'ತಸ್ಯ' - 'ಹೃತ್ಪದ್ಮಸ್ಥಸ್ಯ' ಇತಿ ತದರ್ಥಃ ।

ಅನೇನ – ಸೂತ್ರೇ 'ಅಸ್ಯ, ಅಸ್ಮಿನ್' ಇತಿ ಪದದ್ವಯಂ ಪೂರ್ವಸೂತ್ರಾದನು-ವರ್ತನೀಯಮ್ । ತಥಾ ಚ ನ ಕೇವಲಂ ವಾಜಸನೇಯಸಮಾಖ್ಯಾನಾತ್, ಕಿಂತು 'ಅಸ್ಮಿನ್' – ತತ್ರಾಪೀತಿ ತೈತ್ತಿರೀಯಶ್ರುತಿವಾಕ್ಯೇ 'ಅಸ್ಯ' – ಹೃತ್ಪದ್ಮಸ್ಥಸ್ಯ ವಿಷ್ಣುತ್ವ-ಪ್ರಸಿದ್ಧೇಶ್ಚ ತತ್ಸಮಾಖ್ಯಾನಾದಪಿ 'ದಹರಪದ್ಮಸ್ಥೋ ವಿಷ್ಣುರೇವ' ಇತಿ ಸೂತ್ರಾರ್ಥ ಉಕ್ತೋ ಭವತಿ ।

'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' (ಮುಂ.೨.೨.೭) ಇತ್ಯಾಥರ್ವಣೇ ಪ್ರಸಿದ್ಧೇಶ್ಚ , 'ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ' (ತೈ.೧.೬.೧) ಇತಿ ತೈತ್ತಿರೀಯವಾಕ್ಯಾಂತರೇ ಪ್ರಸಿದ್ಧೇಶ್ಚ – ಇತಿ ಸೂತ್ರಸ್ಯ ಯದ್ ವೃತ್ತ್ಯಂತರಂ ಟೀಕಾಯಾಂ ಸೂಚಿತಮ್, ತದ್ಭಾಷ್ಯಸ್ಯಸ್ಥಇತಿಶಬ್ದಸ್ಯಾಽದ್ಯ-ರ್ಥತ್ವಮಾಶ್ರಿತ್ಯಾ ಇತಿ ದ್ರಷ್ಟವ್ಯಮ್ ।

ಭಾಷ್ಯದಲ್ಲಿ 'ಇತಿ ಎಂಬ ಪದದ ನಂತರ ಶ್ರುತೌ ಎಂಬ ಪದವು ಶೇಷವಾಗಿದೆ. 'ತಸ್ಯ' ಎಂಬ ಪದವು 'ತಸ್ಯ ಹ್ಯೇಷ ಮಹಿಮಾ' ಎಂಬ ಭಾಷ್ಯವಾಕ್ಯದಿಂದ ಅನುವೃತ್ತಿ-

ಯನ್ನು ಹೊಂದುತ್ತದೆ. 'ತಸ್ಯ' - ವಿಷ್ಣುವಿಗೆ 'ತಸ್ಯ' - ಹೃತ್ಪದ್ಮಸ್ಥತ್ವದ ಎಂದು ಅದರ ಅರ್ಥ.

ಇದರಿಂದ – ಈ ಸೂತ್ರದಲ್ಲಿ 'ಅಸ್ಯ , ಅಸ್ಮಿನ್' ಎಂಬ ಎರಡು ಪದಗಳು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಹೊಂದುತ್ತವೆ. ತಥಾ ಚ – ಬೃಹದಾರಣ್ಯಕವಾಕ್ಯದ ಸಮಾಖ್ಯೆ ಇರುವುದರಿಂದ ಮಾತ್ರವಲ್ಲ; ಕಿಂತು 'ಅಸ್ಮಿನ್' - 'ತತ್ರಾಪಿ' ಎಂಬ ತೈತ್ತಿರೀಯಶ್ರುತಿಯ ವಾಕ್ಯದಲ್ಲೂ, 'ಅಸ್ಯ' ಹೃತ್ಪದ್ಮಸ್ಥನು ವಿಷ್ಣುವೆಂದು ಪ್ರಸಿದ್ಧಿ ಇರುವುದರಿಂದಲೂ ಆ ತೈತ್ತಿರೀಯಶ್ರುತಿವಾಕ್ಯದ ಸಮಾಖ್ಯೆಯ ಆಧಾರದಿಂದಲೂ 'ದಹರಪದ್ಮಸ್ಥನು ವಿಷ್ಣುವೇ' ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

''ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ'' ಎಂದು ಆಥರ್ವಣದಲ್ಲಿ ಪ್ರಸಿದ್ಧಿ ಇರುವುದರಿಂದಲೂ, ''ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ನಯಂ ಪುರುಷಃ' ಎಂಬ ಇನ್ನೊಂದು ತೈತ್ತಿರೀಯವಾಕ್ಯದಲ್ಲೂ ಪ್ರಸಿದ್ಧಿ ಇರುವುದರಿಂದ ಎಂದು ಸೂತ್ರಕ್ಕೆ ತತ್ವಪ್ರಕಾಶಿಕೆಯಲ್ಲಿ ಸೂಚಿತವಾದ ಮತ್ತೊಂದು ವ್ಯಾಖ್ಯಾನವು ಭಾಷ್ಯದಲ್ಲಿರುವ 'ಇತಿ'ಶಬ್ದಕ್ಕೆ ಆದಿ ಎಂಬ ಅರ್ಥವನ್ನು ಆಶ್ರಯಿಸಿ ಮಾಡಲಾಗಿದೆ ಎಂದು ತಿಳಿಯಬೇಕು.

ಭಾ.ದೀ. – ಶ್ರುತೌ 'ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್' - (ಮಹಾನಾ. ೧೦.೭) ಇತಿ ವಾಕ್ಯೇ ಯತ್ 'ದಹರಮ್' ಅಲ್ಪಂ ಪರಸ್ಯ ಬ್ರಹ್ಮಣಃ ಸದ್ಮಭೂತಮ್, ಅತ ಏವ ವಿಗತಪಾಪಂ ದೇಹಾಖ್ಯಬ್ರಹ್ಮಪುರಮಧ್ಯೇ ಸಂಸ್ಥಂ ಹೃದಯಕಮಲಂ ಪ್ರಕೃತಂ ತತ್ ತತ್ರೇತಿ ಪರಾಮೃಶ್ಯತೇ। ತಥಾ ಚ – 'ತತ್ರಾಪಿ' - ಪುಂಡರೀಕೇಽಪಿ ಯತ್ 'ದಹರಮ್' ಅಲ್ಪಂ ಗಗನಮಸ್ತಿ ತಸ್ಮಿನ್ 'ಅಂತಃ' ಅಂತರೇ 'ವಿಶೋಕಃ' ವಿಶೋಕಂ ವಿಶೋಕಪದೋಪಲಕ್ಷಿತಂ ಜರಾದಿಶೂನ್ಯಂ ಯದ್ ಬ್ರಹ್ಮ ತದುಪಾಸಿತವ್ಯಮ್ – ಇತ್ಯರ್ಥಃ। 'ವಿಶೋಕಃ' ಇತಿ ಲಿಂಗವ್ಯತ್ಯಯಃ ಛಾಂದಸಃ।

ತತ್ತ್ವಪ್ರದೀಪೇ ತು – ಲಿಂಗವ್ಯತ್ಯಾಸಸ್ಯ ಪುರುಷತ್ವಜ್ಞಾಪನಾರ್ಥಃ । 'ಯ

ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕಃ' ಇತ್ಯಾದೌ ಉದಿತ-ಗುಣಾನಾಮಧಿಕರಣೈಕ್ಯಬಲೇನ ಸನ್ನಿಧೀಯಮಾನಾನಾಮನುಕರ್ಷಣಾರ್ಥಶ್ಚ – ಇತಿ ಪ್ರಯೋಜನಮುಕ್ತಮ್ ।

ಶ್ರುತಿಯಲ್ಲಿ "ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರ-ಮಧ್ಯಸಂಸ್ಥಮ್" ಎಂಬ ವಾಕ್ಯದಲ್ಲಿ ಯತ್ - ಯಾವ, ದಹರಂ - ಅಲ್ಪವಾದ, ಪರವೇಶ್ಮಭೂತಂ - ಪರಬ್ರಹ್ಮನ ವಾಸಸ್ಥಾನವಾಗಿರುವುದೋ, ಆದ್ದರಿಂದಲೇ ವಿಪಾಪ್ಮಂ - ಪಾಪರಹಿತವಾಗಿರುವುದೋ, ಪುರಮಧ್ಯಸಂಸ್ಥಂ - ದೇಹವೆಂಬ ಬ್ರಹ್ಮಪುರದ ಮಧ್ಯದಲ್ಲಿ ಇರುವ ಪುಂಡರೀಕಂ - ಹೃದಯಕಮಲ ಇರುವುದೆಂದು ಪ್ರಕೃತವಾಗಿ-ದೆಯೋ ಅದು ತತ್ರಾಪಿ - ಎಂಬ ಶ್ರುತಿಯಲ್ಲಿರುವ ತತ್ರ ಎಂಬ ಪದದಿಂದ ಪರಾ-ಮರ್ಶಿಸಲ್ಪಡುತ್ತದೆ. ತಥಾ ಚ – 'ತತ್ರಾಪಿ ಆ ಹೃದಯಕಮಲದಲ್ಲೂ ಯಾವ 'ದಹರಂ' - ಅಲ್ಪವಾದ ಆಕಾಶವಿದೆಯೋ 'ತಸ್ಮಿನ್ನಂತಃ' - ಅದರ ಒಳಗೆ 'ವಿಶೋಕಃ' - ವಿಶೋಕಪದದಿಂದ ಲಕ್ಷಣಯಾ ಸೂಚಿತವಾಗುವ ಜರೆ(ಮುಪ್ಪು) ಮೊದಲಾದವು-ಗಳಿಂದ ರಹಿತವಾದ 'ಯತ್ ತದುಪಾಸಿತವ್ಯಂ' - ಯಾವ ಬ್ರಹ್ಮವಿರುವುದೋ ಅದನ್ನು ಉಪಾಸನೆ ಮಾಡತಕ್ಕದ್ದು ಎಂದು ಅರ್ಥ. ಸ್ಮೃತಿಯಲ್ಲಿ 'ವಿಶೋಕಂ' ಎಂದಿರುವ ಬದಲಾಗಿ 'ವಿಶೋಕಃ' ಎಂದು ಲಿಂಗದ ವ್ಯತ್ಯಾಸವು ಛಾಂದಸವಾಗಿದೆ.

ತತ್ತ್ವಪ್ರದೀಪದಲ್ಲಾದರೋ – ಲಿಂಗವ್ಯತ್ಯಾಸವು ಆ ಬ್ರಹ್ಮನಿಗೆ ಪುರುಷತ್ವವಿದೆ-ಯೆಂದು ಸೂಚಿಸುವ ಸಲುವಾಗಿ ಬಂದಿದೆ. ಅಷ್ಟೇ ಅಲ್ಲದೇ 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕಃ' ಇತ್ಯಾದಿ ವಾಕ್ಯದಲ್ಲಿ ಹೇಳಿರುವ ಗುಣಗಳಿಗೆ ಆಶ್ರಯನಾದವನು ಒಬ್ಬನೇ ಆಗಿರುವುದರ ಬಲದಿಂದ ಅದರ ಜೊತೆಗೆ ಉಕ್ತವಾಗಿರುವ ಇತರ ಗುಣಗಳನ್ನು ಅನುವೃತ್ತಿ ಮಾಡಿಕೊಳ್ಳುವ ಉದ್ದೇಶವನ್ನು ಹೊಂದಿದೆ – ಎಂಬುದಾಗಿ ಲಿಂಗವ್ಯತ್ಯಾಸದ ಫಲವನ್ನು ಹೇಳಲಾಗಿದೆ.

ಭಾ.ದೀ.– ನನು ಸಾಕ್ಷಾತ್ ಪದ್ಮಗತಸ್ಯ ವಿಷ್ಣುತ್ವಾಭ್ಯುಪಗಮೇ ಸುಷಿರಶ್ರುತಿ-ವಿರೋಧಃ । ಏವಂ ಪದ್ಮಗತಾಕಾಶಸ್ಯೈವ ವಿಷ್ಣುತ್ವಾಭ್ಯುಪಗಮೇऽಪಿ ಸುಷಿರಶ್ರುತಿ-ವಿರೋಧಃ, ಸುಷಿರಶಬ್ದಸ್ಯ ಆಕಾಶವಾಚಿತ್ವಾತ್ । ಏತದ್ ವಿಹಾಯ ದಹರಪದ್ಮಸ್ಯ

ಆಕಾಶತ್ವಂ, ವಿಷ್ಣೋಸ್ತು ಆಕಾಶಗತತ್ವಮ್, ತಸ್ಯೈವ ಸರ್ವಾಧಾರತ್ವಮ್ ಇತ್ಯುಪಗಮೇಽಪಿ ಸುಷಿರಶ್ರುತಿವಿರೋಧಃ । ತತ್ರ ಸಾಕ್ಷಾತ್ ಸುಷಿರಸ್ಯ ಸರ್ವಾಧಾರತ್ವೋಕ್ತೇಃ, ಇತ್ಯತ ಆಹ – ತದಂತಃಸ್ಥೇತಿ ॥

ಇಲ್ಲಿ ಸಾಕ್ಷಾತ್ತಾಗಿ ಹೃತ್ಪದ್ಮದಲ್ಲಿರುವವನು ವಿಷ್ಣುವೆಂದು ಒಪ್ಪಿದ ಪಕ್ಷದಲ್ಲಿ 'ತಸ್ಯಾಂತೇ ಸುಷಿರಮ್' ಎಂಬ ಸುಷಿರಶ್ರುತಿಯ ವಿರೋಧ ಬರುವುದು. ಅದೇ ರೀತಿ ಹೃತ್ಪದ್ಮದಲ್ಲಿರುವ ಆಕಾಶವನ್ನೇ ವಿಷ್ಣುವೆಂದು ಅಂಗೀಕರಿಸಿದರೂ ಸುಷಿರಶ್ರುತಿಯ ವಿರೋಧ ಬರುವುದು ಏಕೆಂದರೆ ಸುಷಿರಶಬ್ದವೇ ಆಕಾಶವಾಚಕವಾದ ಶಬ್ದವಾಗಿದೆ. ಈ ವ್ಯಾಖ್ಯಾನವನ್ನು ಬಿಟ್ಟು ದಹರಪದ್ಮವೇ ಆಕಾಶವೆಂದು, ವಿಷ್ಣುವಿಗಾದರೋ ಅಂತಹ ಆಕಾಶಸ್ಥತ್ವವು, ಹಾಗೂ ಅವನಿಗೇ ಸರ್ವಾಧಾರತ್ವವಿರುವುದೆಂದು ಒಪ್ಪಿದರೂ ಕೂಡ ಸುಷಿರಶ್ರುತಿಯ ವಿರೋಧ ಬರುವುದು.

ಏಕೆಂದರೆ ಆ ಶ್ರುತಿಯಲ್ಲಿ ಸಾಕ್ಷಾತ್ ಸುಷಿರಕ್ಕೇ ಸರ್ವಾಧಾರತ್ವವನ್ನು ಹೇಳಲಾಗಿದೆ ಎಂಬ ಶಂಕೆಗೆ ಉತ್ತರವಾಗಿ ''ತದಂತಃಸ್ಥ'' ಎಂಬ ಭಾಷ್ಯವಾಕ್ಯವು ಹೊರಟಿದೆ.

**ಭಾಷ್ಯಮ್– ತದಂತಃ ಸ್ಥತ್ವಾಪೇಕ್ಷತ್ವಾನ್ನ ಸುಷಿರಶ್ರುತಿವಿರೋಧಃ ॥೧೭॥**

ಸುಷಿರಶ್ರುತಿಯು ಹೃತ್ಪದ್ಮದಲ್ಲಿರುವ ಸುಷಿರದ ಒಳಗಿರುವ ಪರಮಾತ್ಮನ ವಿವಕ್ಷೆಯಿಂದ ಪ್ರವೃತ್ತವಾಗಿರುವ ಕಾರಣ ಅದರ (ಸುಷಿರಶ್ರುತಿಯ) ವಿರೋಧವಿಲ್ಲ.

ಭಾ.ದೀ. – ಬುದ್ಧ್ಯಾ ವಿವಿಕ್ತಸುಷಿರಶ್ರುತಿಪದಂ ಷಷ್ಠ್ಯಂತಮತ್ರ ಅನ್ವೀಯತೇ । ತಥಾ ಚ – ಸುಷಿರಶ್ರುತೇಃ ಸುಷಿರಸ್ಯ ಆಕಾಶಸ್ಯೈವ ಸಾಕ್ಷಾತ್ ಸರ್ವಾಧಾರತ್ವಪ್ರತಿಪಾದಿಕಾಯಾಃ ತಸ್ಯಾಂತ ಇತಿ ಸುಷಿರಪದಘಟಿತಶ್ರುತೇಃ 'ತದಂತಃಸ್ಥಾಪೇಕ್ಷತ್ವಾತ್' ಪದ್ಮಗತಸುಷಿರಾಂತಃಸ್ಥಪರಮಾತ್ಮಾನಮಪೇಕ್ಷ್ಯ ಪ್ರವೃತ್ತತ್ವಾತ್ ತಸ್ಯ ಚ ಸರ್ವಾಧಾರತ್ವಾನ್ನ ಸುಷಿರಶ್ರುತಿವಿರೋಧೋಽಸ್ಮದಭ್ಯುಪಗಮಸ್ಯ - ಇತ್ಯರ್ಥಃ । ಯಥಾ ಮಂದಿರಸ್ಥಮಂಜೂಷಾಂತರ್ಗತಮಪಿ ವಸ್ತು ಮಂದಿರಸ್ಥಮಿತಿ ಸಂಗೀಯತೇ,

ಏವಮಿಹಾಪಿ ಇತಿ ಭಾವಃ । 'ತದಂತಃಸ್ಥತ್ವ' ಇತಿ ಪಾಠೇ ಪರಮಾತ್ಮನಃ ಸುಷಿರಾಂತಃಸ್ಥತ್ವಮಪೇಕ್ಷ್ಯ ಶ್ರುತೇಃ ಪ್ರವೃತ್ತತ್ವಾದಿತ್ಯರ್ಥಃ।

'ಸುಷಿರಶ್ರುತಿವಿರೋಧಃ' ಎಂಬಲ್ಲಿರುವ ಸುಷಿರಶ್ರುತಿಪದವನ್ನು ಮನಸ್ಸಿನಿಂದ (ಬುದ್ಧಿಯಿಂದ) ಬೇರ್ಪಡಿಸಿಕೊಂಡು ಷಷ್ಠೀವಿಭಕ್ತ್ಯಂತವಾಗಿ ಗ್ರಹಿಸಿ ಇಲ್ಲಿ ಅನ್ವಯಿಸಬೇಕು.

ತಥಾ ಚ – 'ಸುಷಿರಶ್ರುತೇಃ' ಅಂದರೆ ಸುಷಿರಪದವನ್ನು ಹೊಂದಿರುವ ಶ್ರುತಿಯು 'ತದಂತಃಸ್ಥಾಪೇಕ್ಷತ್ವಾತ್' ಹೃತ್ಪದ್ಮದಲ್ಲಿರುವ ಸುಷಿರ ಅಂದರೆ ಆಕಾಶದೊಳಗಿರುವ ಪರಮಾತ್ಮನ ದೃಷ್ಟಿಯಿಂದ ಪ್ರವೃತ್ತವಾಗಿರುವುದರಿಂದ ಆ ಪರಮಾತ್ಮನಾದರೋ ಸರ್ವಾಧಾರನಾಗಿರುವುದರಿಂದ ನಾವು ಅಂಗೀಕರಿಸಿರುವ ಪ್ರಮೇಯಕ್ಕೆ ಸುಷಿರಶ್ರುತಿವಿರೋಧವಿಲ್ಲ - ಎಂದು ಅರ್ಥ. ಹೇಗೆ ಮಂದಿರದಲ್ಲಿರುವ ಪೆಟ್ಟಿಗೆಯೊಳಗಿದ್ದರೂ ಆ ವಸ್ತು ಮಂದಿರದಲ್ಲಿರುವುದೆಂದು ಹೇಳಲ್ಪಡುವುದೋ ಅದರಂತೆ ಪ್ರಸ್ತುತವಿಷಯದಲ್ಲೂ ಇರುವುದೆಂದು ಭಾವ.

ಭಾಷ್ಯದಲ್ಲಿ 'ತದಂತಃಸ್ಥತ್ವಾಪೇಕ್ಷತ್ವಾತ್' ಎಂದು ಪಾಠವಿರುವ ಪಕ್ಷದಲ್ಲಿ ಪರಮಾತ್ಮನಿಗೆ ಸುಷಿರಾಂತಃಸ್ಥತ್ವವು ಇರುವುದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಶ್ರುತಿಯು ಪ್ರವೃತ್ತವಾಗಿರುವುದರಿಂದ ಎಂದು ಅರ್ಥ.

ಭಾ.ದೀ. – ಭಗವತೋ ಹೃತ್ಪದ್ಮಸ್ಥತ್ವಮಾಕ್ಷಿಪ್ಯ ಸಮಾದಧತ್ಸೂತ್ರಮುಪನ್ಯಸ್ಯ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ಇತರೇತಿ ॥

ಭಗವಂತನಿಗೆ ಹೃತ್ಪದ್ಮಸ್ಥತ್ವವು ಇಲ್ಲವೆಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುವ ಸೂತ್ರವನ್ನು ಉಪನ್ಯಾಸ ಮಾಡಿ ಆ ಸೂತ್ರದ ಆಕ್ಷೇಪ ಭಾಗವನ್ನು ಮೊದಲು ಭಾಷ್ಯಕಾರರು ''ಇತರ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ॥ ಓಂ ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ಓಂ ॥೧೮॥**

**'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ.೮.೧೨.೩); 'ಏಷ ಆತ್ಮೇತಿ ಹೋವಾಚ' (ಛಾಂ.೪.೧೫.೧) ಇತಿ ಜೀವಪರಾಮರ್ಶಾತ್ ಸ ಇತಿ ಚೇತ್,**

'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' 'ಏಷ ಆತ್ಮೇತಿ ಹೋವಾಚ' ಎಂದು ಜೀವನನ್ನು ಪರಾಮರ್ಶ ಮಾಡಿರುವುದರಿಂದ ಜೀವನೇ ಹೃತ್ಪದ್ಮಸ್ಥನು ಎಂದು ಹೇಳಿದ ಪಕ್ಷದಲ್ಲಿ,

ಭಾ.ದೀ. – 'ನಿಷ್ಪದ್ಯತೇ' ಇತ್ಯನಂತರಮ್ 'ಇತ್ಯುಕ್ತಸ್ಯ' ಇತಿ ಶೇಷಃ । ಅಸ್ಯ ಚ ಸಮಾಸಪ್ರವಿಷ್ಟಜೀವಪದೇನ ಅನ್ವಯಃ । ಅನೇನ ಸೂತ್ರೇ 'ಅಸ್ಮಿನ್ನಸ್ಯ' ಇತ್ಯಸ್ಯ ಅನುವೃತ್ತಿಃ । 'ಇತರ'ಪದಂ ಚ ಸಿದ್ಧಾಂತ್ಯಭಿಮತಬ್ರಹ್ಮಪ್ರತಿಯೋಗಿಜೀವಪರಮ್ । ಅತ ಏವ ಶ್ರುತೌ 'ಏಷಃ' ಇತಿ ಜೀವಪರಾಮರ್ಶಃ । ಸಿದ್ಧಾಂತೇ ಶ್ರುತ್ಯರ್ಥಸ್ತು ವಕ್ಷ್ಯತೇ ।

ಭಾಷ್ಯದಲ್ಲಿ ಉದಾಹರಿಸಿದ 'ಅಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ನಿಷ್ಪದ್ಯತೇ ಎಂಬ ಪದದ ನಂತರ 'ಇತ್ಯುಕ್ತಸ್ಯ' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ ಭಾಷ್ಯದಲ್ಲಿ 'ಜೀವಪರಾಮರ್ಶಾತ್' ಎಂಬ ಸಮಾಸಪದದಲ್ಲಿ ಸೇರಿರುವ ಜೀವಪದದೊಂದಿಗೆ ಅನ್ವಯವಿರುವುದು. ಇದರಿಂದ ಪ್ರಕೃತ ಸೂತ್ರದಲ್ಲಿ 'ಧೃತೇಶ್ಚ' ಎಂಬ ಸೂತ್ರದಿಂದ 'ಅಸ್ಮಿನ್ನಸ್ಯ' ಎಂಬ ಪದಗಳು ಅನುವೃತ್ತಿಯನ್ನು ಹೊಂದುತ್ತವೆ. 'ಇತರ'ಪದವು ಸಿದ್ಧಾಂತಿಗೆ ಶ್ರುತಿಯಲ್ಲಿ ವಿವಕ್ಷಿಸಲಾದ ಬ್ರಹ್ಮನಿಗೆ ಪ್ರತಿಯೋಗಿಯಾದ ಜೀವನನ್ನು ಹೇಳುವ ಅಭಿಪ್ರಾಯವುಳ್ಳದ್ದು. ಆದ್ದರಿಂದಲೇ 'ಏಷ ಆತ್ಮೇತಿ' ಎಂಬ ಶ್ರುತಿಯಲ್ಲಿ 'ಏಷಃ' ಎಂಬ ಪದವು ಜೀವನನ್ನು ಪರಾಮರ್ಶಿಸುವುದು. ಸಿದ್ಧಾಂತದ ಪ್ರಕಾರ ಶ್ರುತಿಯ ಅರ್ಥವನ್ನು ಮುಂದೆ ಹೇಳಲಾಗುವುದು.

ಭಾ.ದೀ. – ಧೃತಿಸೂತ್ರಾತ್ 'ಅಸ್ಯಾಸ್ಮಿನ್ ಉಪಲಬ್ಧೇಃ' ಇತ್ಯಸ್ಯ ಅನುವೃತ್ತಿಮಭಿಪ್ರೇತ್ಯ ಪರಿಹಾರಾಂಶಂ ವ್ಯಾಚಷ್ಟೇ – ನೇತಿ ॥

'ಧೃತೇಶ್ಚ' ಎಂಬ ಸೂತ್ರದಿಂದ 'ಅಸ್ಯಾಸ್ಮಿನ್ ಉಪಲಬ್ಧೇಃ' ಎಂಬ ಪದಗಳು ಇಲ್ಲಿ ಅನುವೃತ್ತಿಯನ್ನು ಹೊಂದುತ್ತವೆ ಎಂಬ ಅಭಿಪ್ರಾಯದಿಂದ ಬಂದಿರುವ ಆಕ್ಷೇಪಕ್ಕೆ ಪರಿಹಾರವನ್ನು ಹೇಳುವ ಸೂತ್ರದ ಭಾಗಕ್ಕೆ 'ನ' ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ನ ತಸ್ಯ ಸ್ವತೋಽಪಹತಪಾಪ್ಮತ್ವಾದ್ಯಸಂಭವಾತ್ ॥ ೧೮ ॥**

ಹೃತ್ಪದ್ಮದಲ್ಲಿರುವವನು ಜೀವನಲ್ಲ; ಏಕೆಂದರೆ ಅವನಿಗೆ ಸ್ವಾತಂತ್ರ್ಯೇಣ ಅಪಹತಪಾಪ್ಮತ್ವ ಮೊದಲಾದವುಗಳು ಇಲ್ಲ.

ಭಾ.ದೀ. – 'ಹೃತ್ಪದ್ಮಸ್ಥೋ ನ ಜೀವಃ' ಇತ್ಯರ್ಥಃ । ಕುತೋ ನ?, ಇತ್ಯತಃ ತತ್ರ ಅನುವೃತ್ತವಾಕ್ಯೇನ 'ಅಸ್ಮಿನ್' - ಪ್ರಕರಣೇ, 'ಅಸ್ಯ' - ಅಪಹತಪಾಪ್ಮತ್ವಾದೇ-ರುಪಲಬ್ಧೇಃ ಇತ್ಯಸ್ಯ ಹೇತೋರ್ಲಾಭಾತ್ ತಮನುಪನ್ಯಸ್ಯ ಉಕ್ತಹೇತೋರ್ಜೀವೇ ನಿರವಕಾಶತ್ವೋಕ್ತಿಪರತಯಾ ಅಸಂಭವಾತ್ ಇತ್ಯಂಶಂ ವ್ಯಾಚಷ್ಟೇ – ತಸ್ಯೇತಿ ॥ 'ಜೀವಸ್ಯ' ಇತ್ಯರ್ಥಃ । ಮುಕ್ತಭಾವಮಾದಾಯ ಜೀವೇ ಸಂಭವಾತ್ ಅಸಿದ್ಧಿ-ವಾರಣಾಯ – ಸ್ವತ ಇತಿ ॥ 'ಸ್ವಾತಂತ್ರ್ಯೇಣ' ಇತ್ಯರ್ಥಃ । ಸತ್ಯಕಾಮತ್ವಾದಿಕಮ್ 'ಆದಿ'ಶಬ್ದಾರ್ಥಃ।

ಅನೇನ – 'ಅಸ್ಮಿನ್' 'ಪರಂ ಜ್ಯೋತಿಃ' ಇತಿ ವಾಕ್ಯೇಽಭಿವ್ಯಕ್ತಿಕರ್ತೃತ್ವೇನೋಕ್ತಸ್ಯ ಪ್ರಕೃತಸ್ಯ ಉಪಸಂಪತ್ತಿಕರ್ಮೀಭೂತಾದ್ ಬ್ರಹ್ಮಣ ಇತರಸ್ಯಾಸ್ಯ ಜೀವಸ್ಯ ಆತ್ಮೇತಿ 'ಯ ಆತ್ಮಾ' ಇತ್ಯುಕ್ತಹೃತ್ಪದ್ಮಸ್ಥಾತ್ಮತ್ವವಿಧಾನಾಯ 'ಏಷಃ' ಇತ್ಯೇತಚ್ಛಬ್ದೇನ 'ಪರಾಮರ್ಶಾತ್' ಉಪಸ್ಥಾಪನಾತ್ । ಜೀವಪರಾಮರ್ಶಕ ಏತಚ್ಛಬ್ದಶ್ರವಣಾತ್ ಇತಿ ಯಾವತ್ । ದಹರೇ ಸ ಜೀವ ಏವ, ನ ವಿಷ್ಣುರಿತಿ ಚೇತ್ – ನ ಹೃತ್ಪದ್ಮಸ್ಥೋ ಜೀವಃ । ಕುತಃ? ಅಸ್ಮಿನ್ ಪ್ರಕರಣೇ ಅಸ್ಯ ಅಪಹತಪಾಪ್ಮತ್ವಾದೇರುಪಲಬ್ಧೇಃ, ಶ್ರವಣಾತ್ । ಅಸ್ಯ ಚ ಅಸ್ಮಿನ್ ಜೀವೇ ಸ್ವತೋಽಸಂಭವಾತ್ – ಇತಿ ಸೂತ್ರಾರ್ಥ ಉಕ್ತೋ ಭವತಿ।

ಹೃತ್ಪದ್ಮಸ್ಥನು ಜೀವನಲ್ಲ ಎಂದು ಅರ್ಥ. ಏಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ಸೂತ್ರದಲ್ಲಿ ಅನುವೃತ್ತಿಯನ್ನು ಹೊಂದಿರುವ ವಾಕ್ಯದಿಂದ – 'ಅಸ್ಮಿನ್' ಈ ಪ್ರಕರಣದಲ್ಲಿ 'ಅಸ್ಯ' ಅಪಹತಪಾಪ್ಮತ್ವಮೊದಲಾದ ಧರ್ಮಗಳು 'ಉಪಲಬ್ಧೇಃ' ತಿಳಿದುಬರುವು-ದರಿಂದ ಎಂದು ಹೇತುವು ಲಭಿಸುವುದರಿಂದ ಆ ಅಂಶವನ್ನು ಉಪನ್ಯಾಸ ಮಾಡದೇ 'ಅಸಂಭವಾತ್' ಎಂಬ ಸೂತ್ರದ ಪದವನ್ನು ಜೀವನಲ್ಲಿ ಈ ಹೇತುವಿಗೆ ಅವಕಾಶವಿಲ್ಲ ಎಂದು ಹೇಳುವ ತಾತ್ಪರ್ಯವುಳ್ಳದ್ದೆಂದು ಭಾಷ್ಯದಲ್ಲಿ ''ತಸ್ಯ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತಸ್ಯ' ಎಂದರೆ ಜೀವನಿಗೆ ಎಂದು ಅರ್ಥ. ಮೋಕ್ಷದ ಸ್ಥಿತಿಯಲ್ಲಿ ಜೀವನಲ್ಲಿ ಅಪಹತಪಾಪ್ಮತ್ವ ಮೊದಲಾದವುಗಳು ಇರಲು ಸಾಧ್ಯವಿರುವುದರಿಂದ ಈ ಹೇತುವು ಜೀವನೆಂಬ ಪಕ್ಷದಲ್ಲಿ ಇರುವುದರಿಂದ ಅಸಿದ್ಧಿದೋಷಬರುವುದು ಎಂಬ ಶಂಕೆಯ ಪರಿಹಾರಕ್ಕಾಗಿ ''ಸ್ವತಃ'' ಎಂಬ ಪದವನ್ನು ಭಾಷ್ಯದಲ್ಲಿ ಹೇಳಲಾಗಿದೆ. 'ಸ್ವತಃ' ಎಂದರೆ ಸ್ವಾತಂತ್ರ್ಯೇಣ ಎಂದು ಅರ್ಥ. ಅಪಹತಪಾಪ್ಮತ್ವಾದಿ ಎಂಬಲ್ಲಿರುವ ಆದಿಶಬ್ದಕ್ಕೆ 'ಸತ್ಯಕಾಮತ್ವ' ಮೊದಲಾದವುಗಳು ಅರ್ಥವಾಗಿವೆ.

ಇದರಿಂದ – 'ಪರಂ ಜ್ಯೋತಿಃ' ಎಂಬ ವಾಕ್ಯದಲ್ಲಿ ಅಭಿವ್ಯಕ್ತಿಯನ್ನು ಹೊಂದು-ವನೆಂದು ಹೇಳಲಾದ ಪ್ರಸ್ತುತನಿಗೆ 'ಕುತಃ ಸಂಪದ್ಯತೇ' ಎಂಬ ಪದದಿಂದ ಹೇಳಿದ ಪ್ರಾಪ್ತಿ ಎಂಬ ಕ್ರಿಯೆಗೆ ಕರ್ಮವಾದ ಬ್ರಹ್ಮನಿಂದ 'ಇತರಸ್ಯ' ಭಿನ್ನನಾದ 'ಅಸ್ಯ' - ಈ ಜೀವನಿಗೆ 'ಯ ಆತ್ಮಾ' ಎಂಬ ಶ್ರುತಿಯಲ್ಲಿ ಹೇಳಿದ ಹೃತ್ಪದ್ಮಸ್ಥ-ಆತ್ಮತ್ವವನ್ನು ವಿಧಾನ ಮಾಡಲು 'ಏಷಃ' ಎಂದು ಏತಚ್ಛಬ್ದದಿಂದ ಪರಾಮರ್ಶೆ ಮಾಡಿರುವುದರಿಂದ - ಜೀವನನ್ನು ಪರಾಮರ್ಶಿಸುವ ಏತಚ್ಛಬ್ದವು ಶ್ರುತವಾಗಿರುವುದೆಂದು ಭಾವ - ದಹರಾಕಾಶದಲ್ಲಿರುವವನು ಜೀವನೇ ಹೊರತು ವಿಷ್ಣುವಲ್ಲ ಎಂದರೆ ಹೃತ್ಪದ್ಮಸ್ಥನು ಜೀವನಲ್ಲ. ಏಕೆಂದರೆ 'ಅಸ್ಮಿನ್' ಈ ಪ್ರಕರಣದಲ್ಲಿ 'ಅಸ್ಯ' ಅಪಹತಪಾಪ್ಮತ್ವ ಮೊದಲಾದವುಗಳು 'ಉಪಲಬ್ಧೇಃ' ಶ್ರುತವಾಗಿರುವುದರಿಂದ. ಆ ಧರ್ಮಗಳಾದರೋ ಈ ಜೀವನಲ್ಲಿ ಸ್ವಾತಂತ್ರ್ಯೇಣ ಇರುವುದು ಸಾಧ್ಯವಿಲ್ಲದಿರುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಜೀವಸ್ಯ ಅಪಹತಪಾಪ್ಮತ್ವಾದ್ಯಸಂಭವಮಾಕ್ಷಿಪ್ಯ ಸಮಾದಧ-ತ್ಸೂತ್ರಮ್ ಉಪನ್ಯಸ್ಯ, ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ಉತ್ತರಾದಿತಿ ॥

'ಧೃತೇಶ್ಚ' ಎಂಬ ಸೂತ್ರದಿಂದ 'ಅಸ್ಯಾಸ್ಮಿನ್ ಉಪಲಬ್ಧೇಃ' ಎಂಬ ಪದಗಳು ಇಲ್ಲಿ ಅನುವೃತ್ತಿಯನ್ನು ಹೊಂದುತ್ತವೆ ಎಂಬ ಅಭಿಪ್ರಾಯದಿಂದ ಬಂದಿರುವ ಆಕ್ಷೇಪಕ್ಕೆ ಪರಿಹಾರವನ್ನು ಹೇಳುವ ಸೂತ್ರದ ಭಾಗಕ್ಕೆ 'ನ' ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ನ ತಸ್ಯ ಸ್ವತೋಽಪಹತಪಾಪ್ಮತ್ವಾದ್ಯಸಂಭವಾತ್ ॥ ೧೮ ॥**

ಹೃತ್ಪದ್ಮದಲ್ಲಿರುವವನು ಜೀವನಲ್ಲ; ಏಕೆಂದರೆ ಅವನಿಗೆ ಸ್ವಾತಂತ್ರ್ಯೇಣ ಅಪಹತಪಾಪ್ಮತ್ವ ಮೊದಲಾದವುಗಳು ಇಲ್ಲ.

ಭಾ.ದೀ. – 'ಹೃತ್ಪದ್ಮಸ್ಥೋ ನ ಜೀವಃ' ಇತ್ಯರ್ಥಃ । ಕುತೋ ನ?, ಇತ್ಯತಃ ತತ್ರ ಅನುವೃತ್ತವಾಕ್ಯೇನ 'ಅಸ್ಮಿನ್' - ಪ್ರಕರಣೇ, 'ಅಸ್ಯ' - ಅಪಹತಪಾಪ್ಮತ್ವಾದೇ-ರುಪಲಬ್ಧೇಃ ಇತ್ಯಸ್ಯ ಹೇತೋರ್ಲಾಭಾತ್ ತಮನುಪನ್ಯಸ್ಯ ಉಕ್ತಹೇತೋರ್ಜೀವೇ ನಿರವಕಾಶತ್ವೋಕ್ತಿಪರತಯಾ ಅಸಂಭವಾತ್ ಇತ್ಯಂಶಂ ವ್ಯಾಚಷ್ಟೇ – ತಸ್ಯೇತಿ ॥ 'ಜೀವಸ್ಯ' ಇತ್ಯರ್ಥಃ । ಮುಕ್ತಭಾವಮಾದಾಯ ಜೀವೇ ಸಂಭವಾತ್ ಅಸಿದ್ಧಿ-ವಾರಣಾಯ – ಸ್ವತ ಇತಿ ॥ 'ಸ್ವಾತಂತ್ರ್ಯೇಣ' ಇತ್ಯರ್ಥಃ । ಸತ್ಯಕಾಮತ್ವಾದಿಕಮ್ 'ಆದಿ'ಶಬ್ದಾರ್ಥಃ।

ಅನೇನ – 'ಅಸ್ಮಿನ್' 'ಪರಂ ಜ್ಯೋತಿಃ' ಇತಿ ವಾಕ್ಯೇಽಭಿವ್ಯಕ್ತಿಕರ್ತೃತ್ವೇನೋಕ್ತಸ್ಯ ಪ್ರಕೃತಸ್ಯ ಉಪಸಂಪತ್ತಿಕರ್ಮೀಭೂತಾದ್ ಬ್ರಹ್ಮಣ ಇತರಸ್ಯಾಸ್ಯ ಜೀವಸ್ಯ ಆತ್ಮೇತಿ 'ಯ ಆತ್ಮಾ' ಇತ್ಯುಕ್ತಹೃತ್ಪದ್ಮಸ್ಥಾತ್ಮತ್ವವಿಧಾನಾಯ 'ಏಷಃ' ಇತ್ಯೇತಚ್ಛಬ್ದೇನ 'ಪರಾಮರ್ಶಾತ್' ಉಪಸ್ಥಾಪನಾತ್ । ಜೀವಪರಾಮರ್ಶಕ ಏತಚ್ಛಬ್ದಶ್ರವಣಾತ್ ಇತಿ ಯಾವತ್ । ದಹರೇ ಸ ಜೀವ ಏವ, ನ ವಿಷ್ಣುರಿತಿ ಚೇತ್ – ನ ಹೃತ್ಪದ್ಮಸ್ಥೋ ಜೀವಃ । ಕುತಃ? ಅಸ್ಮಿನ್ ಪ್ರಕರಣೇ ಅಸ್ಯ ಅಪಹತಪಾಪ್ಮತ್ವಾದೇರುಪಲಬ್ಧೇಃ, ಶ್ರವಣಾತ್ । ಅಸ್ಯ ಚ ಅಸ್ಮಿನ್ ಜೀವೇ ಸ್ವತೋಽಸಂಭವಾತ್ - ಇತಿ ಸೂತ್ರಾರ್ಥ ಉಕ್ತೋ ಭವತಿ।

ಹೃತ್ಪದ್ಮಸ್ಥನು ಜೀವನಲ್ಲ ಎಂದು ಅರ್ಥ. ಏಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ಸೂತ್ರದಲ್ಲಿ ಅನುವೃತ್ತಿಯನ್ನು ಹೊಂದಿರುವ ವಾಕ್ಯದಿಂದ – 'ಅಸ್ಮಿನ್' ಈ ಪ್ರಕರಣದಲ್ಲಿ 'ಅಸ್ಯ' ಅಪಹತಪಾಪ್ಮತ್ವಮೊದಲಾದ ಧರ್ಮಗಳು 'ಉಪಲಬ್ಧೇಃ' ತಿಳಿದುಬರುವು-ದರಿಂದ ಎಂದು ಹೇತುವು ಲಭಿಸುವುದರಿಂದ ಆ ಅಂಶವನ್ನು ಉಪನ್ಯಾಸ ಮಾಡದೇ 'ಅಸಂಭವಾತ್' ಎಂಬ ಸೂತ್ರದ ಪದವನ್ನು ಜೀವನಲ್ಲಿ ಈ ಹೇತುವಿಗೆ ಅವಕಾಶವಿಲ್ಲ ಎಂದು ಹೇಳುವ ತಾತ್ಪರ್ಯವುಳ್ಳದ್ದೆಂದು ಭಾಷ್ಯದಲ್ಲಿ ''ತಸ್ಯ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತಸ್ಯ' ಎಂದರೆ ಜೀವನಿಗೆ ಎಂದು ಅರ್ಥ. ಮೋಕ್ಷದ ಸ್ಥಿತಿಯಲ್ಲಿ ಜೀವನಲ್ಲಿ ಅಪಹತಪಾಪ್ಮತ್ವ ಮೊದಲಾದವುಗಳು ಇರಲು ಸಾಧ್ಯವಿರುವುದರಿಂದ ಈ ಹೇತುವು ಜೀವನೆಂಬ ಪಕ್ಷದಲ್ಲಿ ಇರುವುದರಿಂದ ಅಸಿದ್ಧಿದೋಷಬರುವುದು ಎಂಬ ಶಂಕೆಯ ಪರಿಹಾರಕ್ಕಾಗಿ ''ಸ್ವತಃ'' ಎಂಬ ಪದವನ್ನು ಭಾಷ್ಯದಲ್ಲಿ ಹೇಳಲಾಗಿದೆ. 'ಸ್ವತಃ' ಎಂದರೆ ಸ್ವಾತಂತ್ರ್ಯೇಣ ಎಂದು ಅರ್ಥ. ಅಪಹತಪಾಪ್ಮತ್ವಾದಿ ಎಂಬಲ್ಲಿರುವ ಆದಿಶಬ್ದಕ್ಕೆ 'ಸತ್ಯಕಾಮತ್ವ' ಮೊದಲಾದವುಗಳು ಅರ್ಥವಾಗಿವೆ.

ಇದರಿಂದ – 'ಪರಂ ಜ್ಯೋತಿಃ' ಎಂಬ ವಾಕ್ಯದಲ್ಲಿ ಅಭಿವ್ಯಕ್ತಿಯನ್ನು ಹೊಂದು-ವನೆಂದು ಹೇಳಲಾದ ಪ್ರಸ್ತುತನಿಗೆ 'ಕುತಃ ಸಂಪದ್ಯತೇ' ಎಂಬ ಪದದಿಂದ ಹೇಳಿದ ಪ್ರಾಪ್ತಿ ಎಂಬ ಕ್ರಿಯೆಗೆ ಕರ್ಮವಾದ ಬ್ರಹ್ಮನಿಂದ 'ಇತರಸ್ಯ' ಭಿನ್ನನಾದ 'ಅಸ್ಯ' - ಈ ಜೀವನಿಗೆ 'ಯ ಆತ್ಮಾ' ಎಂಬ ಶ್ರುತಿಯಲ್ಲಿ ಹೇಳಿದ ಹೃತ್ಪದ್ಮಸ್ಥ-ಆತ್ಮತ್ವವನ್ನು ವಿಧಾನ ಮಾಡಲು 'ಏಷಃ' ಎಂದು ಏತಚ್ಛಬ್ದದಿಂದ ಪರಾಮರ್ಶೆ ಮಾಡಿರುವುದರಿಂದ - ಜೀವನನ್ನು ಪರಾಮರ್ಶಿಸುವ ಏತಚ್ಛಬ್ದವು ಶ್ರುತವಾಗಿರುವುದೆಂದು ಭಾವ - ದಹರಾಕಾಶದಲ್ಲಿರುವವನು ಜೀವನೇ ಹೊರತು ವಿಷ್ಣುವಲ್ಲ ಎಂದರೆ ಹೃತ್ಪದ್ಮಸ್ಥನು ಜೀವನಲ್ಲ. ಏಕೆಂದರೆ 'ಅಸ್ಮಿನ್' ಈ ಪ್ರಕರಣದಲ್ಲಿ 'ಅಸ್ಯ' ಅಪಹತಪಾಪ್ಮತ್ವ ಮೊದಲಾದವುಗಳು 'ಉಪಲಬ್ಧೇಃ' ಶ್ರುತವಾಗಿರುವುದರಿಂದ. ಆ ಧರ್ಮಗಳಾದರೋ ಈ ಜೀವನಲ್ಲಿ ಸ್ವಾತಂತ್ರ್ಯೇಣ ಇರುವುದು ಸಾಧ್ಯವಿಲ್ಲದಿರುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಜೀವಸ್ಯ ಅಪಹತಪಾಪ್ಮತ್ವಾದ್ಯಸಂಭವಮಾಕ್ಷಿಪ್ಯ ಸಮಾದಧ-ತ್ಸೂತ್ರಮ್ ಉಪನ್ಯಸ್ಯ, ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ಉತ್ತರಾದಿತಿ ॥

ಜೀವನಿಗೆ ಹೃತ್ಪದ್ಮಸ್ಥತ್ವವೇ (ಹಾಗೂ ಅಪಹತಪಾಪ್ಮತ್ವವೇ) ಮೊದಲಾದವುಗಳು ಇರಲು ಸಾಧ್ಯವಿಲ್ಲವೆಂದು ಆಕ್ಷೇಪಿಸಿ, ಸಮಾಧಾನವನ್ನು ಹೇಳುವ ಸೂತ್ರವನ್ನು ಉಪನ್ಯಾಸಮಾಡಿ ಅದರಲ್ಲಿರುವ ಆಕ್ಷೇಪಾಂಶವನ್ನು ಭಾಷ್ಯಕಾರರು ಮೊದಲು''ಉತ್ತರಾತ್'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ॥ ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ ॥ ೧೯**

**'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದ್ಯುತ್ತರವಚನಾತ್ ಜೀವ ಏವೇತಿ ಚೇತ್**

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಮುಂದಿನ ವಾಕ್ಯದಿಂದ ಇಲ್ಲಿ ಪರಾಮರ್ಶಿಸಲ್ಪಡುವವನು ಜೀವನೇ ಆಗಿರುವನು ಎಂದು ಹೇಳಿದಲ್ಲಿ;

ಭಾ.ದೀ. – 'ಇತ್ಯಾದ್ಯುತ್ತರವಚನಾತ್' ಏವಂರೂಪಾದ್ ದಹರವಾಕ್ಯಾಪೇಕ್ಷಯಾ ಪರಾಮರ್ಶವಾಕ್ಯಾಪೇಕ್ಷಯಾ ವಾ ಅನಂತರಾದ್ ವಚನಾತ್ - ಇತ್ಯರ್ಥಃ । 'ವಚನಾತ್' ಇತ್ಯನಂತರಮ್ 'ಅಸ್ಯಾಸ್ಮಿನ್ ಉಪಲಬ್ಧೇಃ' ಇತ್ಯನುಷಜ್ಯತೇ । 'ಸಂಭವಾತ್' ಇತಿ ಶೇಷಃ । 'ಅಸ್ಯ' ಸತ್ಯಕಾಮತ್ವಸ್ಯ 'ಅಸ್ಮಿನ್' ಜೀವೇ ಪ್ರತೀತೇಃ, ತತ ಏವ ವಿಶೋಕತ್ವಾದೇಃ 'ಉಪಲಬ್ಧೇಃ' ಸಿದ್ಧೇಃ, ಉಕ್ತಗುಣಾನಾಂ ಸಂಭವಾತ್ - ಇತಿ ತದರ್ಥಃ । 'ಜೀವಃ' ಇತ್ಯನೇನ ಪೂರ್ವಸೂತ್ರಾತ್ 'ಸಃ' ಇತ್ಯಸ್ಯಾನುವೃತ್ತಿಃ ಸೂಚಿತಾ । 'ನೇಶ್ವರಃ' ಇತಿ 'ಏವ'ಶಬ್ದಾರ್ಥಃ । 'ಹೃತ್ಪದ್ಮಸ್ಥಃ' ಇತಿ ವರ್ತತೇ ।

ಉತ್ತರಾತ್ ಎಂದರೆ ಇವೇ ಮೊದಲಾದ ಮುಂದಿನ ವಾಕ್ಯಗಳಿಂದ ಅಂದರೆ ಈ ರೀತಿಯಾದ ದಹರವಾಕ್ಯದ ದೃಷ್ಟಿಯಿಂದ ಅಥವಾ ಪರಾಮರ್ಶವನ್ನು ಮಾಡುವ ವಾಕ್ಯದ ದೃಷ್ಟಿಯಿಂದ ಮುಂದಿರುವ ವಚನದಿಂದ ಎಂದು ಅರ್ಥ. 'ವಚನಾತ್' ಎಂಬ ಪದದ ನಂತರ 'ಅಸ್ಯ ಅಸ್ಮಿನ್ ಉಪಲಬ್ಧೇಃ' ಎಂಬ ಪದಗಳು ಅನುವೃತ್ತಿಯನ್ನು

ಹೊಂದುತ್ತವೆ. 'ಸಂಭವಾತ್' ಎಂಬ ಪದವು ಇಲ್ಲಿ ಶೇಷವಾಗಿದೆ. 'ಅಸ್ಯ' ಅಂದರೆ 'ಸತ್ಯಕಾಮತ್ವ'ವು 'ಅಸ್ಮಿನ್' ಈ ಜೀವನಲ್ಲಿ ಪ್ರತೀತವಾಗಿರುವುದರಿಂದ ವಿಶೋಕತ್ವ ಮೊದಲಾದವುಗಳು ಅವನಲ್ಲಿ 'ಉಪಲಬ್ಧೇಃ' ಪ್ರಸಿದ್ಧವಾಗಿರುವುದರಿಂದ ಇಲ್ಲಿ ಹೇಳಲಾದ ಗುಣಗಳು ಜೀವನಲ್ಲಿ ಇರುವ ಸಾಧ್ಯತೆ ಇದೆ ಎಂದು ಸೂತ್ರಭಾಗದ ಆಕ್ಷೇಪಾಂಶದ ಅರ್ಥ. ಭಾಷ್ಯದಲ್ಲಿ 'ಜೀವಃ' ಎಂಬ ಪದದಿಂದ, ಪೂರ್ವಸೂತ್ರದಿಂದ 'ಸಃ' ಎಂಬ ಪದವು ಅನುವೃತ್ತಿಹೊಂದುವುದೆಂದು ಸೂಚಿತವಾಗುವುದು. ಭಾಷ್ಯದಲ್ಲಿ 'ಜೀವ ಏವ' ಎಂಬ ಏವಶಬ್ದದಿಂದ 'ಈಶ್ವರನಲ್ಲ' ಎಂಬ ಅರ್ಥವು ಲಭಿಸುವುದು. 'ಹೃತ್ಪದ್ಮಸ್ಥಃ' ಎಂಬ ಪದವು ಇಲ್ಲಿ ಅನ್ವಿತವಾಗುವುದು.

ಭಾ. ದೀ. – ನಞನುವೃತ್ಯಾ ಪರಿಹಾರಾಂಶಂ ವ್ಯಾಚಷ್ಟೇ – ನೇತಿ ॥

ಈ ಹಿಂದಿನ ಸೂತ್ರದಿಂದ 'ನಞ್'ಪದವನ್ನು ಈ ಸೂತ್ರಕ್ಕೆ ಅನುವೃತ್ತಿ ಮಾಡಿಕೊಂಡು ಸೂತ್ರದಲ್ಲಿರುವ ಪೂರ್ವಪಕ್ಷವನ್ನು ಪರಿಹರಿಸುವ ಅಂಶವನ್ನು ''ನ'' ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ನ ತತ್ರ ಹಿ ಪರಮೇಶ್ವರಪ್ರಸಾದಾದ್ ಆವಿರ್ಭೂತ-ಸ್ವರೂಪೋ ಮುಕ್ತ ಉಚ್ಯತೇ ।**

ಈ ಆಕ್ಷೇಪ ಸರಿಯಲ್ಲ. ಏಕೆಂದರೆ 'ಸ ತತ್ರ ಪರ್ಯೇತಿ' ಎಂಬ ವಾಕ್ಯದಲ್ಲಿ ಪರಮೇಶ್ವರನ ಅನುಗ್ರಹದಿಂದ ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆದ ಮುಕ್ತನನ್ನು ಹೇಳಲಾಗಿದೆ.

ಭಾ. ದೀ. – 'ನ ಏತದ್‌ವಾಕ್ಯಬಲೇನ ಜೀವಸ್ಯ ಸತ್ಯಕಾಮತ್ವಾದಿಗುಣಾನ್ ಸಂಭಾವ್ಯ ಹೃತ್ಪದ್ಮಸ್ಥತ್ವಂ ವಾಚ್ಯಮ್' ಇತ್ಯರ್ಥಃ । ಕುತೋ ನ? ಇತ್ಯತಃ, ಅಭಿಹಿತಮ್ 'ಆವಿರ್ಭೂತಸ್ವರೂಪಸ್ತು' ಇತ್ಯಂಶಂ, 'ತತ್ರ' ಇತಿ ಪದಾಧ್ಯಾ-ಹಾರೇಣ, ವ್ಯಾಚಷ್ಟೇ – ತತ್ರೇತಿ ॥ ಸ 'ತತ್ರ' ಇತ್ಯುತ್ತರವಾಕ್ಯೇ ಇತ್ಯರ್ಥಃ । 'ತತ್ರ ಆವಿರ್ಭೂತಸ್ವರೂಪ ಉಚ್ಯತೇ' ಇತಿ ಸಂಬಂಧಃ । 'ಆವಿರ್ಭೂತಸ್ವರೂಪಃ' ಇತ್ಯಸ್ಯ

ವ್ಯಾಖ್ಯಾನಂ – 'ಮುಕ್ತ' ಇತಿ ॥ 'ಹಿ'ಶಬ್ದೋ ಯತ ಇತ್ಯರ್ಥೇ । 'ಉತ್ತರವಚನಾತ್' ಇತ್ಯತ್ರಾಪಿ ಸಂಬಧ್ಯತೇ । ತಥಾ ಚ – 'ಉತ್ತರವಚನಾತ್' 'ಸ್ವೇನ ರೂಪೇಣ' ಇತಿ ಜಡದೇಹತ್ಯಾಗೋತ್ತರಕಾಲೀನಸ್ವರೂಪಾಭಿವ್ಯಕ್ತಿಶ್ರುತೇಃ । ಅತ್ರ ಮುಕ್ತಸ್ಯೋಕ್ತೇಃ ಹೃತ್ಪದ್ಮಸ್ಯ ಚ ದೇಹಾಂತರವೃತ್ತಿತಯಾ ಮುಕ್ತತ್ವಾಯೋಗಾನ್ನಾಯಂ ಜೀವಃ - ಇತಿ ಭಾವಃ ।

'ಸ ತತ್ರ ಪರ್ಯೇತಿ' ಎಂಬ ಈ ವಾಕ್ಯದ ಆಧಾರದಿಂದ ಜೀವನಿಗೆ ಸತ್ಯಕಾಮತ್ವ ಮೊದಲಾದ ಗುಣಗಳು ಇರುವುದು ಸಾಧ್ಯವೆಂದು ಭಾವಿಸಿ ಅವನಿಗೆ ಹೃತ್ಪದ್ಮಸ್ಥತ್ವವನ್ನು ಹೇಳತಕ್ಕದ್ದಲ್ಲ. ಏಕೆ ಹೇಳಲಾಗದು? ಎಂಬ ಶಂಕೆಗೆ ಉತ್ತರವಾಗಿ ಸೂತ್ರದಲ್ಲಿ ಹೇಳಿರುವ 'ಆವಿರ್ಭೂತಸ್ವರೂಪಸ್ತು' ಎಂಬ ಅಂಶವನ್ನು 'ತತ್ರ' ಎಂಬ ಪದವನ್ನು ಅಧ್ಯಾಹಾರ ಮಾಡುವುದರೊಂದಿಗೆ ಭಾಷ್ಯದಲ್ಲಿ ''ತತ್ರ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸ ತತ್ರ ಪರ್ಯೇತಿ' ಎಂಬ ಮುಂದಿನ ವಾಕ್ಯದಲ್ಲಿ ಎಂದು ಅರ್ಥ. ಆ ವಾಕ್ಯದಲ್ಲಿ 'ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆದವನು ಹೇಳಲ್ಪಟ್ಟಿದ್ದಾನೆ' ಎಂದು ಪದಗಳಿಗೆ ಅನ್ವಯ. 'ಆವಿರ್ಭೂತಸ್ವರೂಪಃ' ಎಂಬ ಪದಕ್ಕೆ ಮುಕ್ತಃ ಎಂದು ವ್ಯಾಖ್ಯಾನ ಮಾಡಲಾಗಿದೆ. ಭಾಷ್ಯದಲ್ಲಿ 'ಹಿ'ಶಬ್ದಕ್ಕೆ 'ಯತಃ' ಯಾವ ಕಾರಣದಿಂದ ಎಂದು ಅರ್ಥ. ಹಿಂದಿನ ವಾಕ್ಯದಲ್ಲಿರುವ 'ಉತ್ತರವಚನಾತ್' ಎಂಬ ಪದವು ಇಲ್ಲೂ ಸಂಬಂಧವನ್ನು ಪಡೆಯುತ್ತದೆ. ತಥಾ ಚ – 'ಉತ್ತರವಚನಾತ್' 'ಸ್ವೇನ ರೂಪೇಣ' ಎಂಬುದಾಗಿ ಜಡದೇಹವನ್ನು ತ್ಯಾಗ ಮಾಡಿದ ಅನಂತರಕಾಲದಲ್ಲಿ ಆಗುವ ಸ್ವರೂಪಾಭಿವ್ಯಕ್ತಿಯನ್ನು ಹೇಳುವ ಶ್ರುತಿಯಿಂದ. ಆ ವಾಕ್ಯದಲ್ಲಿ ಮುಕ್ತನನ್ನು ಹೇಳಿರುವುದರಿಂದ, ಹೃತ್ಪದ್ಮವು ದೇಹದ ಒಳಗಿರುವ ಕಾರಣ ಆ ಹೃತ್ಪದ್ಮಸ್ಥನು, ಮುಕ್ತಜೀವನಾಗಲು ಸಾಧ್ಯವಿಲ್ಲದಿರುವುದರಿಂದ, ಜೀವನಲ್ಲ ಎಂದು ಭಾವ.

ಭಾ.ದೀ. – ನನು ಅಸ್ಯ ಮುಕ್ತವಿಷಯತ್ವೇಽಪಿ ಮುಕ್ತಸ್ಯಾಪಿ ಜೀವತ್ವೇ ನಾಸ್ತ್ಯೇವ ಜೀವೇ ಅಪಹತಪಾಪ್ಮತ್ವಾದಿಸಂಭವಃ । ನ ಚ ತಸ್ಯ ಹೃತ್ಪದ್ಮಸ್ಥತ್ವಾಯೋಗಃ, ಯತೋ ಜೀವೋ ಭಾವಿಭಾವೇನಾಪಹತಪಾಪ್ಮತ್ವಾದಿಗುಣಃ ಇದಾನೀಂ ಹೃತ್ಪದ್ಮಗತತಯೋಚ್ಯತ ಇತ್ಯತ ಆಹ – ಪರಮೇಶ್ವರಪ್ರಸಾದಾದಿತಿ ॥ 'ಏವ' ಇತ್ಯನು-

ವರ್ತತೇ । ಅನೇನ ತುಶಬ್ದೋ ವ್ಯಾಖ್ಯಾತಃ । 'ಪರಮೇಶ್ವರಪ್ರಸಾದಾತ್' ಇತ್ಯನೇನ 'ಉತ್ತರಾತ್' ಇತ್ಯೇತತ್ 'ಉತ್ತಮಾತ್' ಇತ್ಯಪಿ ವ್ಯಾಖ್ಯಾತಮ್ । ಅತ್ರ 'ಮುಕ್ತಃ' ಇತಿ ನ ಸೌತ್ರಪದವ್ಯಾಖ್ಯಾನಮಾತ್ರಮ್; ಕಿಂತು ಉದ್ದೇಶ್ಯಸಮರ್ಪಕಂ ಚ । ಅನೇನ – ಆವೃತ್ತಿಃ 'ತು'ಶಬ್ದಸ್ಯ ಯಥಾಶ್ರುತಾನ್ವಯಶ್ಚ ಸೂಚಿತಃ ।

ತಥಾ ಚ – 'ಯಃ ಅತ್ರ ಮುಕ್ತಃ ಉಚ್ಯತೇ; ಸ ತು ಪರಮೇಶ್ವರಪ್ರಸಾದಾದೇವ ಆವಿರ್ಭೂತಸ್ವರೂಪಃ ಉಚ್ಯತೇ । ಆವಿರ್ಭೂತೋ - ವ್ಯಕ್ತಃ ಸ್ವರೂಪಃ ಅಪಹತಪಾಪ್ಮತ್ವಾದಿಃ ಸ್ವಧರ್ಮೋ ಯಸ್ಯ ಸಃ ತಥೋಕ್ತಃ । ಅತೋ ನ ಸ್ವತೋಽಪಹತಪಾಪ್ಮತ್ವಾದಿಗುಣಕಃ, ಅತೋ ನ ದಹರಸ್ಥೋ ಜೀವಃ – ಇತಿ ಯೋಜನಾ ।

ಶಂಕೆ – 'ಸ ತತ್ರ ಪರ್ಯೇತಿ' ಎಂಬ ವಾಕ್ಯವು ಮುಕ್ತಜೀವನಿಗೆ ಸಂಬಂಧಿಸಿರುವುದಾದರೂ ಅವನು ಜೀವನೇ ಆಗಿರುವುದರಿಂದ ಜೀವನಲ್ಲಿ ಅಪಹತಪಾಪ್ಮತ್ವಾದಿಗಳು ಇರುವುದು ಸಾಧ್ಯವಿದೆ. ಆದರೆ ಆ ಜೀವನು ಹೃತ್ಪದ್ಮಸ್ಥನಾಗಲಾರ ಎಂದರೆ ಅದು ಸರಿಯಲ್ಲ. ಏಕೆಂದರೆ ಜೀವನು ಭವಿಷ್ಯದಲ್ಲಿ ಅಪಹತಪಾಪ್ಮತ್ವಾದಿ ಗುಣಗಳನ್ನು ಹೊಂದುವವನು; ಈಗ ಹೃತ್ಪದ್ಮದಲ್ಲಿರುವವನೆಂದು ಈ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ - ಎಂದು.

ಸಮಾಧಾನ – ಈ ಶಂಕೆಯನ್ನು ನಿರಾಕರಿಸಲು ''ಪರಮೇಶ್ವರಪ್ರಸಾದಾತ್'' ಎಂಬ ಭಾಷ್ಯವಾಕ್ಯವು ಪ್ರವೃತ್ತವಾಗಿದೆ. 'ಏವ' ಎಂಬ ಶಬ್ದವು ಇಲ್ಲಿ ಅನುವೃತ್ತಿಯನ್ನು ಪಡೆಯುತ್ತದೆ. ಈ ಭಾಷ್ಯವಾಕ್ಯದಿಂದ ಸೂತ್ರದ 'ತು'ಶಬ್ದದ ವ್ಯಾಖ್ಯಾನವನ್ನು ಮಾಡಲಾಗಿದೆ. ಭಾಷ್ಯದಲ್ಲಿ 'ಪರಮೇಶ್ವರಪ್ರಸಾದಾತ್' ಎಂಬ ಪದದಿಂದ ಸೂತ್ರದಲ್ಲಿರುವ 'ಉತ್ತರಾತ್' ಎಂಬ ಪದಕ್ಕೆ 'ಉತ್ತಮಾತ್' ಎಂದು ವ್ಯಾಖ್ಯಾನ ಮಾಡಲಾಗಿದೆ. ಇಲ್ಲಿ ಮುಕ್ತ ಎಂಬ ಪದವು ಸೂತ್ರದ ಆವಿರ್ಭೂತಸ್ವರೂಪ ಎಂಬ ಪದದ ವ್ಯಾಖ್ಯಾನಮಾತ್ರವಲ್ಲದೇ ಉದ್ದೇಶ್ಯವನ್ನು ತಿಳಿಸುವ ಪದವೂ ಆಗಿದೆ. ಇದರಿಂದ – ಸೂತ್ರದ ತುಶಬ್ದಕ್ಕೆ ಆವೃತ್ತಿ ಇರುವುದೆಂದು ಮತ್ತು ಯಥಾಶ್ರುತವಾಗಿ ಅನ್ವಯವೂ ಇರುವುದೆಂದು ಸೂಚಿತವಾಗುವುದು.

ತಥಾ ಚ – ಯಾವ ಮುಕ್ತನು ಹೇಳಲ್ಪಟ್ಟಿರುವವನೋ ಅವನು ಪರಮೇಶ್ವರನ ಅನುಗ್ರಹದಿಂದಲೇ 'ಆವಿರ್ಭೂತಸ್ವರೂಪಃ' 'ಆವಿರ್ಭೂತಃ = ಅಭಿವ್ಯಕ್ತಿಯನ್ನು ಹೊಂದಿದ, ಸ್ವರೂಪಃ = ಅಪಹತಪಾಪ್ಮತ್ವಮೊದಲಾದ ತನ್ನ ಧರ್ಮಗಳನ್ನು ಹೊಂದಿರುವವನು ಎಂದು ಅರ್ಥ. ಆದ್ದರಿಂದ ಅವನು ಸ್ವತಂತ್ರವಾಗಿ ಅಪಹತಪಾಪ್ಮತ್ವ ಮೊದಲಾದ ಗುಣಗಳನ್ನು ಪಡೆದವನಲ್ಲ, ಆದ್ದರಿಂದ ದಹರಸ್ಥನು ಜೀವನಲ್ಲ ಎಂದು ಯೋಜನೆ.

ಭಾದೀ. – ನನು 'ಪರಂಜ್ಯೋತಿಃ ಉಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ.೮.೩.೪) ಇತ್ಯತ್ರ ಮುಕ್ತಸ್ಯ ಅಭಿವ್ಯಕ್ತಾಪಹತಪಾಪ್ಮತ್ವಾದಿಗುಣಕತ್ವಮೇವ ಉಚ್ಯತೇ, ನ ತು ತದ್ಗುಣಾನಾಂ ಪರಮೇಶ್ವರಾಧೀನತ್ವಮ್ । ಅತಃ ತತ್ ಸ್ವತ ಏವ, ಇತ್ಯತ ಆಹ – ಯದಿತಿ ॥

ಶಂಕೆ- 'ಪರಂಜ್ಯೋತಿಃ ಉಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ಮುಕ್ತನು ಅಭಿವ್ಯಕ್ತವಾದ ಅಪಹತಪಾಪ್ಮತ್ವಮೊದಲಾದ ಗುಣಗಳನ್ನು ಪಡೆದಿರುವವನು ಎಂದು ಮಾತ್ರ ಹೇಳಲಾಗಿದೆ. ಹೊರತು ಆ ಗುಣಗಳು ಈಶ್ವರನಿಗೆ ಅಧೀನವೆಂದು ಹೇಳಿಲ್ಲ. ಆದರಿಂದ ಆ ಗುಣಗಳು ಸ್ವತಂತ್ರವಾಗಿಯೇ ಅವನಲ್ಲಿವೆ.

ಸಮಾಧಾನ – ಈ ಶಂಕೆಯನ್ನು ನಿರಾಕರಿಸಲು 'ಯತ್' ಎಂದು ಭಾಷ್ಯವಾಕ್ಯವು ಹೊರಟಿದೆ.

**ಭಾಷ್ಯಮ್ - ಯತ್ಪ್ರಸಾದಾತ್ ಸ ಮುಕ್ತೋ ಭವತಿ ಸ ಭಗವಾನ್ ಪೂರ್ವೋಕ್ತಃ ॥ ೧೯ ॥**

ಯಾರ ಅನುಗ್ರಹದಿಂದ ಆ ಜೀವನು ಮುಕ್ತನಾಗುವನೋ ಆ ಭಗವಂತನೇ ಪರಂಜ್ಯೋತಿಃ ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟಿದ್ದಾನೆ.

ಭಾ.ದೀ. – ಅಸ್ಯ ಯಚ್ಛಬ್ದಸ್ಯ ದ್ವಿತೀಯತಚ್ಛಬ್ದೇನಾನ್ವಯಃ । 'ಪ್ರಸಾದಃ' ನಾಮ

ಇಚ್ಛಾವಿಶೇಷಃ । 'ಸಃ' - ಜೀವಃ । ಪುನಃ 'ಸಃ' ಇತ್ಯುಕ್ತ್ಯಾ ಸೂತ್ರೇಽನುವೃತ್ತಸ್ಯ ಸ ಇತ್ಯಸ್ಯಾಽವೃತ್ತಿಃ ಸೂಚಿತಾ । 'ಪೂರ್ವೋಕ್ತಃ' ಇತ್ಯನೇನ – ಸೂತ್ರೇ 'ಉತ್ತರತ್ರ' ಇತ್ಯಸ್ಯ ಪ್ರತಿಯೋಗಿತಯಾ 'ಪೂರ್ವತ್ರ' ಇತ್ಯುಪಸ್ಕಾರ್ಯಮ್ - ಇತ್ಯುಕ್ತಂ ಭವತಿ। 'ತಥಾ' ಇತಿ ಶೇಷಃ । ತಥಾ ಚ – 'ಯತ್ಪ್ರಸಾದಾತ್' ಯಸ್ಯಾನುಗ್ರಹಾತ್ 'ಸಃ' ಜೀವೋ 'ಮುಕ್ತಃ' ಅಪಹತಪಾಪ್ಮತ್ವಾದಿಗುಣೋ ಭವತಿ । 'ಸಃ' ಗುಣಪ್ರದಾತಾ ಭಗವಾನ್, 'ಪೂರ್ವೋಕ್ತಃ' ಪರಂಜ್ಯೋತಿರುಪಸಂಪದ್ಯ ಇತಿಪೂರ್ವವಾಕ್ಯೇ 'ತಥಾ' ಗುಣಪ್ರದಾತೃತಯಾ ಉಕ್ತಃ - ಇತಿ ಯೋಜನಾ । ಅನ್ಯಥಾ 'ಲ್ಯಬಂತಪದಂ ವ್ಯರ್ಥಂ ಸ್ಯಾತ್' ಇತಿ ಭಾವಃ। 'ಉಕ್ತಃ' ಇತ್ಯನಂತರಂ 'ಯತಃ' ಇತಿ ಶೇಷಃ। ಅಸ್ಯ 'ಅತೋ ನಾತ್ರ ಮುಕ್ತಗುಣಪ್ರಾಪ್ತೇಃ ಪರಮೇಶ್ವರಾಧೀನತ್ವೋಕ್ತ್ಯಭಾವಃ' ಇತ್ಯುಪ-ಸ್ಕೃತವಾಕ್ಯೇನಾನ್ವಯಃ।

ಈ ಯಚ್ಛಬ್ದಕ್ಕೆ ಇದೇ ವಾಕ್ಯದಲ್ಲಿರುವ ಎರಡನೆಯ ತಚ್ಛಬ್ದದಿಂದ ಅನ್ವಯ-ವಾಗುವುದು. ಪ್ರಸಾದ ಎಂದರೆ ಭಗವಂತನ ಇಚ್ಛಾವಿಶೇಷ. 'ಸಃ' - ಜೀವನು. ಭಾಷ್ಯದಲ್ಲಿ 'ಸಃ' ಎಂದು ಪುನಃ ಹೇಳಿರುವುದರಿಂದ ಸೂತ್ರದಲ್ಲಿ ಅನುವೃತ್ತಿ ಹೊಂದಿ-ರುವ ಸಃ ಎಂಬ ಶಬ್ದಕ್ಕೆ ಆವೃತ್ತಿಯಾಗುವುದೆಂದು ಸೂಚಿತವಾಗಿದೆ. 'ಪೂರ್ವೋಕ್ತಃ' ಎಂಬ ಪದದಿಂದ ಸೂತ್ರದಲ್ಲಿ ಉತ್ತರತ್ರ ಎಂಬ ಪದಕ್ಕೆ ಪ್ರತಿಯೋಗಿಯಾಗಿ ಪೂರ್ವತ್ರ ಎಂಬ ಪದವನ್ನು ಸೇರಿಸಬೇಕು ಎಂದು ಹೇಳಿದಂತಾಗುವುದು. 'ತಥಾ' ಎಂಬ ಪದವು ಶೇಷವಾಗಿದೆ. ತಥಾ ಚ – 'ಯತ್ಪ್ರಸಾದಾತ್' ಯಾರ ಅನುಗ್ರಹದಿಂದ 'ಸಃ' ಆ ಜೀವನು, 'ಮುಕ್ತಃ' - ಮುಕ್ತನಾಗಿ ಅಪಹತಪಾಪ್ಮತ್ವಮೊದಲಾದ ಗುಣವುಳ್ಳವನು ಆಗುವನೋ, 'ಸಃ' - ಆ ಗುಣಗಳನ್ನು ಪ್ರದಾನ ಮಾಡಿದ ಭಗವಂತನು, ಪೂರ್ವೋಕ್ತಃ = 'ಪರಂಜ್ಯೋತಿರುಪಸಂಪದ್ಯ' ಎಂದು ಪೂರ್ವವಾಕ್ಯದಲ್ಲಿ 'ತಥಾ' - ಗುಣಗಳನ್ನು ಪ್ರದಾನ ಮಾಡಿರುವವನೆಂದು ಉಕ್ತನಾಗಿದ್ದಾನೆ – ಎಂದು ಯೋಜನೆ. ಹಾಗಿಲ್ಲದಿದ್ದರೆ 'ಉಪಸಂಪದ್ಯ' ಪರಮಾತ್ಮನನ್ನು (ಪರಂಜ್ಯೋತಿಯನ್ನು) ಹೊಂದಿ ಎಂಬ ಲ್ಯಪ್ ಪ್ರತ್ಯಯಾಂತವಾದ ಪದವು ವ್ಯರ್ಥವಾಗುವುದೆಂದು ಭಾವ. ಭಾಷ್ಯದಲ್ಲಿ 'ಉಕ್ತಃ' ಎಂಬ ಪದದ ನಂತರ 'ಯತಃ' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ಅತಃ ನ ಅತ್ರ

ಮುಕ್ತಗುಣಪ್ರಾಪ್ತೇಃ ಪರಮೇಶ್ವರಾಧೀನತ್ವೋಕ್ತ್ಯಭಾವಃ' – 'ಆದ್ದರಿಂದ ಇಲ್ಲಿ ಮುಕ್ತನ ಅಪಹತಪಾಪ್ಮತ್ವಾದಿ ಗುಣಪ್ರಾಪ್ತಿಯು ಪರಮೇಶ್ವರಾಧೀನವೆಂದು ಹೇಳುವ ವಾಕ್ಯವಿಲ್ಲ' ಎಂಬ ಅಧ್ಯಾಹಾರ ಪಡೆಯುವ ವಾಕ್ಯದೊಂದಿಗೆ ಅನ್ವಯವಾಗುವುದು.

ಭಾ.ದೀ. – ಅಥವಾ – ನನು ಜೀವೇ ಅನ್ಯಾಧೀನಸ್ಯ ತದ್ಗುಣಜಾತಸ್ಯ ಸತ್ತ್ವಾತ್ ಸ ಏವ ಅಪಹತಪಾಪ್ಮತ್ವಾದಿನಾ ಉಕ್ತಃ, ಹೃತ್ಪದ್ಮಸ್ಥಶ್ಚಾಸ್ತು, ಇತ್ಯತ ಆಹ – ಯದಿತಿ ॥ ಯೋಜನಾ ತು – ಯತ್ ಪ್ರಸಾದಾತ್ ಸ ಜೀವೋ ಜಡದೇಹಾನ್ಮುಕ್ತೋ ಭವತಿ, ಮುಕ್ತೋ ಭೂತ್ವಾ ಚ ಸೋऽಪಹತಪಾಪ್ಮತ್ವಾದಿಗುಣೋ ಭವತಿ, ಸ ಭಗವಾನೇವ 'ಪೂರ್ವೋಕ್ತಃ' 'ಏಷ ಆತ್ಮಾऽಪಹತಪಾಪ್ಮಾ' (ಛಾಂ.೮.೧.೫) ಇತ್ಯಾದಿ ಪೂರ್ವ-ವಾಕ್ಯೇ ತಥಾऽಪಹತಪಾಪ್ಮತ್ವಾದಿನೋಕ್ತಃ, ನ ಜೀವಃ । ದಾತೃಪ್ರತಿಗೃಹೀತ್ರೋ-ರ್ಮಧ್ಯೇ ದಾತುರೇವ ಮುಖ್ಯತ್ವಾತ್, ಮುಖ್ಯಾಮುಖ್ಯಯೋಶ್ಚ ಮುಖ್ಯಸ್ಯೈವ ಗ್ರಾಹ್ಯತ್ವಾತ್ – ಇತಿ ।

ಅನೇನ – ಅಸ್ಯ 'ಏಷ ಸಂಪ್ರಸಾದೋऽಸ್ಮಾಚ್ಛರೀರಾತ್ ಸಮುತ್ಥಾಯ' (ಛಾಂ. ೮.೩.೪) ಇತ್ಯುಕ್ತಸ್ಯ ಜೀವಸ್ಯ 'ಉತ್ತರಾತ್' ದಹರವಾಕ್ಯಾಪೇಕ್ಷಯಾ ಪರಾಮರ್ಶ-ವಾಕ್ಯಾಪೇಕ್ಷಯಾ ವಾ ಅನಂತರಾತ್ 'ಸ ತತ್ರ ಪರ್ಯೇತಿ' ಇತ್ಯಾದಿ ವಚನಾತ್ 'ಅಸ್ಮಿನ್' ಪೂರ್ವಪ್ರಕೃತೇ ಜೀವೇ 'ಅಸ್ಯ' ಸತ್ಯಕಾಮತ್ವಸ್ಯ 'ಉಪಲಬ್ಧೇಃ' ಪ್ರತೀತೇಃ, ತತ ಏವಾಸ್ಯ ವಿಶೋಕತ್ವಾದೇಃ ಸಿದ್ಧೇಶ್ಚ । ಅತ ಏವ ಅಸ್ಯ ಉಕ್ತಗುಣಾಸಂಭವಾ-ಭಾವಾತ್ ಸ ಹೃತ್ಪದ್ಮಸ್ಥೋ ಜೀವ ಏವ ನ ಈಶ್ವರಃ – ಇತಿ ಚೇತ್ –

ನ; ಯತಃ ತತ್ರ 'ಸ್ವೇನ' ಇತ್ಯುತ್ತರವಾಕ್ಯಬಲಾದ್ ಆವಿರ್ಭೂತಸ್ವರೂಪೋ ಮುಕ್ತ ಉಚ್ಯತೇ । ಸ ಚ ದೇಹಾನಂತರ್ಗತತಯಾ ನ ಹೃತ್ಪದ್ಮಸ್ಥೋ ಭವತೀತಿ ಭಾವಃ । ನ ಚ ಮುಕ್ತಸ್ಯಾಪಿ ಜೀವತ್ವೇನ ತತ್ರ ಅಪಹತಪಾಪ್ಮತ್ವ-ಹೃತ್ಪದ್ಮಸ್ಥತ್ವಯೋ-ರ್ಭಿನ್ನಕಾಲೀನತ್ವೇऽಪಿ ಸಾಮಾನಾಧಿಕರಣ್ಯೋಪಪತ್ತೇರಸ್ತಿ ಪುನಃ ತಸ್ಯ ಪ್ರಾಪ್ತಿರಿತಿ ವಾಚ್ಯಮ್ । ಯತಃ 'ಅತ್ರ ವಾಕ್ಯೇ ಯೋ ಮುಕ್ತ ಉಚ್ಯತೇ ಸ ಉತ್ತರಾದ್

ಉತ್ತಮಾತ್ ಪರಮೇಶ್ವರಪ್ರಸಾದಾದೇವ ಆವಿರ್ಭೂತಸ್ವರೂಪೋ ನ ಸ್ವತಃ । ನ ಚ ಅತ್ರ ಮುಕ್ತಸ್ಯ ತದ್ಗುಣತ್ವಮೇವೋಚ್ಯತೇ, ನ ಪರಮೇಶ್ವರಾಧೀನತ್ವಂ ತದ್ಗುಣಜಾತಸ್ಯ ಇತಿ ವಾಚ್ಯಮ್ । ಯತಃ ಪೂರ್ವತ್ರ 'ಪರಂ ಜ್ಯೋತಿಃ' ಇತಿ ಪೂರ್ವವಾಕ್ಯೇ ಯತ್ಪ್ರಸಾದಾತ್ ಸ ಮುಕ್ತೋ ಭವತಿ; ಸ ಪರಮಾತ್ಮಾ ತಥಾ ಗುಣಪ್ರದಾತೃತಯಾ ಉಚ್ಯತೇ ।

ಅಥವಾ ಜೀವನಲ್ಲಿ ಭಗವಂತನಿಗೆ ಅಧೀನವಾದ ಆ ಎಲ್ಲಾ ಗುಣಸಮೂಹವೂ ಇರುವುದರಿಂದ ಆ ಜೀವನೇ ಅಪಹತಪಾಪ್ಮಾ ಇತ್ಯಾದಿಯಾಗಿ ಹೇಳಲ್ಪಟ್ಟವನೂ ಹಾಗೂ ಹೃತ್ಪದ್ಮಸ್ಥನೂ ಆಗಿರಲಿ ಎಂಬ ಶಂಕೆಗೆ ಉತ್ತರವಾಗಿ ''ಯತ್'' ಎಂಬ ವಾಕ್ಯವು ಹೊರಟಿದೆ. ಆ ವಾಕ್ಯದ ಯೋಜನೆಯಾದರೋ ಹೀಗಿರುವುದು – ಯಾರ ಅನುಗ್ರಹ-ದಿಂದ ಆ ಜೀವನು ಜಡದೇಹದಿಂದ ಮುಕ್ತನಾಗುವನೋ, ಮುಕ್ತನಾದ ನಂತರ ಅವನು ಅಪಹತಪಾಪ್ಮತ್ವಾದಿ ಗುಣವುಳ್ಳವನಾಗುವನೋ, ಆ ಭಗವಂತನೇ 'ಪೂರ್ವೋಕ್ತಃ' - 'ಏಷ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ಪೂರ್ವವಾಕ್ಯದಲ್ಲಿ ಹಾಗೇ ಅಪಹತ-ಪಾಪ್ಮತ್ವಾದಿಗಳನ್ನು ಹೊಂದಿರುವವನೆಂದು ಉಕ್ತನಾಗಿರುವನು. ಹೊರತು ಜೀವನಲ್ಲ. ಏಕೆಂದರೆ, ದಾತೃ ಮತ್ತು ಪ್ರತಿಗೃಹೀತೃ ಇವರಿಬ್ಬರ ಮಧ್ಯದಲ್ಲಿ ದಾತೃವೇ ಮುಖ್ಯನಾಗಿ-ರುವುದರಿಂದ ಮುಖ್ಯ ಮತ್ತು ಅಮುಖ್ಯರ ಮಧ್ಯದಲ್ಲಿ ಮುಖ್ಯನನ್ನೇ ಗ್ರಹಿಸುವುದು ಯುಕ್ತವಾಗಿದೆ.

ಇದರಿಂದ – ಅಸ್ಯ - 'ಏಷ ಸಂಪ್ರಸಾದಃ ಅಸ್ಮಾಚ್ಛರೀರಾತ್ ಸಮುತ್ಥಾಯ' (ಛಾಂ.) ಎಂಬ ವಾಕ್ಯದಿಂದ ಉಕ್ತನಾಗಿರುವ ಜೀವನಿಗೆ 'ಉತ್ತರಾತ್' ದಹರವಾಕ್ಯದ ದೆಸೆಯಿಂದ ಅಥವಾ ಪರಾಮರ್ಶವಾಕ್ಯದ ದೆಸೆಯಿಂದ ಮುಂದಿರುವ 'ಸ ತತ್ರ ಪರ್ಯೇತಿ' ಇತ್ಯಾದಿ ವಾಕ್ಯದಿಂದ 'ಅಸ್ಮಿನ್' - ಪೂರ್ವದಲ್ಲಿ ಪ್ರಸ್ತುತನಾಗಿರುವ ಜೀವನಲ್ಲಿ, 'ಅಸ್ಯ' ಸತ್ಯಕಾಮತ್ವವು 'ಉಪಲಬ್ಧೇಃ' ತಿಳಿದು ಬರುವುದರಿಂದ, ಆದ್ದರಿಂದಲೇ ಅವನಿಗೆ ವಿಶೋಕತ್ವ ಮೊದಲಾದ ಧರ್ಮಗಳು ಸಿದ್ಧವಾಗುವುದರಿಂದ, ಆದ್ದರಿಂದಲೇ ಆ ಜೀವನಿಗೆ ಇಲ್ಲಿ ಹೇಳಿರುವ ಗುಣಗಳು ಅಸಂಭಾವಿತವೆಂದಾ-ಗದಿರುವುದರಿಂದ ಹೃತ್ಪದ್ಮಸ್ಥನು ಜೀವನೇ ವಿಷ್ಣುವಲ್ಲ ಎಂದರೆ –

ಮುಕ್ತಗುಣಪ್ರಾಪ್ತೇಃ ಪರಮೇಶ್ವರಾಧೀನತ್ವೋಕ್ತ್ಯಭಾವಃ' – 'ಆದ್ದರಿಂದ ಇಲ್ಲಿ ಮುಕ್ತನ ಅಪಹತಪಾಪ್ಮತ್ವಾದಿ ಗುಣಪ್ರಾಪ್ತಿಯು ಪರಮೇಶ್ವರಾಧೀನವೆಂದು ಹೇಳುವ ವಾಕ್ಯವಿಲ್ಲ' ಎಂಬ ಅಧ್ಯಾಹಾರ ಪಡೆಯುವ ವಾಕ್ಯದೊಂದಿಗೆ ಅನ್ವಯವಾಗುವುದು.

ಭಾ.ದೀ. – ಅಥವಾ – ನನು ಜೀವೇ ಅನ್ಯಾಧೀನಸ್ಯ ತದ್ಗುಣಜಾತಸ್ಯ ಸತ್ತ್ವಾತ್ ಸ ಏವ ಅಪಹತಪಾಪ್ಮತ್ವಾದಿನಾ ಉಕ್ತಃ, ಹೃತ್ಪದ್ಮಸ್ಥಶ್ಚಾಸ್ತು, ಇತ್ಯತ ಆಹ – ಯದಿತಿ ॥ ಯೋಜನಾ ತು – ಯತ್ ಪ್ರಸಾದಾತ್ ಸ ಜೀವೋ ಜಡದೇಹಾನ್ಮುಕ್ತೋ ಭವತಿ, ಮುಕ್ತೋ ಭೂತ್ವಾ ಚ ಸೋಽಪಹತಪಾಪ್ಮತ್ವಾದಿಗುಣೋ ಭವತಿ, ಸ ಭಗವಾನೇವ 'ಪೂರ್ವೋಕ್ತಃ' 'ಏಷ ಆತ್ಮಾಽಪಹತಪಾಪ್ಮಾ' (ಛಾಂ.೮.೧.೫) ಇತ್ಯಾದಿ ಪೂರ್ವ-ವಾಕ್ಯೇ ತಥಾಽಪಹತಪಾಪ್ಮತ್ವಾದಿನೋಕ್ತಃ, ನ ಜೀವಃ । ದಾತೃಪ್ರತಿಗೃಹೀತ್ರೋ-ರ್ಮಧ್ಯೇ ದಾತುರೇವ ಮುಖ್ಯತ್ವಾತ್, ಮುಖ್ಯಾಮುಖ್ಯಯೋಶ್ಚ ಮುಖ್ಯಸ್ಯೈವ ಗ್ರಾಹ್ಯತ್ವಾತ್ – ಇತಿ ।

ಅನೇನ – ಅಸ್ಯ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ' (ಛಾಂ. ೮.೩.೪) ಇತ್ಯುಕ್ತಸ್ಯ ಜೀವಸ್ಯ 'ಉತ್ತರಾತ್' ದಹರವಾಕ್ಯಾಪೇಕ್ಷಯಾ ಪರಾಮರ್ಶ-ವಾಕ್ಯಾಪೇಕ್ಷಯಾ ವಾ ಅನಂತರಾತ್ 'ಸ ತತ್ರ ಪರ್ಯೇತಿ' ಇತ್ಯಾದಿ ವಚನಾತ್ 'ಅಸ್ಮಿನ್' ಪೂರ್ವಪ್ರಕೃತೇ ಜೀವೇ 'ಅಸ್ಯ' ಸತ್ಯಕಾಮತ್ವಸ್ಯ 'ಉಪಲಬ್ಧೇಃ' ಪ್ರತೀತೇಃ, ತತ ಏವಾಸ್ಯ ವಿಶೋಕತ್ವಾದೇಃ ಸಿದ್ಧೇಶ್ಚ । ಅತ ಏವ ಅಸ್ಯ ಉಕ್ತಗುಣಾಸಂಭವಾ-ಭಾವಾತ್ ಸ ಹೃತ್ಪದ್ಮಸ್ಥೋ ಜೀವ ಏವ ನ ಈಶ್ವರಃ – ಇತಿ ಚೇತ್ –

ನ; ಯತಃ ತತ್ರ 'ಸ್ವೇನ' ಇತ್ಯುತ್ತರವಾಕ್ಯಬಲಾದ್ ಆವಿರ್ಭೂತಸ್ವರೂಪೋ ಮುಕ್ತ ಉಚ್ಯತೇ । ಸ ಚ ದೇಹಾನಂತರ್ಗತತಯಾ ನ ಹೃತ್ಪದ್ಮಸ್ಥೋ ಭವತೀತಿ ಭಾವಃ । ನ ಚ ಮುಕ್ತಸ್ಯಾಪಿ ಜೀವತ್ವೇನ ತತ್ರ ಅಪಹತಪಾಪ್ಮತ್ವ-ಹೃತ್ಪದ್ಮಸ್ಥತ್ವಯೋ-ರ್ಭಿನ್ನಕಾಲೀನತ್ವೇಽಪಿ ಸಾಮಾನಾಧಿಕರಣ್ಯೋಪಪತ್ತೇರಸ್ತಿ ಪುನಃ ತಸ್ಯ ಪ್ರಾಪ್ತಿರಿತಿ ವಾಚ್ಯಮ್ । ಯತಃ 'ಅತ್ರ ವಾಕ್ಯೇ ಯೋ ಮುಕ್ತ ಉಚ್ಯತೇ ಸ ಉತ್ತರಾದ್

ಉತ್ತಮಾತ್ ಪರಮೇಶ್ವರಪ್ರಸಾದಾದೇವ ಆವಿರ್ಭೂತಸ್ವರೂಪೋ ನ ಸ್ವತಃ । ನ ಚ ಅತ್ರ ಮುಕ್ತಸ್ಯ ತದ್ಗುಣತ್ವಮೇವೋಚ್ಯತೇ, ನ ಪರಮೇಶ್ವರಾಧೀನತ್ವಂ ತದ್ಗುಣಜಾತಸ್ಯ ಇತಿ ವಾಚ್ಯಮ್ । ಯತಃ ಪೂರ್ವತ್ರ 'ಪರಂ ಜ್ಯೋತಿಃ' ಇತಿ ಪೂರ್ವವಾಕ್ಯೇ ಯತ್ಪ್ರಸಾದಾತ್ ಸ ಮುಕ್ತೋ ಭವತಿ; ಸ ಪರಮಾತ್ಮಾ ತಥಾ ಗುಣಪ್ರದಾತೃತಯಾ ಉಚ್ಯತೇ ।

ಅಥವಾ ಜೀವನಲ್ಲಿ ಭಗವಂತನಿಗೆ ಅಧೀನವಾದ ಆ ಎಲ್ಲಾ ಗುಣಸಮೂಹವೂ ಇರುವುದರಿಂದ ಆ ಜೀವನೇ ಅಪಹತಪಾಪ್ಮಾ ಇತ್ಯಾದಿಯಾಗಿ ಹೇಳಲ್ಪಟ್ಟವನೂ ಹಾಗೂ ಹೃತ್ಪದ್ಮಸ್ಥನೂ ಆಗಿರಲಿ ಎಂಬ ಶಂಕೆಗೆ ಉತ್ತರವಾಗಿ "ಯತ್" ಎಂಬ ವಾಕ್ಯವು ಹೊರಟಿದೆ. ಆ ವಾಕ್ಯದ ಯೋಜನೆಯಾದರೋ ಹೀಗಿರುವುದು – ಯಾರ ಅನುಗ್ರಹ-ದಿಂದ ಆ ಜೀವನು ಜಡದೇಹದಿಂದ ಮುಕ್ತನಾಗುವನೋ, ಮುಕ್ತನಾದ ನಂತರ ಅವನು ಅಪಹತಪಾಪ್ಮತ್ವಾದಿ ಗುಣವುಳ್ಳವನಾಗುವನೋ, ಆ ಭಗವಂತನೇ 'ಪೂರ್ವೋಕ್ತಃ' - 'ಏಷ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ಪೂರ್ವವಾಕ್ಯದಲ್ಲಿ ಹಾಗೇ ಅಪಹತ-ಪಾಪ್ಮತ್ವಾದಿಗಳನ್ನು ಹೊಂದಿರುವವನೆಂದು ಉಕ್ತನಾಗಿರುವನು. ಹೊರತು ಜೀವನಲ್ಲ. ಏಕೆಂದರೆ, ದಾತೃ ಮತ್ತು ಪ್ರತಿಗೃಹೀತೃ ಇವರಿಬ್ಬರ ಮಧ್ಯದಲ್ಲಿ ದಾತೃವೇ ಮುಖ್ಯನಾಗಿ-ರುವುದರಿಂದ ಮುಖ್ಯ ಮತ್ತು ಅಮುಖ್ಯರ ಮಧ್ಯದಲ್ಲಿ ಮುಖ್ಯನನ್ನೇ ಗ್ರಹಿಸುವುದು ಯುಕ್ತವಾಗಿದೆ.

ಇದರಿಂದ – ಅಸ್ಯ - 'ಏಷ ಸಂಪ್ರಸಾದಃ ಅಸ್ಮಾಚ್ಛರೀರಾತ್ ಸಮುತ್ಥಾಯ' (ಛಾಂ.) ಎಂಬ ವಾಕ್ಯದಿಂದ ಉಕ್ತನಾಗಿರುವ ಜೀವನಿಗೆ 'ಉತ್ತರಾತ್' ದಹರವಾಕ್ಯದ ದೆಸೆಯಿಂದ ಅಥವಾ ಪರಾಮರ್ಶವಾಕ್ಯದ ದೆಸೆಯಿಂದ ಮುಂದಿರುವ 'ಸ ತತ್ರ ಪರ್ಯೇತಿ' ಇತ್ಯಾದಿ ವಾಕ್ಯದಿಂದ 'ಅಸ್ಮಿನ್' - ಪೂರ್ವದಲ್ಲಿ ಪ್ರಸ್ತುತನಾಗಿರುವ ಜೀವನಲ್ಲಿ, 'ಅಸ್ಯ' ಸತ್ಯಕಾಮತ್ವವು 'ಉಪಲಬ್ಧೇಃ' ತಿಳಿದು ಬರುವುದರಿಂದ, ಆದ್ದರಿಂದಲೇ ಅವನಿಗೆ ವಿಶೋಕತ್ವ ಮೊದಲಾದ ಧರ್ಮಗಳು ಸಿದ್ಧವಾಗುವುದರಿಂದ, ಆದ್ದರಿಂದಲೇ ಆ ಜೀವನಿಗೆ ಇಲ್ಲಿ ಹೇಳಿರುವ ಗುಣಗಳು ಅಸಂಭಾವಿತವೆಂದಾ-ಗದಿರುವುದರಿಂದ ಹೃತ್ಪದ್ಮಸ್ಥನು ಜೀವನೇ ವಿಷ್ಣುವಲ್ಲ ಎಂದರೆ –

ಇದು ಸರಿಯಲ್ಲ; ಏಕೆಂದರೆ ತತ್ರ - ಅಲ್ಲಿ 'ಸ್ವೇನ' ಎಂಬ ಮುಂದಿನ ವಾಕ್ಯದ ಬಲದಿಂದ ಸ್ವರೂಪಾವಿರ್ಭಾವವನ್ನು ಪಡೆದ ಮುಕ್ತನು ಹೇಳಲ್ಪಟ್ಟಿದ್ದಾನೆ. ಆ ಮುಕ್ತ-ನಾದರೋ ಈ ದೇಹದ ಒಳಗೆ ಇರುವವನಲ್ಲವಾದ್ದರಿಂದ ಹೃತ್ಪದ್ಮಸ್ಥನಾಗಲು ಸಾಧ್ಯವಿಲ್ಲ ಎಂದು ಭಾವ.

ಶಂಕೆ – ಮುಕ್ತನೂ ಜೀವನೇ ಆಗಿರುವುದರಿಂದ ಅವನಲ್ಲಿ ಅಪಹತಪಾಪ್ಮತ್ವಮತ್ತು ಹೃತ್ಪದ್ಮಸ್ಥತ್ವಗಳು ಭಿನ್ನ ಭಿನ್ನ ಕಾಲದಲ್ಲಿ ಇರುವುದಾದರೂ ಒಬ್ಬನಲ್ಲೇ ಇರಲು ಸಾಧ್ಯವಿರುವುದರಿಂದ ಪುನಃ ಜೀವನೇ ಇಲ್ಲಿ ಹೃತ್ಪದ್ಮಸ್ಥನೆಂದು ಪ್ರಾಪ್ತನಾಗುವನು.

ಸಮಾಧಾನ – ಇದು ಸರಿಯಲ್ಲ; ಏಕೆಂದರೆ, ಈ ವಾಕ್ಯದಲ್ಲಿ ಯಾವ ಮುಕ್ತ-ಜೀವನು ಉಕ್ತನಾಗಿರುವನೋ ಅವನು ಉತ್ತರಾತ್ - ಉತ್ತಮವಾದ ಪರಮೇಶ್ವರನ ಪ್ರಸಾದದಿಂದಲೇ ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆದಿರುವನೇ ಹೊರತು ಸ್ವತಃ ಪಡೆದಿಲ್ಲ. (ಆದ್ದರಿಂದ ಇಲ್ಲಿ ಜೀವನು ವಿವಕ್ಷಿತನಲ್ಲ).

ಶಂಕೆ – ಇಲ್ಲಿ ಮುಕ್ತನಿಗೆ ಅಪಹತಪಾಪ್ಮತ್ವಾದಿ ಆ ಗುಣಗಳು ಇರುವವು ಎಂದು ಮಾತ್ರ ಹೇಳಲಾಗಿದೆ ಹೊರತು ಆ ಗುಣಸಮೂಹವು ಪರಮೇಶ್ವರಾಧೀನವೆಂದು ಹೇಳಿಲ್ಲ.

ಸಮಾಧಾನ – ಇದು ಸರಿಯಲ್ಲ; ಏಕೆಂದರೆ ಪೂರ್ವತ್ರ - ಹಿಂದೆ 'ಪರಂ-ಜ್ಯೋತಿಃ' ಎಂಬ ಹಿಂದಿನ ವಾಕ್ಯದಲ್ಲಿ ಯಾರ ಅನುಗ್ರಹದಿಂದ ಆ ಜೀವನು ಮುಕ್ತ-ನಾಗುವನೋ ಆ ಪರಮಾತ್ಮನೇ ತಥಾ - ಆ ಗುಣಗಳನ್ನು ಪ್ರದಾನ ಮಾಡಿರುವನೆಂದು ಹೇಳಲ್ಪಟ್ಟಿದ್ದಾನೆ. (ಆದ್ದರಿಂದ ಜೀವನ ಆ ಗುಣಗಳೆಲ್ಲವೂ ಪರಮಾತ್ಮಾಧೀನವಾಗಿದೆ ಎಂದು ಸಿದ್ಧವಾಗುವುದು.)

ಭಾ.ದೀ. – ನ ಚ ಯಥಾಕಥಂಚಿದ್ ಜೀವಸ್ಯ ಅಪಹತಪಾಪ್ಮತ್ವಾದಿಗುಣಕ-ತ್ವಾತ್ ಪುನಃ ತತ್ಪ್ರಾಪ್ತಿಃ ಇತಿ ವಾಚ್ಯಮ್ । ಯತೋ ಯಸ್ಮಾದ್ ಉತ್ತರಾದ್ ಉತ್ತಮಾದ್ ಭಗವತಃ ತತ್ಪ್ರಸಾದಾತ್ ಸ ಮುಕ್ತಃ 'ಆವಿರ್ಭೂತಸ್ವರೂಪಃ' ಅಭಿವ್ಯಕ್ತಾಪಹತಪಾಪ್ಮತ್ವಾದಿಗುಣಕಃ ಸ ತು ಭಗವಾನೇವ ಪೂರ್ವತ್ರ 'ಏಷ

ಆತ್ಮಾಽಪಹತಪಾಪ್ಮಾ' (ಛಾಂ.೮.೧.೫) ಇತಿ ಪೂರ್ವವಾಕ್ಯೇ ಉಕ್ತೋ, ನ ಮುಕ್ತ-ಜೀವಃ – ಇತಿ ಸೂತ್ರಾರ್ಥ ಉಕ್ತೋ ಭವತಿ ।

ಶಂಕೆ – ಯಾವುದಾದರೂ ಒಂದು ರೀತಿಯಿಂದ ಜೀವನು ಅಪಹತಪಾಪ್ಮತ್ವಾದಿ ಗುಣವುಳ್ಳವನಾಗುವುದರಿಂದ ಪುನಃ ಜೀವನು ಹೃತ್ಪದ್ಮಸ್ಥನೆಂದು ಪ್ರಾಪ್ತವಾಗುವನು.

ಸಮಾಧಾನ – ಈ ಶಂಕೆಯು ಯುಕ್ತವಲ್ಲ; ಏಕೆಂದರೆ, ಯತಃ - ಯಾವ ಕಾರಣ-ದಿಂದಾಗಿ ಉತ್ತರಾತ್ ಅಂದರೆ ಉತ್ತಮವಾದ ಭಗವಂತನ ಆ ಅನುಗ್ರಹದಿಂದ ಆ ಮುಕ್ತನು 'ಆವಿರ್ಭೂತಸ್ವರೂಪಃ' ಅಪಹತಪಾಪ್ಮತ್ವಾದಿ ಗುಣಗಳ ಅಭಿವ್ಯಕ್ತಿಯನ್ನು ಪಡೆಯುವನೋ ಆ ಭಗವಂತನೇ ಪೂರ್ವತ್ರ - ಏಷ ಆತ್ಮಾ ಅಪಹತಪಾಪ್ಮಾ ಎಂಬ ಹಿಂದಿನ ವಾಕ್ಯದಲ್ಲಿ ಉಕ್ತನಾಗಿರುವನು, ಹೊರತು ಮುಕ್ತಜೀವನಲ್ಲ ಎಂದು ಸೂತ್ರಾರ್ಥ -ವನ್ನು ಹೇಳಿದಂತಾಗುವುದು.

ಭಾ.ದೀ. – ಶ್ರುತ್ಯರ್ಥಸ್ತು – 'ಏಷಃ' ಜೀವೋ ಯತಃ 'ಸಂಪ್ರಸಾದಃ' ಸಮ್ಯಗ್ ವಿಷ್ಣುಪ್ರಸಾದವಾನ್ ಅತೋ 'ಅಸ್ಮಾತ್' ಚರಮಶರೀರಾತ್ 'ಸಮುತ್ಥಾಯ' ಮುಕ್ತಃ, 'ಯತ್ಪರಂ ಜ್ಯೋತಿಃ' ಬ್ರಹ್ಮ 'ಉಪಸಂಪದ್ಯ' ಪ್ರಾಪ್ಯ, ಸ್ವೇನ ರೂಪೇಣ 'ಅಭಿನಿಷ್ಪದ್ಯತೇ' ಅಭಿವ್ಯಜ್ಯತೇ 'ಸ ಉತ್ತಮಃ ಪುರುಷಃ' ಪರಂಜ್ಯೋತಿರಾಖ್ಯಃ ।

ಮುಕ್ತಸ್ಯ ವಿಷಯೈಶ್ವರ್ಯಪ್ರಕಾರಮಾಹ – ಸ ಇತಿ ॥ 'ಸಃ' ಪ್ರಾಪ್ತನಿಜಾ-ನಂದಾವಿರ್ಭಾವೋ ಮುಕ್ತಃ 'ತತ್ರ' ಮುಕ್ತಿಸ್ಥಾನೇ ಪರಮಾತ್ಮಾನುಗ್ರಹೇಣೈವ 'ಜಕ್ಷನ್' ಸ್ವಾಪೇಕ್ಷಿತಂ ಭಕ್ಷಯನ್ ಹಸನ್ ವಾ ಜ್ಞಾತಿಭಿಃ ಸಹಮುಕ್ತೈರಜ್ಞಾತಿಭಿಃ ಪೂರ್ವಕಲ್ಪಮುಕ್ತೈಃ 'ಕ್ರೀಡನ್' ಸ್ತ್ರೀಭಿಃ 'ರಮಮಾಣಃ' ರತಿಂ ಪ್ರಾಪ್ನುವನ್ ಪ್ರಾಕೃತ-ಸ್ತ್ರ್ಯಾದಿವಿಷಯಸೌಖ್ಯಮನುಭವನ್ 'ಪರ್ಯೇತಿ' ಪರಿತಃ ಸಂಚರತಿ – ಇತಿ ॥

ಶ್ರುತ್ಯರ್ಥವಾದರೋ – 'ಏಷಃ' - ಈ ಜೀವನು 'ಯತಃ' 'ಸಂಪ್ರಸಾದಃ' - ಸಮೀಚೀನವಾದ ವಿಷ್ಣುಪ್ರಸಾದವನ್ನು ಹೊಂದಿರುವನೋ ಆದ್ದರಿಂದಲೇ 'ಅಸ್ಮಾತ್' - ಆ ಅಂತಿಮಶರೀರದಿಂದ, 'ಸಮುತ್ಥಾಯ' - ಮುಕ್ತನಾಗಿ ಯಾವ 'ಪರಂ ಜ್ಯೋತಿಃ' ಪರಬ್ರಹ್ಮನನ್ನು 'ಉಪಸಂಪದ್ಯ' ಹೊಂದಿ, 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ತನ್ನ

ಸ್ವರೂಪದ ಅಭಿವ್ಯಕ್ತಿಯನ್ನು ಪಡೆಯುವನೋ, 'ಸಃ ಉತ್ತಮಃ ಪುರುಷಃ' ಆ ಪರಂಜ್ಯೋತಿ ಎನಿಸುವ ಪರಬ್ರಹ್ಮನು (ಉತ್ತಮಪುರುಷನಾಗಿದ್ದಾನೆ).

ಮುಕ್ತನು ವಿಷಯಪದಾರ್ಥಗಳನ್ನು ಅನುಭವಿಸುವ ರೀತಿಯನ್ನು – ''ಸ ತತ್ರ ಪರ್ಯೇತಿ'' ಎಂಬ ವಾಕ್ಯವು ಹೇಳುತ್ತಿದೆ. 'ಸಃ' - ಆ ತನ್ನ ಸ್ವರೂಪಾನಂದದ ಅಭಿ-ವ್ಯಕ್ತಿಯನ್ನು ಪಡೆದ ಮುಕ್ತನು, 'ತತ್ರ' - ಆ ಮುಕ್ತಿಸ್ಥಾನದಲ್ಲಿ, ಪರಮಾತ್ಮನ ಅನುಗ್ರಹದಿಂದಲೇ 'ಜಕ್ಷನ್' - ತಾನು ಬಯಸಿದ್ದನ್ನು ಅನುಭವಿಸುತ್ತಾ ಅಥವಾ ಆನಂದಿಸುತ್ತಾ ಜ್ಞಾತಿಭಿಃ - ತನ್ನ ಜೊತೆಗೆ ಮುಕ್ತರಾದ ಜೀವರಿಂದ, ಅಜ್ಞಾತಿಭಿಃ - ಹಿಂದಿನ ಕಲ್ಪದಲ್ಲಿ ಮುಕ್ತರಾದ ಜೀವರಿಂದ, 'ಕ್ರೀಡನ್' - ಕ್ರೀಡಿಸುತ್ತಾ, 'ಸ್ತ್ರೀಭಿಃ ರಮಮಾಣಃ' ಸ್ತ್ರೀಯರೊಂದಿಗೆ ಆನಂದಿಸುತ್ತಾ ಪ್ರಾಕೃತಸ್ತ್ರೀ ಮೊದಲಾದ ವಿಷಯಗಳ ಸೌಖ್ಯವನ್ನು ಅನುಭವಿಸುತ್ತಾ 'ಪರ್ಯೇತಿ' ಎಲ್ಲೆಡೆ ಸಂಚರಿಸುವನು – ಎಂದು.

ಭಾ.ದೀ. – ನನು 'ಏಷಃ' ಇತಿ ಜೀವಂ ಪರಾಮೃಶ್ಯ 'ಆತ್ಮಾ' ಇತಿ ತಸ್ಯ ಹೃತ್ಪದ್ಮಸ್ಥಾತ್ಮತ್ವಾಭಿಧಾನಾದ್ ಅಮುಖ್ಯಾಪಹತಪಾಪ್ಮತ್ವಾದಿಗುಣೋಽಪಿ ಜೀವಃ ಏತಚ್ಛಬ್ದಪರಾಮರ್ಶಬಲೇನ ಹೃತ್ಪದ್ಮಸ್ಥಾತ್ಮಾ ಕಿಂ ನ ಸ್ಯಾತ್? ಇತ್ಯಾಶಂಕಾಂ ಪರಿಹರತ್ಸೂತ್ರಮುಪನ್ಯಸ್ಯ 'ಇತರಪರಾಮರ್ಶಾತ್ ಸ ಇತಿ ಚೇನ್ನ' ಇತ್ಯನುವೃತ್ತ-ಪೂರ್ವವಾಕ್ಯೇನಾಪೇಕ್ಷಿತಸ್ಯ ಸಿದ್ಧಾಂತಪ್ರತಿಜ್ಞಾಯಾಶ್ಚ ಲಾಭಾತ್ 'ನ' ಇತ್ಯುಕ್ತ-ಸಾಧ್ಯೇ ಹೇತುತಯಾ ಸೂತ್ರಂ ವ್ಯಾಚಷ್ಟೇ – ಅನ್ಯೇತಿ ॥

''ಏಷಃ ಎಂದು ಜೀವನನ್ನು ಪರಾಮರ್ಶಿಸಿ, ಆತ್ಮಾ ಎಂಬ ಪದದಿಂದ ಆ ಜೀವನು ಹೃತ್ಪದ್ಮಸ್ಥ ಆತ್ಮನೆಂದು ಹೇಳಿರುವುದರಿಂದ ಅಮುಖ್ಯವಾದ ಅಪಹತಪಾಪ್ಮತ್ವ ಮೊದಲಾದ ಗುಣಗಳುಳ್ಳವನಾದರೂ ಏತಚ್ಛಬ್ದದಿಂದ ಪರಾಮರ್ಶಿಸಿದ ಆಧಾರದಿಂದ ಜೀವನೇ ಹೃತ್ಪದ್ಮಸ್ಥನಾದ ಆತ್ಮನು ಏಕಾಗಿರಬಾರದು?'' ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸ ಮಾಡಿ 'ಇತರಪರಾಮರ್ಶಾತ್ ಸ ಇತಿ ಚೇತ್ ನ' ಎಂದು ಅನುವೃತ್ತಿ ಹೊಂದುವ ಹಿಂದಿನ ವಾಕ್ಯದಿಂದ ಅಪೇಕ್ಷಿತವಾದ ಸಿದ್ಧಾಂತದ ಪ್ರತಿಜ್ಞೆಯು ಲಬ್ಧವಾಗುವುದರಿಂದ ''ನ'' ಎಂಬ ಪದದಿಂದ ಉಕ್ತವಾದ ಸಾಧ್ಯಕ್ಕೆ

ಸಂಬಂಧಿಸಿದ ಹೇತುವಾಗಿ ''ಅನ್ಯಾರ್ಥಶ್ಚ'' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿ-ದ್ದಾರೆ.

**ಭಾಷ್ಯಮ್ – ॥ ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ ॥ ೨೦ ॥**

**ಯಂ ಪ್ರಾಪ್ಯ ಸ್ವೇನ ರೂಪೇಣ ಜೀವೋಽಭಿನಿಷ್ಪದ್ಯತೇ ಸ ಏಷ ಆತ್ಮಾ' ಇತಿ ಪರಮಾತ್ಮಾರ್ಥಶ್ಚ ಪರಾಮರ್ಶಃ ॥ ೨೦ ॥**

''ಯಾರನ್ನು ಹೊಂದಿ ಜೀವನು ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆಯುವನೋ 'ಸ ಏಷ ಆತ್ಮಾ' ಅವನೇ ಈ ಆತ್ಮನು'' ಎಂದು ಪರಮಾತ್ಮನೇ ಇಲ್ಲಿ ಪರಾಮರ್ಶಿಸಲ್ಪಟ್ಟಿದ್ದಾನೆ.

ಭಾ.ದೀ. – ಶ್ರುತೌ 'ಪರಂಜ್ಯೋತಿಃ' ಇತಿ ನಪುಂಸಕನಿರ್ದಿಷ್ಟಸ್ಯ 'ಯಮ್' ಇತಿ ಪುಂಲಿಂಗೇನ ನಿರ್ದೇಶೋ ಲಿಂಗಸ್ಯ ಅವಿವಕ್ಷಿತತ್ವಾದ್ ವಾ ವಿಶೇಷ್ಯಶಬ್ದವಿವಕ್ಷಯಾ ವಾ ಯುಕ್ತಃ।

ಅನೇನ ಶ್ರುತೌ 'ಪರಂಜ್ಯೋತಿಃ' ಇತಿ ಏಕಂ ಪದಮ್ । ಯದ್ ವಕ್ಷ್ಯತಿ 'ಪರಂಜ್ಯೋತಿಃಶಬ್ದೇನ ಪರಮಾತ್ಮೈವೋಚ್ಯತೇ' ಇತಿ, ತಚ್ಚ 'ಪರಂಜ್ಯೋತಿಃ ಪರಂ ಬ್ರಹ್ಮ' ಇತಿ ಪೌರಾಣಿಕರೂಢ್ಯಾ ವಿಷ್ಣುವಾಚೀತ್ಯುಕ್ತಂ ಭವತಿ।

'ಜ್ಯೋತಿಃ ಪ್ರಕಾಶರೂಪಂ ಪರಂ ಬ್ರಹ್ಮೇತಿ ಭಿನ್ನೇ ಪದೇ' ಇತ್ಯಪಿ ಕೇಚಿತ್ । ಅಸ್ಮಿನ್ ಪಕ್ಷೇ ಉಕ್ತಭಾಷ್ಯವಿರೋಧಃ । ಕಿಂಚ 'ಯಂ ಪರಂಜ್ಯೋತಿರಾಖ್ಯಂ ಭಗವಂತಮ್' ಇತಿ ಯಚ್ಛಬ್ದವ್ಯಾಖ್ಯಾನಪರಟೀಕಾವಿರೋಧಃ । 'ಪರಂಜ್ಯೋತಿಃ ಪರಮಾತ್ಮಾನಮ್' ಇತಿ ವಿಷ್ಣುತತ್ತ್ವನಿರ್ಣಯಟೀಕಾವಿರೋಧಶ್ಚ। ಶ್ರುತೌ 'ಉಪ-ಸಂಪದ್ಯ' ಇತ್ಯಸ್ಯಾರ್ಥಃ 'ಪ್ರಾಪ್ಯ' ಇತಿ । ಸೌತ್ರಾನ್ಯಪದಂ ಪೂರ್ವಪಕ್ಷ್ಯಭಿ-ಮತಜೀವಪ್ರತಿಯೋಗಿತಯಾ ವ್ಯಾಖ್ಯಾತಿ – ಪರಮಾತ್ಮೇತಿ ॥ ಪರಮಾತ್ಮೈವಾರ್ಥಃ ಅಭಿಧೇಯೋ ಯಸ್ಯ ಸ ತಥೋಕ್ತಃ । 'ಪರಾಮರ್ಶಃ' ಏತಚ್ಛಬ್ದಃ । ಯದ್ವಾ –

ಪರಮಾತ್ಮನ ಏವ ಆತ್ಮತ್ವವಿಧಾನಮರ್ಥಃ ಪ್ರಯೋಜನಂ ಯಸ್ಯ ಸ ತಥೋಕ್ತಃ । ತಥಾತ್ವೇ 'ಪರಾಮರ್ಶಃ' ಏತಚ್ಛಬ್ದೇನ ಪರಿಗ್ರಹಣಮಿತ್ಯರ್ಥಃ ।

ಶ್ರುತಿಯಲ್ಲಿ 'ಪರಂಜ್ಯೋತಿಃ' ಎಂದು ನಪುಂಸಕಲಿಂಗಪದದಿಂದ ನಿರ್ದೇಶ ಮಾಡಿರುವವನನ್ನು 'ಯಮ್' ಎಂದು ಪುಂಲಿಂಗಶಬ್ದದಿಂದ ನಿರ್ದೇಶಮಾಡಿರುವುದು ಲಿಂಗವು ವಿವಕ್ಷಿತವಾಗದೇ ಇರುವುದರಿಂದ ಅಥವಾ ವಿಶೇಷ್ಯವಾಚಕ ಶಬ್ದದ ದೃಷ್ಟಿಯಿಂದ ಯುಕ್ತವಾಗಿದೆ.

ಇದರಿಂದ – ಶ್ರುತಿಯಲ್ಲಿ 'ಪರಂಜ್ಯೋತಿಃ' ಎಂಬ ಪದವು ಒಂದೇ ಪದವಾಗಿದೆ. ಇದನ್ನು 'ಪರಂಜ್ಯೋತಿಃಶಬ್ದೇನ ಪರಮಾತ್ಮೈವೋಚ್ಯತೇ' 'ಪರಂಜ್ಯೋತಿಃ ಎಂಬ ಶಬ್ದದಿಂದ ಪರಮಾತ್ಮನೇ ಉಕ್ತನಾಗಿದ್ದಾನೆ' ಎಂದು ಮುಂದೆ ಹೇಳಲಾಗಿದೆ. ಆ ಪದವು 'ಪರಂಜ್ಯೋತಿಃ ಪರಂ ಬ್ರಹ್ಮ' ಎಂದು ಪೌರಾಣಿಕರ ರೂಢಿಯಿರುವುದರಿಂದ ವಿಷ್ಣುವಾಚಕವೆಂದು ಹೇಳಿದಂತಾಗುವುದು.

ಕೆಲವರು ಜ್ಯೋತಿಃ - ಪ್ರಕಾಶರೂಪವಾದ, ಪರಂ ಬ್ರಹ್ಮನು ಎಂದು ಇವೆರಡೂ ಭಿನ್ನಪದಗಳೇ ಆಗಿವೆ ಎಂದು ಹೇಳುವರು. ಈ ಪಕ್ಷದಲ್ಲಿ ಹಿಂದೆ ಉದಾಹರಿಸಿದ ಭಾಷ್ಯದ ವಿರೋಧವಿದೆ. ಮತ್ತು 'ಯಂ ಪರಂಜ್ಯೋತಿರಾಖ್ಯಂ ಭಗವಂತಂ' 'ಯಾವ ಪರಂಜ್ಯೋತಿಯೆಂಬ ಹೆಸರಿನ ಭಗವಂತನನ್ನು' ಎಂಬುದಾಗಿ ಯಚ್ಛಬ್ದದ ವ್ಯಾಖ್ಯಾನವನ್ನು ಮಾಡುವ ಟೀಕಾವಾಕ್ಯದ ವಿರೋಧವೂ ಬರುವುದು. ಮತ್ತು 'ಪರಂಜ್ಯೋತಿಃ ಪರಮಾತ್ಮಾನಂ' ಪರಂಜ್ಯೋತಿಃ ಎಂದರೆ ಪರಮಾತ್ಮನನ್ನು ಎಂಬ ವಿಷ್ಣುತತ್ತ್ವನಿರ್ಣಯಟೀಕಾತಾತ್ಪರ್ಯದ ವಿರೋಧವು ಬರುವುದು.

ಶ್ರುತಿಯಲ್ಲಿರುವ 'ಉಪಸಂಪದ್ಯ' ಎಂಬ ಪದದ ಅರ್ಥವು 'ಪ್ರಾಪ್ಯ' - ಹೊಂದಿ ಎಂದು.

ಸೂತ್ರದಲ್ಲಿರುವ ಅನ್ಯಪದವನ್ನು ಪೂರ್ವಪಕ್ಷಿಗೆ ಅಭಿಮತವಾದ ಜೀವನಿಗೆ ಪ್ರತಿಯೋಗಿಯನ್ನು ಹೇಳುವ ಪದವೆಂದು ಭಾಷ್ಯದಲ್ಲಿ ''ಪರಮಾತ್ಮಾ'' ಎಂಬ ಪದದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪರಮಾತ್ಮೈವಾರ್ಥಃ' ಎಂದರೆ ಪರಮಾತ್ಮನೇ

ಅರ್ಥಃ - ವಾಚ್ಯವಾಗಿ ಉಳ್ಳದ್ದು ಎಂದು ಅರ್ಥ. ಪರಾಮರ್ಶಃ - ಅಂದರೆ ಪೂರ್ವಪ್ರಸ್ತುತವಾದುದನ್ನು ಪರಾಮರ್ಶಿಸುವ 'ಏತತ್' ಎಂಬ ಶಬ್ದವು ಎಂದು ಅರ್ಥ. ಅಥವಾ ಪರಮಾತ್ಮನಿಗೆ ಆತ್ಮತ್ವವನ್ನು ವಿಧಿಸುವ, ಅರ್ಥಃ - ಪ್ರಯೋಜನವುಳ್ಳದ್ದು; ಆ ಪಕ್ಷದಲ್ಲಿ ಪರಾಮರ್ಶಃ ಎಂದರೆ ಏತಚ್ಛಬ್ದದಿಂದ ಪರಿಗ್ರಹಿಸಿರುವುದು ಎಂದು ಅರ್ಥ.

ಭಾ.ದೀ. – ಸೂತ್ರಭಾಷ್ಯಯೋಃ 'ಚ'ಶಬ್ದಸ್ತು 'ನ ಕೇವಲಂ ಜೀವಪಕ್ಷೇಽಪಹತಪಾಪ್ಮತ್ವಾಸಂಭವಾಖ್ಯಬಾಧಕಸದ್ಭಾವಃ, ಕಿಂತು ಪರಾಮರ್ಶಾಖ್ಯಸಾಧಕಾಭಾವಶ್ಚ' ಇತಿ ಸಮುಚ್ಚಯಾರ್ಥಸ್ತುಶಬ್ದಾರ್ಥೋ ವಾ । ಚಂದ್ರಿಕಾಯಾಂ ತು – ನ ಕೇವಲಂ ಪರಾಮರ್ಶಸ್ಯ ಈಶ್ವರಪಕ್ಷೇ ಬಾಧಕತ್ವಾಭಾವಃ, ಕಿಂತು ಜೀವಪಕ್ಷಸಾಧಕತ್ವಾಭಾವಶ್ಚ - ಇತ್ಯುಕ್ತ್ವಾತ್ 'ಪರಾಮರ್ಶೋ ಜೀವಾನ್ಯೇಶ್ವರಾರ್ಥ ಏವ' ಇತ್ಯವಧಾರಣಾರ್ಥತಯಾ ವ್ಯಾಖ್ಯಾತಃ।

ಅನೇನ 'ಇತರಪರಾಮರ್ಶಾತ್' 'ಇತರಂ' ಜೀವಮ್ 'ಏಷಃ' ಇತಿ ಪರಾಮೃಶ್ಯ ತಸ್ಯ ಹೃತ್ಪದ್ಮಸ್ಥತ್ವಾಭಿಧಾನಾತ್ ಸ ಹೃತ್ಪದ್ಮಸ್ಥ ಆತ್ಮಾ ಜೀವ ಏವ ನೇಶ್ವರ ಇತಿ ಚೇತ್, ನ । ಕುತಃ? ಯತಃ 'ಏಷಃ' ಇತಿ ಪರಾಮರ್ಶಃ 'ಅನ್ಯಾರ್ಥಃ' ಜೀವಾನ್ಯೇಶ್ವರಾರ್ಥ ಏವ, ನ ಜೀವಾರ್ಥಃ, ಅತಃ।

ಅಥವಾ – ನ ಕೇವಲಮಸಂಭವಾತ್ ಕಿಂತು ಯತಃ ಪರಾಮರ್ಶೋಽನ್ಯಾರ್ಥೋಽಪಿ। ಯದ್ವಾ ಅಸಂಭವಾನ್ನ ಹೃತ್ಪದಸ್ಥೋ ಜೀವಃ, ಕಿಂತು ಈಶ್ವರ ಏವ। ನ ಚೈವಂ ಪರಾಮರ್ಶಾಯೋಗಃ। ಯತಃ 'ಪರಾಮರ್ಶಃ' ಏತಚ್ಛಬ್ದಸ್ತು ಅನ್ಯಾರ್ಥ ಇತಿ ತ್ರೇಧಾ ಸೂತ್ರಾರ್ಥ ಉಕ್ತೋ ಭವತಿ।

ಸೂತ್ರ ಮತ್ತು ಭಾಷ್ಯಗಳಲ್ಲಿ ಚಶಬ್ದವಾದರೋ, ಜೀವಪಕ್ಷದಲ್ಲಿ ಅಪಹತಪಾಪ್ಮತ್ವವು ಜೀವನಲ್ಲಿ ಕೂಡಲಾರದು ಎಂಬ ಬಾಧಕವು ಇರುವುದಷ್ಟೇ ಅಲ್ಲ; ಕಿಂತು ಪರಾಮರ್ಶವೆಂಬ ಸಾಧಕವೂ ಎಂದು ಸಮುಚ್ಚಯಾರ್ಥವನ್ನು ಪಡೆದಿದೆ. ಅಥವಾ ಚಶಬ್ದವು ತುಶಬ್ದದ ಅರ್ಥವನ್ನು ಹೇಳುವುದು. ಚಂದ್ರಿಕಾದಲ್ಲಾದರೋ - ಪರಾಮರ್ಶವು ಈಶ್ವರಪಕ್ಷದಲ್ಲಿ ಬಾಧಕವಾಗುವುದಿಲ್ಲ ಎಂದಷ್ಟೇ ಅಲ್ಲ; ಕಿಂತು ಜೀವಪಕ್ಷಕ್ಕೆ

ಅದು ಸಾಧಕವೂ ಆಗುವುದಿಲ್ಲ ಎಂದು ಹೇಳಿರುವುದರಿಂದ ಪರಾಮರ್ಶವು ಜೀವಭಿನ್ನನಾದ ಈಶ್ವರನಲ್ಲೇ ಮಾಡುವುದು ಹೊರತು ಜೀವನಲ್ಲಲ್ಲ ಎಂದು ಚಶಬ್ದವು ಏವಕಾರದ ಅರ್ಥವುಳ್ಳದ್ದೆಂದು ವ್ಯಾಖ್ಯಾನ ಮಾಡಲಾಗಿದೆ.

ಇದರಿಂದ – 'ಇತರಪರಾಮರ್ಶಾತ್' - ಇತರಂ ಜೀವನನ್ನು ಏಷಃ ಎಂದು ಪರಾಮರ್ಶಿಸಿದವನಿಗೆ, ಹೃತ್ಪದ್ಮಸ್ಥತ್ವವನ್ನು ವಿಧಾನ ಮಾಡಿರುವುದರಿಂದ 'ಸಃ' - ಆ ಹೃತ್ಪದ್ಮಸ್ಥನಾದ ಆತ್ಮನು ಜೀವನೇ ಹೊರತು ಈಶ್ವರನಲ್ಲ ಎಂದರೆ, ನ ಅದು ಸರಿಯಲ್ಲ. ಏಕೆಂದರೆ 'ಏಷಃ' ಎಂಬ ಪರಾಮರ್ಶವು 'ಅನ್ಯಾರ್ಥಃ' - ಜೀವಭಿನ್ನನಾದ ಈಶ್ವರನಿ-ಗೋಸ್ಕರ ಹೊರತು ಜೀವನಿಗಲ್ಲ.

ಅಥವಾ ಅಪಹತಪಾಪ್ಮತ್ವಾದಿಗಳು ಜೀವನಲ್ಲಿ ಸಂಭವಿಸುವುದಿಲ್ಲ. ಆದ್ದರಿಂದ ಎಂದಷ್ಟೇ ಅಲ್ಲ ಕಿಂತು 'ಏಷಃ' ಎಂಬ ಪರಾಮರ್ಶವು ಜೀವಭಿನ್ನನಾದ ಈಶ್ವರನಿ-ಗೋಸ್ಕರವಾಗಿ ಇರುವ ಕಾರಣದಿಂದಲೂ ಹೃತ್ಪದ್ಮಸ್ಥನು ಜೀವನಲ್ಲ. ಹೃತ್ಪದ್ಮಸ್ಥತ್ವವು ಜೀವನಲ್ಲಿ ಅಸಂಭಾವಿತವಾದುದರಿಂದ ಹೃತ್ಪದ್ಮಸ್ಥನು ಜೀವನಲ್ಲ; ಕಿಂತು ಈಶ್ವರನೇ ಆಗಿರುವನು. ಹಾಗಿದ್ದ ಪಕ್ಷದಲ್ಲಿ ಏಷಃ ಎಂಬ ಪರಾಮರ್ಶವು ಯುಕ್ತವಾಗುವುದಿಲ್ಲ ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಪರಾಮರ್ಶಃ - ಏತಚ್ಛಬ್ದದಿಂದ ಮಾಡುವ ಪರಾಮರ್ಶವು ಜೀವಭಿನ್ನನನ್ನು ಕುರಿತೇ ಇರುವುದು ಎಂದು ಮೂರುವಿಧವಾಗಿ ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – 'ಯಂ ಪ್ರಾಪ್ಯ'- 'ಯತ್ಸಮೀಪಂ ಪ್ರಾಪ್ಯ' ಇತಿ। ಅನೇನ – ಜೀವಃ ಪರಂಜ್ಯೋತಿರಾಖ್ಯಂ ಪರಮಾತ್ಮಾನಮ್ ಉಪಸಂಪದ್ಯ ಅಪರೋಕ್ಷತೋ ಜ್ಞಾತ್ವಾ ಅಥ ಸಮೀಪಂ ಪ್ರಾಪ್ಯ ಅವಿದ್ಯಾವಿಧೂನನೇನ ಆನಂದಾದಿನಾ ಸ್ವೇನ ರೂಪೇಣ ಅಭಿನಿಷ್ಪದ್ಯತೇ ಆವಿರ್ಭೂತಸ್ವಗುಣೋ ಭವತಿ – ಇತಿ ಯಾವತ್ । ಯಂ ಪ್ರಾಪ್ಯ ಸ್ವರೂಪೇಣಾಭಿನಿಷ್ಪದ್ಯತೇ ಜೀವಃ, ಸ ಏಷ ಆತ್ಮಾ - ಯ ಆತ್ಮೇತಿ ಪ್ರಾಗುಕ್ತಃ ಪರಮಾತ್ಮಾ, ಇತಿ ಹೋವಾಚ - ಬ್ರಹ್ಮಾದೀನ್ ಪ್ರತಿ ರಮಾ – ಇತಿ ಸಿದ್ಧಾಂತೇ ಶ್ರುತ್ಯರ್ಥಃ।

ಭಾಷ್ಯದಲ್ಲಿ 'ಯಂ ಪ್ರಾಪ್ಯ – ಎಂದರೆ ಯಾರ ಸಮೀಪವನ್ನು ಎಂದರ್ಥ. ಇದರಿಂದ ಜೀವನು ಪರಂಜ್ಯೋತಿ ಎಂದು ಕರೆಯಲ್ಪಡುವ ಪರಮಾತ್ಮನನ್ನು ಉಪ-ಸಂಪದ್ಯ ಅಂದರೆ ಅವನನ್ನು ಪ್ರತ್ಯಕ್ಷದಿಂದ ತಿಳಿದು ಅನಂತರ ಅವನ ಸಾಮೀಪ್ಯವನ್ನು ಪಡೆದು ಅಜ್ಞಾನವನ್ನು ಕಳೆದುಕೊಂಡು ಆನಂದ ಮೊದಲಾದ ತನ್ನ ಸ್ವರೂಪದಿಂದ 'ಅಭಿನಿಷ್ಪದ್ಯತೇ ತನ್ನ ಗುಣಗಳ ಅಭಿವ್ಯಕ್ತಿಯನ್ನು ಪಡೆಯುವನು ಎಂದು ತಾತ್ಪರ್ಯ. ಯಾರನ್ನು ಹೊಂದಿ ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಜೀವನು ಪಡೆಯುವನೋ 'ಸ ಏಷ ಆತ್ಮಾ - ಅವನು 'ಯ ಆತ್ಮಾ ಅಪಹತಪಾಪ್ಮಾ' ಎಂದು ಹಿಂದೆ ಹೇಳಲಾದ ಪರಮಾತ್ಮನೇ ಆಗಿರುವನು. ಹೀಗೆ ಬ್ರಹ್ಮಾದಿಗಳನ್ನು ಕುರಿತು ರಮೆಯು ಹೇಳಿದಳೆಂದು ಸಿದ್ಧಾಂತದಲ್ಲಿ ಶ್ರುತಿಯ ಅರ್ಥವಾಗಿದೆ.

ಭಾ.ದೀ. – ಉಕ್ತಮಾಕ್ಷಿಪ್ಯ ಸಮಾದಧತ್ಸೂತ್ರಮ್ ಉಪನ್ಯಸ್ಯ ಶ್ರುತ್ಯು-ದಾಹರಣೇನ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ಅಲ್ಪೇತಿ ॥

ಈ ಹಿಂದೆ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರವನ್ನು ಉಪನ್ಯಾಸ ಮಾಡಿ, ಶ್ರುತಿಯನ್ನು ಉದಾಹರಿಸಿ ಆಕ್ಷೇಪದ ಅಂಶವನ್ನು "ಅಲ್ಪ" ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ॥ ಓಂ ಅಲ್ಪಶ್ರುತೇರಿತಿ ಚೇತ್ತದುಕ್ತಮ್ ಓಂ ॥ ೨೧ ॥**

**'ದಹರ' (ಛಾಂ. ೮-೧-೧) ಇತ್ಯಲ್ಪಶ್ರುತೇರ್ನೇತಿ ಚೇನ್ನ । 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಇತ್ಯುಕ್ತತ್ವಾತ್ । 'ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್' ಇತಿಶ್ರುತ್ಯುಕ್ತತ್ವಾಚ್ಚ ॥ ೨೧ ॥**

॥ ಇತಿ ದಹರಾಧಿಕರಣಮ್ ॥ ೫ ॥

'ದಹರೋಽಸ್ಮಿನ್ನಾಕಾಶಃ ಎಂಬ ವಾಕ್ಯದಲ್ಲಿ ದಹರಃ ಎಂದು ಅಲ್ಪಸ್ಥಾನದಲ್ಲಿ ಇರುವಿಕೆ ಎಂಬ ಲಿಂಗವು ಶ್ರುತವಾಗಿರುವುದರಿಂದ ದಹರಸ್ಥನು ಪರಮಾತ್ಮನಲ್ಲ ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ,

'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಎಂಬ ಸೂತ್ರದಲ್ಲಿ ಸರ್ವ-
ಗತನಾದ ವಿಷ್ಣುವಿಗೂ ಅಲ್ಪಸ್ಥಾನದಲ್ಲಿ ಸ್ಥಿತಿಯನ್ನು ಹೇಳಲಾಗಿದೆ.
'ಏಷ ಆತ್ಮಾ ಅಂತರ್ಹೃದಯೇ ಜಾಯಾನ್' - ವ್ಯಾಪ್ತನಾದ ವಿಷ್ಣು-
ವಿಗೆ ಹೃದಯಸ್ಥತ್ವವನ್ನು ಕೂಡ ಹೇಳಲಾಗಿದೆ.

ಭಾ.ದೀ. – 'ದಹರಃ' ಇತಿ ಪ್ರತೀಕಗ್ರಹಣೇನ 'ದಹರೋಽಸ್ಮಿನ್ನಂತರ ಆಕಾಶಃ ತಸ್ಮಿನ್ ಯದಂತಃ' ಇತಿ ವಾಕ್ಯಂ ಗೃಹ್ಯತೇ । 'ಅಲ್ಪ'ಪದಂ ಚಾಲ್ಪಸ್ಥಾನಸ್ಥಿತಿಪರಮ್ । 'ಶ್ರುತೇಃ' ಇತ್ಯನಂತರಂ 'ಅಸಂಭವಾತ್' ಇತ್ಯನುವರ್ತತೇ । 'ಅಸ್ಮಿನ್' ಇತಿ ಚಾಸ್ತಿ । ತಥಾ ಚ – 'ದಹರಃ' ಇತಿ ವಾಕ್ಯೇ 'ಅಸ್ಮಿನ್' ದಹರಗತೇ ವಸ್ತುನಿ ಅಲ್ಪಸ್ಥಾನಸ್ಥಿತಿ-ರೂಪಲಿಂಗಶ್ರುತೇಃ ತಸ್ಯಾಶ್ಚ ಅಸ್ಮಿನ್ ಪರಮಾತ್ಮನಿ 'ಅಸಂಭವಾತ್' ಅನುಪಪತ್ತೇಃ - ಇತ್ಯನ್ವಯಃ । ಅಸ್ಮಾದ್ಧೇತೋಃ 'ನ ದಹರೇ ವಿಷ್ಣುಃ, ಕಿಂತು ಸ ಜೀವ ಏವ' ಇತಿ ಇತರಸೂತ್ರಾನುವೃತ್ತಪ್ರತಿಜ್ಞಯಾಽನ್ವಯಃ ।

ಭಾಷ್ಯದಲ್ಲಿ ''ದಹರಃ'' ಎಂಬ ಪ್ರತೀಕವನ್ನು ಗ್ರಹಿಸಿರುವುದರಿಂದ 'ದಹರೋಽ-ಸ್ಮಿನ್ನಂತರ ಆಕಾಶಃ ತಸ್ಮಿನ್ ಯದಂತಃ' ಎಂಬ ವಾಕ್ಯವು ಗ್ರಹಿಸಲ್ಪಡುತ್ತದೆ. 'ಅಸ್ಮಿನ್ ಎಂಬ ಪದವು ಅನುವೃತ್ತಿಯನ್ನು ಹೊಂದುವುದು. ತಥಾ ಚ ದಹರಃ ಎಂಬ ವಾಕ್ಯದಲ್ಲಿ ಅಸ್ಮಿನ್ - ದಹರಾಕಾಶದಲ್ಲಿರುವ ವಸ್ತುವಿಗೆ ಅಲ್ಪಸ್ಥಾನದಲ್ಲಿ ಸ್ಥಿತಿರೂಪವಾದ ಲಿಂಗವು ಶ್ರುತವಾಗಿರುವುದರಿಂದ ಮತ್ತು ಆ ಲಿಂಗವು 'ಅಸ್ಮಿನ್' ಪರಮಾತ್ಮನಲ್ಲಿ ಅಸಂಭವಾತ್ -ಅನುಪಪನ್ನವಾಗಿರುವುದರಿಂದ ಎಂದು ಪದಗಳ ಅನ್ವಯ. ಈ ಕಾರಣದಿಂದ ದಹರಾ -ಕಾಶದಲ್ಲಿರುವವನು ವಿಷ್ಣುವಲ್ಲ. ಕಿಂತು ಆ ಜೀವನೇ ಆಗಿರುವನು - ಎಂದು ಇತರ ಸೂತ್ರಗಳಿಂದ ಅನುವೃತ್ತಿಯನ್ನು ಪಡೆದ ಪದಗಳಿಂದ ಪ್ರತಿಜ್ಞೆಯನ್ನು ಮಾಡಿ ಅನ್ವಯವನ್ನು ತಿಳಿಯತಕ್ಕದ್ದು.

ಭಾ.ದೀ. – ಸೂತ್ರೇಽನುವೃತ್ತನಞ ಆವೃತ್ತಿಮಭಿಪ್ರೇತ್ಯ ಪರಿಹಾರಾಂಶಂ ವ್ಯಾಖ್ಯಾತಿ – ನೇತಿ ॥

'ಇತರ ಪರಾಮರ್ಶಾತ್' ಎಂಬ ಸೂತ್ರದಿಂದ ಅನುವೃತ್ತಿಯನ್ನು ಪಡೆದಿರುವ ನಞ್‌ಪದವು ಆವೃತ್ತಿಯನ್ನು ಹೊಂದುವುದೆಂದು ಅಭಿಪ್ರಾಯಪಟ್ಟು, ಬಂದಿರುವ ಆಕ್ಷೇಪವನ್ನು ಪರಿಹರಿಸುವ ಸೂತ್ರಾಂಶವನ್ನು ಭಾಷ್ಯದಲ್ಲಿ ''ನ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾ.ದೀ. – ನಾಲ್ಪಸ್ಥಾನಸ್ಥಿತಿಶ್ರವಣಂ ವಿಷ್ಣೌ ಅನುಪಪನ್ನಮ್ – ಇತ್ಯರ್ಥಃ । ಕುತೋ ನ? ಇತ್ಯತಃ ಪ್ರವೃತ್ತಂ 'ತದುಕ್ತಮ್' ಇತ್ಯಂಶಂ 'ಯತಃ' ಇತ್ಯ-ಧ್ಯಾಹಾರಾಭಿಪ್ರಾಯೇಣ ಹೇತುತಯಾ ವ್ಯಾಖ್ಯಾತಿ – ನಿಚಾಯ್ಯತ್ವಾದಿತಿ ॥ 'ಅತ್ರಾಪಿ' ಇತಿ ಶೇಷಃ । ತಥಾ ಚ – 'ನಿಚಾಯ್ಯತ್ವಾತ್' ಇತ್ಯತ್ರ ಸರ್ವಗತಸ್ಯಾಪಿ ವಿಷ್ಣೋಃ ವ್ಯೋಮವದಲ್ಪಸ್ಥಾನಸ್ಥಿತೇರುಕ್ತತ್ವಾತ್ - ಇತ್ಯರ್ಥಃ।**

ಅಲ್ಪಸ್ಥಾನದಲ್ಲಿ ಇರುವುದೆಂದು ಶ್ರುತವಾಗಿರುವುದು ವಿಷ್ಣುವಿನ ವಿಷಯದಲ್ಲಿ ಅನುಪಪನ್ನವಲ್ಲ ಎಂದು ಅರ್ಥ. ಏಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಹೊರಟಿರುವ 'ತದುಕ್ತಮ್' ಎಂಬ ಸೂತ್ರದ ಅಂಶವನ್ನು, 'ಯತಃ' ಎಂಬ ಪದದ ಅಧ್ಯಾಹಾರವಿದೆ ಎಂಬ ಅಭಿಪ್ರಾಯದಿಂದ, ಹೇತುವನ್ನು ಹೇಳುವ ಅಭಿಪ್ರಾಯದಿಂದ ''ನಿಚಾಯ್ಯ-ತ್ವಾತ್'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅತ್ರಾಪಿ' ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾ ಚ – ನಿಚಾಯ್ಯತ್ವಾತ್ ಎಂಬ ಸೂತ್ರದಲ್ಲಿ ವಿಷ್ಣುವಿಗೆ ಸರ್ವಗತ-ನಾಗಿದ್ದರೂ ಆಕಾಶದಂತೆ ಅಲ್ಪಸ್ಥಾನದಲ್ಲಿ ಇರುವಿಕೆಯನ್ನು ಹೇಳಿರುವುದರಿಂದ ಎಂದು ಅರ್ಥ.

**ಭಾ.ದೀ. – ನನು 'ಯುಕ್ತಂ ವ್ಯೋಮ್ನಃ ಅಂಶತೋ ಅಲ್ಪೌಕಸ್ತ್ವಮ್, ಅಂಶಸ್ಯ ಅಪೂರ್ಣತ್ವಾತ್ । ಬ್ರಹ್ಮಣಿ ತು ಅಂಶೋಽಪಿ ಪೂರ್ಣಃ, ಇತಿ ಕಥಂ ತಸ್ಯ ಅಂಶತೋಽಲ್ಪೌಕಸ್ತ್ವಮ್? ಇತ್ಯತಃ ಸೂತ್ರಶೇಷಂ ಪ್ರಕಾರಾಂತರೇಣ ವ್ಯಾಚಷ್ಟೇ – ಏಷ ಮ ಇತಿ ॥**

ಶಂಕೆ - ಆಕಾಶವು ಒಂದು ಅಂಶದ ದೃಷ್ಟಿಯಿಂದ ಅಲ್ಪಪ್ರದೇಶವಾಗಿರುವುದು ಯುಕ್ತವೇ ಆಗಿದೆ. ಏಕೆಂದರೆ, ಅಂಶವು ಅಪೂರ್ಣವಾದದ್ದು. ಬ್ರಹ್ಮನಲ್ಲಾದರೋ

ಅಂಶವೂ ಪೂರ್ಣವಾಗಿದೆ. ಆದ್ದರಿಂದ ಬ್ರಹ್ಮನಿಗೆ ಅಂಶತಃ ಅಲ್ಪಪ್ರದೇಶವಿರುವುದು ಹೇಗೆ?

ಸಮಾಧಾನ – ಈ ಆಶಂಕೆಯನ್ನು ನಿರಾಕರಿಸಲು ಸೂತ್ರದ ಉಳಿದ ಭಾಗವನ್ನು ಪ್ರಕಾರಾಂತರದಿಂದ 'ಏಷ ಮೇ' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

ಭಾ.ದೀ. – 'ಚ'ಶಬ್ದೋ ಯುಕ್ತಿಸಮುಚ್ಚಯೇ । ಸೂತ್ರಕೃಚ್ಛ್ರುತ್ಯುಕ್ತಿಸಮುಚ್ಚಯೇ ವಾ । 'ಗುಣಾಃ ಶ್ರುತಾಃ' ಇತಿ ಶ್ರುತಿಸಮುಚ್ಚಯೇ ವಾ । 'ಯಸ್ಮಿನ್' ಇತಿ ಸ್ಮೃತಿಸಮುಚ್ಚಯೇ ವಾ ।

ಅನೇನ – 'ಅಲ್ಪಶ್ರುತೇಃ' 'ದಹರಃ' ಇತಿ ವಾಕ್ಯೇ ಸರ್ವಗತೇ ವಸ್ತುನಿ ಅಲ್ಪಸ್ಥಾನಸ್ಥಿತಿಶ್ರವಣಾತ್, ತಸ್ಯಾಶ್ಚ ವಿಷ್ಣಾವಸಂಭವಾದ್ ಅನುಪಪತ್ತೇಃ, ನ ದಹರೇ ವಿಷ್ಣುಃ, ಕಿಂತು ಸ ಜೀವ ಏವೇತಿ ಚೇತ್, ನ । ಯತಃ 'ತದುಕ್ತಂ' ತತ್ರ ನಿಚಾಯ್ಯತ್ವಾದಿತಿ ಪೂರ್ವತ್ರ ತಸ್ಯ ಸರ್ವಗತಸ್ಯಾಪಿ ವಿಷ್ಣೋರ್ವ್ಯೋಮವತ್ ತದಲ್ಪಸ್ಥಾನಸ್ಥಿತತ್ವಮ್, ತಸ್ಮಾದುಪಾಸನಾರ್ಥಂ ಯುಕ್ತಮ್ - ಇತ್ಯುಕ್ತಮ್ ।

ನ ಚ ಅಂಶತೋಽಪಿ ಸರ್ವಗತತಯಾ ತತ್ರ ತದನುಪಪತ್ತಿಃ । ಯತಃ ತಸ್ಯಾಮ್ 'ಏಷ ಮ ಆತ್ಮಾ' (ಛಾಂ.೩.೧೪.೩) ಇತಿ ಛಂದೋಗಶ್ರುತೌ ತೇನ ಸರ್ವ-ಜ್ಯಾಯಸ್ತ್ವೇನ ವೃದ್ಧತಮತ್ವೇನ ವ್ಯಾಪ್ತತ್ವೇನೈವ ಪ್ರಕಾರೇಣ ತಸ್ಯ ವಿಷ್ಣೋಃ 'ತತ್' ಹೃದಯಸ್ಥತ್ವಮುಕ್ತಂ ಸ್ಮೃತ್ಯುಕ್ತಂ ಚಾತಃ – ಇತಿ ಸೂತ್ರಾರ್ಥ ಉಕ್ತೋ ಭವತಿ ।

'ಶ್ರುತ್ಯುಕ್ತತ್ವಾಚ್ಚ' ಎಂಬಲ್ಲಿ ಚಶಬ್ದವು ಯುಕ್ತಿಯ ಸಮುಚ್ಚಯವನ್ನು ಹೇಳುವುದು. ಅಥವಾ ಸೂತ್ರಕಾರರು ಉದಾಹರಿಸಿದ ಶ್ರುತಿವಾಕ್ಯದ ಸಮುಚ್ಚಯವನ್ನು ಹೇಳುವುದು. 'ಗುಣಾಃ ಶ್ರುತಾಃ' ಎಂಬ ಶ್ರುತಿಯ ಸಮುಚ್ಚಯವನ್ನು ಅಥವಾ 'ಯಸ್ಮಿನ್' ಎಂಬ ಸ್ಮೃತಿಯ ಸಮುಚ್ಚಯವನ್ನು ಹೇಳುವುದು.

ಇದರಿಂದ – 'ಅಲ್ಪಶ್ರುತೇಃ' 'ದಹರಃ' ಎಂಬ ವಾಕ್ಯದಲ್ಲಿ ಸರ್ವಗತವಾದ ವಸ್ತು-ವಿಗೆ ಅಲ್ಪಸ್ಥಾನದಲ್ಲಿ ಇರುವಿಕೆಯು ಕೇಳಿ ಬರುವುದರಿಂದ ಅಂತಹ ಇರುವಿಕೆಯು

ವಿಷ್ಣುವಿನಲ್ಲಿ ಅಸಂಭಾವಿತವಾದುದರಿಂದ ಅನುಪಪತ್ತಿಯಿರುವುದರಿಂದ ದಹರಾಕಾಶ-ದಲ್ಲಿರುವವನು ವಿಷ್ಣುವಲ್ಲ; ಕಿಂತು ಅವನು (ಅದು) ಜೀವನೇ ಆಗಿರುವನು ಎಂದರೆ, ಅದು ಸರಿಯಲ್ಲ. ಏಕೆಂದರೆ 'ತದುಕ್ತಂ' - 'ತತ್ರ' - ನಿಚಾಯ್ಯತ್ವಾತ್ ಎಂದು ಹಿಂದೆ 'ತಸ್ಯ' ಸರ್ವಗತನಾಗಿದ್ದರೂ ವಿಷ್ಣುವಿಗೆ ಆಕಾಶಕ್ಕಿರುವಂತೆ ಅಲ್ಪಸ್ಥಾನದಲ್ಲಿ ಸ್ಥಿತಿಯು ಇರುವುದು. 'ತಸ್ಮಾತ್' ಆದ್ದರಿಂದ ಉಪಾಸನೆಗೋಸ್ಕರವಾಗಿ ಅದು ಯುಕ್ತವೇ ಆಗಿದೆ ಎಂದು ಹೇಳಲಾಗಿದೆ.

ವಿಷ್ಣುವಿನ ಅಂಶವೂ ಸರ್ವಗತವಾಗಿರುವುದರಿಂದ ಅವನಲ್ಲಿ ಅದು ಅನುಪಪನ್ನ-ವಾಗುವುದು ಎಂದರೆ ಅದು ಸರಿಯಲ್ಲ. ಏಕೆಂದರೆ, 'ತಸ್ಯಾಂ' 'ಏಷ ಮ ಆತ್ಮಾ' ಎಂಬ ಛಾಂದೋಗ್ಯಶ್ರುತಿಯಲ್ಲಿ 'ತೇನ' 'ಸರ್ವಜ್ಯಾಯಸ್ತ್ವೇನ' ಅಂದರೆ ವ್ಯಾಪ್ತತ್ವಯುಕ್ತನಾದ ರೀತಿಯಿಂದಲೇ 'ತಸ್ಯ' ಆ ವಿಷ್ಣುವಿಗೆ ತತ್ - ಹೃದಯಸ್ಥತ್ವವು ಹೇಳಲ್ಪಟ್ಟಿದೆ. ಅದು ಸ್ಮೃತಿಯಲ್ಲೂ ಉಕ್ತವಾಗಿದೆ. ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನ ಚ 'ಶ್ರುತಿಸ್ಮೃತ್ಯುಕ್ತಮಪಿ ಕಥಮೇತದಂಗೀಕಾರಾರ್ಹಂ, ಯುಕ್ತಿವಿರೋಧಾತ್' ಇತಿ ವಾಚ್ಯಮ್ । ಬ್ರಹ್ಮಣೋಽಚಿಂತ್ಯಶಕ್ತಿತ್ವಾದ್ ಉಪ-ಪತ್ತೇಃ।

'ಗುಣಾಃ ಶ್ರುತಾಃ' (ಸೌಪರ್ಣಶ್ರುತಿಃ) 'ಯಸ್ಮಿನ್ ವಿರುದ್ಧಗತಯಃ' ಇತ್ಯಾದಿ ವಚನಾಚ್ಚ। ಮಮ ಹೃದಯೇ ಯ 'ಆತ್ಮಾ' - ಪರಮಾತ್ಮಾ ಅಸ್ತಿ । ಉಪಲಕ್ಷಣ-ಮೇತತ್ । ಸರ್ವಹೃದಯೇ ಚ ಯ ಆಸ್ತೇ 'ಏಷಃ' ಹೃದಯಸ್ಥಾಂಶರೂಪೋ ಭಗವಾನ್ 'ಜ್ಯಾಯಾನ್' ವೃದ್ಧತಮಃ ದೇಶಕಾಲಗುಣೈಃ ಪೂರ್ಣಃ - ಇತಿ ಶ್ರುತ್ಯರ್ಥಃ। ಉಪನಿಷದ್‌ದ್ರಷ್ಟೃಋಷಿವಾಕ್ಯಮೇತತ್ ।

ಶಂಕೆ - ಶ್ರುತಿ ಮತ್ತು ಸ್ಮೃತಿಗಳಲ್ಲಿ ಹಾಗೆ ಹೇಳಲಾಗಿದ್ದರೂ ಅದು ಅಂಗೀಕಾ-ರಾರ್ಹವಲ್ಲ. ಏಕೆಂದರೆ ಅದು ಯುಕ್ತಿವಿರುದ್ಧವಾಗಿದೆ ಎಂದರೆ, ಅದು ಸರಿಯಲ್ಲ. ಬ್ರಹ್ಮನು ಅಚಿಂತ್ಯಶಕ್ತಿಯುಳ್ಳವನಾದ್ದರಿಂದ ಅದು ಯುಕ್ತವಾಗುವುದು. 'ಗುಣಾಃ

ಶ್ರುತಾಃ', 'ಯಸ್ಮಿನ್ ವಿರುದ್ಧಗತಯಃ' ಎಂಬ ವಚನಗಳಿಂದಲೂ ಇದು ಉಪಪನ್ನ-ವಾಗುವುದು.

'ಮೇ ಹೃದಯೇ' ನನ್ನ ಹೃದಯದಲ್ಲಿ 'ಯಃ ಆತ್ಮಾ' - ಯಾವ ಪರಮಾತ್ಮನು ಇರುವನೋ, - ಇದು ಉಪಲಕ್ಷಣ - ಸರ್ವರ ಹೃದಯದಲ್ಲೂ ಯಾರು ಇರು-ವನೋ 'ಏಷಃ' - ಹೃದಯಸ್ಥನಾದ ಅಂಶರೂಪನಾದ ಭಗವಂತನು 'ಜ್ಯಾಯಾನ್' ವೃದ್ಧತಮನು ದೇಶಕಾಲಗುಣಗಳಿಂದ ಪೂರ್ಣನಾದವನು ಎಂದು 'ಏಷ ಮೇ' ಎಂಬ ಶ್ರುತಿಯ ಅರ್ಥ. ಈ ಶ್ರುತಿಯು ಉಪನಿಷದ್ ದ್ರಷ್ಟಾರನಾದ ಋಷಿಯ ವಾಕ್ಯವಾಗಿದೆ.

ಭಾ.ದೀ. – 'ವಿರುದ್ಧಗತಯೋಽಪಿ' ಅನ್ಯತ್ರ ಭಿನ್ನಾಶ್ರಯಾ ಅಪ್ಯಣುತ್ವ-ಮಹತ್ವಾದಯೋ ಧರ್ಮಾಃ ಯಸ್ಮಿನ್ 'ಪತಂತಿ' ವರ್ತಂತೇ ಚ। ನ ಕಾಲಭೇದೇನ ಇತ್ಯಾಹ – ಅನಿಶಮಿತಿ ॥ ಮುಕ್ತಸಾಧಾರಣ್ಯಮಾಶಂಕ್ಯಾಽಹ – ವಿದ್ಯಾದಯ ಇತಿ ॥ ಯಸ್ಮಾದ್ ವಿಷ್ಣೋರನ್ಯತ್ರ ಅಣುತ್ವಮಹತ್ವಾದಿವಿವಿಧಶಕ್ತಯೋ ಧರ್ಮಾಃ। ವಿದ್ಯಾ ಆದಿಃ ಜ್ಞಪ್ತಿಕಾರಣಂ ಯೇಷಾಂ ತೇ ತಥೋಕ್ತಾಃ। ಜ್ಞಾನಜ್ಞೇಯಾ ಇತಿ ಯಾವತ್। ಹರೌ ವಿರುದ್ಧಧರ್ಮಸತ್ತ್ವೇ ಪ್ರಮಾಣಮಾಹ – ಆನುಪೂರ್ವ್ಯೇತಿ ॥ 'ಆನುಪೂರ್ವೀ ಶ್ರುತಿರ್ವೇದಸ್ತ್ರಯೀ ಚಾಽಮ್ನಾಯ ಉಚ್ಯತೇ' ಇತ್ಯಭಿಧಾನಾತ್ ಶ್ರುತ್ಯಾ ಸಿದ್ಧಾ ಇತ್ಯರ್ಥಃ । ಯಚ್ಛಬ್ದಸ್ಯ 'ತದ್ ಬ್ರಹ್ಮಾಹಂ ಪ್ರಪದ್ಯೇ' ಇತಿ ಉತ್ತರವಾಕ್ಯಗತತಚ್ಛಬ್ದೇನಾನ್ವಯಃ॥))

(('ವಿರುದ್ಧಗತಯೋಽಪಿ' ಬೇರೆಡೆಯಲ್ಲಿ ಭಿನ್ನ ಆಶ್ರಯಗಳಲ್ಲಿ ಇರುವುದಾದರೂ ಅಣುತ್ವ ಮಹತ್ವ ಮೊದಲಾದ ಧರ್ಮಗಳು 'ಯಸ್ಮಿನ್ ಪತಂತಿ' ಯಾರಲ್ಲಿ ಇರುತ್ತವೋ - ಅವುಗಳು ಇರುವುದು ಕಾಲಭೇದದಿಂದ ಎಂದಲ್ಲ - ಎಂದು ''ಅನಿಶಂ'' ಎಲ್ಲಾ ಕಾಲದಲ್ಲೂ ಎಂದು ಹೇಳಲಾಗಿದೆ. ಮುಕ್ತರಲ್ಲೂ ಇಂತಹ ಧರ್ಮಗಳು ಇವೆ ಎಂದು ಶಂಕಿಸಿ ''ವಿದ್ಯಾದಯಃ'' ಎಂದು ಹೇಳಲಾಗಿದೆ. ಯಾವ ಕಾರಣದಿಂದಾಗಿ ವಿಷ್ಣುವನ್ನು ಬಿಟ್ಟು ಉಳಿದ ಕಡೆಗಳಲ್ಲಿ ಅಣುತ್ವ ಮಹತ್ವ ಮೊದಲಾದ ವಿವಿಧ ಶಕ್ತಿಗಳು ಅಂದರೆ ಧರ್ಮಗಳು ವಿದ್ಯೆಯೇ ಆದಿ - ಅಂದರೆ ಜ್ಞಾನಕಾರಣವಾಗಿ ಉಳ್ಳವುಗಳು. ವಿದ್ಯೆ-

ಯಿಂದ ತಿಳಿಯಲ್ಪಡತಕ್ಕವುಗಳು ಎಂದು ಭಾವ. ಹರಿಯಲ್ಲಿ ವಿರುದ್ಧಧರ್ಮಗಳಿರುವ ವಿಷಯದಲ್ಲಿ ''ಆನುಪೂರ್ವ್ಯಾ'' ಎಂದು ಪ್ರಮಾಣವನ್ನು ಹೇಳಿದೆ. ''ಆನುಪೂರ್ವೀ ಶ್ರುತಿರ್ವೇದಸ್ತ್ರಯೀ ಚಾಽಮ್ನಾಯ ಉಚ್ಯತೇ'' ಎಂದು ಕೋಷವಿರುವುದರಿಂದ ಶ್ರುತಿಯಿಂದ ಸಿದ್ಧವಾದವುಗಳು ಎಂದು ಅರ್ಥ. ಯತ್ ಪದಕ್ಕೆ 'ತದ್ ಬ್ರಹ್ಮ ಅಹಂ ಪ್ರಪದ್ಯೇ' ಎಂಬ ಮುಂದಿನ ವಾಕ್ಯದಲ್ಲಿರುವ ತಚ್ಛಬ್ದದೊಂದಿಗೆ ಅನ್ವಯ)).

॥ ಇಲ್ಲಿಗೆ ಭಾಷ್ಯದೀಪಿಕಾದ ಕನ್ನಡಾನುವಾದದಲ್ಲಿ ದಹರಾಧಿಕರಣವು ಮುಗಿಯಿತು ॥

* * * * *

## ೬. ಅಥಾನುಕೃತ್ಯಧಿಕರಣಮ್

ಭಾ.ದೀ. – ಅತ್ರಾಧಿಕರಣೇ 'ಕಥಂ ನು ತದ್ ವಿಜಾನೀಯಾಮ್' ಇತಿ ವಾಕ್ಯೋಕ್ತಂ ಜ್ಞಾನಾರ್ಥಂ ಜ್ಞೇಯಪ್ರಾರ್ಥನಾವಿಷಯತ್ವಂ ವಾ 'ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ' ಇತಿ ಬ್ರಹ್ಮಜ್ಞಾನಾನುಕೂಲಾಭಿವ್ಯಕ್ತ್ಯಾಖ್ಯಭಾನ-ಪ್ರಾರ್ಥನಾವಿಷಯತ್ವರೂಪಂ ವಾ ಆನುಕೂಲ್ಯೇನ ಗೃಹ್ಯಮಾಣತ್ವಂ ಲಿಂಗಂ ಬ್ರಹ್ಮಣಿ ಸಮನ್ವೀಯತೇ । ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ಸೂಚಯನ್ ಸಯುಕ್ತಿಕಂ ಪೂರ್ವಪಕ್ಷಂ ದರ್ಶಯತಿ – ಅದೃಶ್ಯತ್ವಾದೀತಿ ॥

ಈ ಅಧಿಕರಣದಲ್ಲಿ 'ಕಥಂ ನು ತದ್ವಿಜಾನೀಯಾಮ್' ಎಂಬ ಶ್ರುತಿಯಿಂದ ಹೇಳಲ್ಪಟ್ಟ 'ಜ್ಞಾನಕ್ಕೋಸ್ಕರವಾಗಿ ಜ್ಞೇಯವನ್ನು ಕುರಿತು ಮಾಡುವ ಪ್ರಾರ್ಥನಾ-ವಿಷಯತ್ವ' ಅಥವಾ 'ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ' ಎಂದು 'ಬ್ರಹ್ಮ-ಜ್ಞಾನಕ್ಕೆ ಕಾರಣವಾದ ಅಭಿವ್ಯಕ್ತಿ ಎಂದು ಕರೆಯಲ್ಪಡುವ ಭಾನದ ಪ್ರಾರ್ಥನೆಗೆ ವಿಷಯ -ವಾಗಿರುವಿಕೆ' ಎಂಬ ಆನುಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುವುದು. ಶ್ರುತಿಮೊದಲಾದವುಗಳ ಸಂಗತಿಯನ್ನು ಹಾಗೂ ವಿಷಯಾದಿಗಳನ್ನು ಸೂಚಿಸುತ್ತಾ ಸಯುಕ್ತಿಕವಾದ ಪೂರ್ವಪಕ್ಷವನ್ನು ''ಅದೃಶ್ಯತ್ವಾದಿ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – ಅದೃಶ್ಯತ್ವಾದಯಃ ಪರಮೇಶ್ವರಗುಣಾ ಉಕ್ತಾಃ । 'ತೇಷಾಂ ಸುಖಂ ಶಾಶ್ವತಂ ನೇತರೇಷಾಮ್'। 'ತದೇತದಿತಿ ಮನ್ಯಂತೇಽ-ನಿರ್ದೇಶ್ಯಂ ಪರಮಂ ಸುಖಮ್' ಇತ್ಯಾದಿನಾ ಜ್ಞಾನಿಸುಖಸ್ಯಾಪಿ ಅನಿರ್ದೇಶ್ಯತ್ವಮಜ್ಞೇಯತ್ವಂ ಚೋಚ್ಯತ ಇತಿ ।**

ಅದೃಶ್ಯತ್ವ ಮೊದಲಾದ ಭಗವಂತನ ಗುಣಗಳನ್ನು ಹೇಳಲಾಗಿದೆ. ''ತೇಷಾಂ ಸುಖಂ ಶಾಶ್ವತಂ ನೇತರೇಷಾಮ್', 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್' ಇತ್ಯಾದಿ ವಾಕ್ಯ-

ಗಳಿಂದ ಜ್ಞಾನಿಸುಖಕ್ಕೂ ಅನಿರ್ದೇಶ್ಯತ್ವವನ್ನು ಮತ್ತು ಅಜ್ಞೇಯತ್ವ-ವನ್ನು ಹೇಳಲಾಗಿದೆ.

ಭಾ.ದೀ. – 'ಉಕ್ತಾಃ' ಆನಂದಮಯಾಧಿಕರಣೇ ಉದಾಹೃತಾದೃಶ್ಯ ಇತಿ ವಾಕ್ಯೇ - ಇತಿ ಭಾವಃ। 'ಉಕ್ತಾಃ' ಇತ್ಯನಂತರಂ 'ತತ್ರ ಪ್ರವಿಷ್ಟಮ್' ಇತಿ ಶೇಷಃ।

ಪ್ರಥಮಾದಿಪದೇನ ಅನಿರುಕ್ತತ್ವಾದೇಃ, ದ್ವಿತೀಯೇನ ತು 'ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' (ಕಠ.೫.೧೪) ಇತಿ ಸಮನ್ವೇತವ್ಯ-ಲಿಂಗಬೋಧಕೋತ್ತರಾರ್ಧಸ್ಯ ಚ ಗ್ರಹಣಮ್ । ನ ಕೇವಲಂ ವಿಷ್ಣೋಃ, ಕಿಂತು ಜ್ಞಾನಿಸುಖಸ್ಯಾಪೀತ್ಯರ್ಥಃ। ಏವಾರ್ಥೋ ವಾ ಅಪಿಶಬ್ದಃ ಆನುಮಾನಿಕಸೂತ್ರಗತ-ಅಪಿಪದವತ್ । 'ಅಜ್ಞೇಯತ್ವಂ' ಸಾಕಲ್ಯೇನ ಅಜ್ಞೇಯತ್ವಂ ದುರ್ಜ್ಞೇಯತ್ವಮಿತಿ ಯಾವತ್ ।

ಚಶಬ್ದಃ ಪರಸ್ಪರಸಮುಚ್ಚಯೇ, ಆನುಕೂಲ್ಯೇನ ಗೃಹ್ಯಮಾಣತ್ವರೂಪಸಮ-ನ್ವೇತವ್ಯಲಿಂಗಸಮುಚ್ಚಯೇ ವಾ । ಪೂರ್ವಶ್ರುತ್ಯನುಸಾರಾತ್ 'ಅದೃಶ್ಯತ್ವಾದಯಃ' ಇತಿ, ಏತಚ್ಛ್ರುತ್ಯನುಸಾರಾತ್ 'ಅನಿರ್ದೇಶ್ಯತ್ವಮ್' ಇತಿ ವ್ಯುತ್ಕ್ರಮಃ।

''ಉಕ್ತಾಃ'' ಆನಂದಮಯಾಧಿಕರಣದಲ್ಲಿ ಉದಾಹರಿಸಲಾದ 'ಅದೃಶ್ಯೇ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟಿದೆ ಎಂದು ಭಾವ. 'ಉಕ್ತಾಃ' ಎಂಬ ಪದದ ನಂತರ 'ತತ್ರ ಪ್ರವಿಷ್ಟಮ್'' 'ಅವುಗಳ ಮಧ್ಯೆ ಸೇರಿರುವ' ಎಂಬ ಪದಗಳು ಶೇಷವಾಗಿವೆ.

ಭಾಷ್ಯದಲ್ಲಿ ಮೊದಲನೆಯ ಆದಿಪದದಿಂದ ಅನಿರುಕ್ತತ್ವ ಮೊದಲಾದ ಧರ್ಮ-ಗಳನ್ನು, ಎರಡನೆಯ ಆದಿಪದದಿಂದ 'ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂಬ ಸಮನ್ವಯ ಮಾಡಲಾಗುವ ಲಿಂಗವನ್ನು ತಿಳಿಸುವ ಶ್ರುತಿಯ ಉತ್ತರಾರ್ಧವನ್ನು ಗ್ರಹಿಸಬೇಕು. 'ಜ್ಞಾನಿಸುಖಸ್ಯಾಪಿ' ಎಂಬಲ್ಲಿರುವ 'ಅಪಿ'ಶಬ್ದಕ್ಕೆ ವಿಷ್ಣುವಿಗೆ ಮಾತ್ರವಲ್ಲ ಕಿಂತು ಜ್ಞಾನಿಸುಖಕ್ಕೂ ಎಂದು ಅರ್ಥ. ಅಥವಾ ಇಲ್ಲಿ ಅಪಿ-ಶಬ್ದವು 'ಆನುಮಾನಿಕಮಪ್ಯೇಕೇಷಾಂ' ಎಂಬ ಸೂತ್ರದಲ್ಲಿರುವ ಅಪಿಪದದಂತೆ

ಏವಕಾರದ ಅರ್ಥವನ್ನು ಹೊಂದಿದೆ. ಅಜ್ಞೇಯತ್ವವೆಂದರೆ ಸಾಕಲ್ಯೇನ ಅಜ್ಞೇಯತ್ವ. ದುರ್ಜ್ಞೇಯತ್ವವೆಂದು ಭಾವ.

'ಅಜ್ಞೇಯತ್ವಂ ಚ' ಎಂಬಲ್ಲಿರುವ ಚಶಬ್ದವು ಪರಸ್ಪರಸಮುಚ್ಚಯವನ್ನು ಹೇಳುವುದು. ಅಥವಾ ಆನುಕೂಲ್ಯೇನ ಗೃಹ್ಯಮಾಣತ್ವವೆಂಬ ಸಮನ್ವಯಮಾಡಲಿರುವ ಲಿಂಗದ ಸಮುಚ್ಚಯವನ್ನು ಹೇಳುವುದು. ಭಾಷ್ಯದಲ್ಲಿ ಹಿಂದಿನ ಶ್ರುತಿಯನ್ನು ಅನುಸರಿಸಿ ಅದೃಶ್ಯತ್ವಾದಯಃ ಎಂದು ಈ ಶ್ರುತಿಯನ್ನು ಅನುಸರಿಸಿ ಅನಿರ್ದೇಶ್ಯತ್ವವನ್ನು ಎಂದು ವ್ಯತ್ಯಾಸವಾಗಿ ಹೇಳಲಾಗಿದೆ.

ಭಾ.ದೀ. – ಯದ್ಯಪಿ 'ತದೇತದಿತಿ' ಏತದೇವೋದಾಹರ್ತವ್ಯಮ್ । ತಥಾಽಪಿ ಪೂರ್ವಪಕ್ಷೇ ತಚ್ಛಬ್ದಾರ್ಥಪ್ರದರ್ಶನಾಯ 'ತೇಷಾಮ್' ಇತಿ ಪೂರ್ವವಾಕ್ಯೈಕದೇಶೋಪನ್ಯಾಸಃ । ಅತ ಏವ ತತ್ತ್ವಪ್ರದೀಪೇ 'ತೇಷಾಮಿತಿ ಪ್ರಸ್ತುತಿಃ ಪೂರ್ವಪಕ್ಷೋತ್ಥಾಪಿಕಾ' ಇತ್ಯುಕ್ತಮ್ ।

ತಥಾ ಚ - ಇತ್ಥಂ ಯೋಜನಾ – ಪೂರ್ವಮಾನಂದಮಯಾಧಿಕರಣೇ ಯೇಽದೃಶ್ಯತ್ವಾದಯೋ ಗುಣಾಃ ಪರಮೇಶ್ವರಸ್ಯೋಕ್ತಾಃ । ತತ್ರ ತೇಷು ಪ್ರವಿಷ್ಟಮನಿರ್ದೇಶ್ಯತ್ವಮಜ್ಞೇಯತ್ವಂ ಚ 'ತೇಷಾಂ ಸುಖಮ್' ಇತಿ ಪ್ರಕೃತ್ಯಾಽಽಮ್ನಾತೇನ 'ತದೇತತ್' ಇತ್ಯಾದಿನಾ ಕಾಠಕವಾಕ್ಯೇನ ಪೂರ್ವಪಕ್ಷಿರೀತ್ಯಾ ಸಮೀಪಸ್ಥಾತ್ ತಚ್ಛಬ್ದಾತ್ ಪರಾಮೃಷ್ಟಸ್ಯ 'ಜ್ಞಾನಿಸುಖಸ್ಯಾಪಿ' ಜ್ಞಾನಿಸುಖಸ್ಯೈವ ಉಚ್ಯತೇ - ಇತಿ ॥ ಪೂರ್ವಾರ್ಧೇನ ಅನಿರ್ದೇಶ್ಯತ್ವಸ್ಯ ಉತ್ತರಾರ್ಧೇ ಚ 'ಕಿಮು ಭಾತಿ ನ ಭಾತಿ' ಇತ್ಯನೇನ ದುರ್ಜ್ಞೇಯತ್ವಪರ್ಯವಸಿತಾಜ್ಞೇಯತ್ವಸ್ಯ ಚ ಅರ್ಥಾದುಕ್ತತ್ವಾದಿತಿ ಭಾವಃ । ಟೀಕಾಯಾಮ್ ಅದೃಶ್ಯತ್ವಪದಸ್ಯ ಅನಿರ್ದೇಶ್ಯತ್ವಪರತ್ವಾತ್ ಅನಿರ್ದೇಶ್ಯತ್ವಮಿತಿ ಪಾಠಾಭ್ಯುಪಗಮಾದ್ ವಾ ನ ತದ್ವಿರೋಧಃ । ಅತ್ರ ಅನಿರ್ದೇಶ್ಯತ್ವಮಜ್ಞೇಯತ್ವಂ ಚೋಚ್ಯತ ಇತಿ ಫಲೋಕ್ತಿಃ, ಆನುಕೂಲ್ಯೇನ ಗೃಹ್ಯಮಾಣತ್ವಸ್ಯೈವ ಅತ್ರ ವಿಚಾರ್ಯತ್ವಾತ್ । ತತ್ತು ದ್ವಿತೀಯಾದಿಶಬ್ದೋಪಾತ್ತವಾಕ್ಯೇನ ಚಶಬ್ದೇನ ವಾ

**ಸೂಚಿತಮಿತಿ ದ್ರಷ್ಟವ್ಯಮ್ । ಯತ ಏವಮತಃ ಪೂರ್ವೋಕ್ತಮಯುಕ್ತಮ್ ಇತಿ ಭಾವಃ।**

ಯದ್ಯಪಿ 'ತದೇತದಿತಿ' ಎಂಬ ವಾಕ್ಯವನ್ನೇ ಉದಾಹರಿಸಿಬೇಕಾಗಿದ್ದಿತು. ಆದರೂ ಪೂರ್ವಪಕ್ಷದ ಪ್ರಕಾರ ತಚ್ಛಬ್ದದ ಅರ್ಥವನ್ನು ತಿಳಿಸುವುದಕ್ಕೋಸ್ಕರ 'ತೇಷಾಮ್' ಎಂಬ ಹಿಂದಿನ ವಾಕ್ಯದ ಏಕದೇಶವನ್ನು ಉದಾಹರಿಸಲಾಗಿದೆ. ಆದ್ದರಿಂದಲೇ ತತ್ವಪ್ರದೀಪದಲ್ಲಿ - 'ತೇಷಾಮಿತಿ ಪ್ರಸ್ತುತಿಃ ಪೂರ್ವಪಕ್ಷೋತ್ಥಾಪಿಕಾ' 'ತೇಷಾಂ ಸುಖಂ' ಎಂದು ಪ್ರಸ್ತಾಪಮಾಡಿರುವುದು ಪೂರ್ವಪಕ್ಷವು ಉಂಟಾಗಲು ಆವಶ್ಯಕವಾದ ಯುಕ್ತಿಯನ್ನು ಸೂಚಿಸುವುದೆಂದು ಹೇಳಲಾಗಿದೆ.

ತಥಾ ಚ – ಭಾಷ್ಯವಾಕ್ಯದ ಯೋಜನೆ ಹೀಗಿದೆ - ಹಿಂದೆ ಆನಂದಮಯಾಧಿ ಕರಣದಲ್ಲಿ ಪರಮೇಶ್ವರನಿಗೆ ಯಾವ ಅದೃಶ್ಯತ್ವ ಮೊದಲಾದ ಗುಣಗಳು ಉಕ್ತವಾಗಿ-ವೆಯೋ ಅವುಗಳ ಮಧ್ಯೆ ಸೇರಿರುವ ಅನಿರ್ದೇಶ್ಯತ್ವ ಮತ್ತು ಅಜ್ಞೇಯತ್ವವು 'ತೇಷಾಂ ಸುಖಮ್' ಎಂದು ಪ್ರಸ್ತುತವಾಗಿ ಹೇಳಲಾಗಿರುವ 'ತದೇತತ್' ಇತ್ಯಾದಿ ಕಾಠಕ-ವಾಕ್ಯದಿಂದ, ಪೂರ್ವಪಕ್ಷಿಯ ಪ್ರಕಾರ ಸಮೀಪದಲ್ಲಿರುವ ತತ್ ಶಬ್ದದಿಂದ ಪರಾ-ಮರ್ಶಗೊಂಡಿರುವ 'ಜ್ಞಾನಿಸುಖಸ್ಯಾಪಿ' ಅಂದರೆ ಜ್ಞಾನಿಸುಖಕ್ಕೇ ಹೇಳಲಾಗಿದೆ - ಎಂದು. ಏಕೆಂದರೆ ಕಾಠಕವಾಕ್ಯದ ಪೂರ್ವಾರ್ಧದಿಂದ ಅನಿರ್ದೇಶ್ಯವೂ ಅನಿರ್ದೇಶ್ಯ-ತ್ವವೂ ಉತ್ತರಾರ್ಧದಲ್ಲಿಯಾದರೋ 'ಕಿಮು ಭಾತಿ ನ ಭಾತಿ' ಎಂಬ ಅಂಶದಿಂದ ದುರ್ಜ್ಞೇಯತ್ವದಲ್ಲಿ ಪರ್ಯವಸಾನಗೊಳ್ಳುವ ಅಜ್ಞೇಯತ್ವವು ಅರ್ಥಾತ್ ಉಕ್ತವಾಗಿದೆ ಎಂದು ಭಾವ.

ತತ್ವಪ್ರಕಾಶಿಕೆಯಲ್ಲಿ 'ಅದೃಶ್ಯತ್ವ'ಪದವು ಅನಿರ್ದೇಶ್ಯತ್ವವನ್ನು ಹೇಳುವ ತಾತ್ಪರ್ಯ-ವುಳ್ಳದ್ದು ಎಂದಾಗಲೀ, ಅನಿರ್ದೇಶ್ಯತ್ವಂ ಎಂಬುದಾಗಿ ಪಾಠವಿರುವುದೆಂದು ಒಪ್ಪುವುದ-ರಿಂದಾಗಲೀ ಅದರ ವಿರೋಧವಿಲ್ಲ. ಈ ಅಧಿಕರಣದಲ್ಲಿ ಅನುಕೂಲ್ಯೇನ ಗೃಹ್ಯ-ಮಾಣತ್ವವೇ ವಿಚಾರವಿಷಯವಾಗಿರುವುದರಿಂದ ಭಾಷ್ಯದಲ್ಲಿ 'ಅನಿರ್ದೇಶ್ಯತ್ವಂ ಅಜ್ಞೇಯತ್ವಂ ಚ ಉಚ್ಯತೇ' - ಇಲ್ಲಿ ಅನಿರ್ದೇಶ್ಯತ್ವ ಮತ್ತು ಅಜ್ಞೇಯತ್ವಗಳು ಉಕ್ತವಾಗಿವೆ ಎಂಬ ಮಾತು ಈ ಅಧಿಕರಣದ ಫಲವನ್ನು ಹೇಳುವ ಅಭಿಪ್ರಾಯ-

ವುಳ್ಳದ್ದು. ಆ ಆನುಕೂಲ್ಯೇನ ಗೃಹ್ಯಮಾಣತ್ವವಾದರೋ ಭಾಷ್ಯದಲ್ಲಿ ಎರಡನೆಯ ಆದಿಶಬ್ದದಿಂದ ಗ್ರಹಿಸಲ್ಪಡುವ ವಾಕ್ಯದಿಂದ ಅಥವಾ ಚಶಬ್ದದಿಂದ ಸೂಚಿತವಾಗಿದೆ ಎಂದು ತಿಳಿಯಬೇಕು. ಯಾವ ಕಾರಣದಿಂದಾಗಿ ಹೀಗೆ ಆಕ್ಷೇಪವಿರುವುದೋ ಆದ್ದರಿಂದ ಹಿಂದೆ ಅದೃಶ್ಯತ್ವಾದಿಗಳು ಪರಮೇಶ್ವರನ ಗುಣಗಳೆಂದು ಹೇಳಿದ್ದು ಅಯುಕ್ತವೆಂದು ಭಾವ.

ಭಾ. ದೀ. – ಅನೇನ ಆನಂದಮಯಾಧಿಕರಣೋಕ್ತಾದೃಶ್ಯತ್ವಾಜ್ಞೇಯತ್ವ-ರೂಪಸ್ಯ ಅನಿರ್ದೇಶ್ಯತ್ವಾನಿರುಕ್ತತ್ವರೂಪಸ್ಯ ಚ ತತ್ರ ಅನ್ಯತ್ರ ಚ ಸತ್ತ್ವೇ ಜ್ಞಾನಿಸುಖೇ ಅತಿವ್ಯಾಪ್ತ್ಯಾಕ್ಷೇಪಾದ್ ಇತರಮಾತ್ರನಿಷ್ಠತ್ವೇ ತು ಅಸಂಭವಾಕ್ಷೇಪಾದ್ ಫಲತಃ ತೇನ ಅಸ್ಯಾಽಕ್ಷೇಪಿಕೀ ಸಂಗತಿರುಕ್ತಾ ಭವತಿ।

ತಥಾ ಚಶಬ್ದಸೂಚಿತಮಾನುಕೂಲ್ಯೇನ ಗೃಹ್ಯಮಾಣತ್ವಂ ವಿಷಯಃ। ವಿಷ್ಣೋ-ರನ್ಯಸ್ಯ ವಾ ಇತಿ ಸಂದೇಹಃ। ಜ್ಞಾನಿಸುಖಸ್ಯೈವ ಇತಿ ಪೂರ್ವಃ ಪಕ್ಷಃ। ತಥಾ ಚ – ಅನಿರ್ದೇಶ್ಯತ್ವಾಜ್ಞೇಯತ್ವೇ ಚ ತಸ್ಯೈವ ಇತಿ ಫಲಂ; ಸುಖಶ್ರುತಿಃ, ಪ್ರಕೃತತ್ವಾದಿ-ರೂಪಯುಕ್ತಿಶ್ಚ ಸೂಚಿತಾ ಭವತಿ।

ಇದರಿಂದ – ಆನಂದಮಯಾಧಿಕರಣದಲ್ಲಿ ಉಕ್ತವಾಗಿರುವ ಅದೃಶ್ಯತ್ವ ಮತ್ತು ಅಜ್ಞೇಯತ್ವರೂಪವು ಹಾಗೂ ಅನಿರ್ದೇಶ್ಯತ್ವ ಮತ್ತು ಅನಿರುಕ್ತತ್ವ ಧರ್ಮಗಳು ಭಗವಂತನಲ್ಲಿ ಮತ್ತು ಬೇರೆಡೆಯಲ್ಲಿ ಇರುವುದಾದ ಪಕ್ಷದಲ್ಲಿ ಜ್ಞಾನಿಸುಖದಲ್ಲಿ ಅತಿವ್ಯಾಪ್ತಿ ಬರುವುದು ಎಂದು ಆಕ್ಷೇಪಿಸುವುದರಿಂದ, ಭಗವದಿತರರಲ್ಲಿ ಮಾತ್ರ ಆ ಧರ್ಮಗಳು ಇರುವುದಾದರೆ ಅಸಂಭವ ಬರುವುದು ಎಂದು ಆಕ್ಷೇಪಿಸುವುದರಿಂದ ಅದರ ಫಲವಾಗಿ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿ-ಯನ್ನು ಹೇಳಿದಂತಾಗುವುದು.

ಹಾಗೆಯೇ – ಭಾಷ್ಯದ ಚಶಬ್ದದಿಂದ ಸೂಚಿತವಾದ ಆನುಕೂಲ್ಯೇನ ಗೃಹ್ಯ-ಮಾಣತ್ವವು ಈ ಅಧಿಕರಣದ ವಿಷಯವಾಗಿದೆ. ಆ ಧರ್ಮವು ವಿಷ್ಣುವಿಗಿರುವುದೋ ಅಥವಾ ಮತ್ತೊಬ್ಬನಿಗಿರುವುದೋ ಎಂದು ಸಂದೇಹ; ಜ್ಞಾನಿಸುಖಕ್ಕೇ ಆ ಧರ್ಮ-

ವಿರುವುದು ಎಂದು ಪೂರ್ವಪಕ್ಷ. ಅನಿರ್ದೇಶ್ಯತ್ವ ಮತ್ತು ಅಜ್ಞೇಯತ್ವಗಳು ಆ ಜ್ಞಾನಿಸುಖಕ್ಕೇ ಇರುವುದೆಂದು ಪ್ರಯೋಜನ ಮತ್ತು ಸುಖಶಬ್ದ ಹಾಗೂ ಪ್ರಕೃತತ್ವವೇ ಮೊದಲಾದ ಯುಕ್ತಿಯು ಸೂಚಿತವಾಗುವುದು.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರವನ್ನು ಅವತಾರಿಕೆ ಕೊಟ್ಟು ''ಅತಃ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯ – ಅತೋ ವಕ್ತಿ-**

**॥ ಓಂ ಅನುಕೃತೇಸ್ತಸ್ಯ ಚ ಓಂ ॥ ೨೨ ॥**

**'ತಮೇವ ಭಾಂತಮನುಭಾತಿ ಸರ್ವಮ್' (ಕಠ. ೫-೧೫)**

**ಇತ್ಯನುಕೃತೇಃ, 'ತಸ್ಯ ಭಾಸಾ ಸರ್ವಮಿದಂ ವಿಭಾತಿ' (ಕಠ. ೫.೧೫)**

**ಇತಿ ವಚನಾಚ್ಚ ಪರಮಾತ್ಮೈವಾನಿರ್ದೇಶ್ಯಸುಖರೂಪಃ ।**

ಹೀಗೆ ಆಕ್ಷೇಪ ಬಂದಾಗ ಅದನ್ನು 'ಓಂ ಅನುಕೃತೇಸ್ತಸ್ಯ ಚ ಓಂ' ಎಂಬ ಸೂತ್ರದಿಂದ ಸೂತ್ರಕಾರರು ನಿರಾಕರಿಸುತ್ತಿದ್ದಾರೆ.

''ತಮೇವ ಭಾಂತಮನುಭಾತಿಸರ್ವಮ್'' ಎಂದು ಅನುಕರಣವನ್ನು ಹೇಳಿರುವುದರಿಂದ ಹಾಗೂ 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬ ವಚನದಿಂದ ಪರಮಾತ್ಮನೇ ಅನಿರ್ದೇಶ್ಯಸುಖಸ್ವರೂಪ-ನಾಗಿರುವನು.

ಭಾ.ದೀ. - 'ಇತ್ಯನುಕೃತೇಃ' ಇತ್ಯನುಭಾನಶ್ರುತೇರಿತ್ಯರ್ಥಃ । ಅನುಭಾನಂ ನಾಮ ತದಿಚ್ಛಾನುರೋಧೇನ ಭಾನಂ ಕ್ರಿಯಾವಿಶೇಷಃ । ಸೂತ್ರೇ 'ತಸ್ಯ' ಇತ್ಯಸ್ಯ 'ಅನುಕೃತೇಃ' ಇತ್ಯನೇನಾಪಿ ಸಂಬಂಧೇ ತೇನೈವಾನುಕರಣಪ್ರತಿಸಂಬಂಧಿನ

ಆನುಕೂಲ್ಯೇನ ಗೃಹ್ಯಮಾಣಸ್ಯ ತತ್ಕರ್ತುಃ ಸೂರ್ಯಾದಿತೇಜಸಶ್ಚ ಲಾಭೋ ಭವತೀತಿ ಸ್ಪಷ್ಟತ್ವಾತ್ ತದುಭಯಾನುಕ್ತಿಃ।

ಯದ್ವಾ – ಪೂರ್ವಸೂತ್ರಾತ್ ತತ್ ಇತ್ಯಸ್ಯ ವಿಪರಿಣತಸ್ಯ ಇಹ ಅನುವರ್ತನಾತ್ ಉಭಯಲಾಭೋ ಭವತೀತ್ಯಾಶಯೇನ ತದುಭಯಾನುಕ್ತಿಃ । ನ ಕೇವಲಂ ತಸ್ಯ ಇತ್ಯೇತತ್ ಸಮನ್ವೇತವ್ಯಾನುಕೂಲ್ಯೇನ ಗೃಹ್ಯಮಾಣತ್ವಾಖ್ಯಲಿಂಗ-ಧರ್ಮಿಣಃ, ಸೂರ್ಯಾದಿತೇಜಸಶ್ಚ ಪರಾಮರ್ಶಕಂ, ಕಿಂತು ಶ್ರುತಿಪ್ರತೀಕರೂಪ-ಮಪಿ ಸರ್ವಜಗತ್ಪ್ರಕಾಶತ್ವಪರಂ ಚ ಇತ್ಯಾಶಯೇನ ತದ್ಧೇತ್ವಂತರಪರತಯಾ ವ್ಯಾಚಷ್ಟೇ – ತಸ್ಯೇತಿ ॥ 'ಇತಿ ವಚನಾತ್' ಇತ್ಯನೇನ ಸೂತ್ರೇ 'ಇತ್ಯುಕ್ತೇಃ' ಇತಿ ಶೇಷೋ ದರ್ಶಿತಃ।

ಭಾಷ್ಯದಲ್ಲಿ 'ಇತ್ಯನುಕೃತೇಃ' ಅಂದರೆ ಹೀಗೆ ಅನುಭಾನವು ಶ್ರುತವಾಗಿರುವು-ದರಿಂದ ಎಂದು ಅರ್ಥ. ಅನುಭಾನವೆಂದರೆ ಅವನ ಇಚ್ಛೆಯನ್ನು ಅನುಸರಿಸಿ 'ಭಾನ' ಅಂದರೆ ಕ್ರಿಯಾವಿಶೇಷವು. ಸೂತ್ರದಲ್ಲಿ 'ತಸ್ಯ' ಎಂಬ ಪದಕ್ಕೆ 'ಅನುಕೃತೇಃ' ಎಂಬ ಪದದೊಂದಿಗೂ ಸಂಬಂಧವನ್ನು ಹೇಳಿದರೆ ಅದರಿಂದಲೇ ಅನುಕರಣಕ್ಕೆ ಪ್ರತಿಸಂಬಂಧಿ ಯಾದ ಆನುಕೂಲ್ಯೇನ ಗೃಹ್ಯಮಾಣದ ಹಾಗೂ ಅದರ ಕರ್ತೃವಾದ ಸೂರ್ಯ ಮೊದಲಾದವರ ತೇಜಸ್ಸಿನ ಪ್ರಾಪ್ತಿಯೂ ಆಗುವುದೆಂದು ಸ್ಪಷ್ಟವಿರುವುದರಿಂದ ಅವೆರಡನ್ನೂ ಹೇಳಲಾಗಿಲ್ಲ.

ಅಥವಾ – ಹಿಂದಿನ ಸೂತ್ರದಿಂದ 'ತತ್' ವಿಭಕ್ತಿವ್ಯತ್ಯಾಸವನ್ನು ಮಾಡಿಕೊಂಡು ತಸ್ಯ ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡುವುದರಿಂದ ಅವೆರಡರ ಪ್ರಾಪ್ತಿಯಾಗು-ವುದರಿಂದ ಎಂಬ ಆಶಯದಿಂದ ಅವೆರಡನ್ನು ಪ್ರತ್ಯೇಕವಾಗಿ ಹೇಳಲಾಗಿಲ್ಲ. ಸೂತ್ರದಲ್ಲಿರುವ 'ತಸ್ಯ' ಎಂಬ ಪದವು ಇಲ್ಲಿ ಸಮನ್ವಯ ಮಾಡಲ್ಪಡುವ ಆನು-ಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗವನ್ನು ಹಾಗೂ ಸೂರ್ಯ ಮೊದಲಾದ ತೇಜಸ್ಸನ್ನು ಮಾತ್ರ ಪರಾಮರ್ಶಿಸುವುದಲ್ಲದೇ, ಕಿಂತು 'ತಸ್ಯ ಭಾಸಾ' ಎಂಬ ಶ್ರುತಿಯ ಪ್ರತೀಕವೂ ಆಗಿದೆ; ಹಾಗೆಯೇ ಸರ್ವಜಗತ್ಪ್ರಕಾಶಕತ್ವ ಎಂಬ ಧರ್ಮದ ಪರವೂ ಆಗಿದೆ

ಎಂಬ ಆಶಯದಿಂದ ಆ ತಸ್ಯ ಎಂಬ ಪದವನ್ನು ಹೇತ್ವಂತರವನ್ನು ಹೇಳುವ ತಾತ್ಪರ್ಯ-ವುಳ್ಳದ್ದೆಂದು "ತಸ್ಯ" ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

'ಇತಿ ವಚನಾತ್' ಎಂಬ ಭಾಷ್ಯಪದಗಳಿಂದ ಸೂತ್ರದಲ್ಲಿ 'ಇತ್ಯುಕ್ತೇಃ' ಎಂಬ ಪದಗಳು ಶೇಷವಾಗಿವೆ ಎಂದು ದರ್ಶಿತವಾಗುವುದು.

ಭಾ.ದೀ. – ಯದ್ಯಪಿ ಸೂತ್ರಭಾಷ್ಯಯೋಃ 'ಅನುಭಾತಿ' ಇತಿ ಶ್ರುತ್ಯನು-ಸಾರಾತ್ 'ಅನುಭಾನಾತ್' ಇತಿ ವಾಚ್ಯಮ್ । ತಥಾಪಿ –

ತಾಪಿನೀ ಪಾಚಿನೀ ಚೈವ ಶೋಷಿಣೀ ಚ ಪ್ರಕಾಶಿನೀ ।
ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥

ಇತಿ ಐತರೇಯಭಾಷ್ಯೋದಾಹೃತಪಾದ್ಮವಚನಾತ್ ಸೂರ್ಯಾದಿಕರ್ತೃಕ-ಪ್ರತಪನಾದಿಕಮಪಿ ಪರಮಾತ್ಮಾಧೀನಮಿತಿ ದರ್ಶಯಿತುಮ್ 'ಅನುಕೃತೇಃ' ಇತ್ಯುಕ್ತಮ್ । ಸೂತ್ರೇ ತದನುಸಾರಿಭಾಷ್ಯೇ ಚ 'ಚ'ಶಬ್ದೋ ದ್ವಿತೀಯಸೂತ್ರಸ್ಯ ವಕ್ಷ್ಯಮಾಣವ್ಯಾಖ್ಯಾನಭೇದೇನ ಸರ್ವಜಗತ್ಪ್ರಕಾಶಕತ್ವರೂಪೋಕ್ತಹೇತುಸಮು-ಚ್ಚಯೇ ವಾ ದ್ರಷ್ಟವ್ಯಃ । ಸೂತ್ರೇ ಸಮನ್ವಯಸೂತ್ರಾದನುವೃತ್ತಸ್ಯ ವಿಧೇಯಪರಸ್ಯ 'ತತ್ತು' ಇತ್ಯಸ್ಯಾರ್ಥಮಾಹ – ಪರಮಾತ್ಮೈವೇತಿ ॥ ನ ತು ಜ್ಞಾನಿಸುಖಮ್ ಇತಿ 'ಏವ'ಶಬ್ದಾರ್ಥಃ।

ಯದ್ಯಪಿ ಸೂತ್ರ ಮತ್ತು ಭಾಷ್ಯಗಳಲ್ಲಿ 'ತಮೇವ ಭಾಂತಮ್ ಅನುಭಾತಿ ಸರ್ವಮ್' ಎಂಬ ಶ್ರುತಿಯನ್ನು ಅನುಸರಿಸಿ 'ಅನುಕೃತೇಃ' ಎಂಬ ಪದದ ಬದಲು ಅನುಭಾನಾತ್ ಎಂದೇ ಹೇಳಬೇಕಾಗಿದ್ದಿತು. ಆದರೂ –

'ತಾಪಿನೀ ಪಾಚಿನೀ ಚೈವ ಶೋಷಿಣೀ ಚ ಪ್ರಕಾಶಿನೀ ।
ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥'

"ಸುಡುವ, ಬೇಯಿಸುವ, ಒಣಗಿಸುವ ಹಾಗೂ ಬೆಳಗುವ ಶಕ್ತಿ ಯಾವುದು ಸೂರ್ಯನಲ್ಲಿ ಇರುವುದೋ ಅದು ವಸ್ತುತಃ ಸೂರ್ಯನ ಸ್ವತಂತ್ರವಾದ ಶಕ್ತಿಯಲ್ಲ.

ಆ ಶಕ್ತಿಯು ನಾರಾಯಣನಿಗೆ ಅಧೀನವಾದದ್ದು'' – ಎಂದು ಐತರೇಯಭಾಷ್ಯದಲ್ಲಿ ಉದಾಹರಿಸಲ್ಪಟ್ಟಿರುವ ಪದ್ಮಪುರಾಣದ ವಚನದಿಂದ ಸೂರ್ಯಾದಿಗಳು ಉಂಟು-ಮಾಡುವ ಪ್ರತಪನಾದಿಗಳೆಲ್ಲವೂ ಕೂಡ ಪರಮಾತ್ಮನಿಗೆ ಅಧೀನವಾದದ್ದು ಎಂದು ತಿಳಿಸಲು 'ಅನುಕೃತೇಃ' ಎಂದು ಸೂತ್ರಭಾಷ್ಯಗಳಲ್ಲಿ ಹೇಳಲಾಗಿದೆ. ಸೂತ್ರದಲ್ಲಿ ಮತ್ತು ಅದಕ್ಕೆ ಅನುಸಾರಿಯಾದ ಭಾಷ್ಯದಲ್ಲಿ ಇರುವ ಚಶಬ್ದವು ಈ ಅಧಿಕರಣದ ಎರಡನೆಯ ಸೂತ್ರಕ್ಕೆ ಮಾಡಲಾಗುವ ಇನ್ನೊಂದು ವ್ಯಾಖ್ಯಾನದ ಪ್ರಕಾರ ಸರ್ವಜಗತ್ಪ್ರಕಾಶಕತ್ವವೆಂಬ ಉಕ್ತವಾದ ಹೇತುವಿನ ಸಮುಚ್ಚಯವನ್ನಾಗಲೀ ಅಥವಾ ಸೂರ್ಯಾದಿಗಳಿಂದ ಬ್ರಹ್ಮನು ಅಪ್ರಕಾಶ್ಯನಾಗಿದ್ದಾನೆ ಎಂಬ ಉಕ್ತವಲ್ಲದ ಹೇತುವಿನ ಸಮುಚ್ಚಯವನ್ನಾಗಲೀ ಹೇಳು-ವುದೆಂದು ತಿಳಿಯಬೇಕು. ಈ ಸೂತ್ರದಲ್ಲಿ ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದುವ ವಿಧೇಯವನ್ನು ಹೇಳುವ ತಾತ್ಪರ್ಯವುಳ್ಳ ತತ್ತು ಎಂಬ ಪದಗಳ ಅರ್ಥವನ್ನು ಭಾಷ್ಯದಲ್ಲಿ ''ಪರಮಾತ್ಮೈವ'' ಎಂದು ಹೇಳಲಾಗಿದೆ. ಪರಮಾತ್ಮನೇ ಹೊರತು ಜ್ಞಾನಿಸುಖವಲ್ಲ ಎಂದು 'ಏವ'ಶಬ್ದದ ಅರ್ಥ.

ಭಾ.ದೀ. – ಲಿಂಗಸಮನ್ವಯೇನ ಭವತ್ಫಲಂ ದರ್ಶಯತಿ – ಅನಿರ್ದೇಶ್ಯೇತಿ ॥ ಅನಿರ್ದೇಶ್ಯಶ್ಚಾಸೌ ಸುಖರೂಪಶ್ಚ ಇತಿ ವಾ, ಅನಿರ್ದೇಶ್ಯಂ ಯತ್ಸುಖಂ ತದ್ರೂಪ ಇತಿ ವಾ ವಿಗ್ರಹಃ । ಅತ್ರ ರೂಪಶಬ್ದೋ ಭಿನ್ನಕ್ರಮಃ । ತಥಾ ಚ ಅನಿರ್ದೇಶ್ಯಂ ಪರಮಂ ಸುಖಂ ಪರಮಾತ್ಮರೂಪಮ್ ಇತ್ಯನ್ವಯಃ । 'ಏಕಃ' ಇತ್ಯಾದೌ ಪುಂ-ಲಿಂಗೇನ ಪ್ರಕೃತಸ್ಯ 'ಏತತ್' ಇತಿ ನಪುಂಸಕಲಿಂಗೇನ ಗ್ರಹಣಾಯ ರೂಪಶಬ್ದ-ಪ್ರಯೋಗಃ। ಉಪಲಕ್ಷಣಮೇತತ್ । 'ಅನುಗ್ರಾಹ್ಯಶ್ಚ' ಇತ್ಯಪಿ ದ್ರಷ್ಟವ್ಯಮ್ ।

ಲಿಂಗಸಮನ್ವಯದಿಂದ ಲಭಿಸುವ ಪದವನ್ನು ''ಅನಿರ್ದೇಶ್ಯ'' ಎಂಬಭಾಷ್ಯವು ಸೂಚಿಸುತ್ತಿದೆ. 'ಅನಿರ್ದೇಶ್ಯಾಸೌ ಸುಖರೂಪಶ್ಚ' ಅನಿರ್ದೇಶ್ಯನಾಗಿರುವ ಸುಖ-ರೂಪನು ಎಂದಾಗಲೀ, 'ಅನಿರ್ದೇಶ್ಯಂ ಯತ್ಸುಖಂ ತದ್ರೂಪಃ' ಅನಿರ್ದೇಶ್ಯವಾದ ಯಾವ ಸುಖವಿದೆಯೋ ತತ್ಸ್ವರೂಪನಾದವನು ಎಂದಾಗಲೀ ಈ ಪದದ ವಿಗ್ರಹ-ವಾಗಿದೆ. ರೂಪಶಬ್ದವು ಬೇರೆಡೆಯಲ್ಲಿ ಅನ್ವಯವನ್ನು ಹೊಂದುತ್ತದೆ. ಅದರಂತೆ 'ಅನಿರ್ದೇಶ್ಯಂ ಪರಮಂ ಸುಖಂ ಪರಮಾತ್ಮರೂಪಮ್' 'ಅನಿರ್ದೇಶ್ಯವಾದ ಪರಮ-

ಸುಖವು ಪರಮಾತ್ಮಸ್ವರೂಪವಾಗಿದೆ' ಎಂದು ಅನ್ವಯ. 'ಏಕೋ ವಶೀ' ಎಂಬ ಹಿಂದಿನ ವಾಕ್ಯದಲ್ಲಿ 'ಏಕಃ' ಇತ್ಯಾದಿ ಪದದಲ್ಲಿ ಪುಂಲಿಂಗದಿಂದ ಪ್ರಸ್ತುತನಾದವನನ್ನು ಏತತ್ ಎಂಬ ನಪುಂಸಕಲಿಂಗಶಬ್ದದಿಂದ ಗ್ರಹಿಸುವ ಸಲುವಾಗಿ ರೂಪಶಬ್ದವನ್ನು ಪ್ರಯೋಗಿಸಲಾಗಿದೆ. ಇದು ಉಪಲಕ್ಷಣವಾಗಿದ್ದು ಅನುಗ್ರಾಹ್ಯನೂ ಆಗಿದ್ದಾನೆ ಎಂದು ತಿಳಿಯತಕ್ಕದ್ದು.

ಭಾ.ದೀ. – ವಸ್ತುತಸ್ತು – 'ವಚನಾಚ್ಚ' ಇತಿ ಚಶಬ್ದಸ್ಯ 'ಸುಖರೂಪಶ್ಚ' ಇತ್ಯಪಿ ಸಂಬಂಧೇ ತೇನೈವ ಆನುಕೂಲ್ಯೇನ ಗೃಹ್ಯಮಾಣಾಖ್ಯಃ ಸಾಧ್ಯಧರ್ಮೀ ಸೂಚಿತ ಇತಿ ಧ್ಯೇಯಮ್ ।

ಯದ್ಯಪಿ 'ಅನಿರ್ದೇಶ್ಯತ್ವಮಜ್ಞೇಯತ್ವಂ ಚ' ಇತ್ಯುಪಕ್ರಮಾದುಭಯಂ ಗ್ರಾಹ್ಯಂ, ನ ತ್ವೇಕಂ, ಸುಖರೂಪಮಿತಿ ಚಾಧಿಕಮ್ । ತಥಾಽಪಿ ಪೂರ್ವಪಕ್ಷ್ಯುಕ್ತ-ಸುಖಶ್ರುತೇಃ ಸುಖರೂಪೇ ಬ್ರಹ್ಮಣಿ ಸಾವಕಾಶತ್ವಜ್ಞಾಪನಾಯ 'ತದೇತತ್' ಇತಿ ವಾಕ್ಯೋಕ್ತಮನಿರ್ದೇಶ್ಯಸುಖರೂಪತ್ವಮೇವ ಗೃಹೀತಮ್ । ಅಜ್ಞೇಯತ್ವಮಪಿ ದ್ರಷ್ಟವ್ಯಮ್ ।

ವಸ್ತುತಸ್ತು – ಭಾಷ್ಯದಲ್ಲಿ 'ವಚನಾಚ್ಚ' ಎಂಬಲ್ಲಿರುವ ಚಶಬ್ದಕ್ಕೆ 'ಸುಖರೂಪಶ್ಚ' ಎಂದೂ ಸಂಬಂಧವನ್ನು ಮಾಡಿದಾಗ ಅದರಿಂದಲೇ ಆನುಕೂಲ್ಯೇನ ಗೃಹ್ಯಮಾಣವೆಂಬ ಸಾಧ್ಯವು ಸೂಚಿತವಾಗುವುದು - ಎಂದು ತಿಳಿಯತಕ್ಕದ್ದು.

ಯದ್ಯಪಿ - ಭಾಷ್ಯದ ಪ್ರಾರಂಭದಲ್ಲಿ 'ಅನಿರ್ದೇಶ್ಯತ್ವಮ್ ಅಜ್ಞೇಯತ್ವಂ ಚ' ಎಂದು ಹೇಳಿರುವುದರಿಂದ ಇಲ್ಲಿ ಎರಡನ್ನೂ ಗ್ರಹಿಸಬೇಕು ಹೊರತು ಒಂದನ್ನಲ್ಲ. ಅಲ್ಲದೇ 'ಸುಖರೂಪಂ' ಎನ್ನುವುದು ಹಿಂದೆ ಹೇಳದ ಹೆಚ್ಚಿನ ಅಂಶವಾಗಿದೆ. ಆದರೂ ಪೂರ್ವಪಕ್ಷಿ ಹೇಳಿರುವ ಸುಖಶ್ರುತಿಯು ಸುಖಸ್ವರೂಪನಾದ ಬ್ರಹ್ಮನಲ್ಲಿ ಸಾವಕಾಶ-ವಾಗಿದೆ ಎಂಬುದನ್ನು ತಿಳಿಸಲು 'ತದೇತತ್' ಎಂಬ ವಾಕ್ಯದಲ್ಲಿ ಹೇಳಲಾಗಿರುವ ಅನಿರ್ದೇಶ್ಯಸುಖರೂಪತ್ವವನ್ನು ಮಾತ್ರ ಗ್ರಹಿಸಲಾಗಿದೆ. ಅಜ್ಞೇಯತ್ವವು ಇಲ್ಲಿ ವಿವಕ್ಷಿತ-ವೆಂದು ತಿಳಿಯಬೇಕು.

ಭಾ.ದೀ. – ಯದ್ಯಪ್ಯತ್ರ ಭಾಷ್ಯೇ ಲಿಂಗದ್ವಯಸ್ಯ ಆನುಕೂಲ್ಯೇನ ಗೃಹ್ಯಮಾಣಸ್ಯ ವಾ ಅನಿರ್ದೇಶ್ಯಸುಖರೂಪಸ್ಯ ವಾ ವಿಷ್ಣುತ್ವೇ ಸಾಕ್ಷಾದ್ಧೇತುತ್ವಂ ಭಾತಿ । ಟೀಕಾಯಾಂ ತು – 'ತದೇತತ್' ಇತಿ ಶ್ರುತಿಸ್ಥತಚ್ಛಬ್ದೇನ ಸಮೀಪೋಕ್ತ-ಜ್ಞಾನಿಸುಖಪರಿತ್ಯಾಗೇನ 'ಚೇತನಶ್ಚೇತನಾನಾಮ್' (ಕಠ.೫.೧೩) ಇತಿ ವ್ಯವ-ಧಾನೇನ ಪ್ರಕೃತಪರಮಾತ್ಮಗ್ರಹಣೇ ಲಿಂಗದ್ವಯಂ ಹೇತುತ್ವೇನ ಯೋಜಿತಮ್ । ತಥಾಽಪಿ ಹೇತುದ್ವಯೇನ ತಚ್ಛಬ್ದೇನ ಜ್ಞಾನಿಸುಖಪರಿತ್ಯಾಗೇನ ಪರಮಾತ್ಮನ ಏವ ಗ್ರಹಣಸಿದ್ಧೌ ತತ ಏವ ತಚ್ಛಬ್ದಗೃಹೀತಸ್ಯ ಪರಮಾತ್ಮನ ಏವ ಅನಿರ್ದೇಶ್ಯತ್ವಸುಖ-ರೂಪತ್ವಂ ಪರ್ಯವಸ್ಯತಿ ಇತ್ಯಾಶಯೇನ ಭಾಷ್ಯೇ ಲಿಂಗದ್ವಯಸ್ಯ ಪ್ರಕೃತಸಾಧ್ಯ-ಹೇತುತ್ವೇನ ಉಕ್ತಿಃ – ಇತ್ಯವಿರೋಧಃ ।

ಯದ್ಯಪಿ ಈ ಭಾಷ್ಯದಲ್ಲಿ ಹೇಳಿರುವ ಎರಡು ಲಿಂಗಗಳು ಆನುಕೂಲ್ಯೇನ ಗೃಹ್ಯಮಾಣನು ಅಥವಾ ಅನಿರ್ದೇಶ್ಯಸುಖರೂಪನು ವಿಷ್ಣುವೇ ಆಗಿರುವನು ಎಂಬ ಸಾಧ್ಯವನ್ನು ಕುರಿತು ಸಾಕ್ಷಾತ್ ಹೇತುಗಳೆಂದು ತೋರುತ್ತವೆ. ಟೀಕಾದಲ್ಲಾದರೋ – ತದೇತತ್ ಎಂಬ ಶ್ರುತಿಯಲ್ಲಿರುವ ತಚ್ಛಬ್ದದಿಂದ ಸಮೀಪದಲ್ಲಿ ಉಕ್ತವಾಗಿರುವ ಜ್ಞಾನಿಸುಖವನ್ನು ಬಿಟ್ಟು 'ಚೇತನಶ್ಚೇತನಾನಾಮ್' ಎಂದು ವ್ಯವಧಾನದಿಂದ ಪ್ರಸ್ತುತ-ನಾದ ಪರಮಾತ್ಮನನ್ನು ಗ್ರಹಿಸಲು ಎರಡು ಲಿಂಗಗಳು ಹೇತುವೆಂದು ಯೋಜನೆಯನ್ನು ಮಾಡಲಾಗಿದೆ. ತಥಾಪಿ – ಈ ಎರಡು ಹೇತುಗಳಿಂದ - ತಚ್ಛಬ್ದದಿಂದ ಜ್ಞಾನಿಸುಖ-ವನ್ನು ತ್ಯಜಿಸಿ, ಪರಮಾತ್ಮನನ್ನೇ ಗ್ರಹಿಸಬೇಕೆಂದು ಸಿದ್ಧವಾದ ನಂತರ ಆದ್ದರಿಂದಲೇ ತಚ್ಛಬ್ದದಿಂದ ಗ್ರಹಿಸಲ್ಪಟ್ಟಿರುವ ಪರಮಾತ್ಮನಿಗೇ ಅನಿರ್ದೇಶ್ಯಸುಖರೂಪತ್ವವಿರು-ವುದೆಂದು ಪರ್ಯವಸಾನವಾಗುವುದು ಎಂಬ ಆಶಯದಿಂದ ಭಾಷ್ಯದಲ್ಲಿ ಎರಡು ಲಿಂಗಗಳು ಪ್ರಕೃತಸಾಧ್ಯಕ್ಕೆ ಹೇತುಗಳಾಗಿವೆ ಎಂದು ಹೇಳಲಾಗಿದೆಯಾದ್ದರಿಂದ ವಿರೋಧವಿಲ್ಲ.

ಭಾ.ದೀ. – ಕೇಚಿತ್ತು – 'ಪರಮಾತ್ಮೈವ ಅನಿರ್ದೇಶ್ಯಸುಖರೂಪಃ' ಇತಿ ಭಾಷ್ಯಮೇವ ಅನುಕೃತಿಸೂತ್ರೇ 'ಆನಂದಮಯೋಽಭ್ಯಾಸಾತ್' ಇತ್ಯಾದಾವಿವ

ಸಮನ್ವೇತವ್ಯಶಬ್ದಾದೇರ್ವಿಷ್ಣುಪರತ್ವ ಏವ ಹೇತುನೋಽಚ್ಯತೇ, ಕಿಂತು 'ಅನಿರ್ದೇಶ್ಯಂ ಸುಖಮ್' ಇತ್ಯತ್ರ ಸಮೀಪೋಕ್ತಜ್ಞಾನಿಸುಖಪರಿತ್ಯಾಗೇ ಹೇತುರುಚ್ಯತ ಇತ್ಯತ್ರ ಜ್ಞಾಪಕಂ, ಟೀಕಾಽಪಿ ತದನುಸಾರಿಣೀ - ಇತ್ಯಾಹುಃ।

ತಥಾ ಚ – ಸಿದ್ಧಾಂತೇ ಶ್ರುತ್ಯರ್ಥಃ –

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ॥ (ಕಠ.೫.೧೨)

ಇತಿ ಪೂರ್ವವಾಕ್ಯೇ 'ಯ ಏಕಃ' ಜ್ಞಾನಾನಂದಾದ್ಯಭಿನ್ನಃ ಸಮಾಭ್ಯಧಿಕಶೂನ್ಯೋ ವಾ ಯಃ ಸರ್ವಮಸ್ಯ ವಶೇಽಸ್ತೀತಿ 'ಸರ್ವವಶೀ' ಯಃ 'ಸರ್ವಭೂತಾಂತರಾತ್ಮಾ' - ಸರ್ವಪ್ರಾಣಿನಾಮಂತರ್ನಿಯಾಮಕಃ ಯಃ 'ಏಕಂ' ಸ್ವಸ್ವರೂಪಂ ಬಹುಧಾ ಕರೋತಿ ನಿಯಮ್ಯಾನಂತ್ಯಾತ್, ತಂ ಪ್ರಕೃತಮ್ 'ಆತ್ಮಸ್ಥತ್ವಂ' - ಜೀವಹೃದಯಸ್ಥಿತಂ ಯೇ 'ಧೀರಾಃ' ಜ್ಞಾನಿನೋಽನುಪಶ್ಯಂತಿ ಇತಿ ಪ್ರಕೃತಾ ಯೇ ಜ್ಞಾನಿನಃ ತೇಷಾಮೇವ 'ಶಾಶ್ವತಂ ಸುಖಮ್' ನಿತ್ಯಾಭಿವ್ಯಕ್ತಸೌಖ್ಯಂ ನೇತರೇಷಾಮ್। ಅನೇನ ಬ್ರಹ್ಮಸಾಮರ್ಥ್ಯಮುಕ್ತಂ ಭವತಿ।

ಏವಂ 'ನಿತ್ಯೋ ನಿತ್ಯಾನಾಮ್' ಇತಿ ವಾಕ್ಯಮಪಿ ಬ್ರಹ್ಮಮಾಹಾತ್ಮ್ಯಪರತಯಾ ವ್ಯಾಖ್ಯೇಯಮ್।

ಕೆಲವರಾದರೋ – 'ಪರಮಾತ್ಮೈವ ಅನಿರ್ದೇಶ್ಯಸುಖರೂಪಃ' ಪರಮಾತ್ಮನೇ ಅನಿರ್ದೇಶ್ಯಸ್ವರೂಪನಾಗಿದ್ದಾನೆ ಎಂಬ ಭಾಷ್ಯವಾಕ್ಯವೇ 'ಆನಂದಮಯೋಽಭ್ಯಾಸಾತ್' ಇತ್ಯಾದಿಸೂತ್ರಗಳಲ್ಲಿ ಹೇಗೆ ಸಮನ್ವಯಮಾಡಲ್ಪಡುವ ಶಬ್ದ ಮೊದಲಾದವುಗಳು ವಿಷ್ಣುಪರವಾಗಿವೆ ಎಂಬ ವಿಷಯದಲ್ಲಿ ಹೇತುವನ್ನು ಹೇಳಲಾಗಿದೆಯೋ ಹಾಗೆ ಅನುಕೃತೇಸ್ತಸ್ಯ ಚ ಎಂಬ ಸೂತ್ರದಲ್ಲಿ ಹೇತುವನ್ನು ಹೇಳಲಾಗಿಲ್ಲ. ಕಿಂತು 'ಅನಿರ್ದೇಶ್ಯಂ ಸುಖಮ್' ಎಂಬ ಶ್ರುತಿಯಲ್ಲಿ ಸಮೀಪದಲ್ಲಿ ಹೇಳಲಾಗಿರುವ ಜ್ಞಾನಿಸುಖವನ್ನು ಗ್ರಹಿಸತಕ್ಕದ್ದಲ್ಲ ಎಂಬ ವಿಷಯದಲ್ಲಿ ಹೇತುವನ್ನು ಹೇಳಲಾಗಿದೆ ಎಂಬ ವಿಷಯ-

ದಲ್ಲಿ ಜ್ಞಾಪಕವಾಗಿದೆ; ಟೀಕಾ ಗ್ರಂಥವೂ ಕೂಡ ಇದೇ ಅಭಿಪ್ರಾಯವನ್ನು ಅನು-ಸರಿಸುವುದು- ಎಂದು ಹೇಳುವರು.

ತಥಾ ಚ – ಸಿದ್ಧಾಂತದ ಪ್ರಕಾರ ಪ್ರಕೃತ ಶ್ರುತ್ಯರ್ಥ ಹೀಗಿದೆ –

'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ' ಎಂಬ ಹಿಂದಿನ ವಾಕ್ಯದಲ್ಲಿ ಯಃ ಏಕಃ - ಯಾರು ಜ್ಞಾನಾನಂದಾದಿ ತನ್ನ ಗುಣಗಳಿಂದ ಅಭಿನ್ನನಾಗಿರುವನೋ ಅಥವಾ ತನಗೆ ಸಮರಾದ ಅಥವಾ ಅಧಿಕರಾದ ವ್ಯಕ್ತಿಗಳಿಲ್ಲದವನೋ ಯಃ ಸರ್ವವಶೀ - ಯಾರು ಸರ್ವವೂ ವಶದಲ್ಲಿ ಇರುವುದರಿಂದ ಸರ್ವವಶೀ ಎಂದೆನಿಸುವನೋ, 'ಯಃ ಸರ್ವ-ಭೂತಾಂತರಾತ್ಮಾ' - ಯಾರು ಸರ್ವಪ್ರಾಣಿಗಳ ಒಳಗಿದ್ದು ನಿಯಾಮಕನಾಗಿರುವನೋ, 'ಯಃ ಏಕಂ ರೂಪಂ ಬಹುಧಾ ಕರೋತಿ' – ಯಾರು ತನ್ನ ಒಂದೇ ಆಗಿರುವ ಸ್ವರೂಪವನ್ನು ನಿಯಮ್ಯರಾದವರು ಅನಂತವಾಗಿರುವುದರಿಂದ ಬಹುವಿಧವಾಗಿ ಮಾಡುವನೋ, ತಂ - ಆ ಪ್ರಸ್ತುತನಾದ 'ಆತ್ಮಸ್ಥಂ' ಈ ಜೀವರ ಹೃದಯದಲ್ಲಿ-ರುವವನನ್ನು 'ಯೇ ಧೀರಾಃ ಅನುಪಶ್ಯಂತಿ' ಯಾವ ಜ್ಞಾನಿಗಳು ನೋಡುವರೆಂದು ಪ್ರಕೃತರಾದ ಯಾವ ಜ್ಞಾನಿಗಳಿರುವರೋ 'ತೇಷಾಂ ಶಾಶ್ವತಂ ಸುಖಂ ನೇತರೇಷಾಮ್' - ಅವರಿಗೇ ನಿತ್ಯವೂ ಅಭಿವ್ಯಕ್ತಿಗೊಳ್ಳುವ ಸುಖವಿರುವುದೇ ಹೊರತು ಇತರರಿಗಲ್ಲ. ಇದರಿಂದ ಭಗವಂತನ ಸಾಮರ್ಥ್ಯವನ್ನು ಹೇಳಿದಂತಾಗುವುದು.

ಇದೇ ರೀತಿಯಾಗಿ 'ನಿತ್ಯೋ ನಿತ್ಯಾನಾಮ್' ಎಂಬ ವಾಕ್ಯವನ್ನೂ ಪರಮಾತ್ಮನ ಮಾಹಾತ್ಮ್ಯಪರವಾಗುವಂತೆ ವ್ಯಾಖ್ಯಾನಮಾಡಬೇಕು.

ಭಾ.ದೀ. – 'ತದೇತತ್' ಇತ್ಯಾದಿನಾಽಪಿ ಪ್ರಕೃತಭಗವತ್ಸ್ವರೂಪಮೇವ ವಿಶೇಷತಃ ಪ್ರತಿಪಾದ್ಯತೇ । 'ಇತಿ ಮನ್ಯಂತೇ' ಇತ್ಯಸ್ಯ ಉತ್ತರತ್ರಾನ್ವಯಃ । ತಥಾ ಚ 'ಯತೋ ವಾಚೋ ನಿವರ್ತಂತೇ' (ತೈ.೨.೪.೧) 'ಏಷೋಽಸ್ಯ ಪರಮ ಆನಂದಃ' (ಬೃ.೬.೩.೩೨) ಇತ್ಯಾದೌ ಪ್ರಸಿದ್ಧಮ್ ಅನಿರ್ದೇಶ್ಯಂ ಪರಮಂ ಸುಖಂ 'ಕಥಂ ನು ತದ್ ವಿಜಾನೀಯಾಮ್ ಇತಿ ಮನ್ಯಂತೇ' ಇತ್ಯಾನುಕೂಲ್ಯೇನ ಗೃಹ್ಣಂತಿ ।

ಜ್ಞಾನಾರ್ಥಂ ತದ್ಧ್ಯಾನಂ ವಾ ಪ್ರಾರ್ಥಯಂತೇ। 'ಕಿಮು ಭಾತಿ ನ ಭಾತಿ ವಾ' ಇತಿ ತಸ್ಯ ದುರ್ಜ್ಞೇಯತ್ವಂ ಚ ವದಂತಿ ಜ್ಞಾನಿನಃ। ತದ್ ಬ್ರಹ್ಮಣೋ ರೂಪಂ ಸ್ವರೂಪ-ಭೂತಂ ಸುಖಮೇತದೇಕಂ ರೂಪಂ ಬಹುಧಾ ಯಃ ಕರೋತಿ ಇತಿ ಪ್ರಕೃತೇಶ್ವರ-ರೂಪಾಭಿನ್ನಮಿತಿ ಮನ್ಯಂತೇ ಜ್ಞಾನಿನಃ – ಇತಿ । ಏತಚ್ಛಬ್ದಸ್ಯ ಈಶ್ವರಪರತ್ವೇಽಪಿ ರೂಪಶಬ್ದಸಮಾನಾಧಿಕರಣ್ಯಾತ್ ನಪುಂಸಕಲಿಂಗತೋಪಪತ್ತಿಃ। ತದುಕ್ತಂ ನ್ಯಾಯ-ವಿವರಣೇ – 'ಯದ್ ಬ್ರಹ್ಮಾನಿರ್ದೇಶ್ಯಂ ಸುಖಮಿತಿ ವದಂತಿ ತದೇತತ್ಸ್ವರೂಪಮಿತಿ ಮನ್ಯಂತೇ' – ಇತಿ।

ಕಾಠಕಭಾಷ್ಯೇ ತು – ತದ್ 'ಗುಹ್ಯಂ ಬ್ರಹ್ಮ ಸನಾತನಮ್' ಇತ್ಯುಪಕ್ರಾಂತಮ್। 'ರೂಪಂ ರೂಪಂ ಪ್ರತಿರೂಪೋ ಬಭೂವ' (ಕಠ.೫.೯) ಇತಿ ಜೀವಸ್ಯ ಪ್ರತಿ-ಬಿಂಬತ್ವಮುಕ್ತಮ್ । ರೂಪಶಬ್ದೇನ ಪ್ರಕೃತಮೇತತ್ 'ಏಕಂ ರೂಪಮ್' ಇತ್ಯತ್ರ ಪ್ರಕೃತಂ ಚ ಭಗವದ್ರೂಪಮ್ 'ಅನಿರ್ದೇಶ್ಯಮ್' - 'ಇತ್ಥಮ್ ಇತಿ ಸಾಕಲ್ಯೇನ ವಕ್ತುಮಶಕ್ಯಂ' ಪರಮಂ ಸುಖಮ್ ಇತಿಮನ್ಯಂತೇ ಜ್ಞಾನಿನಃ ಇತಿ ಸುಖರೂಪತ್ವವಿಧಿ ಪರತಯಾ ವ್ಯಾಖ್ಯಾತಮ್। ಭಾಷ್ಯೇಽಪಿ ಅನಿರ್ದೇಶ್ಯಸುಖರೂಪಮ್ ಇತ್ಯೇತಾ-ವನ್ಮಾತ್ರಗ್ರಹಣೇನ ಶ್ರುತೌ ಸುಖರೂಪತ್ವಂ ವಿಧೇಯಮಿತಿ ಸೂಚಿತಮ್।

'ತದೇತತ್' ಎಂಬ ಶ್ರುತಿಯಿಂದಲೂ ಕೂಡ ಪ್ರಕೃತನಾದ ಭಗವಂತನ ಸ್ವರೂ-ಪವೇ ವಿಶೇಷರೀತಿಯಿಂದ ಪ್ರತಿಪಾದಿತವಾಗಿದೆ. 'ಇತಿ ಮನ್ಯಂತೇ' ಎಂಬ ಪದಗಳಿಗೆ ಮುಂದೆ ಅನ್ವಯವಾಗುವುದು. ತಥಾ ಚ – 'ಯತೋ ವಾಚೋ ನಿವರ್ತಂತೇ' 'ಏಷೋಽಸ್ಯ ಪರಮಃ ಆನಂದಃ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವಾದ ನಿರ್ದೇಶಿಸಲು ಅಶಕ್ಯವಾದ ಪರಮಸುಖವನ್ನು 'ಕಥಂ ನು ತದ್ ವಿಜಾನೀಯಾಮ್ ಇತಿ ಮನ್ಯಂತೇ' - ಅದನ್ನು ಹೇಗೆ ತಿಳಿಯಲಿ? ಎಂಬುದಾಗಿ ಆನುಕೂಲ್ಯೇನ ಗ್ರಹಿಸುವರು. ಅಥವಾ ಅದರ ಜ್ಞಾನಕ್ಕೋಸ್ಕರವಾಗಿ ಅದರ ಅಭಿವ್ಯಕ್ತಿಯನ್ನು ಪ್ರಾರ್ಥಿಸುವರು. 'ಕಿಮು ಭಾತಿ ನ ಭಾತಿ ವಾ?' 'ಅದು ತಿಳಿದುಬರುವುದೋ ಇಲ್ಲವೋ?' ಎಂಬುದಾಗಿ ಆ ಪರಮಸುಖವು ದುರ್ಜ್ಞೇಯವೆಂದು ಜ್ಞಾನಿಗಳು ಹೇಳುವರು. ಆ ಬ್ರಹ್ಮನ ರೂಪವು ಅಂದರೆ ಸ್ವರೂಪ-

ಭೂತವಾದ ಸುಖವು 'ಏತತ್' - 'ಏಕಂ ರೂಪಂ ಬಹುಧಾ ಯಃ ಕರೋತಿ' ಎಂಬ ವಾಕ್ಯದಲ್ಲಿ ಪ್ರಸ್ತುತವಾಗಿರುವ ಈಶ್ವರಸ್ವರೂಪದಿಂದ ಅಭಿನ್ನವಾಗಿರುವುದೆಂದು ಜ್ಞಾನಿ-ಗಳು ತಿಳಿಯುವರು ಎಂದು. 'ತದೇತತ್' ಎಂಬ ಶ್ರುತಿಯಲ್ಲಿ 'ಏತತ್'ಶಬ್ದವು ಈಶ್ವರ-ನನ್ನು ಪರಾಮರ್ಶಿಸುವ ಅಭಿಪ್ರಾಯವುಳ್ಳದ್ದೆಂದು ಹೇಳಿದರೂ ರೂಪಶಬ್ದದ ಸಾಮಾನಾಧಿಕರಣ್ಯವಿರುವುದರಿಂದ ಏತತ್ ಎಂಬುದಾಗಿ ನಪುಂಸಕಲಿಂಗವಿರುವುದು ಯುಕ್ತವಾಗಿದೆ. ಇದನ್ನು ನ್ಯಾಯವಿವರಣದಲ್ಲಿ 'ಯದ್ ಬ್ರಹ್ಮಾನಿರ್ದೇಶ್ಯಂ ಸುಖಮಿತಿ ವದಂತಿ ತದೇತತ್ ಸ್ವರೂಪಮಿತಿ ಮನ್ಯಂತೇ' - 'ಯಾವ ಬ್ರಹ್ಮವು ನಿರ್ದೇಶಿಸಲು ಅಶಕ್ಯವಾದ ಸುಖವೆಂದು ಹೇಳುವರೋ ಆ ಸುಖವು ಬ್ರಹ್ಮಸ್ವರೂಪವೆಂದು ತಿಳಿಯು-ವರು - ಎಂದು ಹೇಳಲಾಗಿದೆ.

ಕಾಠಕಭಾಷ್ಯದಲ್ಲಾದರೋ – ತತ್ - 'ಗುಹ್ಯಂ ಬ್ರಹ್ಮ ಸನಾತನಮ್' ಎಂದು ಉಪಕ್ರಮದಲ್ಲಿ ಹೇಳಲಾಗಿದೆ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂದು ಜೀವನನ್ನು ಪ್ರತಿಬಿಂಬನೆಂದು ಹೇಳಿದೆ. ಹೀಗೆ ರೂಪಶಬ್ದದಿಂದ ಪ್ರಕೃತವಾದ ಏತತ್ - ಏತಂ ರೂಪಂ ಎಂಬಲ್ಲಿಯೂ ಪ್ರಕೃತವಾಗಿರುವ ಭಗವದ್ರೂಪವು ಅನಿರ್ದೇಶ್ಯಂ - 'ಇದು ಹೀಗೇ' ಎಂದು ಸಾಕಲ್ಯೇನ ನಿರ್ವಚನ ಮಾಡಲು ಶಕ್ಯವಲ್ಲದ ಪರಮಸುಖ-ವೆಂದು ಜ್ಞಾನಿಗಳು ತಿಳಿಯುವರು – ಎಂಬುದಾಗಿ ಭಗವತ್ಸ್ವರೂಪಕ್ಕೆ ಸುಖರೂಪತ್ವ-ವನ್ನು ವಿಧಾನಮಾಡುವ ತಾತ್ಪರ್ಯವುಳ್ಳದ್ದೆಂದು ವ್ಯಾಖ್ಯಾನ ಮಾಡಲಾಗಿದೆ. ಬ್ರಹ್ಮ-ಸೂತ್ರಭಾಷ್ಯದಲ್ಲೂ 'ಅನಿರ್ದೇಶ್ಯಸುಖರೂಪಂ' - ಇಷ್ಟು ಮಾತ್ರ ಗ್ರಹಿಸಿರುವುದರಿಂದ ಶ್ರುತಿಯಲ್ಲಿ ಬ್ರಹ್ಮನಿಗೆ ಸುಖರೂಪತ್ವವನ್ನು ವಿಧಾನಮಾಡಲಾಗಿದೆ ಎಂದು ಉಕ್ತವಾಗಿದೆ.

ಭಾ.ದೀ. – ತದನಿರ್ದೇಶ್ಯಪರಮಸುಖಾತ್ಮಕಂ ಭಗವದ್ರೂಪಂ ತತ್ಪ್ರಸಾದಮೃತೇ ಕಿಮು ಭಾತಿ ನ ಭಾತಿ ವಾ ಇತಿ 'ಕಥಂ ನು ಅಹಂ ಜಾನೀಯಾಮ್' ಇತಿ ಶಿಷ್ಯವಾಕ್ಯಾರ್ಥಃ ತತ್ರೈವೋಕ್ತಃ। ವಿವೃತಂ ಚೈತದ್ ವ್ಯಾಸತೀರ್ಥೀಯೇ – 'ತತ್' - ಅನಿರ್ದೇಶ್ಯಪರಮಸುಖಾತ್ಮಕಂ ಭಗವದ್ರೂಪಂ ತತ್ಪ್ರಸಾದಮೃತೇ ಕಿಮು ಸಮ್ಯಗ್ ಭಾತಿ? ನ ಭಾತಿ ವಾ? ಇತಿ ಪ್ರಶ್ನಸ್ಯ ಉತ್ತರಭೂತಮ್ ಏಕಂ ನಿಶ್ಚಿತಾರ್ಥಂ 'ಕಥಮಹಂ ವಿಜಾನೀಯಾಮ್' ನ ಕೇನಾಪಿ ಪ್ರಕಾರೇಣ - ಇತಿ। ಅತ್ರ ಇತಿಶಬ್ದಃ

ಉಭಯಾನ್ವಯೀ। ತಥಾ ಚ 'ಕಿಮು ಭಾತಿ' ಇತಿ ಪ್ರಶ್ನಸ್ಯೋತ್ತರಭೂತಂ 'ನ ಭಾತಿ' ಇತಿ ವಾಕ್ಯೋಕ್ತಮೇಕಮ್ ಅಜ್ಞೇಯತ್ವರೂಪಮರ್ಥಮ್ – ಇತಿ ಯೋಜನಾ।

'ಆ ಅನಿರ್ದೇಶ್ಯಪರಮಸುಖಾತ್ಮಕವಾದ ಭಗವದ್ರೂಪವು 'ತತ್ಪ್ರಸಾದಮೃತೇ ಕಿಮು ಭಾತಿ ನ ಭಾತಿ ವಾ' – ಸಮೀಚೀನವಾಗಿ ಭಾನವಾಗುವುದೋ ಇಲ್ಲವೋ? ಎಂದು 'ಕಥಂ ನು ಅಹಂ ಜಾನೀಯಾಮ್?' 'ನಾನು ಹೇಗೆ ತಿಳಿಯಲಿ?' ಎಂಬ ಉಳಿದ ವಾಕ್ಯದ ಅರ್ಥವನ್ನು ಅಲ್ಲಿಯೇ ಹೇಳಲಾಗಿದೆ.

ವ್ಯಾಸತೀರ್ಥರ (ಉಪನಿಷದ್) ಟಿಪ್ಪಣಿಯಲ್ಲೂ ಇದನ್ನು ವಿವರಿಸಲಾಗಿದೆ – ತತ್ - ಅನಿರ್ದೇಶ್ಯಪರಮಸುಖಾತ್ಮಕವಾದ ಭಗವದ್ರೂಪವು ಅವನ ಅನುಗ್ರಹವಿಲ್ಲದೇ ಸಮೀಚೀನವಾಗಿ ಭಾನವಾಗುವುದೋ ಇಲ್ಲವೋ? ಎಂಬ ಪ್ರಶ್ನೆಗೆ ಉತ್ತರವಾದ ಒಂದು ನಿಶ್ಚಿತವಾದ ವಿಷಯವನ್ನು 'ಕಥಮಹಂ ವಿಜಾನೀಯಾಮ್!' ನಾನು ಹೇಗೆ ತಾನೇ ತಿಳಿಯಲಿ! ಯಾವರೀತಿಯಿಂದಲೂ ತಿಳಿಯಲಾರೆ. ಇಲ್ಲಿ 'ಇತಿ'ಶಬ್ದವು ಎರಡು ಕಡೆ ಅನ್ವಯವನ್ನು ಹೊಂದುವುದು. ತಥಾ ಚ – 'ಕಿಮು ಭಾತಿ?' ಎಂಬ ಪ್ರಶ್ನೆಗೆ ಉತ್ತರ-ವಾಗಿ 'ನ ಭಾತಿ' ಎಂಬ ವಾಕ್ಯದಿಂದ ಉಕ್ತವಾಗಿರುವ ಅಜ್ಞೇಯತ್ವರೂಪವಿಷಯವನ್ನು (ಇಲ್ಲಿ ಹೇಳಲಾಗಿದೆ) – ಎಂದು ಯೋಜನೆ.

ಭಾ.ದೀ. – ಕೇಚಿತ್ತು – ಯದೇವಂ ಬ್ರಹ್ಮ ತತ್ಪ್ರಸಾದಮೃತೇ 'ನು' ಇದಾನೀಂ 'ಕಥಮಹಂ ವಿಜಾನೀಯಾಮ್' - ಪ್ರಾರ್ಥನಾಯಾಂ ಲಿಙ್ । ನ ಕಥಮಪಿ ಇತ್ಯರ್ಥಃ। ಜ್ಞಾನಿವಾಕ್ಯಾನುಕರಣಮೇತತ್। 'ಭಗವತ್ಪ್ರಸಾದಾದಪಿ ಕಿಂ ಸಾಕಲ್ಯೇನ ತಜ್ಜ್ಞಾನಂ ಭವತಿ?' ಇತಿ ನಚಿಕೇತಾ ಯಮಂ ಪೃಚ್ಛತಿ – ಕಿಮು ಭಾತೀತಿ ॥ 'ಉ'ಶಬ್ದಃ ಸಮ್ಯಗಿತ್ಯರ್ಥೇ । 'ಕಿಮು' ಇತ್ಯೇಕಂ ವಾ । ತಥಾತ್ವೇ 'ಸಮ್ಯಗ್' ಇತಿ ಶೇಷಃ । ಉತ್ತರಮಾಹ ಯಮಃ - ನ ಭಾತೀತಿ ॥ ವಾಶಬ್ದೋಽವಧಾರಣೇ । 'ನ ಭಾತ್ಯೇವ' – ಇತಿ ವ್ಯಾಖ್ಯಾಂತಿ।

ಕೆಲವರಾದರೋ – ಯಾವ ಬ್ರಹ್ಮನು ಹಿಂದೆ ಹೀಗೆ ವರ್ಣಿತನಾಗಿರುವನೋ ಅವನನ್ನು, ಅವನ ಅನುಗ್ರಹವಿಲ್ಲದೇ, 'ನು' - ಈಗ, 'ಕಥಮಹಂ ವಿಜಾನೀಯಾಮ್'

– ಇಲ್ಲಿ ಲಿಙ್‌ಲಕಾರವು ಪ್ರಾರ್ಥನೆಯನ್ನು ಹೇಳುವುದು. 'ಸರ್ವಥಾ ತಿಳಿಯಲಾರೆ' ಎಂದು ಅರ್ಥ. 'ಕಥಂ ನು' ಇತ್ಯಾದಿ ವಾಕ್ಯವು ಜ್ಞಾನಿಯೊಬ್ಬರ ವಾಕ್ಯವನ್ನು ಅನುಕರಿಸುವ ವಾಕ್ಯವಾಗಿದೆ. ಭಗವತ್ಪ್ರಸಾದದಿಂದಲೂ ಪೂರ್ಣವಾಗಿ ಅವನ ಜ್ಞಾನ ಬರುವುದೋ? ಎಂದು ನಚಿಕೇತನು ಯಮನನ್ನು ಕುರಿತು 'ಕಿಮು ಭಾತಿ?' ಎಂದು ಪ್ರಶ್ನಿಸುವನು. ಕಿಮು ಎಂಬಲ್ಲಿರುವ 'ಉ'ಕಾರವು ಸಮ್ಯಕ್ ಎಂಬ ಅರ್ಥವಾಚಕವಾಗಿದೆ. ಅಥವಾ 'ಕಿಮು' ಎಂದು ಒಂದೇ ಪದವಾಗಿದೆ. ಈ ಪಕ್ಷದಲ್ಲಿ 'ಸಮ್ಯಕ್' ಎಂಬ ಪದವು ಶೇಷವಾಗುವುದು. ಹೀಗೆ ಮಾಡಲಾದ ನಚಿಕೇತನ ಪ್ರಶ್ನೆಗೆ ಯಮನು 'ನ ಭಾತಿ' ಎಂದು ಉತ್ತರಿಸುವನು. ಉಪನಿಷತ್ತಿನಲ್ಲಿ ವಾಶಬ್ದವು ಅವಧಾರಣಾರ್ಥಕವಾಗಿದೆ. ಸಾಕಲ್ಯೇನ ಅವನ ಭಾನವು ಸರ್ವಥಾ ಆಗದು - ಎಂದು ವ್ಯಾಖ್ಯಾನ ಮಾಡುವರು.

**ಭಾ.ದೀ.– ನನು 'ತಮೇವ ಭಾಂತಮ್' ಇತಿ ವಾಕ್ಯೇ ಸೂರ್ಯಾದಿ ತೇಜಸಾಂ ಪರಮಾತ್ಮಾಧೀನಪ್ರಕಾಶಕರ್ತೃತ್ವಸ್ಯ 'ತಸ್ಯ ಭಾಸಾ' ಇತಿ ವಾಕ್ಯೇ ಚ ಸರ್ವಸ್ಯ ಜಗತಃ ತತ್ಪ್ರಭಾಪ್ರಕಾಶ್ಯತ್ವಸ್ಯ ಚ ಶ್ರವಣೇನ ಅಸಿದ್ಧಿಪರಿಹಾರೇ ಕುತಃ ತಯೋರ್ವಿಷ್ಣುತ್ವಸಾಧ್ಯೇನ ಅವ್ಯಭಿಚರಿತತ್ವಮ್, ಯೇನ ತಲ್ಲಿಂಗದ್ವಯಬಲಾತ್ ಸಮೀಪೋಕ್ತಜ್ಞಾನಿಸುಖಪರಾಮರ್ಶಪರಿತ್ಯಾಗಃ ಸ್ಯಾತ್? ಇತ್ಯತ ಆಹ – ನ ಹೀತಿ ॥**

ಶಂಕೆ – 'ತಮೇವ ಭಾಂತಮ್' ಎಂಬ ವಾಕ್ಯದಲ್ಲಿ ಸೂರ್ಯ ಮೊದಲಾದ ತೇಜಸ್ಸುಗಳಿಗೆ ಪರಮಾತ್ಮನಿಗೆ ಅಧೀನವಾದ ಪ್ರಕಾಶಿಸುವಿಕೆಯು ಮತ್ತು 'ತಸ್ಯ ಭಾಸಾ' ಎಂಬ ವಾಕ್ಯದಲ್ಲೂ ಎಲ್ಲ ಜಗತ್ತು ಅವನ ಪ್ರಭೆಯಿಂದ ಪ್ರಕಾಶಿಸುವುದೆಂದು ಶ್ರುತವಾಗಿರುವುದರಿಂದ ಅಸಿದ್ಧಿದೋಷವನ್ನು ಪರಿಹರಿಸುವುದಾದಲ್ಲಿ ಆ ಲಿಂಗಗಳಿಗೆ ವಿಷ್ಣುತ್ವ ಎಂಬ ಸಾಧ್ಯದ ವ್ಯಾಪ್ತಿ ಇರುವುದೆಂದು ಹೇಳಲು ಹೇಗೆ ಸಾಧ್ಯ ? ಹಾಗೆ ವ್ಯಾಪ್ತಿಯಿದ್ದಲ್ಲಿ ಮಾತ್ರ ಆ ಎರಡು ಲಿಂಗಗಳ ಬಲದಿಂದ ಸಮೀಪದಲ್ಲೇ ಉಕ್ತವಾಗಿರುವ ಜ್ಞಾನಿಸುಖವನ್ನು ಪರಾಮರ್ಶ ಮಾಡುವುದನ್ನು ಮಾಡದಿರುವುದು ಸಾಧ್ಯವಾದೀತು?

ಈ ಆಶಂಕೆಗೆ ಉತ್ತರವಾಗಿ ಆಚಾರ್ಯರು ''ನ ಹಿ'' ಎಂದು ಹೇಳುತ್ತಿದ್ದಾರೆ.

**ಭಾಷ್ಯ – ನ ಹಿ ಜ್ಞಾನಿಸುಖಮನುಭಾತಿ ಸರ್ವಮ್ । ನ ಚ ತದ್ಭಾಸಾ ।**

ಜ್ಞಾನಿಸುಖವನ್ನು ಅನುಸರಿಸಿ ಸರ್ವವೂ ಪ್ರಕಾಶಿಸುವುದಿಲ್ಲವಷ್ಟೇ. ಹಾಗೆಯೇ ಜ್ಞಾನಿಸುಖದ ಪ್ರಕಾಶದಿಂದ ಸರ್ವಜಗತ್ತು ಪ್ರಕಾಶಿಸು-ವುದೂ ಇಲ್ಲ.

ಭಾ.ದೀ. – 'ಸರ್ವಮ್' ಇತ್ಯುಭಯಾನ್ವಯೀ। 'ಭಾತಿ' ಇತಿ ಶೇಷಃ। ತಥಾ ಚ 'ಹಿ' ಯಸ್ಮಾತ್ 'ಸರ್ವಂ' ಸೂರ್ಯಾದಿತೇಜಃ ಜ್ಞಾನಿಸುಖಮನುಸೃತ್ಯ 'ನ ಭಾತಿ' ನ ಪ್ರಕಾಶತೇ। ತಥಾ 'ತದ್ಭಾಸಾ' ತಸ್ಯ ಜ್ಞಾನಿಸುಖಸ್ಯ ಪ್ರಕಾಶೇನ 'ಸರ್ವಂ' ಜಗತ್ 'ನ ಭಾತಿ' ನ ಪ್ರಕಾಶತೇ ಚೇತ್ಯರ್ಥಃ। ವಕ್ಷ್ಯಮಾಣಪ್ರಮಾಣವಿರೋಧಾದಿತಿ ಭಾವಃ। ಚಶಬ್ದಃ ಸಮುಚ್ಚಯೇ। 'ಅತೋ ನ ಲಿಂಗದ್ವಯಮನ್ಯತ್ರಾವಕಾಶವತ್' ಇತಿ ವಾಕ್ಯಶೇಷಃ।

ಭಾಷ್ಯದಲ್ಲಿ 'ಸರ್ವಂ' ಎಂಬ ಪದವು ಹಿಂದೆ ಮತ್ತು ಮುಂದೆ ಎರಡೂ ಕಡೆ ಅನ್ವಯವನ್ನು ಹೊಂದುವುದು. 'ತದ್ಭಾಸಾ' ಎಂಬ ಪದದ ನಂತರ 'ಭಾತಿ' ಎಂಬ ಪದವು ಶೇಷವಾಗಿರುವುದು. ತಥಾ ಚ – ''ಹಿ'' ಯಾವ ಕಾರಣದಿಂದಾಗಿ 'ಸರ್ವಂ' - ಸೂರ್ಯ ಮೊದಲಾದ ಎಲ್ಲ ತೇಜಸ್ಸುಗಳು ಜ್ಞಾನಿಸುಖವನ್ನು ಅನುಸರಿಸಿ ನ ಭಾತಿ' ಪ್ರಕಾಶಿಸವುದಿಲ್ಲವೋ ಹಾಗೆಯೇ 'ತದ್ಭಾಸಾ' ಆ ಜ್ಞಾನಿಸುಖದ ಪ್ರಕಾಶದಿಂದ 'ಸರ್ವಂ' ಸಮಸ್ತ ಜಗತ್ತು, 'ನ ಭಾತಿ' ಪ್ರಕಾಶಿಸುವುದಿಲ್ಲವೋ ಎಂದು ಅರ್ಥ.

ಏಕೆಂದರೆ, ಹಾಗೆ ಹೇಳಿದಲ್ಲಿ ಮುಂದೆ ಹೇಳಲಾಗುವ ಪ್ರಮಾಣವಿರೋಧ ಬರುವುದು ಎಂದು ಭಾವ. ಇಲ್ಲಿ ಚಕಾರವು ಸಮುಚ್ಚಯವನ್ನು ಹೇಳುವುದು. 'ಅತೋ ನ ಲಿಂಗದ್ವಯಮನ್ಯತ್ರ ಅವಕಾಶವತ್' ಆದ್ದರಿಂದ ಎರಡು ಲಿಂಗಗಳು ಬೇರೆಡೆಯಲ್ಲಿ ಅವಕಾಶವನ್ನು ಹೊಂದಿಲ್ಲ' - ಎಂದು ವಾಕ್ಯಶೇಷವಿರುವುದು.

ಭಾ.ದೀ. – ಅಸ್ತ್ವೇತದುಭಯಂ ಜ್ಞಾನಿಸುಖೇ ಅನುಪಪನ್ನಮ್। ತಥಾಽಪಿ ಅನೇನ ಕುತಃ ಪರಮಾತ್ಮನೋ ಗ್ರಹಣಮ್, ಅಸ್ಯ ಪರಮಾತ್ಮತ್ವಸಾಧ್ಯಸಮಾನಾಧಿ-ಕರಣ್ಯಾನಿಶ್ಚಯಾತ್ ಇತ್ಯತಃ ತತ್ರ ದ್ವಿತೀಯಸೂತ್ರಸ್ಥಾಪಿತಪದೇನ ಸೂಚಿತಾಂ ಶ್ರುತಿಮಾಹ – ಅಹಮಿತಿ॥

ಇವೆರಡೂ ಜ್ಞಾನಿಸುಖದಲ್ಲಿ ಅನುಪಪನ್ನವಾಗಿರಲಿ; ಆದರೂ ಈ ಲಿಂಗಗಳಿಂದ ಪರಮಾತ್ಮನನ್ನು ಗ್ರಹಿಸುವುದು ಹೇಗೆ? ಏಕೆಂದರೆ ಈ ಎರಡು ಲಿಂಗಗಳು ಪರಮಾತ್ಮತ್ವ ಎಂಬ ಸಾಧ್ಯದ ಒಟ್ಟಿಗೆ ಇರುವುದೆಂದು ನಿಶ್ಚಯವಾಗಿಲ್ಲ ಎಂಬ ಶಂಕೆಗೆ ಉತ್ತರವಾಗಿ ಈ ವಿಷಯದಲ್ಲಿ ಅಪಿ ಸ್ಮರ್ಯತೇ ಎಂಬ ಎರಡನೆಯ ಸೂತ್ರದಲ್ಲಿರುವ ಅಪಿಶಬ್ದದಿಂದ ಸೂಚಿತವಾಗುವ ಶ್ರುತಿಯನ್ನು ಆಚಾರ್ಯರು "ಅಹಮ್" ಎಂದು ಉದಾಹರಿಸು-ತ್ತಿದ್ದಾರೆ.

**ಭಾಷ್ಯಮ್ – 'ಅಹಂ ತತ್ತೇಜೋ ರಶ್ಮೀತ್' ಇತಿ ನಾರಾಯಣಭಾಸಾ ಹಿ ಸರ್ವಂ ಭಾತಿ ॥ ೨೨ ॥**

'ಅಹಂ ತತ್ ತೇಜೋ ರಶ್ಮೀತ್' ಎಂಬ ಶ್ರುತಿಯಲ್ಲಿ ಹೇಳಿರುವಂತೆ ನಾರಾಯಣನ ಪ್ರಕಾಶದಿಂದಷ್ಟೇ ಎಲ್ಲವೂ ಪ್ರಕಾಶಿಸುವುದು.

ಭಾ.ದೀ. – 'ಅಹಮ್' ಇತ್ಯನಂತರಂ 'ಶ್ರುತೇಃ' ಇತಿ ಶೇಷಃ । 'ಇತಿ'ಶಬ್ದ ಆದ್ಯಾರ್ಥೇ । ತೇನ 'ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವ-ಮಿದಂ ವಿಭಾತಿ' (ಕಠ.೫.೧೫) ಇತ್ಯಾಥರ್ವಣಶ್ರುತಿರಪಿ ಗೃಹ್ಯತೇ । ನಾರಾ-ಯಣೇತಿ ॥ 'ನಾರಾಯಣಾಧೀನಭಾಸಾ' ಇತ್ಯರ್ಥಃ । 'ಹಿ'ಶಬ್ದೋ ಯತ ಇತ್ಯರ್ಥೇ, ಪ್ರಸಿದ್ಧೌ ಚ। 'ಸರ್ವಂ' ಸೂರ್ಯಾದಿತೇಜಃ 'ಭಾತಿ' ಪ್ರಕಾಶತೇ।

ಅಥವಾ – 'ನಾರಾಯಣಭಾಸಾ' ನಾರಾಯಣೀಯಭಾಸಾ 'ಸರ್ವಂ' ಜಗತ್ 'ಭಾತಿ' ಪ್ರಕಾಶ್ಯತ ಇತ್ಯರ್ಥಃ । 'ಇತಿ ಜ್ಞಾಯತೇ' ಇತಿ ಶೇಷಃ । ಶ್ರುತೌ 'ರಶ್ಮೀತ್' ಇತ್ಯನೇನ ಸೂರ್ಯಾದಿತೇಜಸಾಂ ನಾರಾಯಣಾಧೀನಪ್ರಕಾಶ-ಕರ್ತೃತ್ವಸ್ಯ, 'ತೇಜಃ' ಇತ್ಯನೇನ ಸರ್ವಸ್ಯ ಜಗತೋ ನಾರಾಯಣೀಯಪ್ರಕಾಶ-ಪ್ರಕಾಶ್ಯತ್ವಸ್ಯ ಚ ಉಕ್ತತ್ವಾದಿತಿ ಭಾವಃ।

'ಅಹಮ್' ಇತಿ ಶ್ರುತಿಸ್ತು ಅಂತರ್ನಯೇ(ಬ್ರ.ಸೂ.೧.೧.೨೦) ವ್ಯಾಖ್ಯಾತಾ।

'ಅಹಂ ತತ್ ತೇಜೋ ರಶ್ಮೀತ್ ಇತಿ' ಎಂಬ ವಾಕ್ಯದ ನಂತರ 'ಶ್ರುತೇಃ' ಎಂಬ ಪದವು ಶೇಷವಾಗಿದೆ. ಇಲ್ಲಿ 'ಇತಿ'ಶಬ್ದವು 'ಇತ್ಯಾದಿ' ಎಂಬ ಅರ್ಥವನ್ನು ಹೇಳುವುದು. ಆದರಿಂದ 'ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬ ಆಥರ್ವಣ ಶ್ರುತಿಯು ಇಲ್ಲಿ ಗ್ರಹಿಸಲ್ಪಡುವುದು. ಭಾಷ್ಯದಲ್ಲಿ ''ನಾರಾಯಣ-ಭಾಸಾ'' ಎಂಬ ಪದಕ್ಕೆ ನಾರಾಯಣಾಧೀನವಾದ ಪ್ರಕಾಶದಿಂದ ಎಂದು ಅರ್ಥ. ''ಹಿ''ಶಬ್ದವು 'ಯಾವ ಕಾರಣದಿಂದ' ಹಾಗೂ 'ಪ್ರಸಿದ್ಧಿ' ಎಂಬ ಅರ್ಥಗಳನ್ನು ಹೇಳುವುದು. 'ಸರ್ವಂ' - ಸಮಸ್ತ ಸೂರ್ಯ ಮೊದಲಾದ ತೇಜಸ್ಸು 'ಭಾತಿ' - ಪ್ರಕಾಶಿಸುವುದು.

ಅಥವಾ – 'ನಾರಾಯಣಭಾಸಾ' ಎಂದರೆ ನಾರಾಯಣನ ಪ್ರಕಾಶದಿಂದ 'ಸರ್ವಂ' ಎಲ್ಲ ಜಗತ್ತೂ 'ಭಾತಿ' ಪ್ರಕಾಶಿಸಲ್ಪಡುವುದು ಎಂದು ಅರ್ಥ. 'ಇತಿ ಜ್ಞಾಯತೇ' ಎಂಬ ಪದಗಳು ಇಲ್ಲಿ ಶೇಷವಾಗಿವೆ. ಶ್ರುತಿಯಲ್ಲಿ 'ರಶ್ಮೀತ್' ಎಂಬ ಪದದಿಂದ ಸೂರ್ಯಾದಿ ತೇಜಸ್ಸುಗಳಿಗೆ ನಾರಾಯಣನಿಗೆ ಅಧೀನವಾದ ಪ್ರಕಾಶಿಸುವಿಕೆ-ಯನ್ನು 'ತೇಜಃ' ಎಂಬ ಪದದಿಂದ 'ಸಮಸ್ತಜಗತ್ತಿಗೆ ನಾರಾಯಣನ ಪ್ರಕಾಶದಿಂದ ಪ್ರಕಾಶವಾಗುವಿಕೆಯನ್ನು ಹೇಳಿರುವುದರಿಂದ' ಎಂದು ಭಾವ.

'ಅಹಮ್' ಎಂಬ ಶ್ರುತಿಯಾದರೋ ಅಂತಸ್ಥತ್ವಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಭಾ.ದೀ.– ಅನೇನ – ತದುಕ್ತಮ್ ಇತಿ, ಅತಃ ಸೂತ್ರೇ ತತ್ ಇತ್ಯನುವರ್ತತೇ। 'ತಸ್ಯ' ಇತ್ಯಾವರ್ತತೇ, ವಿಪರಿಣಮ್ಯತೇ ಚ । 'ಅಸಂಭವಾತ್' ಇತಿ ಚ ಅನು-ವರ್ತತೇ। ತಥಾ ಚ –

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।
ಕಥಂ ನು ತದ್ವಿಜಾನೀಯಾತ್ ..... (ಕಠ. ೫-೧೪)

ಇತ್ಯಾನುಕೂಲ್ಯೇನ ಗೃಹ್ಯಮಾಣಂ ತದೇತಚ್ಛಬ್ದಪರಾಮೃಶ್ಯಮ್ ಅನಿರ್ದೇಶ್ಯಂ ಸುಖಂ ತತ್ತು ವಿಷ್ಣುರೂಪಮೇವ, ನ ಸಮೀಪೋಕ್ತಜ್ಞಾನಿಸುಖಮ್ । ಕುತಃ 'ತಸ್ಯ' ಸೂರ್ಯಾದಿತೇಜಸಃ, 'ತಸ್ಯ' ಆನುಕೂಲ್ಯೇನ ಗೃಹ್ಯಮಾಣಸ್ಯ ಸುಖಸ್ಯ ತಸ್ಮಿನ್

**'ತಮೇವ ಭಾಂತಮ್' ಇತಿ 'ಅನುಕೃತೇಃ' ಅನುಭಾನಶ್ರವಣಾತ್ ತಸ್ಯೈತದಧೀನ-ಪ್ರಕಾಶಕರ್ತೃತ್ವಶ್ರವಣಾದ್ ಅಸ್ಯ ಅನ್ಯತೇಜೋನಿಯಂತೃತ್ವಶ್ರವಣಾದಿತಿ ಯಾವತ್ ।**

**ತಥಾ ತಸ್ಯ ಸರ್ವಸ್ಯ ಜಗತಃ ತಸ್ಯ ತತ್ಪ್ರಕಾಶಪ್ರಕಾಶ್ಯತ್ವಸ್ಯ 'ತಸ್ಯ ಭಾಸಾ' (ಕಠ. ೫.೧೫) ಇತಿ ಶ್ರುತೌ ಉಕ್ತತ್ವಾತ್ ತಸ್ಯ ಸರ್ವಜಗತ್ಪ್ರಕಾಶಕತ್ವೋಕ್ತೇರಿತಿ ಯಾವತ್ । ತಸ್ಯ ಚ ಲಿಂಗದ್ವಯಸ್ಯ 'ಅಹಂ ತತ್ತೇಜಃ' (ಚತುರ್ವೇದಶಿಖಾ) ಇತ್ಯಾದಿಶ್ರುತ್ಯಾ ಸ್ಮೃತ್ಯಾ ಚ ತಸ್ಮಿನ್ ವಿಷ್ಣಾವೇವ ನಿಶ್ಚಯೇನ ಉಪಪತ್ತೇಃ, ಜ್ಞಾನಿಸುಖೇ ಚ 'ಅಸಂಭವಾತ್' ಅನುಪಪತ್ತೇಃ । ತಥಾ ತಸ್ಮಿನ್ನುಪಸಂಹಾರೇ ತಸ್ಯ ಆನುಕೂಲ್ಯೇನ ಗೃಹ್ಯಮಾಣಸ್ಯ 'ನ ತತ್ರ ಸೂರ್ಯೋ ಭಾತಿ' ಇತಿ ವಾಕ್ಯೇ ತಸ್ಯ ಸೂರ್ಯಾದ್ಯ-ಪ್ರಕಾಶ್ಯತ್ವಸ್ಯ ಚ ಉಕ್ತೇಶ್ಚ - ಇತಿ ಸೂತ್ರಾರ್ಥ ಉಕ್ತೋ ಭವತಿ ।**

ಇದರಿಂದ – 'ಅಲ್ಪಶ್ರುತೇರಿತಿ ಚೇತ್ ತದುಕ್ತಮ್' (ಎಂಬ ಸೂತ್ರದಿಂದ ಈ ಸೂತ್ರಕ್ಕೆ 'ತತ್' ಎಂಬ ಪದವು ಅನುವೃತ್ತಿಯನ್ನು ಹೊಂದುತ್ತದೆ. 'ತಸ್ಯ' ಎಂಬ ಪದವು ಆವೃತ್ತಿಯನ್ನು ಮತ್ತು ವಿಭಕ್ತಿವ್ಯತ್ಯಾಸವನ್ನು ಹೊಂದುತ್ತದೆ. 'ಇತರಪರಾಮರ್ಶಾತ್ ಸ ಇತಿ ಚೇನ್ನ ಅಸಂಭವಾತ್' ಎಂಬ ಸೂತ್ರದಿಂದ 'ಅಸಂಭವಾತ್' ಎಂಬ ಪದವೂ ಅನುವೃತ್ತಿಯನ್ನು ಹೊಂದುತ್ತದೆ. ತಥಾ ಚ –

'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ । ಕಥಂ ನು ತದ್ವಿಜಾನೀಯಾತ್'' ಎಂದು ಆನುಕೂಲ್ಯೇನ ಗೃಹ್ಯಮಾಣವಾಗಿರುವ, 'ತದೇತತ್' ಎಂಬ ಶಬ್ದದಿಂದ ಪರಾಮರ್ಶಿಸಲ್ಪಡುವ ಸುಖವಾಗಿರುವ ಅನಿರ್ದೇಶ್ಯಸುಖವು 'ತತ್ ತು' ವಿಷ್ಣುಸ್ವರೂಪವಾಗಿರುವ ಸುಖವೇ ಆಗಿದೆ. ಹೊರತು ಸಮೀಪದಲ್ಲಿ ಉಕ್ತವಾಗಿ-ರುವ ಜ್ಞಾನಿಸುಖವಲ್ಲ. ಏಕೆಂದರೆ, 'ತಸ್ಯ' ಸೂರ್ಯಾದಿ ತೇಜಸ್ಸಿಗೆ 'ತಸ್ಯ' ಆನು-ಕೂಲ್ಯೇನ ಗೃಹ್ಯಮಾಣವಾದ ಸುಖಕ್ಕೆ 'ತಮೇವ ಭಾಂತಮ್' ಎಂದು 'ಅನುಕೃತೇಃ' ಅನುಸರಿಸಿ ಪ್ರಕಾಶಿಸುವಿಕೆಯು ಶ್ರುತವಾಗಿರುವುದರಿಂದ ಮತ್ತು ಆ ಸೂರ್ಯಾದಿ ತೇಜಸ್ಸಿಗೆ ಆನುಕೂಲ್ಯೇನ ಗೃಹ್ಯಮಾಣಕ್ಕೆ ಅಧೀನವಾದ ಪ್ರಕಾಶಿಸುವಿಕೆಯು ಶ್ರುತ-ವಾಗಿರುವುದರಿಂದ. ಆನುಕೂಲ್ಯೇನ ಗೃಹ್ಯಮಾಣಕ್ಕೆ ಇತರ ತೇಜಸ್ಸುಗಳ ನಿಯಾ-ಮಕತ್ವವು ಶ್ರುತವಾಗಿರುವುದರಿಂದ ಎಂದು ತಾತ್ಪರ್ಯ. ಹಾಗೆಯೇ 'ತಸ್ಯ' ಆ ಸಮಸ್ತ

ಜಗತ್ತಿಗೆ 'ತಸ್ಯ' ಅನುಕೂಲ್ಯೇನ ಗೃಹ್ಯಮಾಣವಾದುದರ ಪ್ರಕಾಶದಿಂದ ಪ್ರಕಾಶಿಸು-ವಿಕೆಯು 'ತಸ್ಯ ಭಾಸಾ' ಎಂಬ ಶ್ರುತಿಯಲ್ಲಿ ಉಕ್ತವಾಗಿರುವುದರಿಂದ ಆ ಅನುಕೂಲ್ಯೇನ ಗೃಹ್ಯಮಾಣಕ್ಕೆ ಸರ್ವಜಗತ್ಪ್ರಕಾಶಕತ್ವವನ್ನು ಹೇಳಿರುವುದರಿಂದ ಎಂದು ತಾತ್ಪರ್ಯ. ಈ ಎರಡೂ ಲಿಂಗಗಳು 'ಅಹಂ ತತ್ತೇಜಃ' ಎಂಬ ಶ್ರುತಿಯಿಂದ ಹಾಗೂ ಸ್ಮೃತಿವಾಕ್ಯ-ಗಳಿಂದ 'ತಸ್ಮಿನ್' - ಆ ವಿಷ್ಣುವಿನಲ್ಲೇ ಉಪಪನ್ನಗಳೆಂದು ನಿಶ್ಚಯವಿರುವುದರಿಂದ ಜ್ಞಾನಿಸುಖದಲ್ಲಾದರೋ 'ಅಸಂಭವಾತ್' ಅವುಗಳು ಅನುಪಪನ್ನವಾಗುವುದರಿಂದ ಹಾಗೆಯೇ 'ತಸ್ಮಿನ್' ಆ ಉಪಸಂಹಾರ ಸಂದರ್ಭದಲ್ಲಿ 'ತಸ್ಯ' ಆ ಅನುಕೂಲ್ಯೇನ ಗೃಹ್ಯಮಾಣಕ್ಕೆ 'ನ ತತ್ರ ಸೂರ್ಯೋ ಭಾತಿ' ಎಂಬ ವಾಕ್ಯದಲ್ಲಿ 'ತಸ್ಯ' - ಸೂರ್ಯಾ-ದ್ಯಪ್ರಕಾಶ್ಯತ್ವವು ಕೂಡ ಹೇಳಲಾಗಿರುವುದರಿಂದ ಎಂದು 'ಅನುಕೃತೇಸ್ತಸ್ಯ ಚ' ಎಂಬ ಸೂತ್ರದ ಅರ್ಥವನ್ನು ಹೇಳಿದಂತಾಗುವುದು.

**ಭಾ.ದೀ. – ಯದೇತಲ್ಲಿಂಗದ್ವಯಸ್ಯ ವಿಷ್ಣುನಿಷ್ಠತ್ವಮ್ 'ಅಹಮ್' ಇತಿ ಶ್ರುತ್ಯಾ ಉಪಪಾದಿತಮ್ ತತ್ ಸ್ಮೃತ್ಯಾಽಪಿ ಉಪಪಾದಯತ್ ಸೂತ್ರಂ ಪಠಿತ್ವಾ, ತಾಂ ಸ್ಮೃತಿಮುದಾಹರತಿ – ಅಪೀತಿ ॥**

ಮೇಲೆ ಹೇಳಿದ ಈ ಎರಡು ಲಿಂಗಗಳು 'ಅಹಂ ತತ್ತೇಜೋ' ಎಂಬ ಶ್ರುತಿಯ ಆಧಾರದಿಂದ ವಿಷ್ಣುವಿನಲ್ಲಿ ಇರತಕ್ಕವುಗಳೆಂದು ಏನು ಹೇಳಲಾಯಿತೋ ಅದನ್ನು ಸ್ಮೃತಿಯಿಂದಲೂ ಸಮರ್ಥಿಸುವ ಸೂತ್ರವನ್ನು ಪಠಿಸಿ, ಆ ಸ್ಮೃತಿಯನ್ನು ''ಅಪಿ'' ಎಂಬುದಾಗಿ ಉದಾಹರಿಸುತ್ತಿದ್ದಾರೆ.

**ಭಾಷ್ಯಮ್ – ॥ ಓಂ ಅಪಿ ಸ್ಮರ್ಯತೇ ಓಂ ॥ ೨೩ ॥**

**'ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್' ಇತಿ ।**

'ಆದಿತ್ಯಾದಿಗಳಲ್ಲಿ ಯಾವ ತೇಜಸ್ಸು ಇರುವುದೋ ಅದು ನನಗೆ ಅಧೀನವಾದದ್ದು; ನನ್ನ ತೇಜಸ್ಸೇ ಅವುಗಳಲ್ಲಿ ಪ್ರೇರಕವಾಗಿ-

ರುವುದು ಅದೇ ಸಮಸ್ತಜಗತ್ತನ್ನು ಪ್ರಕಾಶಗೊಳಿಸುವುದು' ಎಂದು ಸ್ಮೃತಿಯಲ್ಲೂ(ಗೀತಾ.೧೫.೧೨) ಹೇಳಿದೆ.

ಭಾ.ದೀ. – 'ಇತಿ ಸ್ಮರ್ಯತೇ' ಇತ್ಯನ್ವಯಃ । 'ಯತ್' ಆದಿತ್ಯಾದಿಷು ಸ್ಥಿತಂ ತೇಜಃ ತತ್ 'ಮಾಮಕಂ' - ಮದಧೀನಂ ಮದೀಯಂ ಚ, ಮತ್ತೇಜ ಏವ ಆದಿತ್ಯಾದಿಷು ಪ್ರೇರಕತ್ವೇನಾಸ್ತಿ । ತದೇವ ಅಖಿಲಂ ಜಗತ್ 'ಭಾಸಯತೇ' ಪ್ರಕಾಶಯತೀತಿ ಗೀತಾಸ್ಮೃತ್ಯರ್ಥಃ।

ಭಾಷ್ಯದಲ್ಲಿರುವ ಇತಿಶಬ್ದವು 'ಸ್ಮರ್ಯತೇ' ಎಂಬ ಸೂತ್ರದ ಪದದೊಂದಿಗೆ ಅನ್ವಯವನ್ನು ಹೊಂದುತ್ತದೆ. 'ಯತ್' ಆದಿತ್ಯ ಮೊದಲಾದವರುಗಳಲ್ಲಿ ಯಾವ ತೇಜಸ್ಸು ಇರುವುದೋ 'ತತ್' - ಅದು 'ಮಾಮಕಂ' ನನಗೆ ಅಧೀನವಾದದ್ದು, ನನ್ನದೇ ಆಗಿದೆ. ನನ್ನ ತೇಜಸ್ಸೇ ಆದಿತ್ಯಮೊದಲಾದವರಲ್ಲಿ ಪ್ರೇರಕವಾಗಿರುವುದು. ಅದೇ 'ಅಖಿಲಂ ಜಗತ್' ಸಮಸ್ತಜಗತ್ತನ್ನು 'ಭಾಸಯತೇ' - ಪ್ರಕಾಶಪಡಿಸುವುದು ಎಂದು ಗೀತಾಸ್ಮೃತಿಯ ಅರ್ಥವಾಗಿದೆ.

ಭಾ.ದೀ. – ಕಿಂಚ ಕಾಠಕೇ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯತೋ ಭಾಂತಿ ಕುತೋಽಯಮಗ್ನಿಃ' ಇತ್ಯಾದ್ಯಾನುಕೂಲ್ಯೇನ ಗೃಹ್ಯಮಾಣಸ್ಯ ಸುಖಸ್ಯ ಸೂರ್ಯಾದ್ಯಪ್ರಕಾಶ್ಯತ್ವಮುಚ್ಯತೇ । ತಚ್ಚ ವಿಷ್ಣೋರೇವ ಸ್ಮರ್ಯತೇ, ಅತೋ ವಿಷ್ಣುರೇವ 'ತದೇತತ್' ಇತ್ಯತ್ರ ಪ್ರತಿಪಾದ್ಯಃ, ನ ಜ್ಞಾನಿ-ಸುಖಮ್ ಇತಿ ಸೂತ್ರಸ್ಯ ಅರ್ಥಾಂತರತ್ವಮ್, ಅಪಿಪದಸ್ಯ ಯುಕ್ತಿಸಮುಚ್ಚಯಾ-ರ್ಥತ್ವಂ ಚ ಅಭಿಪ್ರೇತ್ಯ , ತಾಂ ಸ್ಮೃತಿಮುದಾಹರತಿ – ನ ತದಿತಿ ॥

'ಕಿಂಚ'-ಮತ್ತು, ಕಾಠಕದಲ್ಲಿ 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯತೋ ಭಾಂತಿ ಕುತೋಽಯಮಗ್ನಿಃ' ಇತ್ಯಾದಿಯಾಗಿ ಆನುಕೂಲ್ಯೇನ ಗೃಹ್ಯಮಾಣವಾದ ಸುಖವು ಸೂರ್ಯಾದಿಗಳಿಂದ ಪ್ರಕಾಶಿಸಲು ಅಶಕ್ಯ ಎಂದು ಹೇಳಲಾಗಿದೆ. ಆ ಸೂರ್ಯಾದ್ಯಪ್ರಕಾಶ್ಯತ್ವ ಎಂಬ ಧರ್ಮವೂ ಕೂಡ ವಿಷ್ಣುವಿಗೇ ಇರುವುದೆಂದು ಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ವಿಷ್ಣುವೇ 'ತದೇತತ್ ಇತಿ

ಮನ್ಯಂತೇ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾಗಿರುವನು ಹೊರತು ಜ್ಞಾನಿಸುಖವಲ್ಲ – ಎಂದು ಸೂತ್ರಕ್ಕೆ ಮತ್ತೊಂದು ಅರ್ಥವನ್ನೂ ಹಾಗೆಯೇ ಸೂತ್ರದಲ್ಲಿರುವ ಅಪಿಪದವು ಯುಕ್ತಿಸಮುಚ್ಚಯವನ್ನು ಹೇಳುವುದೆಂದು ಅಭಿಪ್ರಾಯಪಟ್ಟು ಆ ಸ್ಮೃತಿಯನ್ನು ''ನ ತತ್'' ಎಂದು ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ.

**ಭಾಷ್ಯಮ್ –**

**'ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ' ಇತಿ ಚ ॥**೨೩

॥ ಇತಿ ಬ್ರಹ್ಮಸೂತ್ರಭಾಷ್ಯೇ ಅನುಕೃತ್ಯಧಿಕರಣಮ್ ॥ ೬ ॥

ಜ್ಞಾನಿಗಳು ಯಾವುದನ್ನು ಹೊಂದಿ ಹಿಂದಿರುಗುವುದಿಲ್ಲವೋ ಅದು ನನ್ನ ಸ್ವರೂಪವಾಗಿದೆ. ಆ ಸ್ವರೂಪವನ್ನು ಸೂರ್ಯನು ಪ್ರಕಾಶಗೊಳಿಸಲಾರ. ಹಾಗೆಯೇ ಚಂದ್ರನೂ ಕೂಡ. ಹೀಗಿರುವಾಗ ಇವರೆಲ್ಲರಿಗಿಂತ ಅವಮನಾದ ಅಗ್ನಿಯು ಪ್ರಕಾಶ ಪಡಿಸುವುದು ಹೇಗೆ? – ಎಂದೂ ಸ್ಮೃತಿಯಲ್ಲಿ (ಗೀತಾ. ೧೫.೬) ಹೇಳಿದೆ.

ಭಾ.ದೀ. – ಅತ್ರಾಪಿ ಇತಿಶಬ್ದಸ್ಯ ಸ್ಮರ್ಯತೇ ಇತ್ಯನ್ವಯಃ। ಜ್ಞಾನಿನೋ 'ಯದ್ ಗತ್ವಾ' ಯತ್ ಪ್ರಾಪ್ಯ ಪುನಃ ತಸ್ಮಾನ್ನ ನಿವರ್ತಂತೇ, ತನ್ಮಮ ಪರಮಂ 'ಧಾಮ' ಸ್ವರೂಪಂ, ತದೇತದ್ಧಾಮ ಸೂರ್ಯೋ 'ನ ಭಾಸಯತೇ' ನ ಪ್ರಕಾಶಯತೇ, ಏವಂ ಚಂದ್ರಃ। ಯದಾ ಚೈವಂ ತದಾ ಕುತೋಽಯಮ್ ಅವಮೋಽಗ್ನಿಃ - ಇತಿ ಗೀತಾಸ್ಮೃತ್ಯರ್ಥಃ।

ಅನೇನ – ಪೂರ್ವವ್ಯಾಖ್ಯಾನೇ ನ ಕೇವಲಮ್ ಅನುಕೃತ್ಯಾದಿಃ 'ಅಹಂ ತತ್ತೇಜಃ' ಇತಿ ಶ್ರುತ್ಯಂತರೇ 'ತಮೇವ ಭಾಂತಮನುಭಾತಿ' ಇತ್ಯಾಥರ್ವಣಾದೌ ವಿಷ್ಣುಧರ್ಮತ್ವೇನ ಶ್ರೂಯತೇ, ಕಿಂತು 'ಯದಾದಿತ್ಯ' ಇತಿ ಸ್ಮರ್ಯತೇಽಪಿ ಇತಿ ಶ್ರುತಿಸಮುಚ್ಚಯಾರ್ಥೋಽಪಿಶಬ್ದಃ।

ದ್ವಿತೀಯವ್ಯಾಖ್ಯಾನೇ ತು 'ತಮೇವ ಭಾಂತಮನುಭಾತಿ' ಇತ್ಯುತ್ತರವಾಕ್ಯೋಕ್ತಾನುಕೃತ್ಯಾದಿಹೇತೋಃ 'ನ ತ್ರ ಸೂರ್ಯೋ ಭಾತಿ' ಇತಿ ಪೂರ್ವವಾಕ್ಯೋಕ್ತಸೂರ್ಯಾದ್ಯಪ್ರಕಾಶ್ಯತ್ವಹೇತೋಶ್ಚ ಸಮುಚ್ಚಯೇಽಪಿ ಶಬ್ದಃ । ತಥಾ ಚ – ನ ಕೇವಲಂ 'ತದೇತತ್' ಇತ್ಯತ್ರೋಕ್ತಾನುಕೂಲ್ಯೇನ ಗೃಹ್ಯಮಾಣಸ್ಯ ವಿಷ್ಣುತ್ವರೂಪಪ್ರಧಾನಸಾಧ್ಯೇ ಹೇತೂಕೃತಮನುಕೃತ್ಯಾದಿಕಮ್ 'ಅಹಂ ತೇಜೋ ರಶ್ಮೀತ್' ಇತ್ಯಾದೌ ಶ್ರೂಯತೇ, ಕಿಂತು 'ಯದಾದಿತ್ಯ' ಇತಿ ಸ್ಮರ್ಯತೇಽಪಿ - ಇತಿ ವಾ ಅಪಿಃ ।

ಇಲ್ಲೂ ಭಾಷ್ಯದ 'ಇತಿ'ಶಬ್ದವು ಸೂತ್ರದ 'ಸ್ಮರ್ಯತೇ' ಎಂಬ ಪದದೊಂದಿಗೆ ಅನ್ವಯವನ್ನು ಹೊಂದುವುದು. ಜ್ಞಾನಿಗಳು 'ಯದ್ಗತ್ವಾ' ಯಾವುದನ್ನು ಹೊಂದಿ 'ನ ನಿವರ್ತಂತೇ' - ಪುನಃ ಅಲ್ಲಿಂದ ಹಿಂದಿರುಗುವುದಿಲ್ಲವೋ 'ತತ್ ಮಮ ಪರಮಂ ಧಾಮ' - ಅದು ನನ್ನ ಶ್ರೇಷ್ಠವಾದ ಸ್ವರೂಪವಾಗಿದೆ. ಈ ನನ್ನ ಸ್ವರೂಪವನ್ನು 'ಸೂರ್ಯೋ ನ ಭಾಸಯತೇ' - ಸೂರ್ಯನು ಪ್ರಕಾಶ ಪಡಿಸುವುದಿಲ್ಲ; ಈ ರೀತಿಯಾಗಿ ಶಶಾಂಕಃ - ಚಂದ್ರನೂ ಪ್ರಕಾಶಿಸಲಾರ. ಹೀಗಿರುವಾಗ 'ಕುತೋಽಯಮವಮೋಽಗ್ನಿಃ' - ಅವರಿಗಿಂತ ಅವಮನಾದ ಅಗ್ನಿಯು ಪ್ರಕಾಶಿಸಲಾರ ಎಂದು ಹೇಳುವುದೇನು? ಎಂದು ಗೀತಾಸ್ಮೃತಿಯ ಅರ್ಥ.

ಇದರಿಂದ – ಹಿಂದಿನ (ಮೊದಲನೆಯ) ವ್ಯಾಖ್ಯಾನದಲ್ಲಿ ಅನುಕೃತಿ ಮೊದಲಾದವುಗಳು 'ಅಹಂ ತತ್ತೇಜಃ' ಎಂಬ ಮತ್ತೊಂದು ಶ್ರುತಿಯಲ್ಲಿ 'ತಮೇವ ಭಾಂತಮನುಭಾತಿ' ಎಂಬ ಆಥರ್ವಣ ಮೊದಲಾದ ಶ್ರುತಿಗಳಲ್ಲಿ ವಿಷ್ಣುಧರ್ಮವೆಂದು ಶ್ರುತವಾಗಿದೆ ಎಂದಷ್ಟೇ ಅಲ್ಲ ಕಿಂತು, 'ಯದಾದಿತ್ಯ' ಎಂಬ ಸ್ಮೃತಿಯಲ್ಲೂ ಉಕ್ತವಾಗಿದೆ ಎಂದು 'ಅಪಿ'ಶಬ್ದವು ಶ್ರುತಿಸಮುಚ್ಚಯವೆಂಬ ಅರ್ಥವನ್ನು ಪಡೆದಿದೆ.

ಎರಡನೆಯ ವ್ಯಾಖ್ಯಾನದಲ್ಲಾದರೋ 'ತಮೇವ ಭಾಂತಮನುಭಾತಿ' ಎಂದು ಮುಂದಿನ ವಾಕ್ಯದಲ್ಲಿ ಹೇಳಿದ ಅನುಕೃತ್ಯಾದಿರೂಪವಾದ ಹೇತು ಹಾಗೂ 'ನ ತತ್ರ ಸೂರ್ಯೋ ಭಾತಿ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಿದ ಸೂರ್ಯಾದ್ಯಪ್ರಕಾಶ್ಯತ್ವ

ಎಂಬ ಹೇತು ಇವುಗಳ ಸಮುಚ್ಚಯವನ್ನು ಅಪಿಶಬ್ದವು ಹೇಳುವುದು. ತಥಾ ಚ – ''ತದೇತತ್ ಎಂಬ ವಾಕ್ಯದಲ್ಲಿ ಹೇಳಿದ ಆನುಕೂಲ್ಯೇನ ಗೃಹ್ಯಮಾಣನು ವಿಷ್ಣುವೇ ಆಗಿರುವನು'' ಎಂಬ ಪ್ರಧಾನಸಾಧ್ಯವನ್ನು ಕುರಿತು ಹೇತುವೆಂದು ಉಕ್ತವಾಗಿರುವ ಅನುಕೃತಿ ಮೊದಲಾದವುಗಳು 'ಅಹಂ ತತ್ತೇಜೋ ರಶ್ಮೀತ್' ಇತ್ಯಾದಿ ಶ್ರುತಿಯಲ್ಲಿ ಮಾತ್ರ ಕೇಳಿಬರುವುದಲ್ಲ; ಕಿಂತು 'ಯದಾದಿತ್ಯ' ಎಂಬ ಸ್ಮೃತಿಯಲ್ಲೂ ಉಕ್ತವಾಗಿದೆ ಎಂಬುದಾಗಿ ಅಪಿಶಬ್ದವು ಹೇಳುವುದೆಂದು ವ್ಯಾಖ್ಯಾನ ಮಾಡಬಹುದು.

ಭಾ.ದೀ. – ಯತೋ ನ ಕೇವಲಂ ಪ್ರಥಮಸೂಕ್ತೋಕ್ತಲಿಂಗದ್ವಯಂ, ಕಿಂತು ತತೋಽನ್ಯದಪಿ 'ನ ತತ್ರ' ಇತಿ ಕಾಠಕವಾಕ್ಯೇ ತಸ್ಯ ಆನುಕೂಲ್ಯೇನ ಗೃಹ್ಯಮಾಣ-ಸ್ಯೋಕ್ತಂ ಸೂರ್ಯಾದ್ಯಪ್ರಕಾಶ್ಯತ್ವರೂಪಂ ಲಿಂಗಂ ತಸ್ಯ ವಿಷ್ಣೋಃ ಸಂಬಂಧಿತ್ವೇನೈವ 'ನ ತತ್' ಇತಿ ಸ್ಮರ್ಯತೇ । ಅತಃ ತದೇತತ್ 'ಕಥಂ ನು ತದ್ವಿಜಾನೀಯಾಮ್' ಇತ್ಯತ್ರ ವಿಷ್ಣುರೇವ ಪ್ರತಿಪಾದ್ಯ ಇತಿ ವಾ ಸೂತ್ರಸ್ಯ ಅರ್ಥದ್ವಯಮುಕ್ತಂ ಭವತಿ ।

ಮತ್ತು – ಮೊದಲನೆಯ ಸೂತ್ರದಲ್ಲಿ ಹೇಳಿದ ಎರಡು ಲಿಂಗಗಳಷ್ಟೇ ಅಲ್ಲ, ಕಿಂತು ಅದಕ್ಕಿಂತಲೂ ಭಿನ್ನವಾದದ್ದು 'ನ ತತ್ರ' ಎಂಬ ಕಾಠಕವಾಕ್ಯದಲ್ಲಿ ಆನುಕೂಲ್ಯೇನ ಗೃಹ್ಯ-ಮಾಣನಿಗೆ ಹೇಳಲಾದ ಸೂರ್ಯಾದ್ಯಪ್ರಕಾಶ್ಯತ್ವರೂಪವಾದ ಲಿಂಗವು ವಿಷ್ಣುವಿಗೇ ಸಂಬಂಧಿಸಿರುವುದೆಂದು 'ನ ತತ್' ಎಂಬ ಸ್ಮೃತಿಯಲ್ಲಿ ಹೇಳಲಾಗಿದೆ. ಆದ್ದರಿಂದ 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ । ಕಥಂ ನು ತದ್ವಿಜಾನೀ-ಯಾಮ್ ....' ಎಂಬ ವಾಕ್ಯದಲ್ಲಿ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂದು ಹೀಗೂ ''ಅನುಕೃತೇಸ್ತಸ್ಯ ಚ'' ಎಂಬ ಸೂತ್ರಕ್ಕೆ ಎರಡು ಅರ್ಥಗಳನ್ನು ಹೇಳಿದಂತಾಗುವುದು.

ಭಾ.ದೀ. – ''ನ ತತ್ರ'' ಇತ್ಯಾದೇರಯಮರ್ಥಃ – ಪೂರ್ವಂ ಬ್ರಹ್ಮ ನ ಸಮ್ಯಗ್ ಭಾತೀತಿ ತಸ್ಯ ದುರ್ಜ್ಞೇಯತ್ವಮುಕ್ತಮ್, ತತ್ ಕುತಃ? ಇತ್ಯತಃ ಇದಮುಚ್ಯತೇ – ಯಸ್ಯ ಏವಂವಿಧಂ ಸುಖಂ ರೂಪಂ 'ತತ್ರ' -ಬ್ರಹ್ಮಣಿ, ಸೂರ್ಯೋ 'ನ ಭಾತಿ' - ತನ್ನ ಪ್ರಕಾಶಯತೀತಿ ಯಾವತ್ । ಚಂದ್ರತಾರಕಮ್ ಇತಿ ದ್ವಂದ್ವೈಕವದ್ಭಾವಃ । ಏವಂ ತತ್ರ ವಿದ್ಯುತೋಽಪಿ 'ನ ಭಾಂತಿ' ನ ಭಾಸಯಂತೀತಿ ।

"ನ ತತ್ರ" ಇತ್ಯಾದಿ ವಾಕ್ಯಕ್ಕೆ ಅರ್ಥ ಹೀಗಿರುವುದು – ಹಿಂದೆ ಬ್ರಹ್ಮನು ಪೂರ್ಣವಾಗಿ ತಿಳಿದು ಬರುವುದಿಲ್ಲವೆಂದು ಅವನಿಗೆ ದುರ್ಜ್ಞೇಯತ್ವವನ್ನು ಹೇಳ-ಲಾಗಿದೆ. ಅದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಲಾಗುವುದು – ಯಾರಿಗೆ ಈ ರೀತಿಯ ಸುಖಸ್ವರೂಪವಿದೆ ಅಂತಹ ಬ್ರಹ್ಮನ ವಿಷಯದಲ್ಲಿ 'ಸೂರ್ಯೋ ನ ಭಾತಿ' ಅದನ್ನು ಸೂರ್ಯನು ಪ್ರಕಾಶಗೊಳಿಸುವುದಿಲ್ಲ ಎಂದು ಭಾವ. - 'ಚಂದ್ರತಾರಕಮ್' ಎಂಬ ಪದವು ಏಕವದ್ಭಾವವನ್ನು ಪಡೆದ ದ್ವಂದ್ವಸಮಾಸವಾಗಿದೆ. - ಇದೇ ರೀತಿ ಬ್ರಹ್ಮನ ವಿಷಯದಲ್ಲಿ 'ವಿದ್ಯುತೋಽಪಿ ನ ಭಾಂತಿ' ವಿದ್ಯುತ್ತೂ ಕೂಡ ಪ್ರಕಾಶಗೊಳಿಸಲಾರದು – ಎಂದು.

ಭಾ.ದೀ. – 'ತಮೇವ ಭಾಂತಮ್' ಇತ್ಯುತ್ತರವಾಕ್ಯಂ ತು – ಯದ್ಯಪಿ ವ್ಯಾಸ-ತೀರ್ಥಕೃತಾಥರ್ವಣಟೀಕಾಯಾಮ್ 'ಏತತ್ ಸಮಾಖ್ಯಾರೂಪಮ್ ಆಥರ್ವಣ-ವಾಕ್ಯಮ್' 'ಭಾಂತಂ' ಭಾಸಯಂತಂ ಪರಮಾತ್ಮಾನಮನುಸೃತ್ಯೈವ ಸೂರ್ಯಾ-ದಯೋ ಘಟಾದಿಕಂ 'ಭಾಂತಿ' - ಭಾಸಯಂತಿ । ತಸ್ಯ ಪರಮಾತ್ಮನೋ ಭಾಸಾ 'ಸರ್ವಮಿದಂ' ಜಗತ್ 'ಭಾತಿ' - ಪ್ರಕಾಶತ ಇತಿ ವ್ಯಾಖ್ಯಾತಮ್ । ತಥಾಽಪಿ ಟೀಕಾನುಸಾರಾತ್ 'ಸರ್ವಂ' -ಸೂರ್ಯಾದಿತೇಜಃ 'ಭಾಂತಂ' - ಪ್ರಕಾಶಮಾನಂ ಭಗವಂತಮನುಸೃತ್ಯೈವ 'ಭಾತಿ' ಪ್ರಕಾಶತೇ । 'ತಸ್ಯ' ಭಗವತಃ, 'ಭಾಸಾ' - ಪ್ರಕಾಶೇನ, 'ಇದಂ ಸರ್ವಂ' - ಜಗತ್, 'ಭಾತಿ' - ಪ್ರಕಾಶತೇ - ಇತಿ ವ್ಯಾಖ್ಯೇ-ಯಮ್ ।

ವ್ಯಾಸತೀರ್ಥೀಯಂ ತು ವ್ಯಾಖ್ಯಾನಾಂತರಂ ಟೀಕಾಕೃದಭಿಪ್ರೇತಂ ಭವಿಷ್ಯತೀತಿ ನ ತದ್ವಿರೋಧಃ ॥

॥ ಇತಿ ಭಾಷ್ಯದೀಪಿಕಾಯಾಮ್ ಅನುಕೃತ್ಯಧಿಕರಣಮ್ ॥

'ತಮೇವ ಭಾಂತಂ' ಎಂಬ ಮುಂದಿನ ವಾಕ್ಯವನ್ನಾದರೋ – ಯದ್ಯಪಿ ವ್ಯಾಸ-ತೀರ್ಥರು ರಚಿಸಿರುವ ಆಥರ್ವಣ ಟೀಕೆಯಲ್ಲಿ - 'ಏತತ್ಸಮಾಖ್ಯಾರೂಪಮಾಥ-ರ್ವಣವಾಕ್ಯಂ' ಈ ಕಾಠಕವಾಕ್ಯಕ್ಕೆ ಸಮಾನಾರ್ಥಕವಾದ ಆಥರ್ವಣವಾಕ್ಯವನ್ನು

'ಭಾಂತಂ' ಅಂದರೆ ಪ್ರಕಾಶಗೊಳಿಸುವ ಪರಮಾತ್ಮನನ್ನು ''ಅನು'' - ಅನುಸರಿಸಿಯೇ ಸೂರ್ಯ ಮೊದಲಾದವರು 'ಭಾಂತಿ' - ಘಟಾದಿ ಪದಾರ್ಥಗಳನ್ನು ಪ್ರಕಾಶಗೊಳಿಸು-ವರು. 'ತಸ್ಯ ಭಾಸಃ' - ಆ ಪರಮಾತ್ಮನ ಪ್ರಕಾಶದಿಂದ 'ಸರ್ವಮಿದಂ' - ಈ ಎಲ್ಲ ಜಗತ್ತು 'ಭಾತಿ' ಪ್ರಕಾಶಿಸಲ್ಪಡುತ್ತದೆ - ಎಂದು ವ್ಯಾಖ್ಯಾನ ಮಾಡಲಾಗಿದೆ. ತಥಾಪಿ - ತತ್ವಪ್ರಕಾಶಿಕೆಗೆ ಅನುಸಾರವಾಗಿ – 'ಸರ್ವಂ' - ಸೂರ್ಯ ಮೊದಲಾದ ಎಲ್ಲ ತೇಜಸ್ಸೂ 'ಭಾಂತಂ' - ಪ್ರಕಾಶಮಾನನಾದ ಭಗವಂತನನ್ನು 'ಅನು' - ಅನುಸರಿಸಿಯೇ 'ಭಾತಿ' - ಪ್ರಕಾಶಿಸುವುದು. 'ತಸ್ಯ' - ಆ ಭಗವಂತನ 'ಭಾಸಾ' ಪ್ರಕಾಶದಿಂದ 'ಇದಂ ಸರ್ವಂ' - ಈ ಎಲ್ಲ ಜಗತ್ತೂ 'ಭಾತಿ' - ಪ್ರಕಾಶಿಸಲ್ಪಡುತ್ತದೆ – ಎಂದು ವ್ಯಾಖ್ಯಾನ ಮಾಡಬೇಕು. ವ್ಯಾಸತೀರ್ಥರು ಮಾಡಿದ ಆ ಇನ್ನೊಂದು ವ್ಯಾಖ್ಯಾನವಾದರೋ ಟೀಕಾಕೃತ್ಪಾದರಿಗೆ ಸಮ್ಮತವಾಗಿರುವ ಕಾರಣ ಅದರ ವಿರೋಧವಿಲ್ಲ.

॥ಭಾಷ್ಯದೀಪಿಕಾದಲ್ಲಿ ಅನುಕೃತ್ಯಧಿಕರಣದ ಅನುವಾದವು ಮುಗಿಯಿತು.॥

* * * * * *

"ನ ತತ್ರ" ಇತ್ಯಾದಿ ವಾಕ್ಯಕ್ಕೆ ಅರ್ಥ ಹೀಗಿರುವುದು – ಹಿಂದೆ ಬ್ರಹ್ಮನು ಪೂರ್ಣವಾಗಿ ತಿಳಿದು ಬರುವುದಿಲ್ಲವೆಂದು ಅವನಿಗೆ ದುರ್ಜ್ಞೇಯತ್ವವನ್ನು ಹೇಳಲಾಗಿದೆ. ಅದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಲಾಗುವುದು – ಯಾರಿಗೆ ಈ ರೀತಿಯ ಸುಖಸ್ವರೂಪವಿದೆ ಅಂತಹ ಬ್ರಹ್ಮನ ವಿಷಯದಲ್ಲಿ 'ಸೂರ್ಯೋ ನ ಭಾತಿ' ಅದನ್ನು ಸೂರ್ಯನು ಪ್ರಕಾಶಗೊಳಿಸುವುದಿಲ್ಲ ಎಂದು ಭಾವ. - 'ಚಂದ್ರತಾರಕಮ್' ಎಂಬ ಪದವು ಏಕವದ್ಭಾವವನ್ನು ಪಡೆದ ದ್ವಂದ್ವಸಮಾಸವಾಗಿದೆ. - ಇದೇ ರೀತಿ ಬ್ರಹ್ಮನ ವಿಷಯದಲ್ಲಿ 'ವಿದ್ಯುತೋಽಪಿ ನ ಭಾಂತಿ' ವಿದ್ಯುತ್ತೂ ಕೂಡ ಪ್ರಕಾಶಗೊಳಿಸಲಾರದು – ಎಂದು.

ಭಾ.ದೀ. – 'ತಮೇವ ಭಾಂತಮ್' ಇತ್ಯುತ್ತರವಾಕ್ಯಂ ತು – ಯದ್ಯಪಿ ವ್ಯಾಸತೀರ್ಥಕೃತಾಥರ್ವಣಟೀಕಾಯಾಮ್ 'ಏತತ್ ಸಮಾಖ್ಯಾರೂಪಮ್ ಆಥರ್ವಣವಾಕ್ಯಮ್' 'ಭಾಂತಂ' ಭಾಸಯಂತಂ ಪರಮಾತ್ಮಾನಮನುಸೃತ್ಯೈವ ಸೂರ್ಯಾದಯೋ ಘಟಾದಿಕಂ 'ಭಾಂತಿ' - ಭಾಸಯಂತಿ । ತಸ್ಯ ಪರಮಾತ್ಮನೋ ಭಾಸಾ 'ಸರ್ವಮಿದಂ' ಜಗತ್ 'ಭಾತಿ' - ಪ್ರಕಾಶತ ಇತಿ ವ್ಯಾಖ್ಯಾತಮ್ । ತಥಾಽಪಿ ಟೀಕಾನುಸಾರಾತ್ 'ಸರ್ವಂ' -ಸೂರ್ಯಾದಿತೇಜಃ 'ಭಾಂತಂ' - ಪ್ರಕಾಶಮಾನಂ ಭಗವಂತಮನುಸೃತ್ಯೈವ 'ಭಾತಿ' ಪ್ರಕಾಶತೇ । 'ತಸ್ಯ' ಭಗವತಃ, 'ಭಾಸಾ' - ಪ್ರಕಾಶೇನ, 'ಇದಂ ಸರ್ವಂ' - ಜಗತ್, 'ಭಾತಿ' - ಪ್ರಕಾಶತೇ - ಇತಿ ವ್ಯಾಖ್ಯೇಯಮ್ ।

ವ್ಯಾಸತೀರ್ಥೀಯಂ ತು ವ್ಯಾಖ್ಯಾನಾಂತರಂ ಟೀಕಾಕೃದಭಿಪ್ರೇತಂ ಭವಿಷ್ಯತೀತಿ ನ ತದ್ವಿರೋಧಃ ॥

॥ ಇತಿ ಭಾಷ್ಯದೀಪಿಕಾಯಾಮ್ ಅನುಕೃತ್ಯಧಿಕರಣಮ್ ॥

'ತಮೇವ ಭಾಂತಂ' ಎಂಬ ಮುಂದಿನ ವಾಕ್ಯವನ್ನಾದರೋ – ಯದ್ಯಪಿ ವ್ಯಾಸತೀರ್ಥರು ರಚಿಸಿರುವ ಆಥರ್ವಣ ಟೀಕೆಯಲ್ಲಿ - 'ಏತತ್ಸಮಾಖ್ಯಾರೂಪಮಾಥರ್ವಣವಾಕ್ಯಂ' ಈ ಕಾಠಕವಾಕ್ಯಕ್ಕೆ ಸಮಾನಾರ್ಥಕವಾದ ಆಥರ್ವಣವಾಕ್ಯವನ್ನು

'ಭಾಂತಂ' ಅಂದರೆ ಪ್ರಕಾಶಗೊಳಿಸುವ ಪರಮಾತ್ಮನನ್ನು ''ಅನು'' - ಅನುಸರಿಸಿಯೇ ಸೂರ್ಯ ಮೊದಲಾದವರು 'ಭಾಂತಿ' - ಘಟಾದಿ ಪದಾರ್ಥಗಳನ್ನು ಪ್ರಕಾಶಗೊಳಿಸು-ವರು. 'ತಸ್ಯ ಭಾಸಃ' - ಆ ಪರಮಾತ್ಮನ ಪ್ರಕಾಶದಿಂದ 'ಸರ್ವಮಿದಂ' - ಈ ಎಲ್ಲ ಜಗತ್ತು 'ಭಾತಿ' ಪ್ರಕಾಶಿಸಲ್ಪಡುತ್ತದೆ - ಎಂದು ವ್ಯಾಖ್ಯಾನ ಮಾಡಲಾಗಿದೆ. ತಥಾಪಿ - ತತ್ವಪ್ರಕಾಶಿಕೆಗೆ ಅನುಸಾರವಾಗಿ – 'ಸರ್ವಂ' - ಸೂರ್ಯ ಮೊದಲಾದ ಎಲ್ಲ ತೇಜಸ್ಸೂ 'ಭಾಂತಂ' - ಪ್ರಕಾಶಮಾನನಾದ ಭಗವಂತನನ್ನು 'ಅನು' - ಅನುಸರಿಸಿಯೇ 'ಭಾತಿ' - ಪ್ರಕಾಶಿಸುವುದು. 'ತಸ್ಯ' - ಆ ಭಗವಂತನ 'ಭಾಸಾ' ಪ್ರಕಾಶದಿಂದ 'ಇದಂ ಸರ್ವಂ' - ಈ ಎಲ್ಲ ಜಗತ್ತೂ 'ಭಾತಿ' - ಪ್ರಕಾಶಿಸಲ್ಪಡುತ್ತದೆ – ಎಂದು ವ್ಯಾಖ್ಯಾನ ಮಾಡಬೇಕು. ವ್ಯಾಸತೀರ್ಥರು ಮಾಡಿದ ಆ ಇನ್ನೊಂದು ವ್ಯಾಖ್ಯಾನವಾದರೋ ಟೀಕಾಕೃತ್ಪಾದರಿಗೆ ಸಮ್ಮತವಾಗಿರುವ ಕಾರಣ ಅದರ ವಿರೋಧವಿಲ್ಲ.

॥ಭಾಷ್ಯದೀಪಿಕಾದಲ್ಲಿ ಅನುಕೃತ್ಯಧಿಕರಣದ ಅನುವಾದವು ಮುಗಿಯಿತು.॥

* * * * * *

## ೭. ವಾಮನಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಈಶಾನನಾಮಸಮನ್ವಯಃ ಕ್ರಿಯತೇ । ಶ್ರುತ್ಯಾದಿ-ಸಂಗತಿಂ ವಿಷಯಸಂಶಯೌ ಚ ಸೂಚಯತಿ – ವಿಷ್ಣುರೇವ ಇತಿ ॥

ಈ ಅಧಿಕರಣದಲ್ಲಿ ಈಶಾನ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡ-ಲಾಗುವುದು. ಭಾಷ್ಯದಲ್ಲಿ ''ವಿಷ್ಣುರೇವ'' ಎಂಬ ವಾಕ್ಯದಿಂದ ಈ ಅಧಿಕರಣಕ್ಕಿರುವ ಶ್ರುತಿ ಮೊದಲಾದವುಗಳ ಸಂಗತಿಯನ್ನು ಹಾಗೂ ವಿಷಯಸಂಶಯಗಳನ್ನು ಸೂಚಿಸು-ತ್ತಿದ್ದಾರೆ.

**ಭಾಷ್ಯಮ್ –**

**ವಿಷ್ಣುರೇವ ಜಿಜ್ಞಾಸ್ಯ ಇತ್ಯುಕ್ತಮ್। ತತ್ರ –**

**'ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।**
**ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ'**(ಕಠ.೫.೩)

**ಇತಿ ಸರ್ವದೇವೋಪಾಸ್ಯಃ ಕಶ್ಚಿತ್ ಪ್ರತೀಯತೇ । ಸ ಚ – 'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ಪೃಥಗೇವ ಸನ್ನಿಧತ್ತೇ'**(ಪ್ರಶ್ನ ೩.೪) **'ಯೋಽಯಂ ಮಧ್ಯಮಃ ಪ್ರಾಣಃ'** (ಬೃ.೩.೫.೨೧) **'ಕುವಿದಂಗ'** (ಋ.೭.೯೧.೧) **ಇತ್ಯಾದಿನಾ ಪ್ರಾಣ-ವ್ಯವಸ್ಥಾಪಕತ್ವಾನ್ಮಧ್ಯಮತ್ವಾತ್ ಸರ್ವದೇವೋಪಾಸ್ಯತ್ವಾಚ್ಚ ವಾಯುರೇವೇತಿ ಪ್ರತೀಯತೇ ।**

ವಿಷ್ಣುವೇ ಜಿಜ್ಞಾಸ್ಯನೆಂದು ಜಿಜ್ಞಾಸಾಸೂತ್ರದಲ್ಲಿ ಹೇಳಿದೆ. ಆ ಜಿಜ್ಞಾಸ್ಯನಾದರೋ 'ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ...' ಎಂಬ ಶ್ರುತಿಯಲ್ಲಿ ಸರ್ವದೇವತೆಗಳಿಂದ ಉಪಾಸ್ಯನೆಂದು ಒಬ್ಬನು ತಿಳಿದು ಬರುತ್ತಿದ್ದಾನೆ. ಆ ಸರ್ವದೇವೋಪಾಸ್ಯನಾದರೋ 'ಏವ-

ಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ಪೃಥಗೇವ ಸನ್ನಿಧತ್ತೇ' 'ಯೋಽಯಂ ಮಧ್ಯಮಃ ಪ್ರಾಣಃ', 'ಕುವಿದಂಗ' ಇತ್ಯಾದಿ ಶ್ರುತಿ-ಗಳಿಗನುಸಾರವಾಗಿ ಪ್ರಾಣವ್ಯವಸ್ಥಾಪಕನಾದುದರಿಂದ, ಮಧ್ಯಮ-ನಾಗಿರುವುದರಿಂದ ಮತ್ತು ಸರ್ವದೇವೋಪಾಸ್ಯನಾಗಿರುವುದರಿಂದ ವಾಯುವೇ ಎಂದು ತಿಳಿದುಬರುವನು.

ಭಾ.ದೀ.– ಜಿಜ್ಞಾಸಾಸೂತ್ರೇ 'ವಿಷ್ಣುರೇವ ಸರ್ವೈರ್ಮುಮುಕ್ಷುಭಿಃ ಮೋಕ್ಷಾರ್ಥಂ ಜಿಜ್ಞಾಸ್ಯಃ' ಇತ್ಯುಕ್ತಮಿತ್ಯರ್ಥಃ । ನ ಚ ತತ್ರ ಜಿಜ್ಞಾಸ್ಯತ್ವಾಯೋಗ-ವ್ಯವಚ್ಛೇದ ಏವ ಕೃತಃ, ನ ತ್ವನ್ಯಯೋಗವ್ಯವಚ್ಛೇದ ಇತಿ ವಾಚ್ಯಮ್ । ಅನ್ಯಸ್ಯಾಪಿ ಜಿಜ್ಞಾಸ್ಯತ್ವೇ ತಸ್ಯಾಪಿ ಮೋಕ್ಷದಾತೃತ್ವಾಪತ್ತ್ಯಾ 'ಯತೋ ನಾರಾಯಣಪ್ರಸಾದ-ಮೃತೇ' ಇತ್ಯಾದಿ ವಿವರಣಾನುಪಪತ್ತೇರನ್ಯಯೋಗವ್ಯವಚ್ಛೇದಸ್ಯಾಪಿ ತತ್ರಾಭಿ-ಪ್ರೇತತ್ವಾತ್ । ಅತೋ ಅತ್ರ ಏವಕಾರ ಉಭಯಾನ್ವಯಿತಯಾ ವ್ಯಾಖ್ಯೇಯಃ ।

ತತಃ ಕಿಮಿತ್ಯತ ಆಹ – ತತ್ರೇತಿ ॥ ಇದಂ ಚಾಽವರ್ತತೇ । 'ತತ್ರ' ಇತ್ಯವ್ಯಯಂ 'ತತ್' ಇತ್ಯರ್ಥೇಽಪಿ । ತಥಾ ಚ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಯತ್ ಪೂರ್ವಂ ವಿಷ್ಣೋರ್ಜಿಜ್ಞಾಸ್ಯತ್ವಮುಕ್ತಂ 'ತತ್ರ' – ಜಿಜ್ಞಾಸ್ಯತ್ವೇ 'ತತ್ರ' – 'ಈಶಾನೋ ಭೂತಭವ್ಯಸ್ಯ' ಇತ್ಯುಕ್ತ್ವಾ ಆಮ್ನಾತೇ 'ಊರ್ಧ್ವಮ್' ಇತಿ ಕಾಠಕವಾಕ್ಯೇ 'ಕಶ್ಚಿತ್' ಈಶಾನೋ ಧರ್ಮಿತ್ವೇನ ಪ್ರತೀಯತೇ । ಕಥಮ್? ಯತೋಽಯಂ 'ಸರ್ವ-ದೇವೋಪಾಸ್ಯಃ' ತೈರ್ಜಿಜ್ಞಾಸ್ಯಃ ಪ್ರತೀಯತ ಅತ – ಇತಿ ವಾಕ್ಯಯೋಜನಾ ।

ವಿಷ್ಣುವೇ ಜಿಜ್ಞಾಸ್ಯನೆಂದು ಹೇಳಲ್ಪಟ್ಟಿದ್ದಾನೆ ಎಂಬ ಭಾಷ್ಯವಾಕ್ಯಕ್ಕೆ ಜಿಜ್ಞಾಸಾ ಸೂತ್ರದಲ್ಲಿ ವಿಷ್ಣುವೇ ಎಲ್ಲ ಮುಮುಕ್ಷುಗಳಿಂದ ಮೋಕ್ಷಕ್ಕೋಸ್ಕರವಾಗಿ ಜಿಜ್ಞಾಸ್ಯನೆಂದು ಹೇಳಲ್ಪಟ್ಟಿದ್ದಾನೆ ಎಂದು ಅರ್ಥ.

ಶಂಕೆ – ಆ ಸೂತ್ರದಲ್ಲಿ 'ವಿಷ್ಣುವು ಜಿಜ್ಞಾಸ್ಯನಾಗಿಯೇ ಇರುವನು' ಎಂದು ಅಯೋಗವ್ಯವಚ್ಛೇದವನ್ನು ಮಾಡಲಾಗಿದೆಯೇ ಹೊರತು ವಿಷ್ಣುಭಿನ್ನರು ಜಿಜ್ಞಾಸ್ಯರಲ್ಲ

ಎಂದು ಅನ್ಯಯೋಗವ್ಯವಚ್ಛೇದವನ್ನು ಮಾಡಿಲ್ಲ. (ಆದ್ದರಿಂದ ವಿಷ್ಣುವೇ ಜಿಜ್ಞಾಸ್ಯ-ನೆಂದು ಹೇಳಲಾಗಿದೆ ಎನ್ನುವುದು ಸರಿಯಲ್ಲ).

ಸಮಾಧಾನ – ವಿಷ್ಣುವಿಗಿಂತ ಭಿನ್ನನಾದವನು ಜಿಜ್ಞಾಸ್ಯನಾಗುವುದಾದರೆ ಅವನೂ ಮೋಕ್ಷದಾತೃ ಎಂದು ಹೇಳಬೇಕಾಗುವುದರಿಂದ 'ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ' 'ನಾರಾಯಣನ ಅನುಗ್ರಹವಿಲ್ಲದೇ ಮೋಕ್ಷವಿಲ್ಲ' ಎಂದು ಆ ಸೂತ್ರ-ಭಾಷ್ಯದಲ್ಲಿ ವಿವರಣೆ ನೀಡಿರುವುದು ಅನುಪಪನ್ನವಾಗುವುದು. ಆದ್ದರಿಂದ ವಿಷ್ಣು-ಭಿನ್ನರು ಜಿಜ್ಞಾಸ್ಯರಲ್ಲ ಎಂದು ಅನ್ಯಯೋಗವ್ಯವಚ್ಛೇದವು ಅಭಿಪ್ರೇತವಾಗಿದೆ. ಆದ್ದರಿಂದ ಇಲ್ಲಿ 'ಏವ'ಕಾರವು ಎರಡೂ ಅರ್ಥವನ್ನು ಹೊಂದಿರುವಂತೆ ವ್ಯಾಖ್ಯಾನ ಮಾಡಬೇಕು.

ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ''ತತ್ರ'' ಎಂಬ ವಾಕ್ಯವು ಹೊರಟಿದೆ. ಈ ಪದವು ಆವೃತ್ತಿಯನ್ನು ಹೊಂದಿದೆ. 'ತತ್ರ' ಎಂಬ ಶಬ್ದವು ಅವ್ಯಯವಾಗಿದ್ದು 'ತತ್' ಎಂಬ ಅರ್ಥವನ್ನು ಹೇಳುವುದು. ತಥಾ ಚ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದಾಗಿ ಹಿಂದೆ ವಿಷ್ಣುವಿಗೆ ಯಾವ ಜಿಜ್ಞಾಸ್ಯತ್ವವನ್ನು ಹೇಳಲಾಯಿತೋ 'ತತ್ರ' ಆ ಜಿಜ್ಞಾಸ್ಯತ್ವ-ವಿಷಯದಲ್ಲಿ 'ತತ್ರ' 'ಈಶಾನೋ ಭೂತಭವ್ಯಸ್ಯ' ಎಂಬುದಾಗಿ ಹೇಳಿ ಪ್ರಸಿದ್ಧವಾಗಿರುವ 'ಊರ್ಧ್ವಂ ಪ್ರಾಣಂ' ಎಂಬ ಕಾಠಕವಾಕ್ಯದಲ್ಲಿ 'ಕಶ್ಚಿತ್' ಒಬ್ಬ ಈಶಾನನು ಧರ್ಮಿ ಎಂದು ತೋರುವನು. ಹೇಗೆ? ಏಕೆಂದರೆ ಈ ಈಶಾನನು 'ಸರ್ವದೇವೋಪಾಸ್ಯಃ' - ಎಲ್ಲ ದೇವತೆಗಳಿಂದ ಜಿಜ್ಞಾಸ್ಯನೆಂದು 'ಪ್ರತೀಯತೇ' - ತೋರುವನು, ಆದ್ದರಿಂದ – ಎಂದು ವಾಕ್ಯದ ಯೋಜನೆ ಇರುವುದು.

ಭಾ.ದೀ. – ನ ಚ 'ವಾಯೋಃ ಸರ್ವದೇವೋಪಾಸ್ಯತ್ವೇಽಪಿ ನ ವಿಷ್ಣೋಃ ಸರ್ವದೇವೋಪಾಸ್ಯತ್ವಹಾನಿಃ' ಇತಿ ವಾಚ್ಯಮ್ । ತಾವತಾಽಪಿ ಸರ್ವೈ-ರ್ಮುಮುಕ್ಷುಭಿಃ ವಿಷ್ಣುರೇವ ಜಿಜ್ಞಾಸ್ಯ ಇತಿ ನಿಯಮಸ್ಯಾಸಿದ್ಧೇಃ । ನ ಚ ಶ್ರುತಿ-ಗತವಿಶ್ವೇದೇವಶಬ್ದಸ್ಯ ಗಣವಿಶೇಷವಾಚಿತ್ವಾತ್ ಸರ್ವದೇವೋಪಾಸ್ಯ ಇತ್ಯುಕ್ತಿ-ರನುಪಪನ್ನಾ ಇತಿ ವಾಚ್ಯಮ್ । ಗಣವಿಶೇಷಪರತ್ವೇ ತಸ್ಯ ಗುಣಾಧಿಕ್ಯಾಸಿದ್ಧ್ಯಾ ಸರ್ವದೇವಪರತ್ವಾವಶ್ಯಂಭಾವಾತ್ ।

ಅನೇನ ಈಶಾನಶಬ್ದಸ್ಯಾನ್ಯನಿಷ್ಠತ್ವಾಕ್ಷೇಪಮುಖೇನ ಫಲತೋ ಮುಮುಕ್ಷು-ಕರ್ತೃಕಜಿಜ್ಞಾಸ್ಯತ್ವಸ್ಯ ಅನ್ಯನಿಷ್ಠತ್ವಾಕ್ಷೇಪಾದ್ ಜಿಜ್ಞಾಸಾಧಿಕರಣೇನಾಸ್ಯಾಽಕ್ಷೇಪಿಕೀ ಸಂಗತಿರುಕ್ತಾ ಭವತಿ । ತಥಾ ಈಶಾನಾಖ್ಯೋ ವಿಷಯಶ್ಚ ಸೂಚಿತಃ ।

'ವಾಯುವಿಗೆ ಸರ್ವದೇವೋಪಾಸ್ಯತ್ವವಿದ್ದರೂ ವಿಷ್ಣುವಿಗೆ ಸರ್ವದೇವೋಪಾಸ್ಯತ್ವ ಇರಲು ಯಾವ ಬಾಧಕವೂ ಇಲ್ಲ' - ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಹಾಗೆ ಒಪ್ಪಿ-ದರೂ ಎಲ್ಲ ಮುಮುಕ್ಷುಗಳಿಂದ ವಿಷ್ಣುವೇ ಜಿಜ್ಞಾಸ್ಯನಾಗಿದ್ದಾನೆ ಎಂಬ ನಿಯಮ ಸಿದ್ಧವಾಗಲಾರದು. 'ಊರ್ಧ್ವಂ' ಪ್ರಾಣಂ ಎಂಬ ಈ ಶ್ರುತಿಯಲ್ಲಿರುವ ವಿಶ್ವೇದೇವ-ಶಬ್ದವು ದೇವತಾಗಣವಿಶೇಷವನ್ನು ಹೇಳುವುದರಿಂದ ಇಲ್ಲಿ ಸರ್ವದೇವೋಪಾಸ್ಯನಲ್ಲಿ ಹೇಳಲಾಗಿದೆ ಎಂಬ ಮಾತು ಯುಕ್ತವಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ ವಿಶ್ವೇ-ದೇವ ಶಬ್ದವು ಇಲ್ಲಿ ದೇವತಾಗಣವಿಶೇಷವನ್ನು ಹೇಳುವ ತಾತ್ಪರ್ಯವನ್ನು ಹೊಂದಿ-ದ್ದಲ್ಲಿ ಆ ಉಪಾಸ್ಯನಿಗೆ ಗುಣಾಧಿಕ್ಯವು ಸಿದ್ಧವಾಗಲಾರದು. ಆದ್ದರಿಂದ ಇಲ್ಲಿ ವಿಶ್ವೇದೇವಶಬ್ದವು ಸರ್ವದೇವತೆಗಳನ್ನು ಹೇಳುವ ತಾತ್ಪರ್ಯವುಳ್ಳದ್ದು ಎಂದು ಹೇಳುವುದು ಆವಶ್ಯಕವಾಗಿದೆ.

ಇದರಿಂದ – ಈಶಾನಶಬ್ದವು ವಿಷ್ಣುಭಿನ್ನನನ್ನು ಹೇಳುವುದೇ ಹೊರತು ವಿಷ್ಣುವನ್ನಲ್ಲ ಎಂದು ಆಕ್ಷೇಪ ಮಾಡುವ ಮೂಲಕ ಅದರ ಫಲವಾಗಿ ಮುಮುಕ್ಷುವು ಮಾಡುವ ಜಿಜ್ಞಾಸೆಗೆ ವಿಷಯನಾದವನು ವಿಷ್ಣುಭಿನ್ನನೇ ಎಂದು ಹೇಳಬೇಕಾಗುವುದು ಎಂದು ಆಕ್ಷೇಪಿಸುವುದರಿಂದ ಜಿಜ್ಞಾಸಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದಂತಾಗುವುದು. ಹಾಗೆಯೇ ಈ ಅಧಿಕರಣಕ್ಕೆ ಈಶಾನನೆಂಬ ವಿಷಯವನ್ನೂ ಸೂಚಿಸಿದಂತಾಗುವುದು.

ಭಾ.ದೀ. – ಸಯುಕ್ತಿಕಂ ಪೂರ್ವಪಕ್ಷಯತಿ – ಸ ಚೇತಿ ॥ ಅತ್ರೇತ್ಥಂ ಯೋಜನಾ – 'ಸ ಚ' ಸರ್ವದೇವೋಪಾಸ್ಯಶ್ಚ ಈಶಾನೋ ವಾಯುರೇವ ಭವೇತ್, ನ ವಿಷ್ಣುಃ । ಕುತಃ? ಅತ್ರ ಪ್ರಾಣವ್ಯವಸ್ಥಾಪಕತ್ವಶ್ರವಣಾತ್ । ತಥಾ ಮಧ್ಯಮತ್ವೋಕ್ತೇಃ ಸರ್ವ-ದೇವತೋಪಾಸ್ಯತ್ವೋಕ್ತೇಶ್ಚ । ನ ಚೈಷಾಂ ವಾಯ್ವೇಕನಿಷ್ಠತ್ವಾಸಿದ್ಧಿಃ । ಯತೋಽಯಂ

ವಾಯುಃ 'ಏವಮೇವೈಷ ಪ್ರಾಣಃ' (ಪ್ರಶ್ನ. ೩.೪), 'ಯೋಽಯಂ ಮಧ್ಯಮಃ' (ಬೃ.೩.೫.೨೧), 'ಕುವಿದಂಗ' (ಋ.೭.೯೧.೧) ಇತ್ಯಾದಿನಾ ವಾಕ್ಯೇನ ಪ್ರಾಣವ್ಯವಸ್ಥಾಪಕತ್ವಾದಿಮತ್ ಪ್ರತೀಯತೇ ಅತ ಇತಿ ॥

ಭಾಷ್ಯದಲ್ಲಿ ''ಸ ಚ'' ಎಂಬ ವಾಕ್ಯದಿಂದ ಈ ಅಧಿಕರಣದ ಯುಕ್ತಿಸಹಿತವಾದ ಪೂರ್ವಪಕ್ಷವನ್ನು ಸೂಚಿಸಲಾಗಿದೆ.

ಇಲ್ಲಿ ವಾಕ್ಯಯೋಜನೆಯು ಹೀಗಿರುವುದು – 'ಸ ಚ' - ಸರ್ವದೇವೋಪಾಸ್ಯ-ನಾದ ಈಶಾನನಾದರೋ ವಾಯುವೇ ಹೊರತು ವಿಷ್ಣುವಲ್ಲ. ಏಕೆಂದರೆ, ಇಲ್ಲಿ ಪ್ರಾಣವ್ಯವಸ್ಥಾಪಕತ್ವವೆಂಬ ಧರ್ಮವು ಶ್ರುತವಾಗಿದೆ. ಹಾಗೆಯೇ ಮಧ್ಯಮತ್ವವನ್ನು ಮತ್ತು ಸರ್ವದೇವತೋಪಾಸ್ಯತ್ವವನ್ನು ಹೇಳಿರುವುದರಿಂದ ಈಶಾನನು ವಾಯುವೇ ಆಗಿರುವನು. ಈ ಧರ್ಮಗಳು ವಾಯುವಿನಲ್ಲಿ ಮಾತ್ರ ಇರುವುದೆಂದು ಸಿದ್ಧವಾಗಿಲ್ಲ-ವಾದ್ದರಿಂದ ಈ ಪೂರ್ವಪಕ್ಷ ಸರಿಯಲ್ಲ ಎಂದು ಹೇಳಿದರೆ ಅದು ಸರಿಯಲ್ಲ. ಏಕೆಂದರೆ, ಈ ವಾಯುವು 'ಏವಮೇವೈಷ ಪ್ರಾಣಃ', 'ಯೋಽಯಂ ಮಧ್ಯಮಃ' 'ಕುವಿದಂಗ' ಇತ್ಯಾದಿ ವಾಕ್ಯದಿಂದ ಆ ಈಶಾನನು ಪ್ರಾಣವ್ಯವಸ್ಥಾಪಕತ್ವ ಮೊದಲಾದ ಧರ್ಮಗಳನ್ನು ಹೊಂದಿರುವವನೆಂದು ತಿಳಿದು ಬರುವುದು. ಆದ್ದರಿಂದ – ಎಂದು.

ಭಾ.ದೀ. – ಕಾಠಕೇ ಹಿ – 'ಅಂಗುಷ್ಠಮಾತ್ರೋ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ ...' (ಕಠ.೪.೧೨) ಇತ್ಯನೇನ ಭಗವತೋಽ-ಂಗುಷ್ಠಮಾತ್ರತ್ವಂ, ಪೂರ್ಣಷಡ್ಗುಣತ್ವಂ, ದೇಹಮಧ್ಯಸ್ಥತ್ವಂ, ಭೂತಭವಿಷ್ಯದ್ ವರ್ತಮಾನೇಶಾನತ್ವಮ್ ಇತ್ಯಾದಿಮಾಹಾತ್ಮ್ಯಮಭಿಧಾಯ ಈಶಾನಪದೋಕ್ತಸ್ಯ ತಸ್ಯೈವ 'ಊರ್ಧ್ವಮ್' ಇತ್ಯಾದಿನಾ ಮಹಿಮಾಂತರಮುಚ್ಯತೇ । ತತ್ರ ಮಧ್ಯಮ-ಶಬ್ದಃ ಸಿದ್ಧಾಂತೇ ಊರ್ಧ್ವಂ ಪ್ರತ್ಯಕ್‌ಶಬ್ದಸಮಭಿವ್ಯಾಹಾರಾತ್ ದೇಶವಿಶೇಷವಚನಃ, ನ ತ್ವವಾಂತರೇಶ್ವರತ್ವಾದಿರೂಪಮಧ್ಯಮತ್ವಾರ್ಥಕಃ ।

ತಥಾ ಚ ಯಃ ಪ್ರಾಣಾಖ್ಯರೂಪೇಣ 'ಪ್ರಾಣಂ' ಪ್ರಾಣಾಖ್ಯವಾಯುಮ್ ಊರ್ಧ್ವಮ್ 'ಉನ್ನಯತಿ' ಉದ್ಗಮಯತಿ ಊರ್ಧ್ವಗತಿಮತ್ತಯಾ ಪ್ರೇರಯತಿ ।

ಅಪಾನರೂಪೀ ಚಾಪಾನಾಖ್ಯಂ ವಾಯುಂ 'ಪ್ರತ್ಯಕ್' ಅಧಸ್ತಾದ್ ವಿಣ್ಮೂತ್ರಾದಿ-ನಿಷ್ಕಾಸನಹೇತುತಯಾ 'ಅಸ್ಯತಿ' - ನಿರಸ್ಯತಿ ಪ್ರೇರಯತಿ ಇತಿ ಯಾವತ್ । ತಂ 'ದೇಹಮಧ್ಯೇ' ಹೃದಯೇ 'ಆಸೀನಮ್' - ಉಪವಿಷ್ಟಂ 'ವಾಮನಂ' ಸೌಂದರ್ಯ-ಪ್ರಧಾನಾಃ ಸ್ತ್ರಿಯೋ ವಾಮಾಃ ತಾಃ ನೇತಾರಂ ವಿಷ್ಣುಂ 'ವಿಶ್ವೇ ದೇವಾಃ' ಸರ್ವೇ ದೇವಾಃ 'ಉಪಾಸತೇ' ಜಿಜ್ಞಾಸಂತ ಇತಿ ಸಿದ್ಧಾಂತರೀತ್ಯಾ ಶ್ರುತ್ಯರ್ಥಃ।

ಪೂರ್ವಪಕ್ಷೀ ತು ಇದಂ ವಾಯುಪರಂ ಮತ್ವಾ ಮಧ್ಯಶಬ್ದೋ 'ಯೋಽಯಂ ಮಧ್ಯಮಃ' ಇತಿ ಶ್ರುತ್ಯಂತರಸಮಾಖ್ಯಾನಾತ್ ಮಧ್ಯಮೇಶ್ವರತ್ವವಚನೋ ನ ದೇಶವಿಶೇಷವಚನ ಇತ್ಯಾಹ।

ಕಾಠಕೋಪನಿಷತ್ತಿನಲ್ಲಾದರೋ ''ಅಂಗುಷ್ಠಮಾತ್ರೋ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ ...'' ಎಂಬ ಮಂತ್ರದಿಂದ ಭಗವಂತನು ಅಂಗುಷ್ಠಪರಿಮಾಣವುಳ್ಳವನು, ಪೂರ್ಣಷಡ್ಗುಣನು, ದೇಹಮಧ್ಯಭಾಗದಲ್ಲಿರು-ವವನು, ಅತೀತ ಅನಾಗತ ವರ್ತಮಾನವಾದ ಎಲ್ಲದಕ್ಕೂ ನಿಯಾಮಕನಾದವನು - ಇತ್ಯಾದಿ ಮಹಿಮೆಯನ್ನು ಹೇಳಿ 'ಈಶಾನ'ಪದದಿಂದ ಮುಕ್ತನಾದ ಆ ಭಗವಂತನಿಗೇ 'ಊರ್ಧ್ವಂ' ಇತ್ಯಾದಿ ಮಂತ್ರದಿಂದ ಮತ್ತೊಂದು ಮಹಿಮೆಯನ್ನು ಹೇಳಲಾಗಿದೆ. ಆ ಮಂತ್ರದಲ್ಲಿ ಸಿದ್ಧಾಂತಕ್ಕನುಸಾರವಾಗಿ ಮಧ್ಯಮಶಬ್ದವು ಊರ್ಧ್ವ ಮತ್ತು ಪ್ರತ್ಯಕ್ ಎಂಬ ಶಬ್ದಗಳ ಜೊತೆಗಿರುವುದರಿಂದ ದೇಶವಿಶೇಷವನ್ನು ಹೇಳುವುದೇ ಹೊರತು, ಅವಾಂತರಈಶ್ವರತ್ವ ಮೊದಲಾದ ಮಧ್ಯಮತ್ವವನ್ನು ಹೇಳುವುದಿಲ್ಲ.

ತಥಾ ಚ – ಯಾರು ಪ್ರಾಣನಾಮಕವಾದ ರೂಪದಿಂದ 'ಪ್ರಾಣಂ' - ಪ್ರಾಣಾಖ್ಯ-ವಾಯುವನ್ನು 'ಊರ್ಧ್ವಮ್ ಉನ್ನಯತಿ' ಊರ್ಧ್ವಗತಿಯುಳ್ಳವನಾಗುವಂತೆ ಪ್ರೇರಿಸು-ವನೋ; ಅಪಾನರೂಪಿಯಾಗಿ ಅಪಾನಾಖ್ಯವಾಯುವನ್ನು 'ಪ್ರತ್ಯಕ್' ಕೆಳಭಾಗದಲ್ಲಿ ಮಲಮೂತ್ರಾದಿವಿಸರ್ಜನೆಗೆ ಹೇತುವಾಗುವಂತೆ 'ಅಸ್ಯತಿ' - ನಿರಸನಗೊಳಿಸು-ವನೋ - ಪ್ರೇರಿಸುವನೆಂದು ಭಾವ. - ಆ 'ದೇಹಮಧ್ಯೇ' - ದೇಹದ ಮಧ್ಯದಲ್ಲಿರುವ ಹೃದಯದಲ್ಲಿ 'ಆಸೀನಮ್' - ಕುಳಿತಿರುವ 'ವಾಮನಂ' - ಸೌಂದರ್ಯಪ್ರಧಾನರಾದ ಸ್ತ್ರೀಯರು ವಾಮರೆಂದೆನಿಸುವರು. ಅವರಿಗೆ ಪ್ರೇರಕನಾದ ವಿಷ್ಣುವನ್ನು 'ವಿಶ್ವೇ ದೇವಾಃ'

- ಎಲ್ಲ ದೇವತೆಗಳು, 'ಉಪಾಸತೇ' - ಜಿಜ್ಞಾಸೆ ಮಾಡುವರು ಎಂದು ಸಿದ್ಧಾಂತರೀತ್ಯಾ ಶ್ರುತಿಯ ಅರ್ಥವಾಗಿದೆ.

ಪೂರ್ವಪಕ್ಷಿಯಾದರೋ ಈ ವಾಕ್ಯವನ್ನು ವಾಯುಪರವೆಂದು ತಿಳಿದು ಇಲ್ಲಿ 'ಮಧ್ಯ'ಶಬ್ದವು 'ಯೋऽಯಂ ಮಧ್ಯಮಃ' ಎಂಬ ಇನ್ನೊಂದು ಶ್ರುತಿಸಮಾನಾ-ರ್ಥಕವೆಂದು ಭಾವಿಸಿ ಮಧ್ಯಮೇಶ್ವರನೆಂದು ಹೇಳುವುದು ಹೊರತು ಪ್ರದೇಶ-ವಿಶೇಷವನ್ನು ಹೇಳುವ ಅಭಿಪ್ರಾಯವುಳ್ಳದ್ದಲ್ಲ ಎಂದು ಹೇಳುವನು.

ಭಾ.ದೀ. – 'ಏವಮ್' ಇತಿ ಷಟ್‌ಪ್ರಶ್ನವಾಕ್ಯಂ ಚ 'ಯಥಾ ಸಮ್ರಾಡೇವಾಧಿ-ಕೃತಾನ್ ವಿನಿಯುಂಕ್ತೇ ಏತಾನ್ ಗ್ರಾಮಾನಧಿತಿಷ್ಠಸ್ವೇತಿ' ಇತಿ ದೃಷ್ಟಾಂತವಾಕ್ಯೇನ ಸಹ ವ್ಯಾಖ್ಯೇಯಮ್ । ತತ್ಪ್ರಕಾರಸ್ತು – ಯಥಾ 'ಸಮ್ರಾಟ್' ಸಾರ್ವಭೌಮಃ ಅಧಿ-ಕೃತಾನ್ ನಿಯೋಗಿನೋऽಧಿಕೃತ್ಯ ವಿನಿಯುಂಕ್ತೇ । ಕಥಮ್? ತ್ವಮ್ 'ಏತಾನ್' ಪಾಟಲೀಪುತ್ರಾದೀನ್ ಗ್ರಾಮಾನ್ 'ಅಧಿತಿಷ್ಠಸ್ವ' ತದಾಧಿಪತ್ಯೇನ ತಿಷ್ಠಸ್ವೇತಿ । 'ಏವಮೇವೈಷಃ' 'ಆತ್ಮತ ಏಷ ಪ್ರಾಣೋ ಜಾಯತೇ' (ಪ್ರಶ್ನ.೩.೨) ಇತ್ಯಾತ್ಮ-ಜಾತತ್ವೇನೋಕ್ತೋ ಮುಖ್ಯಪ್ರಾಣಃ 'ಇತರಾನ್' ಭಿನ್ನಾನ್ ಸ್ವಜನ್ಯತ್ವೇನೋ-ಪಚಾರೇಣ ಆತ್ಮಪ್ರವಿಭಾಗಾನ್ ಪ್ರಾಣಾನ್ ವಾಯೂನ್ ಪೃಥಕ್‌ಸ್ಥಾನೇಷು ಹೃದಯಾದಿಷು ಸ್ಥಾಪಯತೀತಿ ।

'ಏವಮೇವ ಏಷ' ಎಂಬ ಷಟ್ಪ್ರಶ್ನೋಪನಿಷತ್ತಿನ ವಾಕ್ಯವನ್ನಾದರೋ 'ಯಥಾ ಸಮ್ರಾಡೇವಾಧಿಕೃತಾನ್ ವಿನಿಯುಂಕ್ತೇ ಏತಾನ್ ಗ್ರಾಮಾನಧಿತಿಷ್ಠಸ್ವೇತಿ' - ಎಂಬ ದೃಷ್ಟಾಂತವಾಕ್ಯದೊಂದಿಗೆ ವ್ಯಾಖ್ಯಾನ ಮಾಡಬೇಕು. ಅದು ಈ ಪ್ರಕಾರವಾಗಿದೆ – 'ಯಥಾ ಸಮ್ರಾಟ್' ಹೇಗೆ ಒಬ್ಬ ಸಾರ್ವಭೌಮನು, 'ಅಧಿಕೃತಾನ್' - ತನ್ನಿಂದ ನಿಯುಕ್ತರಾದವರನ್ನು ಕುರಿತು 'ವಿನಿಯುಂಕ್ತೇ' - ಆದೇಶಿಸುವನೋ; ಹೇಗೆ ? - ನೀನು 'ಏತಾನ್ ಗ್ರಾಮಾನ್' ಈ ಪಾಟಲೀಪುತ್ರ ಮೊದಲಾದ ಗ್ರಾಮಗಳನ್ನು 'ಅಧಿ ತಿಷ್ಠಸ್ವ ಇತಿ' ಅದರ ಆಡಳಿತವನ್ನು ನಿರ್ವಹಿಸು ಎಂದು.

'ಏವಮೇವ ಏಷಃ' ಅಂದರೆ 'ಆತ್ಮತ ಏಷ ಪ್ರಾಣೋ ಜಾಯತೇ' ಎಂಬುದಾಗಿ

ಪರಮಾತ್ಮನಿಂದ ಉತ್ಪನ್ನನಾಗಿರುವನು ಎಂದು ಹೇಳಲಾದ ಮುಖ್ಯಪ್ರಾಣನು, 'ಇತರಾನ್' - ತನಗಿಂತ ಭಿನ್ನರಾದ, ತನ್ನಿಂದ ಜನ್ಯರಾದ ಕಾರಣ ಔಪಚಾರಿಕವಾಗಿ ತನ್ನ ಪ್ರಭೇದಗಳೆಂದೆನಿಸುವ 'ಪ್ರಾಣಾನ್ - ವಾಯುಗಳನ್ನು, 'ಪೃಥಕ್ ಸ್ಥಾನೇಷು' - ಆಯಾ ಹೃದಯಮೊದಲಾದ ಸ್ಥಾನಗಳಲ್ಲಿ 'ಸನ್ನಿಧತ್ತೇ' - ಸ್ಥಾಪಿಸುವನು ಎಂದು.

ಭಾ.ದೀ. – 'ಯೋಽಯಮ್' ಇತ್ಯಾದಿ ಬೃಹದಾರಣ್ಯಕವಾಕ್ಯಮ್ । ತತ್ರ ಹಿ ಪೂರ್ವಂ ವಾಗಾದೀನಾಂ ಮೃತ್ಯುಗ್ರಸ್ತತ್ವಮುಕ್ತ್ವಾ 'ಅಥೈನಮೇವ ನಾಽಪ್ನೋತ್' ಇತ್ಯನೇನ ಮುಖ್ಯಪ್ರಾಣಸ್ಯ ತದನಾತ್ತತ್ವೇನ ತೇಭ್ಯಃ ಶ್ರೇಷ್ಠ್ಯಮಭಿಧಾಯ 'ಯೋಽಯಮ್' ಇತ್ಯನೇನ ಪ್ರಾಣಶಬ್ದವಾಚ್ಯೇಷು ವಿಷ್ಣುವಾಯುತದಿತರೇಷು ಚೇತನೇಷು ತ್ರಿಷು ವಿಷ್ಣೋರುತ್ತಮತ್ವಾದ್ ಅನ್ಯೇಷಾಮ್ ಅಧಮತ್ವಾತ್ ವಾಯೋಃ ಮಧ್ಯಮತ್ವಾತ್ ಅಸ್ಮಿನ್ ನಿಮಿತ್ತಾದ್ ವಾ ಅವಾಂತರೇಶ್ವರತ್ವಾದ್ ವಾ ಮುಖ್ಯಪ್ರಾಣಸ್ಯ ಸರ್ವೋತ್ತಮತ್ವರೂಪಕಾಷ್ಠಾತ್ವವಿರೋಧಿಮಧ್ಯಸ್ಥತ್ವಮೇವ ಉಚ್ಯತೇ, ನ ತು ಮಧ್ಯದೇಶತ್ವಮ್ । ತಥಾ ತತ್ರೈವ ಚತುರ್ಥಾಧ್ಯಾಯೇ 'ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ' (ಬೃ.೪.೨.೧) ಇತಿ ಚಂದ್ರಿಕೋ-ದಾಹೃತೇ ವಾಕ್ಯೇ ಸ್ಥೂಲದೇಹಾಖ್ಯವಿಸ್ತೃತಪ್ರದೇಶಗತಲಿಂಗಶರೀರರೂಪಗೃಹೇ ವಿಷ್ಣುರೂಪಾಯಾಂ ಸ್ಥೂಣಾಯಾಮ್ ಅನ್ನಾಖ್ಯೇನ ಶ್ರೀರೂಪೇಣ ದಾಮ್ನಾ ಬದ್ಧೋ ಗೋವತ್ಸರೂಪೋ ವಾಯುಃ ಮಧ್ಯಮತ್ವೇನೋಚ್ಯತೇ ।

ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯಾಽವಾಸಯನ್ನುಷಸಂ ಸೂರ್ಯೇಣ ॥
(ಋ. ೭.೯೧.೧)

ಇತಿ ಋಙ್ಮಂತ್ರೇ 'ಅಂಗ' ಇತಿ ಪ್ರಿಯಸಂಬೋಧನಮ್ । ತಥಾ ಚ – ಯೇ ದೇವಾಃ ವಾಯೋಃ 'ನಮಸಾ' ನಮಸ್ಕಾರೋಪಲಕ್ಷಿತಸೇವಾದಿನಾ 'ವೃಧಾಸಃ' - ವೃದ್ಧಾ ಜ್ಞಾನಾದಿಗುಣಪೂರ್ಣಾಃ, 'ಅನವದ್ಯಾಸಃ' - ಅನವದ್ಯಾಃ ಅಜ್ಞಾನ-ರಾಗಾದ್ಯವದ್ಯವಿಧುರಾಶ್ಚ ಪುರಾ ಸಸೂರ್ಯಾ ಆಸನ್ । ತೇ 'ಕುವಿತ್' ಕಶ್ಚಿದ್

**ರಹಸ್ಯಸ್ಥಾನೇ ಸೂರ್ಯೇಣ ಸಾಕಂ 'ಮನವೇ' ಜ್ಞಾನಿನೇ 'ಬಾಧಿತಾಯ' ಸಂಸಾರ-ಕ್ಲೇಶವದ್ಭಿಃ ಶರಣಂ ಪ್ರಾಪ್ತಾಯ, 'ವಾಯವೇ' ವಾಯುಮುದ್ದಿಶ್ಯ, 'ಉಷಸಮ್' - ಉಷ ಪ್ರಕಾಶೇ ಅಸುನ್- ಬುದ್ಧಿಮ್, 'ಅವಾಸಯನ್' - ತದ್ವಿಷಯಾಮ್ ಅಕುರ್ವನ್ – ಇತಿ ಶ್ರುತ್ಯರ್ಥಃ।**

'ಯೋಽಯಮ್' ಎಂಬುವ ವಾಕ್ಯವು ಬೃಹದಾರಣ್ಯಕದ ವಾಕ್ಯವಾಗಿದೆ. ಆ ಉಪನಿಷತ್ತಿನಲ್ಲಿ ಹಿಂದೆ ವಾಕ್ ಮೊದಲಾದವುಗಳಿಗೆ ಮೃತ್ಯುಗ್ರಸ್ತತ್ವವನ್ನು ಹೇಳಿ 'ಅಥ ಏನಮೇವ ನಾಽಪ್ನೋತ್' - ಆ ಮೃತ್ಯುವು ಈ ಪ್ರಾಣನನ್ನು ಹೊಂದಲಿಲ್ಲ ಎಂಬ ವಾಕ್ಯದಿಂದ ಮುಖ್ಯಪ್ರಾಣನು ಮೃತ್ಯುವಶನಾಗದೇ ಇದ್ದದ್ದರಿಂದ ಆ ವಾಕ್ ಮೊದಲಾ-ದವುಗಳಿಗಿಂತ ಅವನಿಗೆ ಶ್ರೇಷ್ಠತ್ವವಿರುವುದೆಂದು ಹೇಳಿ 'ಯೋಽಯಂ ಮಧ್ಯಮಃ ಪ್ರಾಣಃ' ಎಂಬ ಪಂಕ್ತಿಯಿಂದ ಪ್ರಾಣಶಬ್ದವಾಚ್ಯನಾದ ವಿಷ್ಣುವು, ವಾಯು ಮತ್ತು ಅವನಿಂದ ಭಿನ್ನರಾದ ಮೂರು ಚೇತನರಲ್ಲಿ ವಿಷ್ಣುವೇ ಉತ್ತಮನಾದ ಕಾರಣ ಇತರರು ಅಧಮರಾದ್ದರಿಂದ ವಾಯುವು ಮಧ್ಯಮನೆಂದೆನಿಸುವನು. ಈ ಕಾರಣದಿಂದ ಅಥವಾ ಅವಾಂತರೇಶ್ವರನಾಗಿರುವುದರಿಂದ ಮುಖ್ಯಪ್ರಾಣನಿಗೆ ಸರ್ವೋತ್ತಮತ್ವರೂಪವಾದ ಕಾಷ್ಠಾತ್ವವೆಂಬ ಧರ್ಮಕ್ಕೆ ವಿರೋಧಿಯಾದ ಮಧ್ಯಮತ್ವವನ್ನು ಮಾತ್ರ ಹೇಳಲಾಗಿದೆ ಹೊರತು ಶರೀರದ ಮಧ್ಯದೇಶದಲ್ಲಿ ಇರುವಿಕೆಯನ್ನು ಹೇಳಿಲ್ಲ.

ಹಾಗೆಯೇ ಅದೇ ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ 'ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ' ಎಂದು ಚಂದ್ರಿಕಾಗ್ರಂಥದಲ್ಲಿ ಉದಾಹರಿಸಿ-ರುವ ವಾಕ್ಯದಲ್ಲಿ ಸ್ಥೂಲದೇಹವೆಂಬ ವಿಸ್ತಾರವಾದ ಪ್ರದೇಶದಲ್ಲಿರುವ ಲಿಂಗಶರೀರ-ವೆಂಬ ಗೃಹದಲ್ಲಿ ವಿಷ್ಣುವೆಂಬ ಕಂಬಕ್ಕೆ ಅನ್ನಳೆಂದೆನಿಸುವ ಶ್ರೀರೂಪವಾದ ಹಗ್ಗದಿಂದ ಕಟ್ಟಲ್ಪಟ್ಟಿರುವ ಹಸುವಿನ ಕರುವಿನ ರೂಪದಲ್ಲಿರುವ ವಾಯುವನ್ನು ಮಧ್ಯಮನೆಂದು ಹೇಳಲಾಗಿದೆ.

ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯಾಽವಾಸಯನ್ನುಷಸಂ ಸೂರ್ಯೇಣ ॥

ಎಂಬ ಋಗ್ವೇದಮಂತ್ರದಲ್ಲಿ 'ಅಂಗ' - ಎಂಬ ಶಬ್ದವು ಪ್ರಿಯನನ್ನು ಸಂಬೋಧಿ

ಸುವ ಶಬ್ದವಾಗಿದೆ. ತಥಾ ಚ 'ಯೇ ದೇವಾಃ' - ಯಾವ ದೇವತೆಗಳು, 'ವಾಯೋಃ ನಮಸಾ' - ವಾಯುವಿಗೆ ಮಾಡಿದ ನಮಸ್ಕಾರ ಉಪಲಕ್ಷಣಯಾ ಇತರ ಸೇವಾದಿ-ಗಳಿಂದ 'ವೃಧಾಸಃ' - ವೃದ್ಧರು ಅಂದರೆ ಜ್ಞಾನ ಮೊದಲಾದ ಗುಣಪೂರ್ಣರು, 'ಅನ-ವದ್ಯಾಸಃ' - ಅನವದ್ಯರು ಅಂದರೆ ಅಜ್ಞಾನ, ರಾಗಮೊದಲಾದ ದೋಷವಿಧುರರೂ ಸೂರ್ಯನಿಂದ ಸಹಿತರಾಗಿ ಆಗಿದ್ದರೋ, 'ತೇ' ಆ ದೇವತೆಗಳು 'ಕುವಿತ್' - ಒಂದು ರಹಸ್ಯವಾದ ಸ್ಥಾನದಲ್ಲಿ 'ಸೂರ್ಯೇಣ (ಸಾಕಂ)' ಸೂರ್ಯನಿಂದ ಸಹಿತರಾಗಿ, 'ಬಾಧಿ -ತಾಯ' ಸಂಸಾರಕ್ಲೇಶಗಳಿಂದ ಶರಣು ಹೊಂದಿದ, 'ಮನವೇ' - ಜ್ಞಾನಿಗೆ, 'ವಾಯವೇ' - ವಾಯುವನ್ನು ಉದ್ದೇಶಿಸಿ, 'ಉಷಸಮ್' - 'ಉಷ ಪ್ರಕಾಶೇ' ಎಂಬ ಧಾತುವಿಗೆ ಅಸುನ್ ಪ್ರತ್ಯಯ ಸೇರಿಸಿದಾಗ ಉಷಸ್ ಶಬ್ದವುನಿಷ್ಪನ್ನವಾಗುವುದು. - ಬುದ್ಧಿಯನ್ನು, 'ಅವಾಸಯನ್' - ವಾಯುವಿಗೆ ವಿಷಯಕವಾದ ಬುದ್ಧಿಯುಂಟಾಗು-ವಂತೆ ಮಾಡಿದರು – ಎಂದು ಶ್ರುತಿಯ ಅರ್ಥ.

ಭಾ. ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ''ಅತಃ'' ಎಂಬ ವಾಕ್ಯದಿಂದ ಅವತಾರಿಕೆಯನ್ನು ಕೊಟ್ಟು ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತೋಽಬ್ರವೀತ್ ॥**

**॥ ಓಂ ಶಬ್ದಾದೇವ ಪ್ರಮಿತಃ ಓಂ ॥ ೨೪ ॥**

**ವಾಮನಶಬ್ದಾದೇವ ವಿಷ್ಣುರಿತಿ ಪ್ರಮಿತಃ ।**

ಹೀಗೆ 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯದಲ್ಲಿ ಪ್ರಸ್ತುತ-ನಾಗಿರುವ ಈಶಾನನು ವಾಯುವೇ ಆಗಿದ್ದಾನೆ ಎಂದು ಪ್ರಾಪ್ತ-ವಾದಾಗ ಆ ಶಂಕೆಯನ್ನು ಪರಿಹರಿಸಲು 'ಓಂ ಶಬ್ದಾದೇವ ಪ್ರಮಿತಃ ಓಂ' ಎಂದು ಹೇಳಿದ್ದಾರೆ. ಈ ಶ್ರುತಿಯಲ್ಲಿ 'ವಾಮನ'ಶಬ್ದವು ಶ್ರುತವಾಗಿರುವುದರಿಂದ 'ಈಶಾನೋ ಭೂತಭವ್ಯಸ್ಯ' ಎಂಬಲ್ಲಿ

ಶ್ರುತನಾಗಿರುವ ಈಶಾನನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, ವಾಮನಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ.

ಭಾ.ದೀ. – 'ವಾಮನಶಬ್ದಾತ್' - ವಾಮನಶ್ರುತೇಃ । ಏವಕಾರೋ ವಾಯುಲಿಂಗಸದ್ಭಾವಾತ್ ವಾಯುರೇವ ಈಶಾನಃ ಕಿಂ ನ ಸ್ಯಾತ್? ಇತಿ ಚೋದ್ಯ-ಪರಿಹಾರಾಯ ಲಿಂಗೇಭ್ಯಃ ಶ್ರುತೇಃ ಪ್ರಾಬಲ್ಯಮಾಹ । ಯಥೋಕ್ತಂ ಸುಧಾಯಾಮ್ – ಏವಶಬ್ದವ್ಯಾಖ್ಯಾನಂ ಬಲವದಿತಿ 'ಶಬ್ದಾದೇವ ಪ್ರಮಿತಃ' ಇತಿ ಯಥಾ - ಇತಿ । ಸಮನ್ವಯಸೂತ್ರಾತ್ ಅನುವೃತ್ತಸ್ಯ 'ತತ್' ಇತ್ಯಸ್ಯಾರ್ಥಃ – ವಿಷ್ಣುರಿತಿ ॥ ವಿಧೇಯಭೂತವಿಷ್ಣುತ್ವಸ್ಯ ಅನ್ವಯಯೋಗ್ಯೋದ್ದೇಶ್ಯದ್ಯೋತನಾಯ 'ಇತಿ'ಶಬ್ದಪ್ರಯೋಗಃ । ಆವರ್ತತೇ ಚಾಯಮ್ । 'ಇತಿ'ಶಬ್ದಾತ್ ಪರಮಪಿ 'ಏವ'ಶಬ್ದೋ ಯೋಜ್ಯಃ। ತೇನ ಅನುವೃತ್ತಃ 'ತು'ಶಬ್ದೋ ವ್ಯಾಖ್ಯಾತಃ।

ಭಾಷ್ಯದಲ್ಲಿ 'ವಾಮನಶಬ್ದಾತ್' ಎಂಬ ಪದಕ್ಕೆ ವಾಮನಶ್ರುತಿ ಇರುವುದರಿಂದ ಎಂದರ್ಥ. 'ವಾಮನಶಬ್ದಾದೇವ' ಎಂಬಲ್ಲಿ 'ಏವ'ಕಾರವು, ಈಶಾನನು ವಾಯುವೆಂದು ಸಮರ್ಥನೆ ಮಾಡಲು ಲಿಂಗಗಳಿರುವುದರಿಂದ ಈಶಾನನು ವಾಯುವೇ ಏಕಾಗ-ಬಾರದು? ಎಂಬ ಪ್ರಶ್ನೆಯ ಪರಿಹಾರಕ್ಕಾಗಿ ಲಿಂಗಕ್ಕಿಂತಲೂ ಶ್ರುತಿಗೆ ಪ್ರಾಬಲ್ಯವಿರುವು-ದೆಂದು ಹೇಳುವುದು. ಸುಧಾದಲ್ಲಿ ಹೀಗೆ ಹೇಳಲಾಗಿದೆ – 'ಬಲವತ್' ಎಂದು ಏವಶಬ್ದದ ವ್ಯಾಖ್ಯಾನವನ್ನು ಮಾಡಲಾಗಿದೆ. ಶಬ್ದಾದೇವ ಪ್ರಮಿತಃ ಎಂಬ ಸೂತ್ರದಲ್ಲಿ ಹೇಗೋ ಹಾಗೆ - ಎಂದು. ಭಾಷ್ಯದಲ್ಲಿ ವಿಷ್ಣುಶಬ್ದವು ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ ತಚ್ಛಬ್ದದ ಅರ್ಥವನ್ನು ಹೇಳುವುದು. 'ಈಶಾನೋ ವಿಷ್ಣುಃ' ಎಂಬ ಸೂತ್ರಕ್ಕೆ ವಿವಕ್ಷಿತವಾದ ಪ್ರಸಿದ್ಧಿಯಲ್ಲಿ ವಿಷ್ಣುತ್ವವು ವಿಧೇಯವಾಗಿದ್ದು, ಅದರ ಅನ್ವಯವನ್ನು ಹೊಂದಲು ಯೋಗ್ಯವಾದ ಉದ್ದೇಶ್ಯವನ್ನು ಸೂಚಿಸಲು ಭಾಷ್ಯದಲ್ಲಿ 'ಇತಿ'ಶಬ್ದವನ್ನು ಪ್ರಯೋಗಿಸಲಾಗಿದೆ. ಈ 'ಇತಿ'ಶಬ್ದವು ಆವೃತ್ತಿಯನ್ನು ಹೊಂದುವುದು. 'ಇತಿ'ಶಬ್ದದ ಅನಂತರವೂ 'ಏವಂ'ಶಬ್ದವನ್ನು ನಿಯೋಜಿಸಬೇಕು. ಆ 'ಏವಂ' ಶಬ್ದದಿಂದ ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದುವ ತುಶಬ್ದದ ಅರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ತಥಾ ಚ – 'ಈಶಾನೋ ಭೂತಭವ್ಯಸ್ಯ' (ಕಠ.೪.೧೨) ಇತಿ ಶ್ರುತ ಈಶಾನೋ ವಿಷ್ಣುರೇವ ಭವೇತ್ । ಕುತಃ? ಯಸ್ತತ್ರ ಪ್ರಮಿತೋ ವಿಷ್ಣಾವೇವ ಮಹಾಯೋಗವಿದ್ವದ್‌ರೂಢಿಭ್ಯಾಂ ಪ್ರಸಿದ್ಧೋ 'ಮಧ್ಯೇ ವಾಮನಮ್' ಇತಿ ಶ್ರುತೋ ವಾಮನಶಬ್ದಃ ತಸ್ಮಾದೇವ – ಇತಿ ಯೋಜನಾ । ಪ್ರಮಿತಪದಂ ಶ್ರುತೇಃ ನಿರವಕಾಶತ್ವಸೂಚಕಮ್ । ಅನೇನ ಸೂತ್ರೇ 'ಇತಿ'ಶಬ್ದೋಽಧ್ಯಾಹಾರ್ಯ ಇತಿ ಸೂಚಿತಮ್ । ತಥಾ ಚ – 'ಈಶಾನೋ ಭೂತಭವ್ಯಸ್ಯ' ಇತಿ ಶ್ರುತ ಈಶಾನಃ 'ತತ್ತು' ವಿಷ್ಣುರೇವ ಭವೇತ್ । ಕುತಃ? ಯಸ್ತತ್ರ ವಿಷ್ಣಾವೇವ ಪ್ರಮಿತೋ ಮಹಾಯೋಗ-ವಿದ್ವದ್ರೂಢಿಭ್ಯಾಂ ಪ್ರಸಿದ್ಧೋಽನ್ಯತ್ರ ನಿರವಕಾಶೋ 'ಮಧ್ಯೇ ವಾಮನಮಾ-ಸೀನಮ್' (ಕಠ.೫.೩) ಇತಿ ಶ್ರುತೋ ಲಿಂಗಾತ್ ಪ್ರಬಲೋ ವಾಮನಶಬ್ದಃ ತಚ್ಛ್ರುತಿಃ ತಸ್ಮಾತ್ – ಇತಿ ಸೂತ್ರಾರ್ಥಃ ।

ತಥಾ ಚ – 'ಈಶಾನೋ ಭೂತಭವ್ಯಸ್ಯ' ಎಂಬ ವಾಕ್ಯದಲ್ಲಿ ಶ್ರುತನಾಗಿರುವ ಈಶಾನನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, ವಿಷ್ಣುವಿನಲ್ಲಿಯೇ ಯಾವ ಶಬ್ದವು ಪ್ರಮಿತವಾಗಿದೆಯೋ ಅಂದರೆ, ಮಹಾಯೋಗವಿದ್ವದ್‌ರೂಢಿಗಳಿಂದ ಪ್ರಸಿದ್ಧವಾಗಿ-ದೆಯೋ ಅಂತಹ 'ಮಧ್ಯೇ ವಾಮನಮ್' ಎಂಬ ವಾಕ್ಯದಲ್ಲಿ ಶ್ರುತವಾಗಿರುವ ವಾಮನಶಬ್ದವಿದೆಯೋ ಆ ಶಬ್ದದಿಂದಲೇ ಎಂದು ಸೂತ್ರದ ಪದಗಳ ಯೋಜನೆ-ಯಾಗಿದೆ.

ಸೂತ್ರದಲ್ಲಿ 'ಪ್ರಮಿತ'ಪದವು ವಾಮನಶಬ್ದವು ಅನ್ಯತ್ರ ಅವಕಾಶರಹಿತ-ವಾದದ್ದೆಂದು ಸೂಚಿಸುವುದು. ಇದರಿಂದ ಸೂತ್ರದಲ್ಲಿ 'ಇತಿ'ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿತವಾಗುವುದು.

ತಥಾ ಚ – 'ಇತಿ' ಅಂದರೆ 'ಈಶಾನೋ ಭೂತಭವ್ಯಸ್ಯ' ಎಂಬುದಾಗಿ ಶ್ರುತವಾಗಿರುವ ಈಶಾನನು 'ತತ್ತು' ವಿಷ್ಣುವೇ ಆಗಿರುವನು ಏಕೆಂದರೆ, ಆ ವಿಷ್ಣುವಿ-ನಲ್ಲಿಯೇ 'ಪ್ರಮಿತಃ' ಅಂದರೆ ಮಹಾಯೋಗವಿದ್ವದ್ರೂಢಿಗಳಿಂದ ಪ್ರಸಿದ್ಧವಾಗಿರುವ ಅನ್ಯತ್ರ ಅವಕಾಶವಿಲ್ಲದಿರುವ 'ಮಧ್ಯೇ ವಾಮನಮಾಸೀನಮ್' ಎಂಬಲ್ಲಿ ಶ್ರುತ-

ವಾಗಿರುವ ಲಿಂಗಕ್ಕಿಂತಲೂ ಪ್ರಬಲವಾದ ವಾಮನಶಬ್ದವಿದೆಯೋ ಆದ್ದರಿಂದ ಎಂದು ಸೂತ್ರದ ಅರ್ಥವಾಗುವುದು.

**ಭಾ.ದೀ. – ಸೂತ್ರೇ ಏವಕಾರಪ್ರಯೋಗೇನ ಸೂಚಿತಂ ಶ್ರುತೇಃ ಪ್ರಾಬಲ್ಯಂ ಲಿಂಗಸ್ಯ ಪ್ರಾಬಲ್ಯನಿಷೇಧಮುಖೇನ ದರ್ಶಯತಿ – ನ ಹೀತಿ ॥**

ಸೂತ್ರದಲ್ಲಿ 'ಏವ'ಕಾರವನ್ನು ಪ್ರಯೋಗ ಮಾಡುವುದರಿಂದ ಸೂಚಿತವಾಗುವ ಶ್ರುತಿಗಿರುವ ಪ್ರಾಬಲ್ಯವನ್ನು ಭಾಷ್ಯದಲ್ಲಿ ಲಿಂಗಕ್ಕೆ ಪ್ರಾಬಲ್ಯವನ್ನು ನಿಷೇಧಿಸುವ ಮೂಲಕ ''ನ ಹಿ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – ನ ಹಿ ಶ್ರುತೇರ್ಲಿಂಗಂ ಬಲವತ್ ।**

ಶ್ರುತಿಗಿಂತಲೂ ಲಿಂಗವು ಪ್ರಬಲವಲ್ಲಷ್ಟೇ !

**ಭಾ.ದೀ. – 'ಶ್ರುತೇಃ' ಇತಿ ಪಂಚಮೀ । 'ಹಿ'ಶಬ್ದೋ 'ವಕ್ಷ್ಯಮಾಣಪ್ರಮಾಣ-ವಿರೋಧಾತ್' ಇತಿ ಹೇತುಸೂಚಕಃ । ತಥಾ ಚ – 'ಹಿ' ಯಸ್ಮಾನ್ನ ಶ್ರುತೇರ್ಲಿಂಗಂ ಬಲವತ್, ಕಿಂತು ದುರ್ಬಲಮೇವ ತಸ್ಮಾತ್ ಲಿಂಗಾತ್ ಪ್ರಬಲಾದ್ ವಾಮನ-ಶಬ್ದಾದೇವ ಈಶಾನೋ ವಿಷ್ಣುರೇವ - ಇತ್ಯರ್ಥಃ ।**

ಭಾಷ್ಯದಲ್ಲಿ 'ಶ್ರುತೇಃ' ಎಂಬಲ್ಲಿ ಪಂಚಮೀ ವಿಭಕ್ತಿಯಿದೆ. ''ಹಿ''ಶಬ್ದವು ಮುಂದೆ ಹೇಳಲಾಗುವ 'ಪ್ರಮಾಣವಿರೋಧಾತ್' ಎಂಬ ಹೇತುವನ್ನು ಸೂಚಿಸುವುದು. ತಥಾ ಚ – 'ಹಿ' ಯಾವಕಾರಣದಿಂದ, 'ನ ಶ್ರುತೇಃ ಲಿಂಗಂ ಬಲವತ್' - ಶ್ರುತಿಗಿಂತಲೂ ಲಿಂಗವು ಪ್ರಬಲವಲ್ಲವೋ ಕಿಂತು ದುರ್ಬಲವೇ ಆಗಿರುವುದೋ ಆದ್ದರಿಂದ ಲಿಂಗಕ್ಕಿಂತಲೂ ಪ್ರಬಲವಾದ ವಾಮನಶಬ್ದದಿಂದಲೇ ಈಶಾನನು ವಿಷ್ಣುವೇ ಆಗಿರುವನು - ಎಂದರ್ಥ.

**ಭಾ.ದೀ. – ಕುತೋ ನ ಶ್ರುತೇರ್ಲಿಂಗಂ ಬಲವತ್? ಇತ್ಯತಸ್ತಥಾ ಸತಿ ಶ್ರುತೇ-ರ್ಲಿಂಗಾತ್ ಪ್ರಾಬಲ್ಯವಚನವಿರೋಧಾಪತ್ತೇಃ, ಇತ್ಯಾಶಯೇನ ತದ್ವಾಕ್ಯಂ ಪಠತಿ – ಶ್ರುತಿರಿತಿ ॥**

ಶ್ರುತಿಪ್ರಮಾಣಕ್ಕಿಂತ ಲಿಂಗಪ್ರಮಾಣವು ಪ್ರಬಲವಲ್ಲವೇಕೇ? ಎಂಬ ಶಂಕೆಗೆ ಉತ್ತರವಾಗಿ ಹಾಗೆ ಪ್ರಾಬಲ್ಯವನ್ನು ಒಪ್ಪಿದಲ್ಲಿ ಲಿಂಗಕ್ಕಿಂತಲೂ ಶ್ರುತಿಗೆ ಪ್ರಾಬಲ್ಯವನ್ನು ಹೇಳುವ ಪ್ರಮಾಣವಾಕ್ಯದ ವಿರೋಧ ಬಂದೀತು! ಎಂಬ ಅಭಿಪ್ರಾಯದಿಂದ ಆ ಪ್ರಮಾಣವಚನವನ್ನು 'ಶ್ರುತಿಃ'' ಎಂಬುದಾಗಿ ಭಾಷ್ಯಕಾರರು ಪಠಿಸುತ್ತಿದ್ದಾರೆ.

**ಭಾಷ್ಯಮ್ –**

**'ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ।**

**ಪೂರ್ವಂ ಪೂರ್ವಂ ಬಲೀಯಃ ಸ್ಯಾದೇವಮಾಗಮನಿರ್ಣಯಃ'**

**– ಇತಿ ಸ್ಕಾಂದೇ ॥**

'ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ ಹಾಗೂ ಪ್ರಕರಣ ಇವುಗಳಲ್ಲಿ ಹಿಂದು ಹಿಂದಿನದು ಮುಂದು ಮುಂದಿನದಕ್ಕಿಂತ ಪ್ರಬಲವಾಗಿದೆ. ಈ ನಿರ್ಣಾಯಕಗಳಿಂದ ವಿವಾದಗ್ರಸ್ತವಾದ ಆಗಮವಾಕ್ಯಾರ್ಥದ ನಿರ್ಣಯವು ಸಿದ್ಧಿಸುವುದು' – ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

ಭಾ.ದೀ. – 'ಇತಿ ಸ್ಕಾಂದೇ' ಇತ್ಯನಂತರಮ್ 'ವಚನಾತ್' ಇತಿ ಶೇಷಃ। ಅಸ್ಯ 'ನ ಹಿ' ಇತ್ಯನೇನಾನ್ವಯಃ।

ವಾಚಕಶಬ್ದಃ 'ಶ್ರುತಿಃ' । ಅಸಾಧಾರಣಧರ್ಮೋ ವಾ, ತದ್ಬೋಧಕಶಬ್ದೋ ವಾ 'ಲಿಂಗಮ್' । ನಿರ್ಣೀತಸ್ಯ ಅನ್ಯತ್ರ ಸಮಾನೋಕ್ತಿಃ 'ಸಮಾಖ್ಯಾ' । ಸಾ ದ್ವಿವಿಧಾ – ಅರ್ಥಃ ಶಬ್ದತೋಽಪಿ - ಇತಿ । ಸಮಭಿವ್ಯಾಹೃತಪದೈರೇವ ಆಕಾಂಕ್ಷಾಪೂರ್ತೌ ತಚ್ಛಾಂತ್ಯರ್ಥಂ ಪದಾಂತರನಿರಪೇಕ್ಷಾಣಿ ಪದಾನಿ 'ವಾಕ್ಯಮ್' । ಏಕಪ್ರಮೇಯ-ಪ್ರತಿಪಾದಕಾನೇಕವಾಕ್ಯಾನಿ 'ಪ್ರಕರಣಮ್' । ಅನುಕ್ತಸ್ಥಾನಸಮುಚ್ಚಯೇ 'ತಥಾ' ಇತಿ ಶಬ್ದಃ । ಅನೇಕಪ್ರಮೇಯಪ್ರತಿಪಾದಕಮೇಕಾರ್ಥತಾತ್ಪರ್ಯಯುಕ್ತಂ ವಚನಂ 'ಸ್ಥಾನಮ್' ।

ಭಾಷ್ಯದಲ್ಲಿ 'ಇತಿ ಸ್ಕಾಂದೇ' ಎಂಬ ಪದಗಳ ನಂತರ 'ವಚನಾತ್' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ನ ಹಿ' ಎಂಬ ಹಿಂದಿನ ವಾಕ್ಯದಿಂದ ಅನ್ವಯವಾಗುವುದು.

''ಶ್ರುತಿ'' ಎಂದರೆ ವಾಚಕವಾದ ಶಬ್ದ.

ಅಸಾಧಾರಣಧರ್ಮ ಅಥವಾ ಅಸಾಧಾರಣಧರ್ಮವನ್ನು ತಿಳಿಸುವ ಶಬ್ದವು ''ಲಿಂಗ''ವೆಂದೆನಿಸುವುದು.

'ಇದು ಹೀಗೆಯೇ' ಎಂದು ನಿರ್ಣಯಮಾಡಲಾದ ವಿಷಯದಲ್ಲಿ ಬೇರೆ ಕಡೆಯಲ್ಲಿ ಸಮಾನವಾದ ಉಕ್ತಿಯು ''ಸಮಾಖ್ಯೆ'' ಎಂದೆನಿಸುವುದು. ಅದು ಅರ್ಥತಃ ಸಮಾಖ್ಯೆ, ಶಬ್ದದಿಂದಲೂ ಸಮಾಖ್ಯೆ ಎಂಬುದಾಗಿ ಎರಡು ವಿಧವಾಗಿದೆ.

ಜೊತೆಗಿರುವ ಪದಗಳಿಂದಲೇ ಆಕಾಂಕ್ಷಾ ಪೂರ್ಣವಾಗುವಾಗ ಆ ಆಕಾಂಕ್ಷೆಯ ಶಮನಕ್ಕಾಗಿ ಇತರಪದಗಳನ್ನು ಅಪೇಕ್ಷಿಸದ ಪದಗಳು ''ವಾಕ್ಯ''ವೆಂದೆನಿಸುತ್ತವೆ.

ಒಂದೇ ಪ್ರಮೇಯವನ್ನು ಪ್ರತಿಪಾದಿಸುವ ಅನೇಕವಾಕ್ಯಗಳು ''ಪ್ರಕರಣ''ವಾಗಿವೆ.

ಇಲ್ಲಿ ಹೇಳದಿರುವ ಸ್ಥಾನ ಎಂಬ ಪ್ರಮಾಣದ ಸಮುಚ್ಚಯವನ್ನು ''ತಥಾ'' ಎಂಬ ಶಬ್ದವು ಸೂಚಿಸುವುದು. ''ಸ್ಥಾನ''ವೆಂದರೆ ಅನೇಕ ಪ್ರಮೇಯಗಳನ್ನು ಪ್ರತಿಪಾದಿಸುವ ಒಂದೇ ವಿಷಯದಲ್ಲಿ ತಾತ್ಪರ್ಯವುಳ್ಳ ವಚನ.

ಭಾ.ದೀ.– ಅತ್ರ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ' ಇತ್ಯನುವ್ಯಾಖ್ಯಾನುಸಾರೇಣ ಸಮಾಖ್ಯಾಯಾಃ ಸ್ಥಾನಾನಂತರ್ಯಮೇವ ಗ್ರಾಹ್ಯಮ್, ನ ತು ಅತ್ರೋಕ್ತಕ್ರಮಾನುಸಾರೇಣ ವಾಕ್ಯಾದ್ಯಪೇಕ್ಷಯಾ ಪ್ರಾಥಮ್ಯಮ್ । ಅತ್ರೋಕ್ತಕ್ರಮಸ್ಯ ಅವಿವಕ್ಷಿತತ್ವಾತ್ । ಉಕ್ತಂ ಹಿ ಪ್ರಮಾಣಲಕ್ಷಣ-ಟೀಕಾಯಾಮ್ – ಸಮಾಖ್ಯಾದಿತ್ವೇನ ಗ್ರಹಣಂ 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಇತ್ಯವಿವಕ್ಷಿತಕ್ರಮಂ ವಾಕ್ಯಮನುಸೃತ್ಯ – ಇತಿ ।

ಇಲ್ಲಿ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ' ಎಂಬ ಅನು-ವ್ಯಾಖ್ಯಾನವನ್ನು ಅನುಸರಿಸಿ ಸಮಾಖ್ಯೆಗೆ 'ಸ್ಥಾನ'ಕ್ಕಿಂತಲೂ ಆನಂತರ್ಯವನ್ನೇ ಹೇಳ-

ಬೇಕು ಹೊರತು, ಇಲ್ಲಿ (ಸ್ಕಾಂದಪುರಾಣದಲ್ಲಿ) ಹೇಳಿರುವ ಕ್ರಮವನ್ನು ಅನುಸರಿಸಿ ವಾಕ್ಯ ಮೊದಲಾದವುಗಳಿಗಿಂತಲೂ ಪ್ರಾಥಮ್ಯವನ್ನು ಹೇಳತಕ್ಕದ್ದಲ್ಲ. ಏಕೆಂದರೆ ಇಲ್ಲಿ ಹೇಳಲಾದ ಕ್ರಮವು ವಿವಕ್ಷಿತವಾಗಿಲ್ಲ. ಪ್ರಮಾಣಲಕ್ಷಣಟೀಕಾದಲ್ಲಿ ಹೀಗೆ ಹೇಳಲಾಗಿದೆ – ''ಸಮಾಖ್ಯಾದಿತ್ವೇನ ಗ್ರಹಣಂ 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಇತಿ ಅವಿವಕ್ಷಿತಕ್ರಮಂ ವಾಕ್ಯಮನುಸೃತ್ಯ'' – ಸಮಾಖ್ಯೆಯನ್ನು ಸ್ಥಾನಕ್ಕಿಂತಲೂ ಪೂರ್ವದಲ್ಲಿ ಗ್ರಹಿಸಿರುವುದು 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಎಂಬ ಕ್ರಮದಲ್ಲಿ ತಾತ್ಪರ್ಯವಿಲ್ಲದ ವಾಕ್ಯವನ್ನು ಅನು-ಸರಿಸಿ' - ಎಂದು.

ಭಾ.ದೀ. –ಅತ ಏವ ಜೈಮಿನಿಃ – 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನ-ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್' ಇತಿ ಸ್ಮೃತ್ಯುಕ್ತಾದ್ ಅನ್ಯಥಾಕ್ರಮಮಾಹ । ಪೂರ್ವಂ ಪೂರ್ವಮಿತಿ ॥ ಪೂರ್ವೋದ್ದಿಷ್ಟ-ಮಿತ್ಯರ್ಥಃ । 'ಏಕತ್ರ ಸಮವೇತಂ ವಿರುದ್ಧಮ್' ಇತಿ ಚ ಶೇಷಃ । 'ಬಲೀಯಃ' – ಅತಿಶಯೇನ ಸ್ವಭಾವತೋ ಬಲವತ್ ।

ಯಥಾ ಅತ್ರೈವ ಅಧಿಕರಣೇ ಅನಂತರೋದ್ದಿಷ್ಟಲಿಂಗಾಪೇಕ್ಷಯಾ ಪೂರ್ವೋ-ದ್ದಿಷ್ಟಾ ವಾಮನಶ್ರುತಿಃ ಸ್ವತಃ ಪ್ರಬಲಾ ।

ಆದ್ದರಿಂದಲೇ ಜೈಮಿನಿ ಋಷಿಗಳು 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮ್ ಅರ್ಥವಿಪ್ರಕರ್ಷಾತ್' 'ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯೆಗಳು ಒಂದೆಡೆ ಸೇರಿದಾಗ ಮುಂದಿನದಕ್ಕೆ ದೌರ್ಬಲ್ಯವನ್ನು ಹೇಳಬೇಕು. ಏಕೆಂದರೆ, ಆ ಮುಂದಿನ ಪ್ರಮಾಣಕ್ಕೆ ವಿವಕ್ಷಿತವಾದ ಅರ್ಥವು ದೂರ-ದಲ್ಲಿರುವುದು' - ಎಂದು ಇಲ್ಲಿ ಸ್ಮೃತಿಯಲ್ಲಿ ಹೇಳಿದ ಕ್ರಮಕ್ಕಿಂತಲೂ ಬೇರೆಯೇ ಕ್ರಮವನ್ನು ಹೇಳಿರುವರು.

ಸ್ಕಾಂದವಾಕ್ಯದಲ್ಲಿ ''ಪೂರ್ವಂ ಪೂರ್ವಮ್'' ಎಂದರೆ ಈ ಶ್ಲೋಕದಲ್ಲಿ ಮೊದಲು ಹೇಳಲ್ಪಟ್ಟಿರುವುದು ಎಂದು ಅರ್ಥ. 'ಏಕತ್ರ ಸಮವೇತಂ ವಿರುದ್ಧಮ್' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ಬಲೀಯಃ' ಅಂದರೆ ಅತಿಶಯವಾಗಿ ಸ್ವಾಭಾ-

ಭಾಷ್ಯದಲ್ಲಿ 'ಇತಿ ಸ್ಕಾಂದೇ' ಎಂಬ ಪದಗಳ ನಂತರ 'ವಚನಾತ್' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ನ ಹಿ' ಎಂಬ ಹಿಂದಿನ ವಾಕ್ಯದಿಂದ ಅನ್ವಯವಾಗುವುದು.

''ಶ್ರುತಿ'' ಎಂದರೆ ವಾಚಕವಾದ ಶಬ್ದ.

ಅಸಾಧಾರಣಧರ್ಮ ಅಥವಾ ಅಸಾಧಾರಣಧರ್ಮವನ್ನು ತಿಳಿಸುವ ಶಬ್ದವು ''ಲಿಂಗ''ವೆಂದೆನಿಸುವುದು.

'ಇದು ಹೀಗೆಯೇ' ಎಂದು ನಿರ್ಣಯಮಾಡಲಾದ ವಿಷಯದಲ್ಲಿ ಬೇರೆ ಕಡೆಯಲ್ಲಿ ಸಮಾನವಾದ ಉಕ್ತಿಯು ''ಸಮಾಖ್ಯೆ'' ಎಂದೆನಿಸುವುದು. ಅದು ಅರ್ಥತಃ ಸಮಾಖ್ಯೆ , ಶಬ್ದದಿಂದಲೂ ಸಮಾಖ್ಯೆ ಎಂಬುದಾಗಿ ಎರಡು ವಿಧವಾಗಿದೆ.

ಜೊತೆಗಿರುವ ಪದಗಳಿಂದಲೇ ಆಕಾಂಕ್ಷಾ ಪೂರ್ಣವಾಗುವಾಗ ಆ ಆಕಾಂಕ್ಷೆಯ ಶಮನಕ್ಕಾಗಿ ಇತರಪದಗಳನ್ನು ಅಪೇಕ್ಷಿಸದ ಪದಗಳು ''ವಾಕ್ಯ''ವೆಂದೆನಿಸುತ್ತವೆ.

ಒಂದೇ ಪ್ರಮೇಯವನ್ನು ಪ್ರತಿಪಾದಿಸುವ ಅನೇಕವಾಕ್ಯಗಳು ''ಪ್ರಕರಣ''ವಾಗಿವೆ.

ಇಲ್ಲಿ ಹೇಳದಿರುವ ಸ್ಥಾನ ಎಂಬ ಪ್ರಮಾಣದ ಸಮುಚ್ಚಯವನ್ನು ''ತಥಾ'' ಎಂಬ ಶಬ್ದವು ಸೂಚಿಸುವುದು. ''ಸ್ಥಾನ''ವೆಂದರೆ ಅನೇಕ ಪ್ರಮೇಯಗಳನ್ನು ಪ್ರತಿಪಾದಿಸುವ ಒಂದೇ ವಿಷಯದಲ್ಲಿ ತಾತ್ಪರ್ಯವುಳ್ಳ ವಚನ.

ಭಾ.ದೀ.– ಅತ್ರ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ' ಇತ್ಯನುವ್ಯಾಖ್ಯಾನುಸಾರೇಣ ಸಮಾಖ್ಯಾಯಾಃ ಸ್ಥಾನಾನಂತರ್ಯಮೇವ ಗ್ರಾಹ್ಯಮ್, ನ ತು ಅತ್ರೋಕ್ತಕ್ರಮಾನುಸಾರೇಣ ವಾಕ್ಯಾದ್ಯಪೇಕ್ಷಯಾ ಪ್ರಾಥಮ್ಯಮ್ । ಅತ್ರೋಕ್ತಕ್ರಮಸ್ಯ ಅವಿವಕ್ಷಿತತ್ವಾತ್ । ಉಕ್ತಂ ಹಿ ಪ್ರಮಾಣಲಕ್ಷಣ-ಟೀಕಾಯಾಮ್ – ಸಮಾಖ್ಯಾದಿತ್ವೇನ ಗ್ರಹಣಂ 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಇತ್ಯವಿವಕ್ಷಿತಕ್ರಮಂ ವಾಕ್ಯಮನುಸೃತ್ಯ – ಇತಿ ।

ಇಲ್ಲಿ 'ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ' ಎಂಬ ಅನು-ವ್ಯಾಖ್ಯಾನವನ್ನು ಅನುಸರಿಸಿ ಸಮಾಖ್ಯೆಗೆ 'ಸ್ಥಾನ'ಕ್ಕಿಂತಲೂ ಆನಂತರ್ಯವನ್ನೇ ಹೇಳ-

ಬೇಕು ಹೊರತು, ಇಲ್ಲಿ (ಸ್ಕಾಂದಪುರಾಣದಲ್ಲಿ) ಹೇಳಿರುವ ಕ್ರಮವನ್ನು ಅನುಸರಿಸಿ ವಾಕ್ಯ ಮೊದಲಾದವುಗಳಿಗಿಂತಲೂ ಪ್ರಾಥಮ್ಯವನ್ನು ಹೇಳತಕ್ಕದ್ದಲ್ಲ. ಏಕೆಂದರೆ ಇಲ್ಲಿ ಹೇಳಲಾದ ಕ್ರಮವು ವಿವಕ್ಷಿತವಾಗಿಲ್ಲ. ಪ್ರಮಾಣಲಕ್ಷಣಟೀಕಾದಲ್ಲಿ ಹೀಗೆ ಹೇಳಲಾಗಿದೆ – ''ಸಮಾಖ್ಯಾದಿತ್ವೇನ ಗ್ರಹಣಂ 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಇತಿ ಅವಿವಕ್ಷಿತಕ್ರಮಂ ವಾಕ್ಯಮನುಸೃತ್ಯ'' – ಸಮಾಖ್ಯೆಯನ್ನು ಸ್ಥಾನಕ್ಕಿಂತಲೂ ಪೂರ್ವದಲ್ಲಿ ಗ್ರಹಿಸಿರುವುದು 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಎಂಬ ಕ್ರಮದಲ್ಲಿ ತಾತ್ಪರ್ಯವಿಲ್ಲದ ವಾಕ್ಯವನ್ನು ಅನು-ಸರಿಸಿ' - ಎಂದು.

ಭಾ.ದೀ. –ಅತ ಏವ ಜೈಮಿನಿಃ – 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನ-ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್' ಇತಿ ಸ್ಮೃತ್ಯುಕ್ತಾದ್ ಅನ್ಯಥಾಕ್ರಮಮಾಹ। ಪೂರ್ವಂ ಪೂರ್ವಮಿತಿ॥ ಪೂರ್ವೋದ್ದಿಷ್ಟ-ಮಿತ್ಯರ್ಥಃ। 'ಏಕತ್ರ ಸಮವೇತಂ ವಿರುದ್ಧಮ್' ಇತಿ ಚ ಶೇಷಃ। 'ಬಲೀಯಃ' – ಅತಿಶಯೇನ ಸ್ವಭಾವತೋ ಬಲವತ್।

ಯಥಾ ಅತ್ರೈವ ಅಧಿಕರಣೇ ಅನಂತರೋದ್ದಿಷ್ಟಲಿಂಗಾಪೇಕ್ಷಯಾ ಪೂರ್ವೋ-ದ್ದಿಷ್ಟಾ ವಾಮನಶ್ರುತಿಃ ಸ್ವತಃ ಪ್ರಬಲಾ।

ಆದ್ದರಿಂದಲೇ ಜೈಮಿನಿ ಋಷಿಗಳು 'ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮ್ ಅರ್ಥವಿಪ್ರಕರ್ಷಾತ್' 'ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯೆಗಳು ಒಂದೆಡೆ ಸೇರಿದಾಗ ಮುಂದಿನದಕ್ಕೆ ದೌರ್ಬಲ್ಯವನ್ನು ಹೇಳಬೇಕು. ಏಕೆಂದರೆ, ಆ ಮುಂದಿನ ಪ್ರಮಾಣಕ್ಕೆ ವಿವಕ್ಷಿತವಾದ ಅರ್ಥವು ದೂರ-ದಲ್ಲಿರುವುದು' - ಎಂದು ಇಲ್ಲಿ ಸ್ಮೃತಿಯಲ್ಲಿ ಹೇಳಿದ ಕ್ರಮಕ್ಕಿಂತಲೂ ಬೇರೆಯೇ ಕ್ರಮವನ್ನು ಹೇಳಿರುವರು.

ಸ್ಕಾಂದವಾಕ್ಯದಲ್ಲಿ ''ಪೂರ್ವಂ ಪೂರ್ವಮ್'' ಎಂದರೆ ಈ ಶ್ಲೋಕದಲ್ಲಿ ಮೊದಲು ಹೇಳಲ್ಪಟ್ಟಿರುವುದು ಎಂದು ಅರ್ಥ. 'ಏಕತ್ರ ಸಮವೇತಂ ವಿರುದ್ಧಮ್' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ಬಲೀಯಃ' ಅಂದರೆ ಅತಿಶಯವಾಗಿ ಸ್ವಾಭಾ-

ವಿಕವಾದ ಪ್ರಾಬಲ್ಯವನ್ನು ಪಡೆದಿದೆ ಎಂದು ಅರ್ಥ. ಉದಾಹರಣೆಗೆ – ಇದೇ ಅಧಿ ಕರಣದಲ್ಲಿ ಈ ಪ್ರಮಾಣವಚನದಲ್ಲಿ ಅನಂತರದಲ್ಲಿ ಹೇಳಲ್ಪಟ್ಟಿರುವ ಲಿಂಗಕ್ಕಿಂತಲೂ ಮೊದಲು ಹೇಳಲಾಗಿರುವ ವಾಮನಶ್ರುತಿಯು ಸ್ವಾಭಾವಿಕವಾಗಿ ಪ್ರಬಲವಾಗಿದೆ.

ಭಾ.ದೀ. – ವಾಕ್ಯಾಪೇಕ್ಷಯಾ ಪ್ರಬಲಂ ಲಿಂಗಮ್ । ಯಥಾ – ದಹರಾಧಿ-ಕರಣೇ ದಹರಾಕಾಶಸ್ಯ ಸಾಕ್ಷಾತ್ ಸರ್ವಾಧಾರತ್ವಪ್ರಾಪಕಾತ್ 'ಕಿಂ ತದತ್ರ ವಿದ್ಯತೇ ... ಉಭೇ ಅಸ್ಮಿನ್ ದ್ಯಾವಾಪೃಥಿವೀ' (ಛಾಂ.ಉ. ೭.೧.೨,೩) ಇತಿ ವಾಕ್ಯಾತ್ ಪ್ರಬಲಂ ವಿಷ್ಣೋಃ ತತ್ಪ್ರಾಪಕಾಪಹತಪಾಪ್ಮತ್ವಾದಿಕಂ ಲಿಂಗಮ್ ।

ವಾಕ್ಯಕ್ಕಿಂತಲೂ ಲಿಂಗವು ಪ್ರಬಲವಾದದ್ದು; ಉದಾಹರಣೆಗೆ – ದಹರಾಧಿ-ಕರಣದಲ್ಲಿ, ದಹರಾಕಾಶಕ್ಕೆ ಸಾಕ್ಷಾತ್ ಸರ್ವಾಧಾರತ್ವವಿದೆ ಎಂದು ತಿಳಿಸುವ 'ಕಿಂ ತದತ್ರ ವಿದ್ಯತೇ .. ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂಬ ವಾಕ್ಯಕ್ಕಿಂತಲೂ ಪ್ರಬಲವಾದದ್ದು ವಿಷ್ಣುವಿಗೇ ಸರ್ವಾಧಾರತ್ವವಿದೆ ಎಂದು ತಿಳಿಸುವ 'ಅಪಹತಪಾಪ್ಮತ್ವ' ಮೊದಲಾದ ಲಿಂಗಗಳು.

ಭಾ.ದೀ. – ಪ್ರಕರಣಾಪೇಕ್ಷಯಾ ಪ್ರಬಲಂ ವಾಕ್ಯಮ್ । ಯಥಾ 'ಜ್ಯೋತಿ-ರ್ದರ್ಶನಾತ್' ಇತ್ಯಧಿಕರಣೇ ಜೀವಸ್ಯ 'ಹೃದ್ಯಂತರ್ಜ್ಯೋತಿಃ' (ಬೃ.೬.೩.೭) ಇತಿ ವಾಕ್ಯಬೋಧ್ಯಜ್ಯೋತಿಷ್ಟ್ವಸಾಧಕಾತ್ ಜೀವಪ್ರಕರಣಾತ್ ಪ್ರಬಲಂ ವಿಷ್ಣೋ-ರ್ಜ್ಯೋತಿಷ್ಟ್ವಪ್ರಾಪಕಂ 'ಕತಮ ಆತ್ಮಾ' (ಬೃ.೬.೩.೭) ಇತಿ ಪ್ರಶ್ನವಾಕ್ಯಮ್ ।

ಪ್ರಕರಣಕ್ಕಿಂತಲೂ ವಾಕ್ಯವು ಪ್ರಬಲವಾದದ್ದು. ಉದಾಹರಣೆ – ಜ್ಯೋತಿ-ರ್ದರ್ಶನಾತ್ ಎಂಬ ಅಧಿಕರಣದಲ್ಲಿ ಜೀವನಿಗೆ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವು ತಿಳಿಸುವ ಜ್ಯೋತಿಷ್ಟ್ವವಿದೆ ಎಂದು ಸಾಧಿಸುವ ಜೀವಪ್ರಕರಣಕ್ಕಿಂತಲೂ ವಿಷ್ಣುವಿಗೇ ಆ ಜ್ಯೋತಿಷ್ಟ್ವವಿದೆ ಎಂದು ಸಾಧಿಸುವ 'ಕತಮ ಆತ್ಮಾ' ಎಂಬ ಪ್ರಶ್ನವಾಕ್ಯವು ಪ್ರಬಲ-ವಾಗಿದೆ.

ಭಾ.ದೀ.– ಸ್ಥಾನಾಪೇಕ್ಷಯಾ ಪ್ರಬಲಂ ಪ್ರಕರಣಮ್ । ಯಥಾ – ಸಮಗ್ರೋ-ಪನಿಷದ ಈಶ್ವರಪರತ್ವಸಾಧಕಾತ್ ಷಟ್‌ಪ್ರಶ್ನರೂಪಸ್ಥಾನಾತ್ ಪ್ರಬಲಮ್ 'ಆತ್ಮತ

ಏಷ ಪ್ರಾಣೋ ಜಾಯತೇ' (ಪ್ರಶ್ನ. ೩.೩) ಇತ್ಯೇತತ್ ಖಂಡರೂಪಂ ಮುಖ್ಯ-ಪ್ರಾಣಪ್ರಕರಣಮ್ । ಅತ ಏವ ಅತ್ರಾಧಿಕರಣೇ ಷಟ್‌ಪ್ರಶ್ನೋಕ್ತಪ್ರಾಣವ್ಯವಸ್ಥಾಪ-ಕತ್ವಾದೀನಾಂ ಮುಖ್ಯಪ್ರಾಣಲಿಂಗತ್ವಮುಪೇತ್ಯ ಶ್ರುತ್ಯಾ ಬಾಧ ಉಕ್ತಃ ।

ಸ್ಥಾನಕ್ಕಿಂತಲೂ ಪ್ರಬಲವಾದದ್ದು ಪ್ರಕರಣ. ಉದಾಹರಣೆ – 'ಸಮಗ್ರ ಉಪ-ನಿಷತ್ತು ಈಶ್ವರಪರವಾಗಿದೆ' ಎಂದು ಸಾಧಿಸುವ ಷಟ್‌ಪ್ರಶ್ನಗಳೆಂಬ ಸ್ಥಾನಕ್ಕಿಂತಲೂ 'ಆತ್ಮತ ಏಷ ಪ್ರಾಣೋ ಜಾಯತೇ' ಎಂಬ ಖಂಡರೂಪವಾದ ಮುಖ್ಯಪ್ರಾಣಪ್ರಕರಣ ಪ್ರಬಲವಾಗಿದೆ. ಆದ್ದರಿಂದಲೇ ಈ ಅಧಿಕರಣದಲ್ಲಿ ಷಟ್‌ಪ್ರಶ್ನದಲ್ಲಿ ಹೇಳಿದ ಪ್ರಾಣ-ವ್ಯವಸ್ಥಾಪಕತ್ವ ಮೊದಲಾದವುಗಳು ಮುಖ್ಯಪ್ರಾಣನ ಲಿಂಗವೆಂದು ಅಂಗೀಕರಿಸಿ ಅದಕ್ಕೆ ಶ್ರುತಿಯಿಂದ ಬಾಧವನ್ನು ಹೇಳಲಾಗಿದೆ.

ಭಾ.ದೀ.– ಸಮಾಖ್ಯಾಪೇಕ್ಷಯಾ ಪ್ರಬಲಂ ಸ್ಥಾನಮ್ । ಯಥಾ – ಅನ್ನಮಯಾದಿ-ಶಬ್ದಾನಾಂ ಕೋಶಪರತ್ವಸಾಧಕಾತ್ 'ಅನ್ನಮಯಪ್ರಾಣಮಯಮನೋಮಯ-ವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಮ್' (ಯಾಜ್ಞಿಕೀ.೬೬) ಇತಿ ನಾರಾಯಣಾನುವಾಕಸಮಾಖ್ಯಾಯಾಃ ಪ್ರಬಲಂ ತೇಷಾಂ ವಿಷ್ಣುತ್ವಸಾಧಕಂ ಬ್ರಹ್ಮಪರಾನೇಕಪ್ರಕರಣಸಂದರ್ಭರೂಪಂ ಸ್ಥಾನಮ್ ।

ಏತಾನ್ಯೇವ ಶ್ರುತ್ಯಾದಿನಾ ಅರ್ಥನಿರ್ಣಯಸ್ಥಲಾನಿ । ಆದ್ಯಯಾ ಸಮಾಖ್ಯಯಾ ನಿರ್ಣೇತವ್ಯಂ ಯಥಾ – ಪುರುಷಸೂಕ್ತಸಮಾಖ್ಯಯಾ ವೈಶ್ವಾನರಸ್ಯ ವಿಷ್ಣುತ್ವಮ್ । ದ್ವಿತೀಯಯಾ ಯಥಾ – ಅಂಭ್ರಿಣೀಸೂಕ್ತಸಮಾಖ್ಯಯಾ ವಿಶ್ವಕರ್ಮಸೂಕ್ತೋಕ್ತಸ್ಯ ಅಜಸ್ಯ ವಿಷ್ಣುತ್ವಮ್ ।

ಸಮಾಖ್ಯೆಗಿಂತಲೂ ಪ್ರಬಲವಾದದ್ದು ಸ್ಥಾನ. ಉದಾಹರಣೆ – ಅನ್ನಮಯಾದಿ-ಶಬ್ದಗಳಿಗೆ ಕೋಶವನ್ನು ಹೇಳುವ ತಾತ್ಪರ್ಯವುಳ್ಳದ್ದು ಎಂಬುದಕ್ಕೆ ಸಾಧಕವಾಗಿರುವ 'ಅನ್ನಮಯ-ಪ್ರಾಣಮಯ-ಮನೋಮಯ-ವಿಜ್ಞಾನಮಯಾ-ನಂದಮಯಾ ಮೇ ಶುದ್ಧ್ಯಂತಾಮ್' ಎಂಬ ನಾರಾಯಣ ಅನುವಾಕರೂಪವಾದ ಸಮಾಖ್ಯೆಗಿಂತಲೂ ಅನ್ನಮಯಾದಿಗಳು ವಿಷ್ಣುವೇ ಆಗಿರುವನು ಎಂದು ಸಾಧಿಸುವ ಬ್ರಹ್ಮಪರವಾದ ಅನೇಕ

ಪ್ರಕರಣಗಳ ಸಮೂಹರೂಪವಾದ ಸ್ಥಾನವು ಪ್ರಬಲವಾಗಿದೆ. ಈ ಮೇಲೆ ಹೇಳಿರುವ ಸ್ಥಳಗಳೇ ಶ್ರುತಿಮೊದಲಾದವುಗಳಿಂದ ಅರ್ಥನಿರ್ಣಯವನ್ನು ಮಾಡುವುದಕ್ಕೆ ಉದಾಹರಣೆಗಳಾಗಿವೆ.

ಮೊದಲನೆಯ ಅಂದರೆ ಅರ್ಥತಃ ಸಮಾಖ್ಯೆಯಿಂದ ನಿರ್ಣಯಿಸುವುದಕ್ಕೆ ಉದಾಹರಣೆ – ಪುರುಷಸೂಕ್ತಸಮಾಖ್ಯೆಯಿಂದ ವೈಶ್ವಾನರನು ವಿಷ್ಣುವೆಂದು ಸಮರ್ಥಿಸುವುದು.

ಎರಡನೆಯ ಅಂದರೆ ಶಬ್ದದಿಂದಲೂ ಸಮಾಖ್ಯೆ ನಿರ್ಣಾಯಕವಾಗುವುದಕ್ಕೆ ಅಂಭ್ರಣೀಸೂಕ್ತದ ಸಮಾಖ್ಯೆಯಿಂದ ವಿಶ್ವಕರ್ಮಸೂಕ್ತದಲ್ಲಿ ಉಕ್ತನಾಗಿರುವ ಅಜನಿಗೆ ವಿಷ್ಣುತ್ವವನ್ನು ಸಾಧಿಸುವುದು ಉದಾಹರಣೆಯಾಗಿದೆ.

ಭಾ.ದೀ. – ಅಸ್ತ್ವೇವಮ್, ತತಃ ಕಿಮ್? ಇತ್ಯತ ಆಹ – ಏವಮಿತಿ ॥ ವಿರುದ್ಧೈರೇತೇಷಾಂ ಸಮವಾಯೇ ಸತಿ ಪ್ರಬಲೇನ ಪೂರ್ವೇಣೋತ್ತರಬಾಧೇ ಚ ಸತಿ 'ಆಗಮನಿರ್ಣಯಃ' ಆಗಮಾರ್ಥಸ್ಯ ವಿಪ್ರತಿಪನ್ನಸ್ಯ ಏತೈಃ ನಿರ್ಣಯೋ ಭವತಿ ಇತ್ಯರ್ಥಃ।

ಪ್ರಾಬಲ್ಯದ ಕ್ರಮವು ಈಗ ಹೇಳಿದಂತೆ ಇರಲಿ; ಮುಂದೇನು? ಎಂಬ ಶಂಕೆಗೆ ಉತ್ತರವಾಗಿ "ಏವಮ್" ಎಂದು ಹೇಳಲಾಗಿದೆ. ವಿರುದ್ಧವಾದ ಈ ಪ್ರಮಾಣಗಳು ಒಂದೆಡೆ ಸೇರಿದಾಗ ಪ್ರಬಲವಾದ ಹಿಂದಿನ ಪ್ರಮಾಣದಿಂದ ಮುಂದಿನ ಪ್ರಮಾಣಕ್ಕೆ ಬಾಧವೂ ಉಂಟಾದಾಗ 'ಆಗಮನಿರ್ಣಯಃ' ವಿವಾದಗ್ರಸ್ತವಾದ ಆಗಮವಾಕ್ಯದ ಅರ್ಥದ ನಿರ್ಣಯವು ಈ ಪ್ರಮಾಣಗಳಿಂದ ಆಗುವುದು ಎಂದು ಅರ್ಥ.

ಭಾ.ದೀ. – ನನ್ವಸ್ತು ಶ್ರುತೇಃ ಸ್ವಭಾವತಃ ಪ್ರಾಬಲ್ಯಮ್ । ತಥಾಽಪಿ ಬಾಹುಲ್ಯೇನ ಪೂರ್ವಪಕ್ಷ್ಯುಕ್ತಲಿಂಗಾನಾಮಪಿ ಪ್ರಾಬಲ್ಯಾತ್ ಸಾಮ್ಯೇನ ಅನಿರ್ಣಯ ಏವ ಇತ್ಯತ ಆಹ – ತಚ್ಚೇತಿ ॥

ಶಂಕೆ – ಶ್ರುತಿಗೆ ಸ್ವಭಾವತಃ ಪ್ರಾಬಲ್ಯವಿರಲಿ; ಆದರೂ ಪೂರ್ವಪಕ್ಷಿಯು ಹೇಳುವ

ಲಿಂಗಗಳಿಗೂ ಬಾಹುಳ್ಯಪ್ರಯುಕ್ತವಾದ ಪ್ರಾಬಲ್ಯವಿರುವುದರಿಂದ ಈ ಎರಡೂ ಪ್ರಮಾಣಗಳಿಗೆ ಸಾಮ್ಯವಿದ್ದು, ನಿರ್ಣಯವಾಗಲು ಸಾಧ್ಯವಿಲ್ಲ.

ಸಮಾಧಾನ – ಇದಕ್ಕೆ ಉತ್ತರವಾಗಿ ಭಾಷ್ಯದಲ್ಲಿ "ತಚ್ಚ" ಎಂದು ಹೇಳಲಾಗಿದೆ.

**ಭಾಷ್ಯಮ್ – ತಚ್ಚ ಲಿಂಗಂ ವಿಷ್ಣೋರೇವ । ತಸ್ಯೈವ ಪ್ರಾಣತ್ವೋಕ್ತೇಃ 'ತದ್ವೈ ತ್ವಂ ಪ್ರಾಣೋ ಅಭವಃ' ಇತಿ ॥ ೨೪ ॥**

ಪೂರ್ವಪಕ್ಷಿ ಹೇಳಿದ ಲಿಂಗವಾದರೂ ವಿಷ್ಣುವಿನ ಲಿಂಗವೇ ಆಗಿದೆ. ಏಕೆಂದರೆ 'ತದ್ವೈ ತ್ವಂ ಪ್ರಾಣೋ ಅಭವಃ' ಎಂದು ವಿಷ್ಣುವಿಗೆ ಪ್ರಾಣತ್ವವನ್ನು ಹೇಳಲಾಗಿದೆ.

ಭಾ.ದೀ. – ಚಸ್ತ್ವರ್ಥಃ। 'ಲಿಂಗಮ್' ಇತಿ ಸಮುದಾಯೈಕವಚನಮ್ । ತಥಾ ಚ – 'ತತ್' ಪೂರ್ವವಾದ್ಯುಕ್ತಂ ಲಿಂಗಜಾತಂ ತು ವಿಷ್ಣೋರೇವ ಯುಕ್ತಮ್, ನ ವಾಯೋಃ - ಇತ್ಯರ್ಥಃ । ತಥಾ ಚ – ಬಾಹುಲ್ಯೇಽಪಿ ಲಿಂಗಾನಾಂ ಸಾವಕಾಶತ್ವಾತ್ ತೇಭ್ಯಃ ಶ್ರುತೇರೇಕಸ್ಯಾ ಅಪಿ ನಿರವಕಾಶಾಯಾಃ ಪ್ರಾಬಲ್ಯಾತ್ ನಾನಿರ್ಣಯಃ - ಇತಿ ಭಾವಃ। ನನು ನ ಲಿಂಗಂ ವಿಷ್ಣೌ ಸಾವಕಾಶಂ, ಪೂರ್ವಪಕ್ಷ್ಯುದಾಹೃತಸಮಾಖ್ಯಾರೂಪಶ್ರುತ್ಯಂತರೇಣ ತಸ್ಯ ಪ್ರಾಣನಿಷ್ಠತಯೈವ ಉಕ್ತತ್ವಾತ್ ಇತ್ಯತ ಆಹ – ತಸ್ಯೈವೇತಿ ॥ 'ತದ್ವೈ ತ್ವಮ್' ಇತಿ ಶ್ರುತೌ 'ತಸ್ಯ' - ವಿಷ್ಣೋಃ ಪ್ರಾಣತ್ವಸ್ಯ ಪ್ರಾಣಶಬ್ದವಾಚ್ಯತ್ವಸ್ಯೋಕ್ತೇಃ ಉಕ್ತತ್ವಾತ್ ಇತ್ಯರ್ಥಃ।

ಏವಮ್ 'ಅತ ಏವ' ಇತ್ಯತ್ರ ಆಧ್ಯಾತ್ಮಿಕಾಶೇಷಶಬ್ದಸ್ಯ ಸಮನ್ವಯಂ ಬ್ರುವತಾ ತಥಾ – 'ಶಾಸ್ತ್ರದೃಷ್ಟ್ಯಾ' ಇತ್ಯತ್ರಾಂತರ್ಯಾಮಿಪರತ್ವಂ ಬ್ರುವತಾ ಸೂತ್ರಕಾರೇಣ ಇತರವ್ಯಾವೃತ್ತ್ಯಾ ತಸ್ಯೈವ ಪ್ರಾಣತ್ವೋಕ್ತೇಃ ಸಾಧಿತತ್ವಾದಿತ್ಯಪಿ ವ್ಯಾಖ್ಯೇಯಮೇತತ್ ।

ತಥಾ ಚ – ಶ್ರುತ್ಯಂತರೇ ಪ್ರಾಣನಿಷ್ಠತಯಾ ಲಿಂಗಸ್ಯೋಕ್ತಾವಪಿ ನ ತದ್ ವಿರೋಧಃ। ತಸ್ಯ ಪ್ರಾಣಸ್ಯ ವಿಷ್ಣುತ್ವಾಭ್ಯುಪಗಮಾತ್ ಇತಿ ಭಾವಃ।

ಇಲ್ಲಿ 'ಚ'ಕಾರವು 'ತು' ಎಂಬ ಅರ್ಥವನ್ನು ಹೇಳುವುದು. 'ಲಿಂಗಂ' ಎಂಬ ಪದದಲ್ಲಿ ಸಮುದಾಯದ ಏಕತ್ವವನ್ನು ಹೇಳುವ ಏಕವಚನವಿದೆ. ತಥಾ ಚ 'ತತ್' ಪೂರ್ವಪಕ್ಷಿಯು ಹೇಳಿದ ಲಿಂಗಸಮೂಹವಾದರೋ ವಿಷ್ಣುವಿಗೇ ಯುಕ್ತವಾಗಿದೆ ಹೊರತು ವಾಯುವಿಗಲ್ಲ ಎಂದು ಅರ್ಥ. ತಥಾ ಚ – ಲಿಂಗಗಳು ಬಹುಸಂಖ್ಯಾತ-ವಾಗಿದ್ದರೂ ಅವು ಸಾವಕಾಶಗಳಾಗಿರುವುದರಿಂದ ಅವುಗಳಿಗಿಂತ ಶ್ರುತಿಯು ಒಂದೇ ಆಗಿದ್ದರೂ ನಿರವಕಾಶವಾದ ಪ್ರಯುಕ್ತ ಪ್ರಾಬಲ್ಯವನ್ನು ಹೊಂದಿದೆಯಾದ್ದರಿಂದ ನಿರ್ಣಯ ಸಿದ್ಧಿಸುವುದು ಎಂದು ಭಾವ.

ಶಂಕೆ – ಈ ಲಿಂಗಗಳು ವಿಷ್ಣುವಿನಲ್ಲಿ ಅವಕಾಶವನ್ನು ಪಡೆದಿಲ್ಲ; ಏಕೆಂದರೆ, ಪೂರ್ವಪಕ್ಷಿಯು ಉದಾಹರಿಸಿರುವ ಸಮಾಖ್ಯಾರೂಪವಾದ ಮತ್ತೊಂದು ಶ್ರುತಿಯಿಂದ ಆ ಲಿಂಗಗಳು ಪ್ರಾಣನಿಗೆ ಸಂಬಂಧಿಸಿರುವುದಾಗಿ ಉಕ್ತವಾಗಿವೆ.

ಸಮಾಧಾನ – ಈ ಶಂಕೆಯನ್ನು ನಿರಾಕರಿಸಲು ಭಾಷ್ಯದಲ್ಲಿ ''ತಸ್ಯೈವ'' ಎಂದು ಹೇಳಿದ್ದಾರೆ. 'ತದ್ವೈ ತ್ವಂ' ಎಂಬ ಶ್ರುತಿಯಲ್ಲಿ ''ತಸ್ಯ'' ಆ ವಿಷ್ಣುವಿಗೇ ''ಪ್ರಾಣ-ತ್ವೋಕ್ತೇಃ'' - ಪ್ರಾಣತ್ವ ಎಂದರೆ ಪ್ರಾಣಶಬ್ದವಾಚ್ಯತ್ವವು ಇರುವುದೆಂದು ಹೇಳಿರುವು-ದರಿಂದ ಎಂದು ಅರ್ಥ.

ಹಾಗೆಯೇ ''ಅತ ಏವ'' ಎಂಬ ಅಧಿಕರಣದಲ್ಲಿ ಆಧ್ಯಾತ್ಮಿಕ ಅಶೇಷಶಬ್ದಗಳ ಸಮನ್ವಯವನ್ನು ಹೇಳುವ, ಅಂತೆಯೇ ''ಶಾಸ್ತ್ರದೃಷ್ಟ್ಯಾ'' ಎಂಬ ಸೂತ್ರದಲ್ಲಿ ಆ ಶಬ್ದ-ಗಳಿಗೆ ಅಂತರ್ಯಾಮಿಯನ್ನು ಹೇಳುವ ತಾತ್ಪರ್ಯವಿದೆ ಎಂದು ಹೇಳುವ ಸೂತ್ರಕಾರ-ರಿಂದ ಇತರರನ್ನು ನಿಷೇಧಿಸಿ ವಿಷ್ಣುವಿಗೇ ''ಪ್ರಾಣತ್ವೋಕ್ತೇಃ'' ಅಂದರೆ ಪ್ರಾಣತ್ವವನ್ನು ಸಾಧಿಸಿರುವುದರಿಂದ - ಎಂದೂ ಈ ವಾಕ್ಯಕ್ಕೆ ವ್ಯಾಖ್ಯಾನ ಮಾಡಬೇಕು.

ತಥಾ ಚ – ಮತ್ತೊಂದು ಶ್ರುತಿಯಲ್ಲಿ ಈ ಲಿಂಗವು ಪ್ರಾಣನಲ್ಲಿರುವುದೆಂದು ಹೇಳಿದ್ದರೂ ಆ ಶ್ರುತಿಯ ವಿರೋಧವಿಲ್ಲ. ಏಕೆಂದರೆ, ಆ ಪ್ರಾಣನು ವಿಷ್ಣುವೇ ಆಗಿರು-ವನು ಎಂದು ಒಪ್ಪಿರುವುದರಿಂದ ಎಂದು ಒಟ್ಟು ಭಾವ.

ಭಾ.ದೀ. – ನನು ತಥಾಽಪಿ 'ಕುವಿದಂಗ' ಇತಿ ಋಚಿ ವಾಯುನಿಷ್ಠತಯಾ ಲಿಂಗೋಕ್ತೇಃ ತದ್ವಿರೋಧಃ ಇತ್ಯಸ್ಯಾಪಿ ಇದಮೇವೋತ್ತರಮ್ । ಅಸ್ಮಿನ್ ಪಕ್ಷೇ

ಪ್ರಾಣತ್ವಮಿತಿ ವಾಯುತ್ವಮುಪಲಕ್ಷ್ಯತೇ । ತಥಾ ಚ – ಅಂತರ್ನಯೇ ಆಧಿದೈವಿಕಾಶೇಷಶಬ್ದಸಮನ್ವಯಂ ಬ್ರುವತಾ ಸೂತ್ರಕಾರೇಣ 'ತಸ್ಯೈವ' ವಿಷ್ಣೋರೇವ 'ಪ್ರಾಣತ್ವೋಕ್ತೇಃ' ವಾಯುಶಬ್ದವಾಚ್ಯತ್ವರೂಪವಾಯುತ್ವಸ್ಯ ಉಕ್ತತ್ವಾತ್ - ಇತ್ಯರ್ಥಃ। ತಥಾ ಚ – ನ ತದ್ವಿರೋಧೋಽಪಿ ಇತಿ ಭಾವಃ। ನ ಚ ಸಿದ್ಧಾಂತೇಽಪಿ ಸ್ಥಾನಾಪೇಕ್ಷಯಾ ಪ್ರಬಲಾತ್ ಪ್ರಕರಣಾತ್ 'ಏವಮೇವೈಷಃ' ಇತಿ ಶ್ರುತ್ಯಂತರಗತ-ಪ್ರಾಣಶಬ್ದಸ್ಯ ,ತಥಾ 'ಕುವಿದಂಗ' ಇತಿ ಮಂತ್ರಸ್ಥವಾಯುಶಬ್ದಸ್ಯ ಮುಖ್ಯವಾಯು-ಪರತ್ವಂ , ತತ್ರೋಕ್ತಲಿಂಗಾನಾಮಪಿ ತತ್ಪರತ್ವಮುಪೇತ್ಯ ತೇಷಾಂ ಶ್ರುತ್ಯಾ ಬಾಧ-ಸ್ಯೋಕ್ತತ್ವಾತ್ ಕಥಂ ಶ್ರುತ್ಯಂತರಸ್ಥಪ್ರಾಣವಾಯುಶಬ್ದಯೋಃ ವಿಷ್ಣುಪರತ್ವಾಂಗೀ-ಕಾರೇಣ ಸಮಾಧಾನಮ್।

ಅತ ಏವ ಚಂದ್ರಿಕಾಯಾಂ– ಮಧ್ಯಮಶಬ್ದೋಽಪಿ 'ಊರ್ಧ್ವಂ ಪ್ರಾಣಮ್' (ಕಠ.೨.೨.೩) ಇತಿ ಪ್ರಾಣಸ್ಯ ಸ್ಥಾನಾಂತರನಿರ್ದೇಶಾತ್ ತತ್ ತ್ಯಾಗೇನ ಮಧ್ಯಮ-ಸ್ಥಾನಸ್ಥಬ್ರಹ್ಮಪರಃ, ನ ತು ಶ್ರುತ್ಯಂತರೇ ಮಧ್ಯಮಶಬ್ದೋಕ್ತಪ್ರಾಣಪರ ಇತ್ಯುಕ್ತಮ್। ಅತಃ 'ಏವಮೇವೈಷಃ' (ಪ್ರಶ್ನ.೩.೪) ಇತಿ ವಾಕ್ಯಂ ಸ್ಥಾನಾತ್ ಪ್ರಕರಣಸ್ಯ ಪ್ರಾಬಲ್ಯೇ ಉದಾಹೃತಮಿತಿ ವಾಚ್ಯಮ್ । ಉಕ್ತರೀತ್ಯಾ ಮುಖ್ಯತಃ ಶ್ರುತ್ಯಂತರಗತಪ್ರಾಣ-ಶಬ್ದಾದೇರ್ಬ್ರಹ್ಮಪರತ್ವೇನ ಲಿಂಗಾನಾಂ ತತ್ತದಂತರ್ಯಾಮಿನಿಷ್ಠತ್ವೇಽಪಿ ಸಮಾ-ಕರ್ಷನ್ಯಾಯೇನಾನ್ಯಪರತ್ವಸ್ಯಾಪಿ ಅಂಗೀಕಾರಾತ್ ಶ್ರುತ್ಯಂತರೋಕ್ತಲಿಂಗಾನಾ-ಮನ್ಯನಿಷ್ಠತ್ವೇಽಪಿ ವಾ ನಾನುಪಪತ್ತಿಃ । ನ ಚೈವಂ ಕಾಠಕೋಕ್ತಲಿಂಗಾನಾಮಪಿ ಅನ್ಯನಿಷ್ಠತ್ವಾಪತ್ತ್ಯಾ ಅನ್ಯೇಷಾಮ್ ಈಶಾನತ್ವಾದ್ಯಾಪತ್ತಿಃ । ನಿರವಕಾಶಶ್ರುತ್ಯಾ ಕಾಠಕೋಕ್ತಲಿಂಗಾನಾಂ ವಿಷ್ಣುನಿಷ್ಠತಾನಿರ್ಣಯೋಪಪತ್ತೇಃ।

ಆದರೂ 'ಕುವಿದಂಗ' ಎಂಬ ಋಙ್ಮಂತ್ರದಲ್ಲಿ ಇಲ್ಲಿ ಉಕ್ತವಾಗಿರುವ ಲಿಂಗವು ವಾಯುನಿಷ್ಠವೆಂದು ಹೇಳಿರುವುದರಿಂದ ಆ ಮಂತ್ರದ ವಿರೋಧ ಬರುವುದು ಎಂಬ ಶಂಕೆಗೂ ಇದೇ ಉತ್ತರವಾಗಿದೆ. ಈ ಪಕ್ಷದಲ್ಲಿ ಭಾಷ್ಯದಲ್ಲಿರುವ 'ಪ್ರಾಣತ್ವ' ಎಂಬ ಶಬ್ದವು ವಾಯುತ್ವವನ್ನು ಉಪಲಕ್ಷಣಯಾ ಹೇಳುವುದು. ತಥಾ ಚ – ಅಂತಃಸ್ಥತ್ವಾಧಿ-

ಕರಣದಲ್ಲಿ ಆಧಿದೈವಿಕವಾದ ಅಶೇಷಶಬ್ದಗಳ ಸಮನ್ವಯವನ್ನು ಹೇಳುವ ಸೂತ್ರಕಾರ-ರಿಂದ ''ತಸ್ಯೈವ'' ಆ ವಿಷ್ಣುವಿಗೇ ''ಪ್ರಾಣತ್ವೋಕ್ತೇಃ'' ವಾಯುಶಬ್ದವಾಚ್ಯತ್ವರೂಪ-ವಾದ ವಾಯುತ್ವವನ್ನು ಹೇಳಿರುವುದರಿಂದ - ಎಂದು ಅರ್ಥ. ತಥಾ ಚ – ಆ ಮಂತ್ರದ ವಿರೋಧವೂ ಇಲ್ಲವೆಂದು ಭಾವ.

ಶಂಕೆ – ಸಿದ್ಧಾಂತದಲ್ಲಿಯೂ ಕೂಡ ಸ್ಥಾನಕ್ಕಿಂತಲೂ ಪ್ರಬಲವಾಗಿರುವ ಪ್ರಕರಣ-ದಿಂದ ''ಏವಮೇವೈಷಃ ಇತರಾನ್ ಪ್ರಾಣಾನ್'' ಎಂಬ ಶ್ರುತ್ಯಂತರದಲ್ಲಿರುವ ಪ್ರಾಣ-ಶಬ್ದಕ್ಕೆ, ಹಾಗೆಯೇ ''ಯೋಽಯಂ ಮಧ್ಯಮಃ'' ಎಂಬಲ್ಲಿರುವ ಪ್ರಾಣಶಬ್ದಕ್ಕೆ, ಅದೇ ರೀತಿ ''ಕುವಿದಂಗ'' ಎಂಬ ಮಂತ್ರದಲ್ಲಿರುವ ವಾಯುಶಬ್ದಕ್ಕೆ ಮುಖ್ಯವಾಯುಪರತ್ವ-ವಿದೆಯೆಂದು ಹೇಳಲಾಗಿದೆ. ಅಲ್ಲಿ ಹೇಳಿರುವ ಲಿಂಗಗಳಿಗೂ ಮುಖ್ಯವಾಯು-ಪರತ್ವವನ್ನು ಅಂಗೀಕರಿಸಿ ಅವುಗಳಿಗೆ ಶ್ರುತಿಯಿಂದ ಬಾಧವನ್ನು ಹೇಳಿರುವುದರಿಂದ ಶ್ರುತ್ಯಂತರದಲ್ಲಿರುವ ಪ್ರಾಣಶಬ್ದ ವಾಯುಶಬ್ದಗಳಿಗೆ ವಿಷ್ಣುಪರತ್ವವನ್ನು ಒಪ್ಪಿ ಸಮಾ-ಧಾನವನ್ನು ಹೇಳುವುದು ಹೇಗೆ?

ಆದ್ದರಿಂದಲೇ ಚಂದ್ರಿಕಾದಲ್ಲಿ – 'ಮಧ್ಯಮಶಬ್ದೋಽಪಿ 'ಊರ್ಧ್ವಂ ಪ್ರಾಣಮ್' (ಕಠ.೨.೨.೩) ಇತಿ ಪ್ರಾಣಸ್ಯ ಸ್ಥಾನಾಂತರನಿರ್ದೇಶಾತ್ ತತ್ ತ್ಯಾಗೇನ ಮಧ್ಯಮಸ್ಥಾನಸ್ಥಬ್ರಹ್ಮಪರಃ, ನ ತು ಶ್ರುತ್ಯಂತರೇ ಮಧ್ಯಮಶಬ್ದೋಕ್ತಪ್ರಾಣಪರಃ' ಇತ್ಯುಕ್ತಮ್ – ''ಮಧ್ಯೇ ವಾಮನಂ ಎಂಬಲ್ಲಿರುವ ಮಧ್ಯಶಬ್ದವೂ ಕೂಡ ಊರ್ಧ್ವಂ ಪ್ರಾಣಂ ಎಂಬುದಾಗಿ ಪ್ರಾಣನಿಗೆ ಬೇರೆ ಸ್ಥಾನವನ್ನು ನಿರ್ದೇಶಿಸಿರುವುದರಿಂದ ಅದನ್ನು ಬಿಟ್ಟು ಮಧ್ಯಮಸ್ಥಾನದಲ್ಲಿರುವ ಬ್ರಹ್ಮನನ್ನು ಹೇಳುವ ತಾತ್ಪರ್ಯವುಳ್ಳದ್ದು; ಹೊರತು ಇನ್ನೊಂದು ಶ್ರುತಿಯಲ್ಲಿ ಮಧ್ಯಮಶಬ್ದವು ಹೇಳುವ ಪ್ರಾಣನನ್ನು ಹೇಳುವ ತಾತ್ಪರ್ಯವುಳ್ಳದ್ದಲ್ಲ'' – ಎಂದು ಹೇಳಿದೆ.

ಆದ್ದರಿಂದ ''ಏವಮೇವೈಷಃ'' ಎಂಬ ವಾಕ್ಯವನ್ನು ಸ್ಥಾನಕ್ಕಿಂತಲೂ ಪ್ರಕರಣಕ್ಕೆ ಪ್ರಾಬಲ್ಯ ಇರುವುದೆಂದು ತೋರಿಸಲು ಉದಾಹರಿಸಲ್ಪಟ್ಟಿದೆ.

ಸಮಾಧಾನ – ಇದು ಸರಿಯಲ್ಲ; ಏಕೆಂದರೆ ಹಿಂದೆ ಹೇಳಿದ ರೀತಿಯಿಂದ

ಶ್ರುತ್ಯಂತರದಲ್ಲಿರುವ ಪ್ರಾಣ ಮೊದಲಾದ ಶಬ್ದಗಳಿಗೆ ಮುಖ್ಯತಃ ಬ್ರಹ್ಮಪರತ್ವವಿರು-ವುದರಿಂದ ಅಲ್ಲಿ ಹೇಳಿರುವ ಲಿಂಗಗಳಿಗೆ ಆಯಾಯ ಅಂತರ್ಯಾಮಿನಿಷ್ಠತ್ವ-ವಿರುವುದಾದರೂ 'ಸಮಾಕರ್ಷಾಧಿಕರಣ'ದಲ್ಲಿ ಹೇಳಿದ ನ್ಯಾಯದಿಂದ ಆ ಶಬ್ದಗಳಿಗೆ ಅನ್ಯಪರತ್ವವನ್ನೂ ಅಂಗೀಕರಿಸಿರುವುದರಿಂದ ಶ್ರುತ್ಯಂತರದಲ್ಲಿ ಹೇಳಿದ ಲಿಂಗಗಳು ವಿಷ್ಣುಭಿನ್ನರಲ್ಲಿ ಇರುವುದಾದರೂ ಯಾವ ಅನುಪಪತ್ತಿಯೂ ಇಲ್ಲ. ಹೀಗೆ ಹೇಳಿದಲ್ಲಿ ಕಾಠಕದಲ್ಲಿ ಹೇಳಿರುವ ಲಿಂಗಗಳಿಗೂ ವಿಷ್ಣುಭಿನ್ನನಿಷ್ಠತ್ವವು ಇರಲು ಸಾಧ್ಯವಿರು-ವುದರಿಂದ ಅವರಿಗೂ ಈಶಾನಶಬ್ದವಾಚ್ಯತ್ವ ಬಂದೀತು!! ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಕಾಠಕದಲ್ಲಿ ಹೇಳಿರುವ ಲಿಂಗಗಳಿಗೆ ನಿರವಕಾಶ ಶ್ರುತಿಯ ಬಲದಿಂದ ವಿಷ್ಣುನಿಷ್ಠತ್ವವೇ ಇರುವುದೆಂದು ನಿರ್ಣಯ ಮಾಡಲು ಸಾಧ್ಯವಿದೆ.

ಭಾ.ದೀ.– ನನು ತಥಾಽಪಿ ಕಥಮೀಶಾನೋ ವಿಷ್ಣುರ್ಭವೇತ್, ಶ್ರುತೌ ಈಶಾನಸ್ಯ ಅಂಗುಷ್ಠಪರಿಮಿತತ್ವೋಕ್ತೇಃ। ಸರ್ವಗತೇ ಚ ಹರೌ ತದಯೋಗಾತ್। ನ ಚ ವ್ಯೋಮವತ್ ಸರ್ವಗತಸ್ಯಾಪಿ ಅಣುತ್ವಂ ಯುಜ್ಯತೇ ಇತಿ ಪ್ರತಿಪಾದಿತಮ್ ಇತಿ ವಾಚ್ಯಮ್ । ತಥಾಽಪಿ 'ಅಂಗುಷ್ಠಮಾತ್ರಃ' ಇತಿ ತನ್ಮಾತ್ರಪರಿಣಾಮತ್ವೋಕ್ತೇ-ರಯೋಗಾತ್ । ನ ಚ 'ಅಂಗುಷ್ಠಮಾತ್ರಃ' ಇತ್ಯತ್ರ ಶ್ರುತಃ ಪರಿಮಾಣಾರ್ಥಕೋ ಮಾತ್ರಚ್‌ಪ್ರತ್ಯಯಃ ಏವ, ನ ತ್ವವಧಾರಣಾರ್ಥಕೋ ಮಾತ್ರಶಬ್ದಃ । 'ದೇಹಾಂ-ಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ' ಇತಿ ಸ್ಮೃತೌ ಮಿತ ಇತ್ಯನೇನ ಪರಿಮಾಣಸ್ಯೈವೋಕ್ತೇಃ। ತಥಾ ಚ ನಾನುಪಪತ್ತಿರಿತಿ ವಾಚ್ಯಮ್।

ತಥಾತ್ವೇಽಂಗುಷ್ಠಮಾತ್ರತ್ವಾಭಿಧಾತ್ರ್ಯಾಮ್ 'ಅಂಗುಷ್ಠಮಾತ್ರಃ' (ಕಠ. ೪.೧೨) ಇತಿ ಶ್ರುತೌ 'ಮಧ್ಯ ಆತ್ಮನಿ' ಇತ್ಯಸ್ಯ ಸ್ಮೃತೌ 'ಹೃದಿ' ಇತ್ಯಸ್ಯ ವೈಯರ್ಥ್ಯಾಪಾತಾತ್। ತನ್ಮಾತ್ರಪರಿಮಿತತ್ವೋಕ್ತ್ಯರ್ಥಂ ಹಿ ತತ್ರ ಹೃದಯರೂಪಸೂಕ್ಷ್ಮಸ್ಥಾನೋಕ್ತಿಃ। ತಸ್ಮಾದ್ ಅವಧಾರಣಾರ್ಥಕಮಾತ್ರಪದ ಏವಾಯಮಂಗೀಕಾರ್ಯಃ । ಉಕ್ತಂ ಹಿ ಚಂದ್ರಿಕಾಯಾಮ್ – 'ಮಾತ್ರಶಬ್ದಸ್ಯ ಅವಧಾರಣಾರ್ಥಕತ್ವಾತ್'- ಇತಿ।

**ತಥಾ ಚ ಸರ್ವಗತೇ ಹರಾವಂಗುಷ್ಠಮಾತ್ರತ್ವೋಕ್ತಿಃ ಅನುಪಪನ್ನಾ ಇತಿ ನಾತ್ರ ಈಶಾನೋ ವಿಷ್ಣುಃ ಇತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯ ತದಕ್ಷರಾಣಿ ವ್ಯಾಚಷ್ಟೇ – ಹೃದೀತಿ ॥**

ಶಂಕೆ – ಆದರೂ ಕಾಠಕದಲ್ಲಿ ಉಕ್ತನಾಗಿರುವ ಈಶಾನನು ವಿಷ್ಣುವಾಗಲು ಹೇಗೆ ಸಾಧ್ಯ ? ಏಕೆಂದರೆ ಕಾಠಕಶ್ರುತಿಯಲ್ಲಿ ಈಶಾನನು ಅಂಗುಷ್ಠಪರಿಮಾಣವುಳ್ಳವನೆಂದು ಹೇಳಲಾಗಿದೆ. ಸರ್ವವ್ಯಾಪ್ತನಾದ ಹರಿಯಲ್ಲಿ ಅಂಗುಷ್ಠಪರಿಮಿತತ್ವವು ಯುಕ್ತವಾಗುವುದಿಲ್ಲ. ಸರ್ವಗತವಾಗಿದ್ದರೂ ಆಕಾಶಕ್ಕೆ ಅಣುತ್ವವು ಯುಕ್ತವಾಗಿದೆ ಎಂದು ಹಿಂದೆ ಪ್ರತಿಪಾದಿಸಲಾಗಿದೆ? (ಆದರಂತೆ ಸರ್ವಗತನಾದ ವಿಷ್ಣುವಿಗೂ ಅಂಗುಷ್ಠಪರಿಮಿತತ್ವವನ್ನು ಹೇಳಬಹುದು) ಎಂದರೆ ಅದು ಸರಿಯಲ್ಲ. ಏಕೆಂದರೆ, ವಿಷ್ಣುವಿಗೆ ಅಂಗುಷ್ಠಪರಿಮಿತಿಯನ್ನು ಒಪ್ಪಿದರೂ 'ಅಂಗುಷ್ಠಮಾತ್ರಃ' - ಎಂದು ಶ್ರುತಿಯಲ್ಲಿ ಹೇಳಿರುವ ಕೇವಲ ಅಂಗುಷ್ಠಪರಿಮಾಣವು ಯುಕ್ತವಾಗಲಾರದು. 'ಅಂಗುಷ್ಠಮಾತ್ರಃ' ಎಂಬಲ್ಲಿ ಕೇಳಿಬರುವ ಮಾತ್ರಶಬ್ದವು ಪರಿಮಾಣ ಎಂಬ ಅರ್ಥವುಳ್ಳ ಮಾತ್ರಚ್ ಎಂಬ ಪ್ರತ್ಯಯವೇ ಹೊರತು, ಅವಧಾರಣಾರ್ಥಕವಾದ ಮಾತ್ರ ಎಂಬ ಶಬ್ದವಲ್ಲ. ಏಕೆಂದರೆ, 'ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ' ಎಂಬ ಸ್ಮೃತಿಯಲ್ಲಿ 'ಮಿತಃ' ಎಂಬ ಪದದಿಂದ ಪರಿಮಾಣವನ್ನು ಮಾತ್ರ ಹೇಳಿದೆ ಹೊರತು, ಅಂಗುಷ್ಠಮಾತ್ರಪರಿಮಾಣ ಎಂದು ಹೇಳಲಿಲ್ಲ. ಆದ್ದರಿಂದ ಯಾವ ಅನುಪಪತ್ತಿಯೂ ಇಲ್ಲ - ಎಂದೂ ಹೇಳಲಾಗದು.

ಏಕೆಂದರೆ, ಹಾಗಿದ್ದ ಪಕ್ಷದಲ್ಲಿ ಅಂಗುಷ್ಠಮಾತ್ರತ್ವವನ್ನು ಹೇಳುವ 'ಅಂಗುಷ್ಠಮಾತ್ರಃ' ಎಂಬ ಕಠಶ್ರುತಿಯಲ್ಲಿ ; 'ಮಧ್ಯೇ ಆತ್ಮನಿ' ಎಂದು ಹೇಳಿರುವುದು ಹಾಗೂ 'ಜೀವಾಂಗುಷ್ಠಮಿತೋ ಹೃದಿ' ಎಂಬ ಸ್ಮೃತಿಯಲ್ಲಿ 'ಹೃದಿ' ಎಂಬ ಶಬ್ದವು ವ್ಯರ್ಥವಾದೀತು. ಏಕೆಂದರೆ ಕೇವಲ ಅಂಗುಷ್ಠಪರಿಮಿತಿ ಇರುವುದೆಂದು ಹೇಳುವುದಕ್ಕಾಗಿಯೇ ಹೃದಯವೆಂಬ ಸೂಕ್ಷ್ಮಸ್ಥಾನವನ್ನು ಶ್ರುತಿಸ್ಮೃತಿಗಳಲ್ಲಿ ಹೇಳಲಾಗಿದೆ. ಆದ್ದರಿಂದ 'ಅಂಗುಷ್ಠಮಾತ್ರಃ' ಎಂಬಲ್ಲಿರುವ ಮಾತ್ರಶಬ್ದವು ಅವಧಾರಣಾರ್ಥಕವೇ ಎಂದು ಒಪ್ಪಬೇಕಾಗಿದೆ. ಚಂದ್ರಿಕಾದಲ್ಲೂ ಹೀಗೆಯೇ ಹೇಳಲಾಗಿದೆ – 'ಮಾತ್ರಶಬ್ದಸ್ಯ ಅವ-

ಧಾರಣಾರ್ಥಕತ್ವಾತ್' 'ಇಲ್ಲಿ ಮಾತ್ರಶಬ್ದವು ಅವಧಾರಣಾರ್ಥಕವಾಗಿರುವುದರಿಂದ' - ಎಂದು.

ತಥಾ ಚ – ಸರ್ವಗತನಾದ ಹರಿಯಲ್ಲಿ ಅಂಗುಷ್ಠಮಾತ್ರ ಪರಿಮಾಣವನ್ನು ಹೇಳಿರುವುದು ಅನುಪಪನ್ನವಾಗುವ ಕಾರಣ ಇಲ್ಲಿ ಈಶಾನನು ವಿಷ್ಣುವಲ್ಲ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸಮಾಡಿ, ಅದರ ಪದಗಳನ್ನು ''ಹೃದಿ'' ಎಂದು ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ –**

**॥ ಓಂ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಓಂ ॥ ೨೫**

ಹೃದಯದಲ್ಲಿರುವ ಅವಕಾಶದ ದೃಷ್ಟಿಯಿಂದಲೇ ಅಂಗುಷ್ಠಮಾತ್ರ-ಪರಿಮಾಣವನ್ನು ಹೇಳಲಾಗಿದೆ. ಏಕೆಂದರೆ, ವೇದವಿದ್ಯೆಯ ಉಪಾ-ಸನೆಯಲ್ಲಿ ಮನುಷ್ಯರಿಗೆ ಮಾತ್ರ ಅಧಿಕಾರವಿರುವುದು.

**ಭಾಷ್ಯಮ್ – ಸರ್ವಗತಸ್ಯಾಪಿ ತಸ್ಯಾಂಗುಷ್ಠಮಾತ್ರತ್ವಂ ಹೃದ್ಯವ-ಕಾಶಾಪೇಕ್ಷಯಾ ಯುಜ್ಯತೇ ।**

ಸರ್ವವ್ಯಾಪ್ತನಾಗಿದ್ದರೂ ಆ ವಿಷ್ಣುವಿಗೆ ಅಂಗುಷ್ಠಮಾತ್ರಪರಿಮಾಣ-ವಿರುವುದು ಹೃದಯದಲ್ಲಿರುವ ಅವಕಾಶದ ದೃಷ್ಟಿಯಿಂದ ಯುಕ್ತ-ವಾಗಿದೆ.

ಭಾ.ದೀ. – 'ಸರ್ವಗತಸ್ಯಾಪಿ' ಇತ್ಯನೇನ ತುಶಬ್ದೋ ಯದ್ಯಪಿತಥಾಪೀ-ತ್ಯರ್ಥತಯಾ ವ್ಯಾಖ್ಯಾತಃ । 'ಹೃದ್ಯಪೇಕ್ಷಯಾ' ಇತ್ಯನೇನ ಸೂಚಿತಹೇತೋರನ್ವಯ-ಯೋಗ್ಯಂ ಸಾಧ್ಯಂ ದರ್ಶಯತಿ – ತಸ್ಯೇತಿ ॥

ಯೋಜನಾ ತು – ಯದ್ಯಪಿ ವಿಷ್ಣುಃ ಸರ್ವಗತಃ ತಥಾಪಿ 'ತಸ್ಯಾಂಗುಷ್ಠ-ಮಾತ್ರತ್ವಮ್' ಅಂಗುಷ್ಠಮಾತ್ರತ್ವೋಕ್ತಿರ್ಯುಜ್ಯತೇ । ಕಥಮ್? ಯತೋ 'ಹೃದ್ಯ-

ವಕಾಶಾಪೇಕ್ಷಯಾ' ಹೃದಿ ವಿದ್ಯಮಾನೋ ಯೋಽಯಮವಕಾಶೋಽಂಗುಷ್ಠ-ಪರಿಮಿತದೇಶಃ ತದಪೇಕ್ಷಯಾ ತತ್ರ ಅಭಿವ್ಯಕ್ತತಾವತ್ಪರಿಮಿತಭಗವನ್ಮೂರ್ತಿ-ವಿಶೇಷಮಪೇಕ್ಷ್ಯ ತಸ್ಯ ವಿಷ್ಣೋಃ ಅಂಗುಷ್ಠಮಾತ್ರತ್ವಮ್ ಅಸ್ತಿ, ಅತ ಇತಿ ॥

ಯದ್ವಾ – 'ಹೃದ್ಯವಕಾಶಾಪೇಕ್ಷಯಾ' ಹೃದಿ ವಿದ್ಯಮಾನಾಕಾಶಮಪೇಕ್ಷ್ಯ ತತ್ಸಂಬಂಧಾತ್ ತಸ್ಯ ಅಂಗುಷ್ಠಮಾತ್ರತ್ವವಚನಂ ಯುಜ್ಯತೇ - ಇತ್ಯಾವೃತ್ತಿಂ ವಿನಾ ಯೋಜನಾ ।

ಪ್ರಥಮಪಕ್ಷೇ ಶಕ್ತ್ಯಾಽಪರಿಮಿತೇಽಪಿ ಭಗವತಿ ಮೂರ್ತಿವಿಶೇಷೇ ವ್ಯಕ್ತ್ಯಾತ್ಮನಾ ಅಂಗುಷ್ಠಮಾತ್ರತ್ವಂ ಮುಖ್ಯಮಿತಿ ಭಾವಃ। ದ್ವಿತೀಯಪಕ್ಷೇ ತು ಸ್ಥಾನಹೃದಯಾಕಾಶ-ಗತಸ್ಯಾಂಗುಷ್ಠಮಾತ್ರತ್ವಸ್ಯ ಸ್ಥಾನಿನಿ ಬ್ರಹ್ಮಣಿ ತತ್ಸಂಬಂಧಾದುಪಚಾರೇಣೋಕ್ತಿಃ ಇತಿ ಭಾವಃ । ಅತ್ರ ಟೀಕಾಯಾಂ 'ಹೃದ್ಯವಕಾಶಾಪೇಕ್ಷಯಾ' ಇತಿ ಭಾಷ್ಯಂ ಸಾವಧಾರಣಂ ಕೃತ್ವಾ ಸೌತ್ರತುಶಬ್ದೋಽವಧಾರಣತಯಾ ವ್ಯಾಖ್ಯಾತಃ । ತೇನ ವಿಷ್ಣೋರಂಗುಷ್ಠಮಾತ್ರತ್ವಂ ಹೃದ್ಯಪೇಕ್ಷಯೈವ, ನ ತು ಲೋಕವತ್ ಪರಿಚ್ಛಿನ್ನತ್ವಾತ್ ಇತ್ಯುಕ್ತಂ ಭವತಿ । ತತ್ತತ್ ಸ್ಥಾನೇಷು ವ್ಯಕ್ತಮೂರ್ತಿವಿಶೇಷಾಪೇಕ್ಷಯಾ ವಾ ಉಪಚಾರೇಣ ವಾ ತತ್ತತ್ ಪರಿಮಾಣತ್ವೋಕ್ತ್ಯಾ 'ಯಸ್ತ್ವೇತಮೇವ ಪ್ರಾದೇಶ-ಮಾತ್ರಮ್' (ಛಾಂ.೫.೧೮.೧) ಇತಿ ಛಾಂದೋಗ್ಯೇ 'ಪ್ರಾದೇಶಮಾತ್ರಂ ಪುರುಷಮ್' ಇತ್ಯನ್ಯತ್ರ 'ಪ್ರಾದೇಶಃ ಪುರುಷೋತ್ತಮಃ' ಇತ್ಯಪರತ್ರ ಚ ಹೃದ್ಗತಸ್ಯ ವಿಷ್ಣೋಃ ಪ್ರಾದೇಶಪರಿಮಿತತ್ವೋಕ್ತೇಃ, 'ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ' (ಮಹಾನಾ.೧೬.೩) ಇತಿ ಶ್ರುತ್ಯಂತರೇ 'ಅಂಗುಷ್ಠಮಾತ್ರಃ ಪುರುಷಃ' ಇತಿ ಕಠವಲ್ಲ್ಯಾಂ ಚ 'ಅಂಗುಷ್ಠಮಾತ್ರಃ ಪುರುಷಃ' ಇತ್ಯಪರತ್ರ ಚ ಅಂಗುಷ್ಠಪರಿಮಿತ-ತ್ವೋಕ್ತೇಃ 'ಅಂಗುಷ್ಠಾಗ್ರಪ್ರಮಾಣಕಃ' ಇತಿ ಕ್ವಚಿದಂಗುಷ್ಠಾಗ್ರಪ್ರಮಾಣಕತ್ವೋಕ್ತೇಃ ವಿರೋಧ ಇತಿ ಚೋದ್ಯಂ ಪರಿಹೃತಂ ಭವತಿ।

ದೇಹೇ ಹೃದಯಾಕಾಶೇ ಪ್ರಾದೇಶಪರಿಮಿತಿರೂಪವಿಶೇಷಸ್ಯ ಹೃದಯಗತ-ಕಮಲಕರ್ಣಿಕಾಮೂಲಗತಾಕಾಶೇಽಂಗುಷ್ಠಾಗ್ರಪ್ರಮಾಣಕರೂಪಾಂತರಸ್ಯ

**ಕರ್ಣಿಕಾಗ್ರಗತಾಕಾಶೇ ಚ ಅಂಗುಷ್ಠಪರಿಮಿತರೂಪಾಂತರಸ್ಯ ಚ ವ್ಯಕ್ತಿಸಂಭವಾತ್, ತತ್ತತ್ ಸ್ಥಾನಧರ್ಮಸ್ಯ ಸ್ಥಾನಿನಿ ಉಪಚರಿತತ್ವಸಂಭವಾಚ್ಚ ।**

'ಸರ್ವಗತಸ್ಯಾಪಿ' ಎಂಬ ಪದಗಳಿಂದ ಸೂತ್ರದಲ್ಲಿರುವ ತುಶಬ್ದವು ಯದ್ಯಪಿ, ತಥಾಪಿ ಎಂಬ ಅರ್ಥವುಳ್ಳದ್ದೆಂದು ವ್ಯಾಖ್ಯಾನಿಸಲ್ಪಟ್ಟಿದೆ. 'ಹೃದ್ಯಪೇಕ್ಷಯಾ' ಎಂಬ ಪದದಿಂದ ಸೂಚಿತವಾಗುವ ಹೇತುವಿನ ಅನ್ವಯವನ್ನು ಹೊಂದಲು ಯೋಗ್ಯವಾದ ಸಾಧ್ಯವನ್ನು ''ತಸ್ಯ'' ಎಂಬ ಪದದಿಂದ ಸೂಚಿಸುತ್ತಿದ್ದಾರೆ.

ಭಾಷ್ಯಪದಗಳ ಯೋಜನೆಯಾದರೋ ಹೀಗಿರುವುದು –(೧) ''ಯದ್ಯಪಿ ವಿಷ್ಣು ಸರ್ವಗತನಾಗಿದ್ದಾನೆ. ಆದರೂ 'ತಸ್ಯ ಅಂಗುಷ್ಠಮಾತ್ರತ್ವಮ್' ಅವನಿಗೆ ಅಂಗುಷ್ಠ-ಮಾತ್ರಪರಿಮಾಣವನ್ನು ಹೇಳಿರುವುದು ಯುಕ್ತವಾಗಿದೆ. ಹೇಗೆ? ಏಕೆಂದರೆ, 'ಹೃದ್ಯವಕಾಶಾಪೇಕ್ಷಯಾ' ಹೃದಿ - ಹೃದಯದಲ್ಲಿ ಇರುವ ಯಾವ ಅವಕಾಶ ಅಂದರೆ ಅಂಗುಷ್ಠಪರಿಮಿತವಾದ ದೇಶವಿದೆಯೋ ಅದರ ದೃಷ್ಟಿಯಿಂದ ಅಲ್ಲಿ ಅಭಿವ್ಯಕ್ತವಾಗುವ ಅಷ್ಟೇ ಪರಿಮಿತಿಯುಳ್ಳ ಭಗವಂತನ ಮೂರ್ತಿವಿಶೇಷದ ದೃಷ್ಟಿಯಿಂದ ಆ ವಿಷ್ಣುವಿಗೆ ಅಂಗುಷ್ಠಮಾತ್ರತ್ವವು ಇರುವುದು – ಎಂದು.

ಅಥವಾ – (೨) 'ಹೃದ್ಯವಕಾಶಾಪೇಕ್ಷಯಾ' - ಹೃದಿ - ಹೃದಯದಲ್ಲಿರುವ, ಅವಕಾಶವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು, ಅದರ ಸಂಬಂಧವಿರುವ ಕಾರಣ ಅವನಿಗೆ (ವಿಷ್ಣುವಿಗೆ) ಅಂಗುಷ್ಠಮಾತ್ರತ್ವವನ್ನು ಹೇಳಿರುವುದು ಯುಕ್ತವಾಗಿದೆ - ಎಂದು ಪದಗಳ ಆವೃತ್ತಿಯಿಲ್ಲದೇ ಯೋಜನೆಯನ್ನು ಮಾಡಬಹುದು.

ಪ್ರಥಮಪಕ್ಷದಲ್ಲಿ (ಯೋಜನೆಯಲ್ಲಿ) ಶಕ್ತಿರೂಪದಿಂದ ಅಪರಿಮಿತವಾಗಿದ್ದರೂ ಭಗವಂತನ ಮೂರ್ತಿವಿಶೇಷದಲ್ಲಿ ಅಭಿವ್ಯಕ್ತಿಯ ರೂಪದಿಂದ ಅಂಗುಷ್ಠಮಾತ್ರತ್ವವು ಮುಖ್ಯವಾಗಿರುವುದು ಎಂದು ಭಾವ.

ದ್ವಿತೀಯಪಕ್ಷದಲ್ಲಾದರೋ ಭಗವಂತನ ಸ್ಥಾನವಾಗಿರುವ ಹೃದಯಾಕಾಶದಲ್ಲಿರುವ ಅಂಗುಷ್ಠಮಾತ್ರತ್ವವನ್ನು ಆ ಸ್ಥಾನದಲ್ಲಿರುವ ಬ್ರಹ್ಮನಿಗೆ ಅದರ ಸಂಬಂಧವಿರುವ ಕಾರಣ ಉಪಚಾರದಿಂದ ಹೇಳಲಾಗಿದೆ ಎಂದು ಎರಡೂ ಪಕ್ಷಗಳಲ್ಲಿ ಭೇದವಿದೆ.

ಇಲ್ಲಿ ಟೀಕೆಯಲ್ಲಿ 'ಹೃದ್ಯವಕಾಶಾಪೇಕ್ಷಯಾ' ಎಂಬಭಾಷ್ಯ ವಾಕ್ಯವನ್ನು ಅವಧಾರಣ ಸಹಿತವಾದದ್ದೆಂದು ಮಾಡಿಕೊಂಡು, ಸೂತ್ರದಲ್ಲಿರುವ ತುಶಬ್ದವು ಅವಧಾರಣಾ-ರ್ಥಕವೆಂದು ವ್ಯಾಖ್ಯಾನಮಾಡಲಾಗಿದೆ. ಆದರಿಂದ ವಿಷ್ಣುವಿಗೆ ಅಂಗುಷ್ಠಮಾತ್ರತ್ವವು ಹೃದಯದಲ್ಲಿರುವ ಅವಕಾಶದ ದೃಷ್ಟಿಯಿಂದಲೇ ಹೊರತು ಲೋಕದಂತೆ ಪರಿ-ಮಿತವಾದ ಪರಿಮಾಣವಿರುವ ಕಾರಣದಿಂದಲ್ಲ ಎಂದು ಹೇಳಿದಂತಾಗುವುದು. ಏಕೆಂದರೆ, ಆಯಾಯ ಸ್ಥಾನಗಳಲ್ಲಿ ಅಭಿವ್ಯಕ್ತವಾಗುವ ಮೂರ್ತಿವಿಶೇಷದ ದೃಷ್ಟಿಯಿಂದ ಅಥವಾ ಔಪಚಾರಿಕವಾಗಿ ಆಯಾಯ ಸ್ಥಾನದ ಪರಿಮಾಣವುಳ್ಳವನೆಂದು ಹೇಳು-ವುದರಿಂದ, 'ಯಸ್ತ್ವೇತಮೇವ ಪ್ರಾದೇಶಮಾತ್ರಮ್' ಎಂದು ಛಾಂದೋಗ್ಯದಲ್ಲಿ, 'ಪ್ರಾದೇಶಮಾತ್ರಂ ಪುರುಷಮ್' ಎಂದು ಬೇರೆಡೆಯಲ್ಲಿ, 'ಪ್ರಾದೇಶಃ ಪುರುಷೋ-ತ್ತಮಃ' ಎಂದು ಮತ್ತೊಂದೆಡೆಯಲ್ಲೂ ಕೂಡ ಹೃದ್ಗತನಾದ ವಿಷ್ಣುವಿಗೆ ಪ್ರಾದೇಶಪರಿ-ಮಿತಿಯನ್ನು ಹೇಳಿರುವುದರಿಂದ, 'ಅಂಗುಷ್ಠಮಾತ್ರಃ ಪುರುಷಃ ಅಂಗುಷ್ಠಂ ಚ ಸಮಾಶ್ರಿತಃ' ಎಂದು ಇನ್ನೊಂದು ಶ್ರುತಿಯಲ್ಲಿ ಹಾಗೂ 'ಅಂಗುಷ್ಠಮಾತ್ರಃ ಪುರುಷಃ' ಎಂದು ಕಠವಲ್ಲಿಯಲ್ಲಿ 'ಅಂಗುಷ್ಠಮಾತ್ರಃ ಪುರುಷಃ' ಎಂದು ಮತ್ತೊಂದು ಸ್ಥಳದಲ್ಲಿ ಅಂಗುಷ್ಠಪರಿಮಿತತ್ವವನ್ನು ಹೇಳಿರುವುದರಿಂದ; 'ಅಂಗುಷ್ಠಾಗ್ರಪ್ರಮಾಣಕಃ' ಎಂದು ಕೆಲವೆಡೆಯಲ್ಲಿ ಅಂಗುಷ್ಠಾಗ್ರಪ್ರಮಾಣವುಳ್ಳವನೆಂದು ಹೇಳಿರುವುದಕ್ಕೆ ವಿರೋಧವಿದೆ ಎಂಬ ಆಕ್ಷೇಪವು ಪರಿಹೃತವಾಗುವುದು. ಏಕೆಂದರೆ ದೇಹದಲ್ಲಿ ಹೃದಯಾಕಾಶದಲ್ಲಿ ಪ್ರಾದೇಶಪರಿಮಿತಿಯುಳ್ಳ ರೂಪವಿಶೇಷಕ್ಕೆ ಅಭಿವ್ಯಕ್ತಿಯಿರುವುದು , ಹೃದಯದಲ್ಲಿರುವ ಕಮಲದ ಮೊಗ್ಗಿನ ಮೂಲದಲ್ಲಿರುವ ಆಕಾಶದಲ್ಲಿ ಅಂಗುಷ್ಠಾಗ್ರಪ್ರಮಾಣವಿರುವ ಮತ್ತೊಂದು ರೂಪಾಂತರದ ಅಭಿವ್ಯಕ್ತಿಯು, ಹಾಗೆಯೇ ಆ ಕಮಲಕರ್ಣಿಕೆಯ ಅಗ್ರಭಾಗದಲ್ಲಿರುವ ಆಕಾಶದಲ್ಲಿ ಅಂಗುಷ್ಠಪರಿಮಿತವಾದ ಮತ್ತೊಂದು ರೂಪದ ಅಭಿವ್ಯಕ್ತಿಯಾಗುವುದು ಸಂಭಾವಿತವಾಗಿದೆ. ಆಯಾಯ ಸ್ಥಾನದ ಧರ್ಮವು ಆ ಸ್ಥಾನದಲ್ಲಿರುವವನಲ್ಲಿ ಔಪಚಾರಿಕವಾಗಿ ಇರಲು ಸಾಧ್ಯವಿದೆ.

ಹೃದ್ಯಪೇಕ್ಷಯಾ ಎಂಬ ಸೂತ್ರದಲ್ಲಿ ವಿಷ್ಣುವಿಗೆ ಅಂಗುಷ್ಠಮಾತ್ರ ಪರಿಮಾಣವನ್ನು ಹೇಳಿದೆ. ಛಾಂದೋಗ್ಯದಲ್ಲಿ ಮತ್ತು ಇತರ ಕೆಲವು ಪ್ರಮಾಣವಾಕ್ಯಗಳಲ್ಲಿ ಹೃದ್ಗತನಾದ ವಿಷ್ಣುವಿಗೆ ಪ್ರಾದೇಶಪರಿಮಾಣವನ್ನು ಹೇಳಿದೆ. ಕಠಶ್ರುತಿಯಲ್ಲಿ

ಮತ್ತು ಹೃದಯದಲ್ಲಿರುವ ವಿಷ್ಣುವಿಗೆ ಅಂಗುಷ್ಠಾಗ್ರಪರಿಮಾಣವನ್ನು ಹೇಳಿದೆ. ಹೀಗೆ ಹೃದ್ಗತನಾದ ವಿಷ್ಣುವಿಗೆ ಬೇರೆ ಬೇರೆ ಪರಿಮಾಣವನ್ನು ಹೇಳುವ ವಚನಗಳಿಗೆ ಪರಸ್ಪರವಿರೋಧವಿದೆ ಎಂದು ಶಂಕೆ. ಅದಕ್ಕೆ ಸಮಾಧಾನವನ್ನು ಇಲ್ಲಿ ಹೇಳಲಾಗಿದೆ. ಪರಿಹಾರದ ಕ್ರಮ ಸ್ಪಷ್ಟವಾಗಿದೆ. ದೇಹದ ಹೃದಯಾಕಾಶದಲ್ಲಿ ಭಗವಂತನ ರೂಪವಿಶೇಷವು ಪ್ರಾದೇಶಪರಿಮಾಣವನ್ನು ಪಡೆದಿದೆ. ದೇಹದ ಹೃದಯದಲ್ಲಿರುವ ಕಮಲದ ಕರ್ಣಿಕೆಯ ಮೂಲಭಾಗದಲ್ಲಿರುವ ಆಕಾಶದಲ್ಲಿ ಭಗವಂತನ ಮತ್ತೊಂದು ರೂಪ ಅಂಗುಷ್ಠಾಗ್ರಪರಿಮಾಣವನ್ನು ಪಡೆದಿದೆ. ಅದೇ ಕಮಲಕರ್ಣಿಕೆಯ ಮೇಲ್ಭಾಗದಲ್ಲಿರುವ ಆಕಾಶದಲ್ಲಿ ಭಗವಂತನ ಮತ್ತೊಂದು ರೂಪವು ಜೀವನ ಅಂಗುಷ್ಠಪರಿಮಾಣವನ್ನು ಪಡೆದಿದೆ. ಹೀಗೆ ಬೇರೆ ಬೇರೆ ಸ್ಥಾನಗಳಲ್ಲಿ ಅಭಿವ್ಯಕ್ತವಾಗುವ ಭಗವದ್ರೂಪಗಳಿಗೆ ಬೇರೆ ಬೇರೆ ಪರಿಮಾಣ-ಗಳನ್ನು ಈ ಪ್ರಮಾಣಗಳು ಹೇಳುವ ಕಾರಣ ಒಂದೇ ರೂಪಕ್ಕೆ ವಿಭಿನ್ನ ಪರಿಮಾಣಗಳನ್ನು ಹೇಳದಿರುವ ಕಾರಣದಿಂದ ಪರಸ್ಪರವಿರೋಧವಿಲ್ಲ ಎಂದು ಭಾವ.

ಅಥವಾ ಬೇರೆ ಬೇರೆ ಸ್ಥಾನಗಳಲ್ಲಿ ಅಭಿವ್ಯಕ್ತಿಗೊಳ್ಳುವ ಭಗವದ್ರೂಪಗಳಿಗೆ ಆ ಸ್ಥಾನದ ಧರ್ಮವಾದ ಪರಿಮಾಣಗಳನ್ನು ಔಪಚಾರಿಕವಾಗಿ ಹೇಳಲಾಗಿದೆ-ಯಾದ್ದರಿಂದಲೂ ವಿರೋಧವಿಲ್ಲವೆಂದು ಅಭಿಪ್ರಾಯ. ಭಾಷ್ಯದೀಪಿಕೆಯಲ್ಲಿ ಬೃಹದಾರಣ್ಯಕಭಾಷ್ಯದ ವಾಕ್ಯಗಳನ್ನು ಉದಾಹರಿಸಿ ಈ ಅಂಶವನ್ನು ಸ್ಪಷ್ಟಪಡಿಸ-ಲಾಗಿದೆ.

ಭಾ. ದೀ. – ಯಥೋಕ್ತಂ ಬೃಹದಾರಣ್ಯಕಭಾಷ್ಯೇ –

'ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।
ಜೀವಾನಾಂ ಸ್ಥಾನಮುದಿಷ್ಟಃ ಸರ್ವದೈವ ಸನಾತನಃ ॥

ಹೃತ್ಕರ್ಣಿಕಾಮೂಲಗತಃ ಸೋಽಂಗುಷ್ಠಾಗ್ರಪ್ರಮಾಣಕಃ ।
ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥

ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ ।
ಪ್ರವಿಶಂತಿ ಸುಷುಪ್ತೌ ತು ಪ್ರಬುದ್ಧ್ಯಂತೇ ತತಸ್ತಥಾ ॥' – ಇತಿ ।

ಅಸ್ಮಿನ್ ಮೂಲೇಶವ್ಯಾಪಿನೋರ್ಮಧ್ಯೇಽಂಗುಷ್ಠಮಾತ್ರತ್ವಂ ಚ ದೇಹೇ ದೇಹಾಂಗುಷ್ಠಮಿತತ್ವಂ ಜೀವಹೃದಿ ಜೀವಾಂಗುಷ್ಠಮಿತತ್ವಮ್ ಇತಿ ವಿವೇಕ್ತವ್ಯಮ್ । ಅತ್ರ 'ಅಂಗುಷ್ಠಂ ಚ ಸಮಾಶ್ರಿತಃ' ಇತ್ಯನೇನ ಕರ್ಮೇಂದ್ರಿಯಾಧಿಷ್ಠಿತತ್ವಮುಚ್ಯತ ಇತಿ ಪ್ರಮೇಯದೀಪೋಕ್ತಮಪಿ ಜ್ಞಾತವ್ಯಮ್ ।

ಬೃಹದಾರಣ್ಯಕಭಾಷ್ಯದಲ್ಲಿ ಹೀಗೆ ಹೇಳಲಾಗಿದೆ –

ಹೃದಯದಲ್ಲಿ ಪೂರ್ಣವಾಗಿ ವ್ಯಾಪಿಸಿರುವ ಪ್ರಾದೇಶನಾಮಕನಾದ ಸಮಸ್ತ-ದೇವತೆಗಳಿಗೆ ಆಶ್ರಯನಾದ ಪುರುಷೋತ್ತಮನು ಜೀವರಿಗೆ ಆಶ್ರಯಸ್ಥಾನವೆಂದೆ-ನಿಸಿದ್ದಾನೆ. ಹೃದಯಕಮಲಕರ್ಣಿಕೆಯ ಮೂಲದಲ್ಲಿರುವ ಆ ಪುರುಷೋತ್ತಮನು ಆ ಜೀವನ ಅಂಗುಷ್ಠಾಗ್ರಪರಿಮಾಣವನ್ನು ಹೊಂದಿರುವ ಇವನು ಮೂಲೇಶ ನಾಮಕ-ನಾಗಿದ್ದಾನೆ. ಎಲ್ಲ ಜೀವರು ಇವನನ್ನು ಆಶ್ರಯಿಸಿದ್ದಾರೆ. ಕರ್ಣಿಕೆಯ ಅಗ್ರಭಾಗದಲ್ಲಿ-ರುವ ಅಂಗುಷ್ಠಪರಿಮಾಣವುಳ್ಳ ಪುರುಷನಾಮಕನಾದ ಶ್ರೀಹರಿಯಲ್ಲಿ ಎಲ್ಲ ಜೀವರೂ ಸುಷುಪ್ತಿಕಾಲದಲ್ಲಿ ಪ್ರವೇಶಿಸುತ್ತಾರೆ. ಅನಂತರ ಅಲ್ಲಿಂದ ಎಚ್ಚರಗೊಳ್ಳುತ್ತಾರೆ – ಎಂದು.

ಇಲ್ಲಿ ಮೂಲೇಶ ಮತ್ತು ಹೃದಯವ್ಯಾಪಿಯಾದ ಪ್ರಾದೇಶ ಇವರಿಗೆ ಅಂಗುಷ್ಠ-ಪರಿಮಾಣವೆಂದರೆ ದೇಹದಲ್ಲಿ ಆ ದೇಹದ ಅಂಗುಷ್ಠಪರಿಮಾಣವನ್ನು ಪಡೆದಿರುವಿಕೆ, ಜೀವಸ್ವರೂಪದ ಹೃದಯದಲ್ಲಿ ಆ ಜೀವನ ಅಂಗುಷ್ಠ ಪರಿಮಿತಿಯನ್ನು ಪಡೆದಿರುವುದು ಎಂಬುದಾಗಿ ವಿವೇಚನೆಯಿಂದ ತಿಳಿಯಬೇಕು. ಇಲ್ಲಿ 'ಅಂಗುಷ್ಠಂ ಚ ಸಮಾಶ್ರಿತಃ' - 'ಅಂಗುಷ್ಠವನ್ನು ಆಶ್ರಯಿಸಿದ್ದಾನೆ' ಎಂಬ ವಾಕ್ಯದಿಂದ ಪರಮಾತ್ಮನು ಕರ್ಮೇಂದ್ರಿಯ-ದಲ್ಲಿ ಅಧಿಷ್ಠಿತವಾಗಿರುವಿಕೆಯನ್ನು ಹೇಳಲಾಗಿದೆ ಎಂದು ಪ್ರಮೇಯದೀಪದಲ್ಲಿ ಹೇಳಿರುವುದನ್ನು ತಿಳಿಯಬೇಕು.

ಭಾ.ದೀ. – ನನು 'ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೇಜಸಃ' ಇತ್ಯಾದಿವಚನಾತ್ ಜಾಗ್ರದಾದ್ಯವಸ್ಥಾಪ್ರೇರಕವಿಶ್ವತೈಜಸಪ್ರಾಜ್ಞಾನಾಂ ದಕ್ಷಿಣಾ-ಕ್ಷ್ಯಾದಿಷು ಸತ್ತ್ವಂ ತಾವತ್ ಸಿದ್ಧಮ್ । ಯದಿ ಚೈವಂ ತದಾ ಜೀವೋಽಪಿ ಜಾಗ್ರದವಸ್ಥಾಯಾಂ ದಕ್ಷಿಣಾಕ್ಷಿಸ್ಥಃ ಸ್ವಪ್ನೇ ಕಂಠದೇಶಸ್ಥಃ ಸುಪ್ತೌ ತು ಹೃದಯಸ್ಥೋ

ಭವತಿ, 'ಹೃದಯಸ್ಥಾತ್ ಪರಾಜ್ಜೀವೋ ದೂರಸ್ಥೋ ಜಾಗ್ರದೇಕ್ಷತಿ' ಇತ್ಯುಕ್ತೇಃ । ದೂರಸ್ಥೋಽಕ್ಷಿಸ್ಥೋ ಜಾಗ್ರಜ್ಜಾಗ್ರತ್ವಮ್ ಇತಿ ತಸ್ಯಾರ್ಥಃ । ತಥಾ ಚ – ಕಥಂ ಹೃದಯವ್ಯಾಪ್ತಪ್ರಾದೇಶಪರಿಮಿತಭಗವದ್ರೂಪಸ್ಯ ಸರ್ವದಾ ಜೀವಸ್ಥಾನತ್ವಮ್? ಕಥಂ ಚ ಹೃತ್ಕರ್ಣಿಕಾಮೂಲಗತಭಗವದ್ರೂಪೇ ಸದಾ ಪ್ರತಿಷ್ಠಿತೋ ಜೀವಃ? ಸುಪ್ತೌ ಹೃತ್ಕರ್ಣಿಕಾಗ್ರಗತೇ ಹರೌ ಪ್ರವಿಶತಿ - ಇತ್ಯುಕ್ತಿರಿತಿ ಚೇತ್ । ನ –

ಯತಃ ಸರ್ವದಾ ಹೃದಿ ಸ್ಥಿತಮೇವ ಜೀವಸ್ವರೂಪಂ ಜಾಗರಿತಾದೌ ಅಕ್ಷ್ಯಾದಿಷ್ವಪಿ ವಿಶೇಷಸನ್ನಿಹಿತಂ ದೀಪಪ್ರಕಾಶವತ್ ಇತ್ಯಂಗೀಕೃತಮ್ । ಯಥೋ-ಕ್ತಮೈತರೇಯಭಾಷ್ಯೇ – ಹೃದಿಸ್ಥಿತಮೇವ ತಸ್ಯ ರೂಪಂ ಜಾಗರಿತೇಽಪಿ ಅಕ್ಷ್ಯಾದಿಷು ವಿಶೇಷಸನ್ನಿಹಿತಂ ಭವತಿ - ಇತಿ । ಏಕಸ್ಯೈವ ಜೀವಸ್ಯ ಸ್ಥಾಪನಧೃತ್ಯಾಖ್ಯಪ್ರತಿ-ಷ್ಠಾಪನಸುಪ್ತಿಪ್ರಾಪಣಾಖ್ಯಪ್ರಯೋಜನಭೇದಾದೇಕದೇಹೇಽನೇಕಧಾ ಸ್ಥಿತಾನಾಂ ಭಗವನ್ಮೂರ್ತೀನಾಂ ಶಕ್ತ್ಯಾ ಸರ್ವಗಾನಾಮಪಿ ತತ್ರ ವ್ಯಕ್ತಾತ್ಮನಾಽನೇಕಾಲ್ಪ-ಪರಿಮಾಣವತ್ತ್ವಂ ಚ ಯಜ್ಯತ ಇತಿ ನ ಕಾಚಿದನುಪಪತ್ತಿಃ ॥

ಶಂಕೆ – 'ದಕ್ಷಿಣಾಕ್ಷಿಮುಖೇ ವಿಶ್ವಃ ಮನಸ್ಯಂತಸ್ತು ತೈಜಸಃ' - 'ಬಲಭಾಗದ ಕಣ್ಣಿನ ಅಗ್ರಭಾಗದಲ್ಲಿ ವಿಶ್ವನಾಮಕ ಭಗವಂತನು, ಮನಸ್ಸಿನೊಳಗೆ ತೈಜಸನಾಮಕ-ಪರಮಾತ್ಮನು ಇರುವನು' ಇತ್ಯಾದಿ ಪ್ರಮಾಣವಚನಗಳಿಂದ ಜಾಗ್ರದವಸ್ಥೆ ಮೊದಲಾದ ಅವಸ್ಥೆಗಳಿಗೆ ಪ್ರೇರಕರಾದ ವಿಶ್ವ, ತೈಜಸ, ಪ್ರಾಜ್ಞ ಎಂಬ ಭಗವದ್ರೂಪಗಳು ದಕ್ಷಿಣಾಕ್ಷಿ ಮೊದಲಾದವುಗಳಲ್ಲಿ ಇರುವುದೆನ್ನುವುದು ಈಗಾಗಲೇ ಸಿದ್ಧವಾದ ವಿಷಯವಾಗಿದೆ. ಹೀಗಿರುವಾಗ ಜೀವನೂ ಕೂಡ ಜಾಗ್ರದವಸ್ಥೆಯಲ್ಲಿ ದಕ್ಷಿಣಾಕ್ಷಿಯಲ್ಲೂ, ಸ್ವಪ್ನದಲ್ಲಿ ಕಂಠದೇಶದಲ್ಲಿ, ಸುಪ್ತಿಯಲ್ಲಿ ಹೃದಯದಲ್ಲಿ ಇರುವನೆಂದು ಸಿದ್ಧವಾಗುವುದು. ಇದನ್ನು 'ಹೃದಯಸ್ಥಾತ್ ಪರಾಜ್ಜೀವೋ ದೂರಸ್ಥೋ ಜಾಗ್ರದೇಕ್ಷತಿ' ಎಂದು ಹೇಳಲಾಗಿದೆ. 'ದೂರಸ್ಥಃ' ಅಂದರೆ ಅಕ್ಷಿಯಲ್ಲಿರುವ ಜೀವನು ಜಾಗ್ರತ್ ಅಂದರೆ ಜಾಗ್ರದವಸ್ಥೆಯನ್ನು ಹೊಂದುವನು ಎಂದು ಇದರ ಅರ್ಥ. ತಥಾ ಚ – ಹೃದಯವ್ಯಾಪ್ತನಾದ ಪ್ರಾದೇಶ-ಪರಿಮಾಣವುಳ್ಳ ಭಗವದ್ರೂಪವು ಎಲ್ಲ ಕಾಲದಲ್ಲೂ ಜೀವನ ಸ್ಥಾನವಾಗಿದೆ ಎಂದು ಹೇಳುವುದು ಹೇಗೆ? ಹಾಗೆಯೇ ಹೃತ್ಕರ್ಣಿಕಾ ಮೂಲದಲ್ಲಿರುವ ಭಗವದ್ರೂಪದಲ್ಲಿ

ಜೀವನು ಸರ್ವದಾ ಆಶ್ರಿತನಾಗಿರುವುದು ಹೇಗೆ? ಏಕೆಂದರೆ, ಜೀವನು ಸುಷುಪ್ತಿಯಲ್ಲಿ ಹೃತ್ಕರ್ಣಿಕೆಯ ಅಗ್ರಭಾಗದಲ್ಲಿರುವ ಹರಿಯನ್ನು ಪ್ರವೇಶಿಸುತ್ತಾನೆ ಎಂದು ಹೇಳಲಾಗಿದೆ.

ಸಮಾಧಾನ – ಈ ಆಶಂಕೆ ಸರಿಯಲ್ಲ; ಏಕೆಂದರೆ, ಸರ್ವಕಾಲದಲ್ಲೂ ಹೃದಯದಲ್ಲಿ ಇರುವ ಜೀವಸ್ವರೂಪವು ಜಾಗ್ರದವಸ್ಥೆ ಮೊದಲಾದ ಕಾಲದಲ್ಲಿ ಅಕ್ಷಿ ಮೊದಲಾದ ಸ್ಥಾನಗಳಲ್ಲಿ ದೀಪದ ಪ್ರಕಾಶದಂತೆ ವಿಶೇಷವಾಗಿ ಸನ್ನಿಹಿತವಾಗಿರುವುದು ಎಂದು ಅಂಗೀಕರಿಸಲಾಗಿದೆ. ಐತರೇಯಭಾಷ್ಯದಲ್ಲಿ ಹೀಗೆ ಹೇಳಿದೆ – 'ಹೃದಿಸ್ಥಿತಮೇವ ತಸ್ಯ ರೂಪಂ ಜಾಗರಿತೇಽಪಿ ಅಕ್ಷ್ಯಾದಿಷು ವಿಶೇಷಸನ್ನಿಹಿತಂ ಭವತಿ' - 'ಹೃದಯದಲ್ಲೇ ಇರುವ ಆ ಜೀವನ ಸ್ವರೂಪವು ಜಾಗ್ರದವಸ್ಥೆ ಮೊದಲಾದವುಗಳಲ್ಲಿ ಅಕ್ಷಿ ಮೊದಲಾದ ಸ್ಥಾನಗಳಲ್ಲಿ ವಿಶೇಷವಾಗಿ ಸನ್ನಿಹಿತವಾಗುವುದು' ಎಂದು.

ಒಬ್ಬ ಜೀವನ ಪ್ರತಿಷ್ಠಾಪನ ಅಂದರೆ ಅವನ ಸ್ಥಾಪನ ಧೃತಿ(ಧಾರಣೆ) ಮೊದಲಾದವುಗಳನ್ನು ಮಾಡುವುದು, ಸುಷುಪ್ತಿಯಲ್ಲಿ ಆ ಜೀವನು ತನ್ನನ್ನು ಹೊಂದುವಂತೆ ಮಾಡುವುದು ಮೊದಲಾದ ಬೇರೆ ಬೇರೆ ಪ್ರಯೋಜನಗಳಿಗಾಗಿ ಒಂದು ದೇಹದಲ್ಲಿ ಅನೇಕರೀತಿಯಿಂದ ಇರುವ ಭಗವನ್ಮೂರ್ತಿಗಳು ಶಕ್ತಿ ರೂಪದಿಂದ ಸರ್ವಗತವಾಗಿದ್ದರೂ ಅಲ್ಲಲ್ಲಿ ಅಭಿವ್ಯಕ್ತಿಯನ್ನು ಹೊಂದುವ ರೂಪದಿಂದ ಅನೇಕ ಅಲ್ಪಪರಿಮಾಣಗಳನ್ನು ಹೊಂದಿರುವುದು ಯುಕ್ತವೇ ಆಗಿರುವುದರಿಂದ ಯಾವ ಅನುಪಪತ್ತಿಯೂ ಇಲ್ಲ.

ಭಾ.ದೀ. – ನನು ತಥಾಽಪಿ ನಾಂಗುಷ್ಠಪರಿಮಾಣವತ್ತ್ವಂ ವಿಷ್ಣೋರ್ಯುಕ್ತಮ್ । ತಥಾಹಿ – ಕಿಂ ತತ್ತದಂಗುಷ್ಠಮಾತ್ರತ್ವಂ ವಾ ಯತ್ಕಿಂಚಿದಂಗುಷ್ಠಮಾತ್ರತ್ವಂ ವಾ । ನಾಽದ್ಯಃ ಪಶ್ವಾದೀನಾಮಂಗುಷ್ಠಾಭಾವೇನ ತದಂತರ್ಗತಸ್ಯ ವಿಷ್ಣೋರಂಗುಷ್ಠಪರಿಮಿತತ್ವಾಯೋಗಾತ್ । ನ ದ್ವಿತೀಯಃ । ಅಂಗುಷ್ಠಮಾತ್ರತ್ವೋಕ್ತೇಸ್ತೈಸ್ತಥೋಪಾಸನಾರ್ಥತ್ವೇನ ತಸ್ಯ ಚಾಂಗುಷ್ಠವ್ಯಕ್ತಿವಿಶೇಷನಿರ್ಧಾರಣಂ ವಿನಾಽಯೋಗೇನ ಯತ್ಕಿಂಚಿದಂಗುಷ್ಠಮಾತ್ರತ್ವೋಕ್ತೇರ್ವ್ಯರ್ಥತ್ವಾತ್ । ಪಿಪೀಲಿಕಾದಿಹೃದಯಸ್ಥೇಽಂಗುಷ್ಠಮಾತ್ರತ್ವಸಾಮಾನ್ಯಸ್ಯಾಪಿ ಅಸಂಭವಾಚ್ಚ ಇತ್ಯಾಶಂಕಾಂ

ಪರಿಹರನ್ 'ಮನುಷ್ಯಾಧಿಕಾರತ್ವಾತ್' ಇತಿ ಸೂತ್ರಶೇಷಂ ತುಶಬ್ದಸ್ಯ ಕಾಕಾಕ್ಷಿ-ನ್ಯಾಯೇನಾತ್ರಾಪ್ಯನ್ವಯಂ ತಸ್ಯಾಪ್ಯರ್ಥತ್ವಂ ಚಾಭಿಪ್ರೇತ್ಯ ತತ್ಸಂಬಂಧಿಪ್ರದರ್ಶನ-ಪೂರ್ವಕಂ ವ್ಯಾಚಷ್ಟೇ – ಇತರೇತಿ ॥

ಶಂಕೆ – ಆದರೂ ವಿಷ್ಣುವಿಗೆ ಅಂಗುಷ್ಠಪರಿಮಾಣವಿರುವುದು ಯುಕ್ತವಲ್ಲ; ಅದನ್ನು ಹೀಗೆ ವಿವರಿಸಬಹುದು – ಅಂಗುಷ್ಠಪರಿಮಾಣವೆಂದರೆ ಆಯಾಯ ಜೀವದೇಹದ ಅಂಗುಷ್ಠಪರಿಮಾಣವನ್ನು ಹೊಂದಿರುವುದೋ? ಅಥವಾ ಯಾವುದೋ ಒಂದು ಅಂಗುಷ್ಠದ ಪರಿಮಾಣವನ್ನು ಪಡೆದಿರುವುದೋ? ಏಕೆಂದರೆ, ಮೊದಲನೆಯದನ್ನು ಹೇಳಲಾಗದು. ಪಶು ಮೊದಲಾದವುಗಳಿಗೆ ಅಂಗುಷ್ಠವೇ ಇಲ್ಲದಿರುವುದರಿಂದ ಅವುಗಳಲ್ಲಿ ಅಂತರ್ಗತನಾದ ವಿಷ್ಣುವಿಗೆ ಅಂಗುಷ್ಠಪರಿಮಾಣ ಇರುವುದು ಸಾಧ್ಯವಾಗುವುದಿಲ್ಲ. ಎರಡನೆಯದು ಸಮಂಜಸವಲ್ಲ. ಆಯಾಯ ಜೀವರ ಉಪಾಸನೆಗೋಸ್ಕರವಾಗಿ ಅಂಗುಷ್ಠಪರಿಮಾಣವನ್ನು ಹೇಳಿರುವುದರಿಂದ ಅದು ಯಾವ ಅಂಗುಷ್ಠ ಎಂಬ ವಿಶೇಷನಿರ್ಧಾರವಿಲ್ಲದೇ ಇದ್ದಾಗ ಸಾಧ್ಯವಾಗದಿರುವುದರಿಂದ, ಯಾವುದೋ ಒಂದು ಅಂಗುಷ್ಠದ ಪರಿಮಾಣವೆಂದು ಹೇಳುವುದು ವ್ಯರ್ಥವಾಗು-ವುದು. ಇರುವೆ ಮೊದಲಾದವುಗಳ ಹೃದಯದಲ್ಲಿರುವ ಪರಮಾತ್ಮನಿಗೆ ಯಾವುದೇ ಅಂಗುಷ್ಠದ ಪರಿಮಾಣವನ್ನು ಹೇಳುವುದು ಸರ್ವಥಾ ಸಾಧ್ಯವಿಲ್ಲ.

ಸಮಾಧಾನ – ಈ ಆಶಂಕೆಯನ್ನು ಪರಿಹರಿಸುತ್ತಾ ಭಾಷ್ಯಕಾರರು 'ಮನುಷ್ಯಾಧಿ-ಕಾರತ್ವಾತ್' ಎಂಬ ಸೂತ್ರದ ಶೇಷಭಾಗವನ್ನು ಹಾಗೆಯೇ ಸೂತ್ರದ 'ತು'ಶಬ್ದಕ್ಕೆ ಕಾಕಾಕ್ಷಿನ್ಯಾಯದಿಂದ ಇಲ್ಲೂ ಅನ್ವಯವಾಗುವುದನ್ನು ಮತ್ತು ಆ ತುಶಬ್ದಕ್ಕೆ ಇಲ್ಲಿ ಅಪಿಶಬ್ದದ ಅರ್ಥವಿರುವುದೆಂದು ಅಭಿಪ್ರಾಯ ಪಟ್ಟು ಅದಕ್ಕೆ ಸಂಬಂಧಿಸುವ ಪದಾರ್ಥ-ಗಳನ್ನು ತೋರಿಸುವ ಮೂಲಕ ''ಇತರ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಇತರಪ್ರಾಣಿನಾಮಂಗುಷ್ಠಾಭಾವೇಽಪಿ ಮನುಷ್ಯಾ-ಧಿಕಾರತ್ವಾನ್ನ ವಿರೋಧಃ ॥ ೨೫ ॥**

॥ ಇತಿ ಬ್ರಹ್ಮಸೂತ್ರಭಾಷ್ಯೇ ವಾಮನಾಧಿಕರಣಮ್ ॥ ೭ ॥

ಮನುಷ್ಯಭಿನ್ನರಾದ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ಉಪಾ-
ಸನೆಯಲ್ಲಿ ಕೇವಲ ಮನುಷ್ಯರಿಗೆ ಅಧಿಕಾರವಿರುವುದರಿಂದ ಯಾವ
ವಿರೋಧವೂ ಇಲ್ಲ.

ಭಾ.ದೀ. – 'ಪಶ್ವಾದೀನಾಮ್' ಇತ್ಯರ್ಥಃ।

'ಅಪಿಃ' ಆವರ್ತತೇ । ಅಂಗುಷ್ಠಮಾತ್ರತ್ವಮ್ ಇತ್ಯೇತದ್ ವಿಪರಿಣಾಮೇನ ಅನುವರ್ತತೇ। 'ನ ವಿರೋಧಃ' ಇತಿ ವಿರೋಧಸೂತ್ರಾದಾಕೃಷ್ಟೇ ಪದೇ। ತಥಾ ಚ 'ಅಪಿ' ತತ್ತದಂಗುಷ್ಠಪರಿಮಿತತ್ವಾಂಗೀಕಾರೇಽಪಿ ಇತರಪ್ರಾಣಿನಾಮಂಗುಷ್ಠಾ-ಭಾವೇಽಪಿ ನ ವಿಷ್ಣೋರಂಗುಷ್ಠಮಾತ್ರತ್ವಸ್ಯ ವಿರೋಧೇನಾಂಗುಷ್ಠಮಾತ್ರತ್ವೋಕ್ತೇಃ ಅಸಂಭವಃ । ಕುತಃ? ಅಂಗುಷ್ಠಮಾತ್ರತ್ವೋಕ್ತೇರೇತದ್ ವಿದ್ಯಾಯಾ 'ಮನುಷ್ಯಾಧಿಕಾರತ್ವಾತ್' ಮನುಷ್ಯಮಾತ್ರಾಧಿಕಾರತ್ವಾದಿತಿ ಯೋಜನಾ ॥

'ಇತರ' ಎಂದರೆ ಪಶು ಮೊದಲಾದವುಗಳಿಗೆ ಎಂದು ಅರ್ಥ.

ಈ ವಾಕ್ಯದಲ್ಲಿ 'ಅಪಿ'ಶಬ್ದವು ಆವೃತ್ತಿಯನ್ನು ಹೊಂದುವುದು. ಹಿಂದಿನ ವಾಕ್ಯ-ದಲ್ಲಿರುವ 'ಅಂಗುಷ್ಠಮಾತ್ರತ್ವಮ್' ಎಂಬ ಪದವು ವಿಭಕ್ತಿ ಬದಲಾವಣೆಯೊಂದಿಗೆ ಇಲ್ಲಿ ಅನುವೃತ್ತಿಯನ್ನು ಹೊಂದುವುದು. 'ವಿರೋಧಃ ಕರ್ಮಣಿ ಇತಿ ಚೇನ್ನ' (೧-೩-೨೭) ಎಂಬ ಸೂತ್ರದಿಂದ ನ ವಿರೋಧಃ ಎಂಬ ಪದಗಳು ಆಕರ್ಷಿಸಲ್ಪಟ್ಟಿವೆ.

ತಥಾ ಚ 'ಅಪಿ' - ಆಯಾಯ ಅಂಗುಷ್ಠದ ಪರಿಮಾಣವುಳ್ಳವನು ಎಂದು ಅಂಗೀಕರಿಸಿದರೂ ಇತರ ಪ್ರಾಣಿಗಳಿಗೆ ಅಂಗುಷ್ಠವಿಲ್ಲದೇ ಇದ್ದರೂ ವಿಷ್ಣುವಿಗೆ ಅಂಗುಷ್ಠಮಾತ್ರಪರಿಮಾಣವಿರುವುದಕ್ಕೆ ವಿರೋಧವಿರುವುದರಿಂದ ಅಂಗುಷ್ಠಮಾತ್ರತ್ವ-ವನ್ನು ಹೇಳಿದ್ದು ಯುಕ್ತವಲ್ಲ ಎಂದು ಹೇಳಲಾಗದು. ಏಕೆಂದರೆ, ಅಂಗುಷ್ಠಮಾತ್ರ ಪರಿಮಿತನೆಂದು ಹೇಳಿರುವುದು ಈ ವಿದ್ಯೆಯು 'ಮನುಷ್ಯಾಧಿಕಾರತ್ವಾತ್' ಮನುಷ್ಯ-ರನ್ನು ಕುರಿತು ಪ್ರವೃತ್ತವಾಗಿರುವುದರಿಂದ. ಅದೂ ಏಕೆಂದರೆ, ವೇದವಿದ್ಯೋಪಾಸನೆಗೆ 'ಮನುಷ್ಯಾಧಿಕಾರತ್ವಾತ್' - ಕೇವಲ ಮನುಷ್ಯರನ್ನು ಅಧಿಕಾರಿಗಳಾಗಿರುವುದರಿಂದ. – ಎಂದು ಯೋಜನೆ.

ಭಾ.ದೀ.– ಸೂತ್ರೇ ಭಾಷ್ಯೇ ಚ ಮನುಷ್ಯಾಣಾಮಧಿಕಾರೋ ಯಸ್ಮಿನ್, ಅಥವಾ – ಅಧಿಕ್ರಿಯತೇಽತ್ರೇತ್ಯಧಿಕಾರ ಉಪಾಸನಂ ಶಾಸ್ತ್ರಂ ವಾ, ಮನುಷ್ಯಾಣಾ-ಮೇವ ಅಧಿಕಾರೋ ಮನುಷ್ಯಾಧಿಕಾರಸ್ತಸ್ಯ ಭಾವಸ್ತಸ್ಮಾತ್ ಇತಿ ವಿಗ್ರಹಃ । 'ಮನುಷ್ಯಾಧಿಕಾರಿತ್ವಾತ್' ಇತಿ ಪಾಠೇ ಮನುಷ್ಯಾ ಅಧಿಕಾರಿಣೋ ಯಸ್ಮಿನ್ ತತ್ ತಥೋಕ್ತಮ್ । ತಥಾ ಚ ಮನುಷ್ಯಾಧಿಕಾರಿತ್ವಾತ್ ಇತ್ಯರ್ಥಃ।

ಮನುಷ್ಯಪದಂ ಚ ವಕ್ಷ್ಯಮಾಣನ್ಯಾಯೇನ ಮನನಾದಿಶೀಲಚೇತನಪರಮ್ । ತೇನ ದೇವಾನಾಂ ಜರಿತಾರ್ಯಾದೀನಾಂ ವಕ್ಷ್ಯಮಾಣನ್ಯಾಯೇನ ವೇದವಿದ್ಯಾ-ಧಿಕಾರಿಣಾಮೇತದ್ ವಿದ್ಯಾಧಿಕಾರಸಿದ್ಧಿಃ । ತತ್ರ ಜರಿತಾರ್ಯಾದೀನಾಂ ಸ್ವಸ್ವಾಂಗುಷ್ಠಪರಿಮಿತತ್ವೇನ ಭಗವದುಪಾಸನಾಽಸಂಭವಾತ್, ತೇಷಾಮ್ ಏತದ್ ವಿದ್ಯೋತ್ಪನ್ನವಾಕ್ಯಾರ್ಥಜ್ಞಾನ ಏವಾಧಿಕಾರೋ, ನೋಪಾಸ್ತಾವಪಿ । ಅತ ಏವ ಟೀಕಾಯಾಮ್ – 'ಮನುಷ್ಯಾಣಾಮೇವ ವೇದವಿದ್ಯೋಪಾಸನಾಧಿಕಾರಿತ್ವೇನ' ಇತಿ ಮನುಷ್ಯತ್ವಂ ವ್ಯಾಪಕತ್ವೇನೋಕ್ತಮ್ । ನ ಚಾನಧಿಕಾರಿಣಾಂ ಪಶ್ವಾದೀನಾಂ ದೇಹಸ್ಥಿತಸ್ಯ ಭಗವತೋಽಂಗುಷ್ಠಪರಿಮಿತತ್ವಾಭಾವೇ ಪರಿಮಾಣಾಂತರಾನುಕ್ತೇಃ ಅದ್ರವ್ಯತ್ವಾಪತ್ತಿರಿತಿ ವಾಚ್ಯಮ್ । ಪಶ್ವಾದಿದೇಹಗತಸ್ಯ ಪರಮಾತ್ಮನಃ ತತ್ತದಾಕಾರ-ಯುಕ್ತತ್ವೇನ ತದನುಸಾರಿಪರಿಮಾಣವತ್ತ್ವಾತ್ । ಯಥೋಕ್ತಮೈತರೇಯಭಾಷ್ಯೇ –

'ಸಂಕರ್ಷಣಶ್ಚ ಪ್ರದ್ಯುಮ್ನಸ್ತದಾಕಾರೌ ನೃಷು ಸ್ಥಿತೌ ।
ನಾರಾಯಣಾನಿರುದ್ಧೌ ತು ಪಶ್ವಾಕಾರೌ ಪಶುಸ್ಥಿತೌ ॥' ಇತಿ ।

ಸೂತ್ರ ಮತ್ತು ಭಾಷ್ಯದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂಬ ಪದಕ್ಕೆ 'ಮನು-ಷ್ಯಾಣಾಂ ಅಧಿಕಾರಃ ಯಸ್ಮಿನ್ ಸಃ ಮನುಷ್ಯಾಧಿಕಾರಃ; ತಸ್ಯ ಭಾವಃ ತಸ್ಮಾತ್' - ಮನುಷ್ಯರಿಗೆ ಯಾವುದರಲ್ಲಿ ಅಧಿಕಾರವಿದೆಯೋ ಅದು ಮನುಷ್ಯಾಧಿಕಾರ, ಅದರ ಧರ್ಮ ಮನುಷ್ಯಾಧಿಕಾರತ್ವ ; ಆದ್ದರಿಂದ, ಎಂದಾಗಲೀ ಅಥವಾ ಅಧಿಕ್ರಿಯತೇ ಅತ್ರ ಇತಿ ಅಧಿಕಾರಃ. ಈ ವಿಷಯದಲ್ಲಿ ಅಧಿಕಾರವುಳ್ಳವನು ಎಂಬ ಅರ್ಥದಲ್ಲಿ ಅಧಿಕಾರ-ಶಬ್ದಕ್ಕೆ ಉಪಾಸನೆ ಅಥವಾ ಶಾಸ್ತ್ರ ಎಂದು ಅರ್ಥ. 'ಮನುಷ್ಯಾಣಾಮೇವ ಅಧಿಕಾರಃ -

ಮನುಷ್ಯಾಧಿಕಾರಃ - ತಸ್ಯ ಭಾವಃ - ತಸ್ಮಾತ್' – 'ಮನುಷ್ಯರಿಗೇ ಅಧಿಕಾರವಿರುವುದು ಮನುಷ್ಯಾಧಿಕಾರ, ಅದರ ಧರ್ಮ ಮನುಷ್ಯಾಧಿಕಾರತ್ವ ಅಂದರೆ ಮನುಷ್ಯರಿಗೇ ಅಧಿ ಕಾರವಿರುವ ಉಪಾಸನೆ ಅಥವಾ ಶಾಸ್ತ್ರ' – ಅಂತಹ ಉಪಾಸನೆ ಅಥವಾ ಶಾಸ್ತ್ರವಾಗಿ-ರುವುದರಿಂದ ಎಂದು ವಿಗ್ರಹ.

'ಮನುಷ್ಯಾಧಿಕಾರಿತ್ವಾತ್' ಎಂಬ ಪಾಠದಲ್ಲಿ 'ಮನುಷ್ಯಾಃ ಅಧಿಕಾರಿಣೋ ಯಸ್ಮಿನ್ ತತ್, ಮನುಷ್ಯಾಧಿಕಾರಿ, ತಸ್ಯ ಭಾವಃ ತಸ್ಮಾತ್' 'ಮನುಷ್ಯರೇ ಯಾವ ವಿಷಯದಲ್ಲಿ ಅಧಿಕಾರಿಗಳೋ ಅದು ಮನುಷ್ಯಾಧಿಕಾರಿ, ಹಾಗಿರುವುದರಿಂದ' (ಎಂದು ವಿಗ್ರಹ). ತಥಾ ಚ ಮನುಷ್ಯರನ್ನು ಅಧಿಕಾರಿಗಳಾಗಿ ಪಡೆದಿರುವುದರಿಂದ ಎಂದು ಅರ್ಥ.

ಇಲ್ಲಿ ಮನುಷ್ಯಪದವೂ ಕೂಡ ಮುಂದೆ ಹೇಳುವ ರೀತಿಯಿಂದ ಮನನಾದಿ-ಸ್ವಭಾವವುಳ್ಳ ಚೇತನನನ್ನು ಹೇಳುವ ತಾತ್ಪರ್ಯವುಳ್ಳದ್ದು. ಆದರಿಂದ ದೇವತೆಗಳಿಗೆ ಹಾಗೂ ಜರಿತಾರಿ (ಭಾರತ ಆದಿಪರ್ವ - ಮಯಪರ್ವದಲ್ಲಿ ಬರುವ ಪಕ್ಷಿಗಳು - ಜರಿತಾರಿ, ಸ್ತಂಬಮಿತ್ರ, ದ್ರೋಣ, ಸಾರಿಸೃಕ್ವ ಎಂದು ಹೆಸರು) ಮೊದಲಾದ ವೇದವಿದ್ಯಾಧಿಕಾರಿಗಳಿಗೂ ಮುಂದೆ ಹೇಳುವ ರೀತಿಯಿಂದ ಈ ವಿದ್ಯಾಧಿಕಾರವು ಸಿದ್ಧವಾಗುವುದು. ಅವರಲ್ಲಿ ಜರಿತಾರಿ ಮೊದಲಾದ ಪಕ್ಷಿಗಳಿಗೆ ತಮ್ಮ ತಮ್ಮ ಅಂಗುಷ್ಠಪರಿಮಾಣವುಳ್ಳವನೆಂದು ಭಗವಂತನ ಉಪಾಸನೆ ಮಾಡುವುದು ಸಾಧ್ಯವಿಲ್ಲ-ದಿರುವುದರಿಂದ ಅವರಿಗೆ ಈ ವಿದ್ಯೆಯಿಂದ ಉಂಟಾಗುವ ವಾಕ್ಯಾರ್ಥಜ್ಞಾನದಲ್ಲೇ ಅಧಿ ಕಾರ ಹೊರತು ಉಪಾಸನೆಯಲ್ಲೂ ಅಧಿಕಾರವಿಲ್ಲ. ಆದ್ದರಿಂದಲೇ ಟೀಕಾದಲ್ಲಿ 'ಮನುಷ್ಯಾಣಾಮೇವ ವೇದವಿದ್ಯೋಪಾಸನಾಧಿಕಾರತ್ವೇನ' - 'ಮನುಷ್ಯರಿಗೇ ವೇದ-ವಿದ್ಯೋಪಾಸನಾಧಿಕಾರವಿರುವುದರಿಂದ' ಎಂಬುದಾಗಿ ಮನುಷ್ಯತ್ವವು ವೇದವಿದ್ಯೋ-ಪಾಸನಾಧಿಕಾರವನ್ನು ಕುರಿತು ವ್ಯಾಪಕವಾಗಿರುವುದು ಎಂದು ಹೇಳಲಾಗಿದೆ.

ಶಂಕೆ – ವೇದವಿದ್ಯೋಪಾಸನೆಯಲ್ಲಿ ಅನಧಿಕಾರಿಗಳಾದ ಪಶು ಮೊದಲಾದವುಗಳ ದೇಹದಲ್ಲಿರುವ ಭಗವಂತನು ಅಂಗುಷ್ಠಪರಿಮಾಣವನ್ನು ಹೊಂದಿಲ್ಲವಾದರೆ ಬೇರೆ ಪರಿಮಾಣವನ್ನು ಅವನಿಗೆ ಹೇಳದಿರುವುದರಿಂದ ಆ ಭಗವದ್ರೂಪವು ದ್ರವ್ಯವೇ ಅಲ್ಲ ಎಂದು ಹೇಳಬೇಕಾದೀತು?

ಸಮಾಧಾನ – ಈ ಶಂಕೆ ಸರಿಯಲ್ಲ; ಏಕೆಂದರೆ – ಪಶು ಮೊದಲಾದವುಗಳ ದೇಹದಲ್ಲಿರುವ ಪರಮಾತ್ಮನು ಆಯಾಯ ಪಶ್ವಾದಿಗಳ ಆಕಾರವನ್ನು ಹೊಂದಿರು-ವುದರಿಂದ ಆದಕ್ಕನುಸಾರಿಯಾದ ಪರಿಮಾಣವನ್ನು ಹೊಂದಿರುವನು. ಐತರೇಯ-ಭಾಷ್ಯದಲ್ಲಿ ಹೀಗೆ ಹೇಳಲಾಗಿದೆ –

'ಸಂಕರ್ಷಣಶ್ಚ ಪ್ರದ್ಯುಮ್ನಸ್ತದಾಕಾರೌ ನೃಷು ಸ್ಥಿತೌ ।
ನಾರಾಯಣಾನಿರುದ್ಧೌ ತು ಪಶ್ವಾಕಾರೌ ಪಶುಸ್ಥಿತೌ ॥'

'ಸಂಕರ್ಷಣ ಮತ್ತು ಪ್ರದ್ಯುಮ್ನರೂಪಗಳು ಮನುಷ್ಯರಲ್ಲಿ ಅವರ ಆಕಾರದಿಂದ ಇರುವರು. ನಾರಾಯಣ ಮತ್ತು ಅನಿರುದ್ಧರು ಪಶುವಿನ ಆಕಾರವುಳ್ಳವರಾಗಿ ಪಶುಗಳಲ್ಲಿರುವರು' ಎಂದು.

ಭಾ.ದೀ.– ಅನೇನ – ಸೂತ್ರೇ ತುಶಬ್ದೋಽಪ್ಯರ್ಥೇಽವಧಾರಣೇ ಚ । ತತ್ರಾಪಿ ಅರ್ಥಸ್ಯೋಭಯತ್ರಾನ್ವಯಃ । 'ಅಂಗುಷ್ಠಮಾತ್ರತ್ವಂ ಯುಜ್ಯತೇ' ಇತಿ ಶೇಷಃ । 'ತತ್' ಇತಿ ಪ್ರಧಾನಸೂತ್ರಾದನುವೃತ್ತಸ್ಯೇಹ ವಿಪರಿಣಾಮೇನಾನ್ವಯಃ । 'ನ ವಿರೋಧಃ' ಇತ್ಯಸ್ಯಾಽಕರ್ಷಃ । 'ತಸ್ಯ ಮನುಷ್ಯಾಧಿಕಾರಿತ್ವಾತ್' ಇತ್ಯಾ-ವರ್ತತೇ । ತಥಾ ಚ 'ತು' ಅಪಿ ಸರ್ವಗತಸ್ಯಾಪಿ 'ತಸ್ಯ ವಿಷ್ಣೋರಂಗುಷ್ಠಮಾತ್ರತ್ವಂ' ತದುಕ್ತಿರ್ಯುಜ್ಯತೇ । ನ ಚ ವಿರೋಧಃ । ಯತೋಽತ್ರ 'ಹೃದ್ಯಪೇಕ್ಷಯಾ ತು' ಹೃದ್ಯವಕಾಶಾಪೇಕ್ಷಯೈವ ಅಂಗುಷ್ಠಮಾತ್ರತ್ವಮುಚ್ಯತೇ, ನ ತು ಪರಿಚ್ಛಿನ್ನತ್ವಾತ್ । ತಚ್ಚ ಮೂರ್ತಿವಿಶೇಷೇ ತನ್ಮಾತ್ರತ್ವಸ್ಯ ಸತ್ತ್ವಾದುಪಚಾರೇಣ ವಾ ಯುಜ್ಯತೇ ।

ಇದರಿಂದ – ಸೂತ್ರದಲ್ಲಿರುವ ತುಶಬ್ದವು ಅಪಿ ಮತ್ತು ಅವಧಾರಣ ಎಂಬ ಎರಡೂ ಅರ್ಥವನ್ನು ಪಡೆದಿದೆ. ಅವುಗಳಲ್ಲಿ ಅಪಿ ಎಂಬ ಅರ್ಥವುಳ್ಳ ತುಶಬ್ದವು ಎರಡು ಕಡೆ ಅನ್ವಯವನ್ನು ಹೊಂದುವುದು. 'ಅಂಗುಷ್ಠಮಾತ್ರತ್ವಂ ಯುಜ್ಯತೇ' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ತತ್ತು ಸಮನ್ವಯಾತ್'(೧-೧-೪) ಎಂಬ ಪ್ರಧಾನ-ಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ ತತ್ ಶಬ್ದವು ಇಲ್ಲಿ ವಿಭಕ್ತಿ ಬದಲಾ-ವಣೆಯೊಂದಿಗೆ ಅನ್ವಯವನ್ನು ಹೊಂದುವುದು. 'ವಿರೋಧಃ ಕರ್ಮಣಿ ಇತಿ ಚೇನ್ನ'

ಎಂಬ ಮುಂದಿನ ಸೂತ್ರದಿಂದ 'ನ ವಿರೋಧಃ' ಎಂಬ ಪದಗಳು ಆಕರ್ಷವನ್ನು ಪಡೆ-ಯುತ್ತವೆ. 'ತಸ್ಯ ಮನುಷ್ಯಾಧಿಕಾರತ್ವಾತ್' ಎಂಬ ಪದಗಳು ಆವೃತ್ತಿಯನ್ನು ಪಡೆಯುತ್ತವೆ. ತಥಾ ಚ – 'ತು' ಅಂದರೆ ಅಪಿ - ಸರ್ವಗತನಾಗಿದ್ದರೂ ತಸ್ಯ - ಆ ವಿಷ್ಣುವಿಗೆ ಅಂಗುಷ್ಠಮಾತ್ರತ್ವಂ - ಅಂಗುಷ್ಠಮಾತ್ರಪರಿಮಾಣವನ್ನು ಹೇಳಿರುವುದು ಯುಕ್ತವಾಗಿದೆ. 'ನ ಚ ವಿರೋಧಃ' - ಇದಕ್ಕೆ ವಿರೋಧವು ಇಲ್ಲ. ಏಕೆಂದರೆ, ಇಲ್ಲಿ 'ಹೃದ್ಯಪೇಕ್ಷಯಾ ತು' ಹೃದಯದಲ್ಲಿರುವ ಅವಕಾಶದ ದೃಷ್ಟಿಯಿಂದಲೇ ಭಗವಂತನಿಗೆ ಅಂಗುಷ್ಠಮಾತ್ರಪರಿಮಾಣವನ್ನು ಹೇಳಲಾಗಿದೆ ಹೊರತು ಅವನಿಗೆ ಪರಿಮಿತಿ-ಯಿರುವುದರಿಂದಲ್ಲ. ಆ ಅಂಗುಷ್ಠಮಾತ್ರತ್ವವಾದರೋ ಭಗವಂತನ ರೂಪವಿಶೇಷದಲ್ಲಿ ಇರುವುದರಿಂದ ಅಥವಾ ಔಪಚಾರಿಕವಾಗಿರುವುದರಿಂದ ಯುಕ್ತವಾಗಿದೆ.

ಭಾ.ದೀ. – ನ ಚ ನಾಂಗುಷ್ಠಮಾತ್ರತ್ವಂ ವಿಷ್ಣೋರ್ಯುಕ್ತಂ, ಯತ್ಕಿಂಚಿದ್ ಅಂಗುಷ್ಠಮಾತ್ರತ್ವೋಕ್ತೇರ್ವ್ಯರ್ಥತ್ವೇನಾಸಂಭವೇನ ಚ ತತ್ತದಂಗುಷ್ಠಮಾತ್ರತ್ವೇ ವಾಚ್ಯೇ ತಸ್ಯ ಚ ಪಶ್ವಾದೀನಾಮಂಗುಷ್ಠಾಭಾವೇನ ತದಂತರ್ಗತವಿಷ್ಣೌ ಅಯೋಗಾದಿತಿ ವಾಚ್ಯಮ್ । ಯತಃ 'ತು' ಅಪಿ ಇತರಪ್ರಾಣಿನಾಮಂಗುಷ್ಠಾ-ಭಾವೇಽಪಿ ನ ವಿಷ್ಣೋಸ್ತತ್ತದಂಗುಷ್ಠಮಾತ್ರತ್ವಸ್ಯ 'ವಿರೋಧಃ' ಅಸಂಭವಃ । ಕುತಃ? ಅಂಗುಷ್ಠಮಾತ್ರತ್ವವಚನಸ್ಯ ತದ್ಬೋಧಕವಿದ್ಯಾಯಾಃ 'ಮನುಷ್ಯಾಧಿಕಾರತ್ವಾತ್' ಮನುಷ್ಯಾನೇವಾಧಿಕೃತ್ಯ ಪ್ರವೃತ್ತತ್ವಾತ್ । ತದಪಿ ಕುತಃ? 'ತಸ್ಯ' ವೇದವಿದ್ಯೋಪಾಸನಸ್ಯ 'ಮನುಷ್ಯಾಧಿಕಾರತ್ವಾತ್' ಮನುಷ್ಯಮಾತ್ರೇ ಅಧಿ ಕಾರಿತ್ವಾತ್ – ಇತಿ ಸೂತ್ರಾರ್ಥ ಉಕ್ತೋ ಭವತಿ ॥

॥ ಇತಿ ಭಾಷ್ಯದೀಪಿಕಾಯಾಂ ವಾಮನಾಧಿಕರಣಮ್ ॥

ಶಂಕೆ – ವಿಷ್ಣುವಿಗೆ ಅಂಗುಷ್ಠಮಾತ್ರತ್ವವು ಯುಕ್ತವಲ್ಲ. ಏಕೆಂದರೆ - ಯಾವುದೋ ಒಂದು ಅಂಗುಷ್ಠದ ಪರಿಮಾಣವನ್ನು ಹೇಳುವುದು ವ್ಯರ್ಥವಾಗಿದೆ. ಮತ್ತು ಅಸಂಭಾವಿತವಾಗಿದೆ. ಆದ್ದರಿಂದ ಆಯಾಯ ಜೀವನ ಅಂಗುಷ್ಠಮಾತ್ರಪರಿಮಾಣವನ್ನೇ ಭಗವಂತನಿಗೆ ಹೇಳಬೇಕು. ಆದರೆ ಪಶ್ವಾದಿಗಳಿಗೆ ಅಂಗುಷ್ಠವೇ ಇಲ್ಲದಿರುವುದರಿಂದ ಅವುಗಳ ಅಂತರ್ಗತನಾದ ವಿಷ್ಣುವಿನಲ್ಲಿ ಅಂಗುಷ್ಠಮಾತ್ರಪರಿಮಾಣವು ಯುಕ್ತವಲ್ಲ.

ಸಮಾಧಾನ – ಇದು ಸರಿಯಲ್ಲ; ಏಕೆಂದರೆ, 'ತು' ಅಂದರೆ ಅಪಿ, ಇತರ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ವಿಷ್ಣುವಿಗೆ ಆಯಾಯ ಜೀವನ ಅಂಗುಷ್ಠಮಾತ್ರ-ಪರಿಮಾಣಕ್ಕೆ ನ ವಿರೋಧಃ ಅಂದರೆ, ಅಸಂಭವವೆಂದು ಹೇಳಲಾಗದು. ಏಕೆಂದರೆ, ಅಂಗುಷ್ಠಮಾತ್ರತ್ವಪರಿಮಾಣವನ್ನು ಹೇಳುವ ವಚನವು ಆ ಭಗವಂತನನ್ನು ಬೋಧಿಸುವ ವಿದ್ಯೆಯು 'ಮನುಷ್ಯಾಧಿಕಾರತ್ವಾತ್' ಮನುಷ್ಯರನ್ನೇ ಕುರಿತು ಪ್ರವೃತ್ತವಾಗಿರುವುದರಿಂದ.

ಶಂಕೆ – ಕೇವಲ ಮನುಷ್ಯರನ್ನೇ ಕುರಿತು ಆ ವಿದ್ಯೆಯು ಪ್ರವೃತ್ತವಾಗಿರುವುದು ಹೇಗೆ?

ಸಮಾಧಾನ – ತಸ್ಯ ಅಂದರೆ ವೇದವಿದ್ಯೋಪಾಸನೆಯು 'ಮನುಷ್ಯಾಧಿಕಾರಿತ್ವಾತ್' ಕೇವಲ ಮನುಷ್ಯರನ್ನೇ ಅಧಿಕಾರಿಗಳಾಗಿ ಪಡೆದಿರುವುದರಿಂದ - ಎಂದು ಸೂತ್ರಾರ್ಥ-ವನ್ನು ಹೇಳಿದಂತಾಗುವುದು.

॥ ಇಲ್ಲಿಗೆ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ವಾಮನಾಧಿಕರಣವು ಮುಗಿಯಿತು ॥

* * * * * *

## ೮. ಅಥ ದೇವತಾಧಿಕರಣಮ್

ಭಾ.ದೀ. – ಅಸ್ಮಿನ್ನಧಿಕರಣೇ ದೇವಾನಾಂ ಬ್ರಹ್ಮವಿದ್ಯಾಧಿಕಾರಃ ಸಮರ್ಥ್ಯತೇ । ಪ್ರಾಸಂಗಿಕತ್ವಾನ್ನಾಧ್ಯಾಯಪಾದಸಂಗತೀ ಮಾರ್ಗಣೀಯೇ । ಶ್ರುತ್ಯಾದಿಸಂಗತಿ-ವಿಷಯಸಂಶಯತದ್ಬೀಜಾನಿ ದರ್ಶಯತಿ – ಮನುಷ್ಯಾಣಾಮಿತಿ ॥

ಈ ಅಧಿಕರಣದಲ್ಲಿ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವಿರುವುದೆಂದು ಸಮರ್ಥಿಸ-ಲಾಗುವುದು. ಈ ಅಧಿಕರಣವು ಪ್ರಾಸಂಗಿಕವಾಗಿರುವುದರಿಂದ(*) ಅಧ್ಯಾಯ ಹಾಗೂ ಪಾದಸಂಗತಿಗಳನ್ನು ಅನ್ವೇಷಿಸಲಾಗದು. ಶ್ರುತ್ಯಾದಿಗಳ ಸಂಗತಿ, ವಿಷಯ, ಸಂಶಯ ಮತ್ತು ಸಂಶಯಕಾರಣಗಳನ್ನು ಭಾಷ್ಯದಲ್ಲಿ ''ಮನುಷ್ಯಾಣಾಂ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

★ಪ್ರಾಸಂಗಿಕತ್ವಾತ್ – ಹಿಂದಿನ ವಾಮನಾಧಿಕರಣದಲ್ಲಿ ವಿಷ್ಣುವಿಗೆ ಅಂಗುಷ್ಠ-ಪರಿಮಾಣವನ್ನು ಶ್ರುತಿಗಳಲ್ಲಿ ಹೇಳಿರುವುದು ಆ ಭಗವಂತನ ಸ್ವರೂಪವನ್ನು ನಿರೂಪಿಸುವ ವೇದವಿದ್ಯೆಗೆ ಮನುಷ್ಯರು ಅಧಿಕಾರಿಗಳಾಗಿರುವುದರಿಂದ ಎಂದು ಹೇಳಿದೆ. ಹೀಗೆ ವೇದವಿದ್ಯೋಪಾಸನಾಧಿಕಾರವು ಕೇವಲ ಮನುಷ್ಯ ಅಧಿಕಾರಿ-ಗಳನ್ನು ಕುರಿತಿದ್ದಾದರೆ 'ವಿಶ್ವೇ ದೇವಾ ಉಪಾಸತೇ' ಎಂಬುದಾಗಿ ದೇವತೆಗಳಿಗೂ ಉಪಾಸನೆಯನ್ನು ಹೇಳುವ ಶ್ರುತಿಗಳಿಗೆ ಅಪ್ರಾಮಾಣ್ಯಬಂದೀತು! ಎಂಬ ಆಕ್ಷೇಪದ ಪರಿಹಾರಕ್ಕೋಸ್ಕರವಾಗಿ ಈ ಅಧಿಕರಣವು ಪ್ರವೃತ್ತವಾಗಿರುವುದರಿಂದ ಪೂರ್ವಾಧಿಕರಣ ಸಂಗತಿ ಇರುವುದಾದರೂ ಸಮನ್ವಯ ಪ್ರತಿಪಾದಕವಲ್ಲದೇ ಇರುವುದರಿಂದ ಅಧ್ಯಾಯ ಮತ್ತು ಪಾದಗಳ ಸಂಗತಿಗಳು ಇರಲು ಸಾಧ್ಯವಿಲ್ಲ. ಆದರೂ ದೇವತೆಗಳಿಗೆ ವೇದವಿದ್ಯಾಧಿಕಾರವಿದಯೋ ಇಲ್ಲವೋ ಎಂಬ ವಿಷಯವು ಪ್ರಸಕ್ತವಾಗಿರುವುದರಿಂದ ಪ್ರಸಂಗಸಂಗತಿಯಿಂದಲೇ ಈ ಅಧಿ-ಕರಣವು ಹೊರಟಿದೆ. ಆದ್ದರಿಂದ ಅಧ್ಯಾಯ ಮತ್ತು ಪಾದಗಳ ಸಂಗತಿಯನ್ನು ಇಲ್ಲಿ ಅನ್ವೇಷಿಸುವ ಅಗತ್ಯವಿಲ್ಲ ಎಂದು ಅಭಿಪ್ರಾಯ.

**ಭಾಷ್ಯಮ್ – ಮನುಷ್ಯಾಣಾಮೇವ ವೇದವಿದ್ಯಾಧಿಕಾರ ಇತ್ಯುಕ್ತಮ್ ।**

ಮನುಷ್ಯರಿಗೇ ವೇದವಿದ್ಯಾಧಿಕಾರವಿರುವುದು ಎಂದು ಹೇಳಲಾಯಿತು.

ಭಾ.ದೀ. – 'ಉಕ್ತಮ್' ಪೂರ್ವಸೂತ್ರೇ । ತುಶಬ್ದಾರ್ಥಾವಧಾರಣಸ್ಯ ಸಮಾಸಪ್ರವಿಷ್ಟಮನುಷ್ಯಪದೇನಾಪಿ ಸಂಬಂಧೋಽಸ್ತೀತಿ ಭಾವೇನ 'ಮನುಷ್ಯಾಣಾಮೇವ' ಇತ್ಯನುವಾದಃ । 'ನೇತರೇಷಾಮ್' ಇತಿ 'ಏವ'ಶಬ್ದಾರ್ಥಃ । 'ವೇದವಿದ್ಯಾಧಿಕಾರಃ' - ವೇದವಿದ್ಯೋಪಾಸನಾಧಿಕಾರಃ ।

ಅನೇನ – ದೇವತಾಧಿಕಾರಾಭಾವಮುಖೇನ 'ವಿಶ್ವೇ ದೇವಾ ಉಪಾಸತೇ' ಇತ್ಯಾದಿ ಪೂರ್ವೋದಾಹೃತಶ್ರುತ್ಯುಪಲಕ್ಷಿತಾಶೇಷಶ್ರುತಿಪ್ರಾಮಾಣ್ಯಸ್ಯ ಆಕ್ಷೇಪಾತ್ ಪೂರ್ವಾಧಿಕರಣೇನ ಅಸ್ಯ ಆಕ್ಷೇಪಿಕೀಸಂಗತಿಃ ವೇದವಿದ್ಯಾಧಿಕಾರಾಖ್ಯೋ ವಿಷಯಶ್ಚೋಕ್ತೋ ಭವತಿ ।

'ಅಂಗುಷ್ಠಮಾತ್ರಃ' ಇತಿ ಶ್ರುತಿಮೂಲಾಯಾಃ 'ಮನುಷ್ಯಾಣಾಮೇವ' ಇತ್ಯುಕ್ತೇಃ 'ವಿಶ್ವೇ ದೇವಾ ಉಪಾಸತೇ' (ಕಠ.೨.೨.೩) ಇತಿ ಶ್ರುತೇಶ್ಚ ಕೋಟಿದ್ವಯೋಪಸ್ಥಾಪಕತ್ವೇನ ಸಂದೇಹಬೀಜತ್ವಾತ್ ತದುಕ್ತ್ಯೈವ ದೇವಾನಾಮಧಿಕಾರೋ-ಽಸ್ತಿ ಉತ ನಾಸ್ತಿ? ಇತಿ ಸಂಶಯಃ, ನಾಸ್ತೀತಿ ಪೂರ್ವಪಕ್ಷಶ್ಚ ಸೂಚಿತಃ ।

''ಉಕ್ತಮ್'' - ಪೂರ್ವಸೂತ್ರದಲ್ಲಿ ಹೇಳಲಾಗಿದೆ ಎಂದರ್ಥ. ಹಿಂದಿನ ಸೂತ್ರದಲ್ಲಿರುವ 'ತು'ಶಬ್ದದ ಅರ್ಥವಾದ ಅವಧಾರಣಕ್ಕೆ 'ಮನುಷ್ಯಾಧಿಕಾರತ್ವಾತ್' ಎಂಬ ಸಮಾಸದಲ್ಲಿ ಸೇರಿರುವ ಮನುಷ್ಯಪದದಿಂದಲೂ ಸಂಬಂಧವಿರುವುದು ಎಂಬ ಆಶಯದಿಂದ ಭಾಷ್ಯದಲ್ಲಿ ''ಮನುಷ್ಯಾಣಾಮೇವ'' ಎಂದು ಪೂರ್ವಸೂತ್ರಾರ್ಥವನ್ನು ಅನುವಾದ ಮಾಡಲಾಗಿದೆ. ಇಲ್ಲಿ ''ಏವ''ಶಬ್ದಕ್ಕೆ 'ಮನುಷ್ಯೇತರರಿಗೆ ಇಲ್ಲ' ಎಂದು ಅರ್ಥ. ''ವೇದವಿದ್ಯಾಧಿಕಾರ'' ಎಂದರೆ ವೇದವಿದ್ಯೆಯ ಉಪಾಸನೆಯಲ್ಲಿ ಅಧಿಕಾರ.

ಇದರಿಂದ – ದೇವತೆಗಳಿಗೆ ಅಧಿಕಾರವಿಲ್ಲವೆಂದು ಹೇಳುವ ಮೂಲಕ 'ವಿಶ್ವೇ ದೇವಾ ಉಪಾಸತೇ' ಎಂದು ಹಿಂದೆ ಉದಾಹರಿಸಲಾದ ಶ್ರುತಿಮಾತ್ರವಲ್ಲದೇ ಅದರಿಂದ

ಉಪಲಕ್ಷಿತವಾಗುವ ಸಮಸ್ತಶ್ರುತಿಗಳ ಪ್ರಾಮಾಣ್ಯವನ್ನು ಇಲ್ಲಿ ಆಕ್ಷೇಪಿಸುವುದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುವುದೆಂದು ಹಾಗೆಯೇ ವೇದವಿದ್ಯಾಧಿಕಾರವೆಂಬ ವಿಷಯವು ಈ ಅಧಿಕರಣಕ್ಕಿರುವುದೆಂದು ಹೇಳಿದಂತಾಗುವುದು.

'ಅಂಗುಷ್ಠಮಾತ್ರಃ ಪುರುಷಃ' - ಎಂಬ ಶ್ರುತಿಯನ್ನು ಮೂಲವಾಗಿ ಹೊಂದಿರುವ, 'ಮನುಷ್ಯಾಣಾಮೇವ' ಮನುಷ್ಯರಿಗೇ ವೇದವಿದ್ಯಾಧಿಕಾರವಿದೆ ಎಂಬ ಉಕ್ತಿ, ಹಾಗೂ 'ವಿಶ್ವೇ ದೇವಾ ಉಪಾಸತೇ' ಎಂಬ ಶ್ರುತಿ ಈ ಅಧಿಕರಣದ ಸಂಶಯದ ಎರಡು ಕೋಟಿಗಳನ್ನು ಸೂಚಿಸುವುದರಿಂದ ಸಂಶಯಕ್ಕೆ ಕಾರಣವಾಗಿವೆ. ಆದರಿಂದಲೇ ದೇವತೆಗಳಿಗೆ ವೇದವಿದ್ಯೋಪಾಸನೆಯ ಅಧಿಕಾರವಿದೆಯೋ ಇಲ್ಲವೋ ಎಂಬ ಸಂಶಯ. ಹಾಗೂ ಅಧಿಕಾರವಿಲ್ಲವೆಂಬ ಈ ಅಧಿಕರಣದ ಪೂರ್ವಪಕ್ಷವೂ ಸೂಚಿತವಾಗುತ್ತವೆ.

ಭಾ.ದೀ. – ತತಃ ಕಿಮಿತ್ಯತಃ ಸಂಶಯಬೀಜಂ ವಿಘಟಯನ್ ಸಿದ್ಧಾಂತಯಿತುಂ ಸೂತ್ರಮವತಾರಯತಿ – ತಿರ್ಯಗಾದಿತಿ ॥

ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಸಂಶಯದ ಕಾರಣವನ್ನು ನಿರಾಕರಿಸಿ, ಸಿದ್ಧಾಂತವನ್ನು ಸ್ಥಾಪಿಸಲು ಸೂತ್ರಕ್ಕೆ ''ತಿರ್ಯಗಾದಿ'' ಎಂಬ ವಾಕ್ಯದಿಂದ ಅವತಾರಿಕೆಯನ್ನು ಕೊಡುತ್ತಿದ್ದಾರೆ.

**ಭಾಷ್ಯಮ್ – ತಿರ್ಯಗಾದ್ಯಪೇಕ್ಷಯೈವ ಮನುಷ್ಯತ್ವವಿಶೇಷಣಮುಕ್ತಂ, ನ ತು ದೇವಾದ್ಯಪೇಕ್ಷಯೇತ್ಯಾಹ –**

ತಿರ್ಯಕ್ ಪ್ರಾಣಿಗಳೇ ಮೊದಲಾದವುಗಳ ದೃಷ್ಟಿಯಿಂದ ವೇದವಿದ್ಯಾಧಿಕಾರಿಗಳಿಗೆ ಮನುಷ್ಯತ್ವವನ್ನು ವಿಶೇಷಣವನ್ನು ಹೇಳಲಾಗಿದೆ ಹೊರತು, ದೇವಾದಿಗಳನ್ನು ವ್ಯಾವೃತ್ತಿಮಾಡುವ ದೃಷ್ಟಿಯಿಂದ ಹೇಳಲಾಗಿಲ್ಲ ಎಂದು ಸೂತ್ರಕಾರರು 'ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ' ಎಂಬುದಾಗಿ ಹೇಳುತ್ತಿದ್ದಾರೆ.

ಭಾ.ದೀ. – ವಿಶಿಷ್ಟಬುದ್ಧ್ಯಾದಿರಹಿತತಿರ್ಯಗಾದಿವ್ಯಾವೃತ್ತ್ಯರ್ಥಮ್ ಇತ್ಯರ್ಥಃ। ಮನುಷ್ಯತ್ವವಿಶೇಷಣಂ ಸಾವಧಾರಣತ್ವೇನಾಭಿಪ್ರೇತಮ್ । ಮನುಷ್ಯಪದಮ್ 'ಉಕ್ತಮ್' ಪ್ರಯುಕ್ತಮ್, 'ತತ್ರ' ಇತಿ ಶೇಷಃ। 'ಪೂರ್ವಸೂತ್ರೇ' ಇತಿ ತದರ್ಥಃ। ಸ್ವಪ್ರಯುಕ್ತೈವಕಾರವ್ಯಾವರ್ತ್ಯಂ ದರ್ಶಯತಿ – ನ ತ್ವಿತಿ ॥ 'ದೇವಾದ್ಯಪೇಕ್ಷಯಾ' ದೇವಾದಿವ್ಯಾವೃತ್ತ್ಯರ್ಥಮ್ । 'ತು'ಶಬ್ದೋ ವಿಶೇಷಾರ್ಥಃ। ನ ತು ದೇವಾದ್ಯರ್ಥಮಪಿ ಇತ್ಯಪಿಶಬ್ದಾರ್ಥೋ ವಾ । 'ಇತ್ಯಾಹ' - 'ಇತ್ಯಭಿಪ್ರೇತ್ಯ ಸೂತ್ರಕಾರೋ ದೇವಾನಾಮಧಿಕಾರಭಾವಮಾಹ' ಇತ್ಯರ್ಥಃ।

'ತಿರ್ಯಗಾದ್ಯಪೇಕ್ಷಯಾ' ಎಂದರೆ 'ವೇದವಿದ್ಯೋಪಸಾನೆಗೆ ಅವಶ್ಯಕವಾದ ವಿಶಿಷ್ಟಬುದ್ಧಿ ಮೊದಲಾದವುಗಳು ಇಲ್ಲದ ತಿರ್ಯಕ್‌ಪ್ರಾಣಿಗಳೇ ಮೊದಲಾದವುಗಳನ್ನು ಹೊರತು ಪಡಿಸಲು' ಎಂದರ್ಥ. 'ಮನುಷ್ಯತ್ವವಿಶೇಷಣಂ' ಎಂದರೆ ಅವಧಾರಣ-ಸಹಿತವಾದುದೆಂದು ಅಭಿಪ್ರೇತವಾಗಿರುವ ಮನುಷ್ಯಪದವು 'ಉಕ್ತಮ್' - ಪ್ರಯೋಗಿ-ಸಲ್ಪಟ್ಟಿದೆ ಎಂದು ಅರ್ಥ. 'ತತ್ರ' ಎಂಬ ಪದವು ಇಲ್ಲಿ ಶೇಷವಾಗಿದೆ. ಆ 'ತತ್ರ' ಎಂಬ ಪದಕ್ಕೆ 'ಪೂರ್ವಸೂತ್ರದಲ್ಲಿ' ಎಂದು ಅರ್ಥ. ತಾವು ತಿರ್ಯಗಾದ್ಯಪೇಕ್ಷಯೈವ ಎಂದು ಪ್ರಯೋಗಿಸಿದ 'ಏವ'ಕಾರದಿಂದ ವ್ಯಾವೃತ್ತಿಗೊಳಿಸಬೇಕಾದುದನ್ನು ಭಾಷ್ಯಕಾರರು 'ನ ತು' ಎಂದು ತಿಳಿಸುತ್ತಿದ್ದಾರೆ. 'ದೇವಾದ್ಯಪೇಕ್ಷಯಾ' ಎಂದರೆ ದೇವಾದಿಗಳನ್ನು ಹೊರತು ಪಡಿಸಲು' ಎಂದರ್ಥ. 'ನ ತು' ಎಂಬಲ್ಲಿ ತುಶಬ್ದವು ವಿಶೇಷ ಎಂಬ ಅರ್ಥವುಳ್ಳದ್ದು.

ಅಥವಾ 'ನ ತು ದೇವಾದ್ಯರ್ಥಮಪಿ' 'ದೇವತೆಗಳನ್ನೂ ವ್ಯಾವೃತ್ತಿಪಡಿಸುವ ಉದ್ದೇಶದಿಂದ' ಎಂಬುದಾಗಿ ತುಶಬ್ದವು ಅಪಿಶಬ್ದಾರ್ಥವನ್ನು ಹೇಳುವುದು.

'ಇತ್ಯಾಹ' ಎಂದರೆ 'ಹೀಗೆ ಅಭಿಪ್ರಾಯ ಪಟ್ಟು ಸೂತ್ರಕಾರರು ದೇವತೆಗಳಿಗೆ ಅಧಿ-ಕಾರವಿರುವುದೆಂದು ಹೇಳುತ್ತಿದ್ದಾರೆ' ಎಂದರ್ಥ.

ಭಾ.ದೀ. – ತತ್ಸೂತ್ರಂ ಪಠತಿ – ತದುಪರೀತಿ ॥

ಆ ಸೂತ್ರವನ್ನು ''ತದುಪರಿ'' ಎಂದು ಪಠಿಸುತ್ತಿದ್ದಾರೆ.

**ಭಾಷ್ಯಮ್–**

**॥ ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ ॥ ೨೬ ॥**

ಮನುಷ್ಯಶರೀರ ಹೋದ ನಂತರ ಮುಂದಿನ ಕಾಲದಲ್ಲೂ ವಿಶಿಷ್ಟ-ಬುದ್ಧಿ ಮೊದಲಾದವುಗಳು ಇರುವುದರಿಂದ ವೇದವಿದ್ಯಾಧಿಕಾರವು ಇದ್ದೇ ಇರುವುದು ಎಂದು ಬಾದರಾಯಣರು ಅಭಿಪ್ರಾಯ ಪಡು-ತ್ತಾರೆ.

**ತದುಪರಿ ಮನುಷ್ಯಾಣಾಂ ಸತಾಂ ದೇವಾದಿತ್ವಪ್ರಾಪ್ತ್ಯುಪರಿ ।**

**ಸಂಭವತಿ ಹಿ ತೇಷಾಂ ವಿಶಿಷ್ಟಬುದ್ಧ್ಯಾದಿಭಾವಾತ್ ।**

'ತದುಪರಿ' ಅಂದರೆ ಮನುಷ್ಯರಾಗಿದ್ದವರಿಗೆ ದೇವತ್ವ ಮೊದಲಾ-ದವುಗಳು ಪ್ರಾಪ್ತವಾದ ಅನಂತರವೂ ಎಂದರ್ಥ. ಅವರಿಗೂ ವಿಶಿಷ್ಟಬುದ್ಧಿ ಮೊದಲಾದವುಗಳು ಇರುವುದರಿಂದ ವೇದವಿದ್ಯಾ-ಧಿಕಾರವು ಇರುವುದಷ್ಟೇ.

ಭಾ.ದೀ. – ಅತ್ರ 'ತದುಪರಿ' ಇತಿ ಸಾಧ್ಯಧರ್ಮಿಸೂಚಕಂ ಪದಮನೂದ್ಯ ತೇಷಾಂ ತಸ್ಮಾತ್ ತಸ್ಯಾ ಇತಿ ವಿಗ್ರಹಾಶ್ರಯೇಣ ವ್ಯಾಚಷ್ಟೇ – ತದುಪರೀತಿ ॥ 'ವೇದವಿದ್ಯಾಧಿಕಾರಃ' ಇತ್ಯನುಷಜ್ಯತೇ । 'ನ ಕೇವಲಂ ಮನುಷ್ಯಾಣಾಂ ಸತಾಂ, ಕಿಂತು ತದುಪರ್ಯಪಿ' ಇತ್ಯಪೇರರ್ಥಃ । ತಥಾ ಚ – 'ತೇಷಾಂ' ಮನುಷ್ಯಾಣಾಂ ಸತಾಂ ದೇವತಾಪದಯೋಗ್ಯಾನಾಂ ಜೀವಾನಾಂ ಪದಪ್ರಾಪ್ತೇಃ ಪೂರ್ವಂ ಮನುಷ್ಯಶರೀರಂ ಪ್ರಾಪ್ತಾನಾಂ ಸತಾಂ 'ತಸ್ಮಾತ್'ಮನುಷ್ಯತ್ವಾತ್ 'ಉಪರಿ' ಮನುಷ್ಯಶರೀರಾಪಗಮೇನ 'ತಸ್ಯಾ ಉಪರಿ' ದೇವೋಪದೇವಾದಿಪದಪ್ರಾಪ್ತೇ-ರುಪರಿತನಕಾಲೇಽಪಿ ದೇವಭಾವಮಾಪನ್ನಾನಾಮಪಿ ವೇದವಿದ್ಯಾಧಿಕಾರೋಽ-ಸ್ತ್ಯೇವ – ಇತಿ ಯೋಜನಾ ।

ಕುತಃ? ಇತ್ಯತಃ, 'ತದ್ಧೇತುತಯಾ ಸಂಭವಾತ್' ಇತಿ ಹೇತುಂ ವ್ಯಾಚಷ್ಟೇ । 'ಹಿ' -ಯತಃ । 'ವೇದವಿದ್ಯಾಧಿಕಾರಃ' ಇತ್ಯತ್ರಾಪಿ ಸಂಬಧ್ಯತೇ । 'ತೇಷಾಂ' - ದೇವಾನಾಮ್ । ಅಧಿಕಾರಸಂಭವೋಽಪಿ ಕುತಃ? ಇತ್ಯತಃ, ಅತ್ರಾಪಿ ಸಂಭವಾತ್ ಇತ್ಯೇತದೇವಾಽವೃತ್ತ್ಯ ಹೇತುತಯಾ ಯೋಜಯತಿ – ವಿಶಿಷ್ಟೇತಿ ॥ 'ತೇಷಾಮ್' ಇತ್ಯತ್ರಾಪಿ ಅನ್ವೀಯತೇ । ತಥಾ ಚ – 'ತೇಷಾಂ' - ಯೋಗ್ಯಮನುಷ್ಯಾಣಾಂ ವಿದ್ಯಾಕರ್ಮಭ್ಯಾಂ ದೇವಾದಿತ್ವಪ್ರಾಪ್ತಿಮತಾಂ 'ಸಂಭವಾತ್' - ವಿಶಿಷ್ಟ-ಬುದ್ಧ್ಯಾದಿಭಾವಾದ್ ಅರ್ಥಗ್ರಹಣಾನುಷ್ಠಾನೋಪಯುಕ್ತಬುದ್ಧಿವಿಶೇಷಾದಿ-ಸದ್ಭಾವಾತ್ - ಇತ್ಯರ್ಥಃ । ಅರ್ಥಿತ್ವಸಾಮರ್ಥ್ಯೇ 'ಆದಿ'ಪದೇನ ಗ್ರಾಹ್ಯೇ । ನ ಚ ಅರ್ಥಿತ್ವಾಭಾವ ಇತ್ಯತ್ರಾಪಿ ತೇಷಾಂ ಸಂಭವತಿ 'ಹಿ' ಇತ್ಯೇವ ಹೇತುಃ । 'ವಿದ್ಯಾ-ಭಿಸ್ತೇಷಾಂ ಮೋಕ್ಷಸಿದ್ಧಿಃ ಸಂಭವತಿ ಹಿ' ಇತಿ ತದರ್ಥಃ ।

ಇಲ್ಲಿ 'ತದುಪರಿ' ಎಂಬ ಸಾಧ್ಯಧರ್ಮಿಯನ್ನು ಸೂಚಿಸುವ ಪದವನ್ನು ಅನುವಾದ ಮಾಡಿ 'ತೇಷಾಂ ತಸ್ಮಾತ್ ತಸ್ಯಾಃ' ಎಂಬ ವಿಗ್ರಹವನ್ನು ಆಶ್ರಯಿಸಿ ''ತದುಪರಿ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ವೇದವಿದ್ಯಾಧಿಕಾರಃ' ಎಂಬ ಪದವು ಹಿಂದಿನ ಭಾಷ್ಯ-ವಾಕ್ಯದಿಂದ ಅನುವೃತ್ತಿಯನ್ನು ಹೊಂದುತ್ತದೆ. 'ಮನುಷ್ಯರಾಗಿರುವಾಗ ಮಾತ್ರವಲ್ಲ ಕಿಂತು ಅದರ ಮುಂದಿನ ಕಾಲದಲ್ಲೂ' ಎಂಬುದಾಗಿ 'ಅಪಿ'ಶಬ್ದದ ಅರ್ಥ. ತಥಾ ಚ – ತೇಷಾಂ - ಅಂದರೆ ಮನುಷ್ಯರಾಗಿದ್ದು ದೇವತಾಪದಕ್ಕೆ ಯೋಗ್ಯರಾದ ಜೀವರಿಗೆ, ಆ ದೇವತಾಪದಪ್ರಾಪ್ತಿಯ ಮುಂಚೆ, ಮನುಷ್ಯಶರೀರವನ್ನು ಹೊಂದಿರುವವರಿಗೆ, ತಸ್ಮಾತ್ - ಮನುಷ್ಯತ್ವದಿಂದ, 'ಉಪರಿ' - ಮುಂದೆ ಅಂದರೆ ಮನುಷ್ಯಶರೀರವನ್ನು ಕಳೆದುಕೊಂಡ ನಂತರ, 'ತಸ್ಯಾಃ ಉಪರಿ' - ದೇವ, ಉಪದೇವ ಮೊದಲಾದ ಪದ-ಪ್ರಾಪ್ತಿಯ ಅನಂತರ ಕಾಲದಲ್ಲೂ ದೇವತ್ವವನ್ನು ಹೊಂದಿರುವವರಿಗೂ ವೇದವಿದ್ಯಾಧಿ-ಕಾರ ಇದ್ದೇ ಇರುವುದು – ಎಂದು ಯೋಜನೆ.

ದೇವತ್ವವನ್ನು ಪಡೆದವರಿಗೂ ವೇದವಿದ್ಯಾಧಿಕಾರವಿದೆ ಎಂಬ ವಿಷಯದಲ್ಲಿ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಅವರಿಗೆ ವೇದವಿದ್ಯಾಧಿಕಾರವನ್ನು ಸಾಧಿ-

ಸುವ ಹೇತುವೆಂದು ಸೂತ್ರದಲ್ಲಿರುವ 'ಸಂಭವಾತ್' ಎಂಬ ಪದವನ್ನು 'ಹಿ' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಹಿ' ಎಂದರೆ ಯಾವ ಕಾರಣದಿಂದ ಎಂದು ಅರ್ಥ. ಹಿಂದಿನ ಭಾಷ್ಯವಾಕ್ಯದ 'ವೇದವಿದ್ಯಾಧಿಕಾರಃ' ಎಂಬ ಪದವು ಇಲ್ಲಿಯೂ ಸಹ ಸಂಬಂಧಿಸುತ್ತದೆ. ಭಾಷ್ಯದಲ್ಲಿ 'ತೇಷಾಂ' ಎಂಬ ಪದಕ್ಕೆ ದೇವತೆಗಳಿಗೆ ಎಂದು ಅರ್ಥ.

ದೇವತೆಗಳಿಗೂ ಅಧಿಕಾರವು ಸಂಭವಿಸುತ್ತದೆ ಎಂದು ಅರ್ಥ. ಅವರಿಗೆ ಅಧಿಕಾರ-ಸಂಭವವೂ ಕೂಡ ಯಾವ ಆಧಾರದಿಂದ ಎಂಬ ಪ್ರಶ್ನೆಗೆ ಉತ್ತರವಾಗಿ 'ಸಂಭವಾತ್' ಎಂಬ ಪದವನ್ನು ಆವೃತ್ತಿಮಾಡಿಕೊಂಡು, ಹೇತುವಾಗಿ ಅದನ್ನು ''ವಿಶಿಷ್ಟ'' ಎಂಬ ಪದದಿಂದ ಯೋಜಿಸುತ್ತಿದ್ದಾರೆ. ''ತೇಷಾಂ' ಎಂಬ ಪದವು ಇಲ್ಲೂ ಅನ್ವಯಿಸುತ್ತದೆ.

ತಥಾ ಚ – ''ತೇಷಾಂ'' - ವಿದ್ಯೆ ಮತ್ತು ಕರ್ಮಗಳಿಂದ ದೇವತ್ವ ಮೊದಲಾದ-ವನ್ನು ಪಡೆದ ಯೋಗ್ಯಮನುಷ್ಯರಿಗೆ ''ಸಂಭವಾತ್'' ಅಂದರೆ 'ವಿಶಿಷ್ಟಬುದ್ಧ್ಯಾದಿ-ಭಾವಾತ್ ಅರ್ಥಗ್ರಹಣ ಮತ್ತು ಅನುಷ್ಠಾನಕ್ಕೆ ಉಪಯುಕ್ತವಾದ ಬುದ್ಧಿವಿಶೇಷ ಮೊದಲಾದವುಗಳು ಇರುವುದರಿಂದ' ಎಂದು ಅರ್ಥ. ಇಲ್ಲಿ ''ಆದಿ''ಪದದಿಂದ ಅರ್ಥಿತ್ವ ಅಂದರೆ ಫಲಾಪೇಕ್ಷೆ ಹಾಗೂ ಸಾಮರ್ಥ್ಯಗಳು ಗ್ರಹಿಸಲ್ಪಡುತ್ತವೆ. 'ಅವರಿಗೆ ಫಲಾಪೇಕ್ಷೆಯಿಲ್ಲ' ಎಂದು ಶಂಕಿಸಿದರೆ ಅದು ಇರುವುದೆಂಬ ವಿಷಯದಲ್ಲೂ ''ತೇಷಾಂ ಸಂಭವತಿ ಹಿ'' ಎಂದು ಹೇತುವಾಗಿ 'ಹಿ'ಶಬ್ದವು ಅನ್ವಯಿಸುತ್ತದೆ. ವಿದ್ಯೆ ಮೊದಲಾದ-ವುಗಳಿಂದ ಅವರಿಗೆ ಮೋಕ್ಷಸಿದ್ಧಿಯು ಸಂಭವಿಸುವುದರಿಂದ ಎಂದು ಅದರ ಅರ್ಥ.

ಭಾ.ದೀ. – ಅನೇನ – ಸೂತ್ರೇ 'ತತ್' ಇತ್ಯಾವರ್ತತೇ। ಮನುಷ್ಯಪರಾಮರ್ಶಿ ಚೇದಂ ಬುದ್ಧಿಸ್ಥಪರಾಮರ್ಶಿ ಚ । 'ಅಪಿಃ' ಸಮುಚ್ಚಯೇ । 'ಅಧಿಕಾರಃ' ಇತಿ ಬುದ್ಧ್ಯಾ ವಿವಿಚ್ಯ ಅತ್ರ ಅನ್ವೇತಿ । ಅನಧಿಕಾರಾಧಿಕಾರಾಭಿಧಾಯಕಜೈಮಿನಿ-ಬಾದರಾಯಣೋಕ್ತಿರೂಪವಿಪ್ರತಿಪತ್ತಿಸೂಚನಾಯ 'ಬಾದರಾಯಣ'ಪದಮ್ । ತತ್ತ್ವಪ್ರದೀಪರೀತ್ಯಾ ತಾತ್ಪರ್ಯಜ್ಞಾಪನಾರ್ಥಮಧಿಕಾರಾಧಿಕ್ಯಜ್ಞಪ್ತಿದಾರ್ಢ್ಯಾರ್ಥಂ ಚ ಬಾದರಾಯಣಃ ಸ್ವಯಮೇವ ವಕ್ತೀತ್ಯಾಹ ಇತಿ ವಾ । ಸಂಭವಾತ್ ಇತಿ ಚಾವರ್ತತೇ।

ಇದರಿಂದ – ಸೂತ್ರದಲ್ಲಿ ''ತತ್'' ಎಂಬ ಪದವು ಆವೃತ್ತಿಯನ್ನು ಪಡೆಯುತ್ತದೆ. ಆ ಪದವು ಮನುಷ್ಯರನ್ನು ಪರಾಮರ್ಶಿಸುವುದು. ಅಥವಾ ಬುದ್ಧಿಸ್ಥವಾದ ವಿಷಯವನ್ನು ಪರಾಮರ್ಶಿಸುವುದು. 'ಅಪಿ'ಶಬ್ದವು ಸೂತ್ರದಲ್ಲಿ ಸಮುಚ್ಚಯವನ್ನು ಹೇಳುವುದು. 'ಅಧಿಕಾರ' ಎಂಬ ಪದವನ್ನು ಹಿಂದಿನ ಸೂತ್ರದಿಂದ ಬುದ್ಧಿಯಿಂದ ಬೇರ್ಪಡಿಸಿ ಇಲ್ಲಿ ಅನ್ವಯಿಸಬೇಕು. 'ಅಧಿಕಾರವಿಲ್ಲ' ಎಂದು ಹೇಳುವ ಜೈಮಿನಿಗಳ ಉಕ್ತಿ ಹಾಗೂ 'ಅಧಿಕಾರವಿದೆ' ಎಂದು ಹೇಳುವ ಬಾದರಾಯಣರ ಉಕ್ತಿ ಎಂಬ ವಿಪ್ರತಿಪತ್ತಿಯನ್ನು ಬಾದರಾಯಣಪದವು ಸೂಚಿಸುವುದು.

ಅಥವಾ ತತ್ತ್ವಪ್ರದೀಪದಲ್ಲಿ ಹೇಳಿರುವಂತೆ ಅಧಿಕಾರವಿದೆ ಎಂಬ ವಿಷಯದಲ್ಲಿ ಬಾದರಾಯಣರಿಗೆ ಇರುವ ತಾತ್ಪರ್ಯವನ್ನು ತಿಳಿಸಲು ಮತ್ತು ದೇವತೆಗಳಿಗೆ ಅಧಿಕಾರಾಧಿಕ್ಯ, ಜ್ಞಾನದಾರ್ಢ್ಯವನ್ನು ಸೂಚಿಸಲು ಬಾದರಾಯಣರು ತಮ್ಮ ಹೆಸರನ್ನು ತಾವೇ ಉಲ್ಲೇಖ ಮಾಡುತ್ತಿದ್ದಾರೆ. ''ಸಂಭವಾತ್'' ಎಂಬ ಪದವೂ ಆವೃತ್ತಿಯನ್ನು ಪಡೆಯುತ್ತದೆ.

ಭಾ.ದೀ. – ತಥಾ ಚ ಯತೋ ನ ಕೇವಲಂ ದೇವಾದಿಪದಯೋಗ್ಯಜೀವಾನಾಂ ಪದಪ್ರಾಪ್ತೇಃ ಪೂರ್ವಂ ಭೂಮೌ ಕಿಂಚಿತ್ಕಾಲಂ ಮನುಷ್ಯಾಣಾಂ ಸತಾಂ ತಸ್ಯಾಂ ದಶಾಯಾಮೇವಾಧಿಕಾರಃ, ಕಿಂತು 'ತದುಪರ್ಯಪಿ' ತಸ್ಮಾನ್ಮನುಷ್ಯತ್ವಾದುಪರಿ ತದತ್ಯಯೇನ ತಾಭ್ಯಾಂ ವಿದ್ಯಾಕರ್ಮಭ್ಯಾಂ ತಸ್ಯಾಃ ದೇವಾದಿತ್ವಪ್ರಾಪ್ತೇರುಪರಿತನಕಾಲೇಽಪಿ ದೇವಭಾವಮಾಪನ್ನಾನಾಮಪಿ ವೇದವಿದ್ಯಾಯಾಮಧಿಕಾರೋಽಸ್ತ್ಯೇವ । ನ ಚ ತತ್ಕಾರಣಾಭಾವಃ । 'ಸಂಭವಾತ್' ಅಧಿಕಾರೋಪಯೋಗಿನೀ ವಿಶಿಷ್ಟಬುದ್ಧ್ಯಾದೇಸ್ತೇಷು ಸಂಭವಾತ್ ।

ನ ಚ ದೇವಾದೀನಾಂ ವಿಶಿಷ್ಟಬುದ್ಧಿಸಾಮರ್ಥ್ಯಸದ್ಭಾವೇಽಪಿ ಅರ್ಥಿತ್ವಾಭಾವಾದಧಿಕಾರಾಭಾವಃ - ಇತಿ ವಾಚ್ಯಮ್ । ಕುತಃ? 'ಸಂಭವಾತ್' - 'ವಿದ್ಯಾಸಾಧ್ಯಜ್ಞಾನಮೋಕ್ಷಯೋರರ್ಥಿತ್ವಸಂಭವಾತ್' ಇತಿ ಭಗವಾನ್ ಬಾದರಾಯಣೋ ಮನ್ಯತೇ - ಇತಿ ಸೂತ್ರಾರ್ಥ ಉಕ್ತೋ ಭವತಿ ।

ತಥಾ ಚ – ಯಾವ ಕಾರಣದಿಂದಾಗಿ ದೇವಾದಿಪದಯೋಗ್ಯರಾದ ಜೀವರಿಗೆ ಆ ಪದಪ್ರಾಪ್ತಿಯಾಗುವ ಪೂರ್ವದಲ್ಲಿ ಕೆಲವು ಕಾಲ ಮನುಷ್ಯರಾಗಿರುವಾಗ ಆ ದೆಶೆಯಲ್ಲಿ ಮಾತ್ರ ಅಧಿಕಾರವಿರುವುದಲ್ಲ; ಕಿಂತು, 'ತದುಪರ್ಯಪಿ' ತಸ್ಮಾತ್ - ಅಂದರೆ ಆ ಮನುಷ್ಯತ್ವಕ್ಕಿಂತ, 'ಉಪರಿ' - ಅಂದರೆ ಆ ಮನುಷ್ಯತ್ವವು ಹೋಗಿ, 'ತಾಭ್ಯಾಂ' - ಆ ವಿದ್ಯೆ ಮತ್ತು ಕರ್ಮಗಳಿಂದ 'ತಸ್ಯಾಃ' - ದೇವಾದಿಪದಪ್ರಾಪ್ತಿಯ ಮುಂದಿನ ಕಾಲ-ದಲ್ಲೂ ಕೂಡ ಅಂದರೆ, ದೇವಭಾವವನ್ನು ಪಡೆದವರಿಗೂ ಕೂಡ ವೇದವಿದ್ಯೆಯಲ್ಲಿ ಅಧಿಕಾರವು ಇದ್ದೇ ಇರುವುದು. ಅದಕ್ಕೆ ಕಾರಣವಿಲ್ಲ ಎಂದು ಹೇಳಲಾಗದು. ಏಕೆಂದರೆ, ''ಸಂಭವಾತ್'' ಅಧಿಕಾರಕ್ಕೆ ಆವಶ್ಯಕವಾದ ವಿಶಿಷ್ಟಬುದ್ಧಿ ಮೊದಲಾದವುಗಳು ಅವರಲ್ಲಿ ಇದ್ದೇ ಇರುವುದು. ದೇವತೆಗಳೇ ಮೊದಲಾದವರಿಗೆ ವಿಶಿಷ್ಟಬುದ್ಧಿ ಮತ್ತು ಸಾಮರ್ಥ್ಯ-ಗಳು ಇದ್ದರೂ ಫಲಾಪೇಕ್ಷೆಯಿಲ್ಲದಿರುವುದರಿಂದ ಅಧಿಕಾರವಿಲ್ಲ ಎಂದು ಹೇಳಲಾಗದು. ಏಕೆಂದರೆ, ''ಸಂಭವಾತ್'' - ವಿದ್ಯೆಯಿಂದ ಲಭಿಸುವ ಜ್ಞಾನ ಮತ್ತು ಮೋಕ್ಷರೂಪ ಫಲದಲ್ಲಿ ಅವರಿಗೆ ಅಪೇಕ್ಷೆ ಇರುವುದು ಸಾಧ್ಯವಿದೆ ಎಂದು ಭಗವಾನ್ ಬಾದರಾ-ಯಣರು ತಿಳಿಯುತ್ತಾರೆ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನನು 'ನ ದೇವಾ ವಿದ್ಯಾಧಿಕಾರಿಣಃ, ತಥಾ ಸತಿ ಸೂತ್ರೇಽ-ಮನುಷ್ಯತ್ವಮಾತ್ರವ್ಯಾವರ್ತಕಮನುಷ್ಯಪದಪ್ರಯೋಗೇಣ ತಿರ್ಯಗಾದಿವತ್ ಅಮನುಷ್ಯತ್ವಾನ್ನ ದೇವಾ ವೇದವಿದ್ಯಾಧಿಕಾರಿಣಃ' ಇತ್ಯನುಮಾನಸೂಚನಾತ್ ತದ್ವಿರೋಧಾಪತ್ತೇಃ, ಇತ್ಯತ ಆಹ – ತಿರ್ಯಗಾದೀನಾಮಿತಿ ॥

ಶಂಕೆ - ''ದೇವತೆಗಳು ವೇದವಿದ್ಯಾಧಿಕಾರಿಗಳಲ್ಲ; ಆದಿರುವುದಾದರೆ ಸೂತ್ರದಲ್ಲಿ ಮನುಷ್ಯರಲ್ಲದವರನ್ನು ವ್ಯಾವೃತ್ತಿಗೊಳಿಸುವ 'ಮನುಷ್ಯ'ಪದವನ್ನು ಪ್ರಯೋಗಿಸಿರುವು-ದರಿಂದ ತಿರ್ಯಕ್ ಪ್ರಾಣಿಗಳೇ ಮೊದಲಾದವರಂತೆ ದೇವತೆಗಳೂ ಮನುಷ್ಯರಲ್ಲವಾ-ದ್ದರಿಂದ ದೇವತೆಗಳು ವೇದವಿದ್ಯಾಧಿಕಾರಿಗಳಲ್ಲ'' ಎಂದು ಅನುಮಾನವು ಸೂಚಿತ-ವಾಗುವುದರಿಂದ ಆ ಅನುಮಾನದ ವಿರೋಧ ಬಂದೀತು!!

ಸಮಾಧಾನ – ಇದಕ್ಕೆ ಉತ್ತರವಾಗಿ ಭಾಷ್ಯದಲ್ಲಿ ''ತಿರ್ಯಗಾದೀನಾಮ್'' ಎಂದು ಹೇಳಲಾಗಿದೆ.

**ಭಾಷ್ಯಮ್– ತಿರ್ಯಗಾದೀನಾಂ ತದಭಾವಾದಭಾವಃ । ತೇಷಾಮಪಿ ಯತ್ರ ವಿಶಿಷ್ಟಬುದ್ಧ್ಯಾದಿಭಾವಸ್ತತ್ರಾವಿರೋಧಃ ।**

ತಿರ್ಯಕ್‌ಪ್ರಾಣಿಗಳೇ ಮೊದಲಾದವುಗಳಿಗೆ ವಿಶಿಷ್ಟಬುದ್ಧ್ಯಾದಿಗಳು ಇಲ್ಲದಿರುವುದರಿಂದ ವೇದವಿದ್ಯಾಧಿಕಾರವಿಲ್ಲ. ಅವರಿಗೂ ಎಲ್ಲಿ ವಿಶಿಷ್ಟಬುದ್ಧ್ಯಾದಿಗಳು ಇರುವುದೋ ಅಂತಹ ಸ್ಥಳಗಳಲ್ಲಿ ವೇದ-ವಿದ್ಯಾಧಿಕಾರವನ್ನು ಒಪ್ಪಲು ಯಾವ ವಿರೋಧವೂ ಇಲ್ಲ.

ಭಾ.ದೀ. – 'ಆದಿ'ಪದೇನ ಸ್ಥಾವರಾಣಿ ಮೂಢಮನುಷ್ಯಾ ವಾ ಗೃಹ್ಯಂತೇ । 'ತದಭಾವಾತ್' ವಿಶಿಷ್ಟಬುದ್ಧ್ಯಾದೇರಭಾವಾತ್ 'ಅಭಾವಃ' ತಸ್ಯ ವೇದವಿದ್ಯಾಧಿಕಾರಸ್ಯ ।

ಅನೇನ – ಅಧಿಕಾರಾಭಾವೇ ವಿಶಿಷ್ಟಬುದ್ಧ್ಯಾದಿರಾಹಿತ್ಯಸ್ಯ ಪ್ರಯೋಜಕ-ತ್ವೋಕ್ತ್ಯಾ ಪರೋಕ್ತಾಮನುಷ್ಯತ್ವಹೇತೋಃ ಸೋಪಾಧಿಕತ್ವಂ ಸಾಧ್ಯವ್ಯತಿರೇಕ-ಸಾಧಕೋಪಾಧಿವ್ಯತಿರೇಕಾಖ್ಯಪ್ರತಿಪಕ್ಷಗ್ರಸ್ತತ್ವಂ ಚೋಕ್ತಂ ಭವತಿ । ಸೌತ್ರ-ಮನುಷ್ಯಪದಂ ಚ ಮನನಾದಿಶೀಲಪರಂ ಸದ್ ವಿಶಿಷ್ಟಬುದ್ಧ್ಯಾದಿರಹಿತಮೇವ ಚೇತನಂ ವ್ಯಾವರ್ತಯತಿ, ನ ತು ಮರ್ತ್ಯಭಿನ್ನಮಾತ್ರಮಿತಿ ನ ತದ್ವಿರೋಧಃ - ಇತಿ ಭಾವಃ।

ತಿರ್ಯಗಾದೀನಾಮ್ ಎಂಬಲ್ಲಿರುವ 'ಆದಿ' ಪದದಿಂದ (ಆದಿಪದೇನ ವರ್ಣಾ-ವರಮೂಢಮನುಷ್ಯಾಃ - ಆದಿಪದದಿಂದ ಅವರವರ್ಣದವರು ಹಾಗೂ ಮೂಢ-ಮನುಷ್ಯರು ಗ್ರಹಿಸಲ್ಪಡುವರು ಎಂದು ಪಾಠಾಂತರ) ಸ್ಥಾವರಜೀವರು ಅಥವಾ ಮೂಢಮನುಷ್ಯರು ಗ್ರಹಿಸಲ್ಪಡುವರು. 'ತದಭಾವಾತ್' ವಿಶಿಷ್ಟಬುದ್ಧ್ಯಾದಿಗಳು ಇಲ್ಲದಿರುವುದರಿಂದ 'ಅಭಾವಃ' - ಆ ವೇದವಿದ್ಯಾಧಿಕಾರದ ಅಭಾವವು ಎಂದರ್ಥ.

ಇದರಿಂದ – ಅಧಿಕಾರವಿಲ್ಲದಿರುವುದಕ್ಕೆ ವಿಶಿಷ್ಟಬುದ್ಧಿಮೊದಲಾದವುಗಳು ಇಲ್ಲದಿ-ರುವುದು ಪ್ರಯೋಜಕವೆಂದು ಹೇಳುವ ಮೂಲಕ ಪೂರ್ವಪಕ್ಷಿಯು ಹೇಳಿದ ಅಮನು-

ಷತ್ವ ಎಂಬ ಹೇತುವಿಗೆ ಉಪಾಧಿ ಇರುವುದೆಂದು ಆ ಹೇತುವು ಸಾಧ್ಯಾಭಾವವನ್ನು ಸಾಧಿಸುವ ಉಪಾಧ್ಯಭಾವವೆಂಬ ಸತ್ಪ್ರತಿಪಕ್ಷದೋಷಗ್ರಸ್ತವಾಗಿದೆ – ಎಂದು ಉಕ್ತವಾಗು-ವುದು. ಹಿಂದಿನ ಸೂತ್ರದಲ್ಲಿರುವ ಮನುಷ್ಯಪದವಾದರೋ ಮನನಾದಿಸ್ವಭಾವವುಳ್ಳ ಜೀವನನ್ನು ಹೇಳುವ ಅಭಿಪ್ರಾಯವುಳ್ಳದ್ದಾಗಿ ವಿಶಿಷ್ಟಬುದ್ಧಿ ಮೊದಲಾದವುಗಳು ಇಲ್ಲ-ದಿರುವ ಚೇತನವನ್ನು ವ್ಯಾವೃತ್ತಿಗೊಳಿಸುವುದೇ ಹೊರತು ಮರ್ತ್ಯರಿಂದ ಭಿನ್ನರಾದ ಎಲ್ಲರನ್ನೂ ವ್ಯಾವೃತ್ತಿಗೊಳಿಸುವುದಿಲ್ಲವಾದ್ದರಿಂದ ಮನುಷ್ಯಪದದ ವಿರೋಧವಿಲ್ಲ ಎಂದು ಭಾವ.

ಭಾ.ದೀ.– ನನು 'ನ ವಿಶಿಷ್ಟಬುದ್ಧ್ಯಾದಿರಾಹಿತ್ಯಮ್ ಉಪಾಧಿಃ । ತಿರ್ಯಕ್ಷು ಅಧಿಕಾರಾಭಾವರೂಪಸಾಧ್ಯಾವ್ಯಾಪಕತ್ವಾತ್ । ಅತ ಏವ ನ ತದಭಾವೋಽಪಿ ಸಾಧ್ಯವ್ಯತಿರೇಕಹೇತುಃ' ಇತ್ಯತ ಆಹ – ತೇಷಾಮಪೀತಿ ॥ 'ಅಪಿಃ' ಉಭಯತ್ರಾ-ನ್ವೇತಿ । ತತ್ರಾಽದ್ಯಃ ಸಮುಚ್ಚಯೇ । 'ಅಧಿಕಾರ' ಇತಿ ಶೇಷಃ । ತಥಾ ಚ – ನ ಕೇವಲಂ ದೇವಾನಾಂ, ಕಿಂತು 'ತೇಷಾಂ' ತಿರಶ್ಚಾಮಪಿ ಅಧಿಕಾರೇಽಪಿ ನ ವಿರೋಧಃ।

ಶಂಕೆ – ನನು ವಿಶಿಷ್ಟಬುದ್ಧ್ಯಾದಿರಾಹಿತ್ಯವು ಪರೋಕ್ತ ಅನುಮಾನಕ್ಕೆ ಉಪಾಧಿ ಯಾಗಲಾರದು. ಏಕೆಂದರೆ, ತಿರ್ಯಕ್‌ಪ್ರಾಣಿಗಳಲ್ಲಿ ಅಧಿಕಾರಾಭಾವವೆಂಬ ಸಾಧ್ಯಕ್ಕೆ ವ್ಯಾಪಕವಾಗದಿರುವುದಿಲ್ಲ. ಆದ್ದರಿಂದಲೇ ವಿಶಿಷ್ಟಬುದ್ಧ್ಯಾದಿರಾಹಿತ್ಯದ ಅಭಾವವೂ ಕೂಡ ಸಾಧ್ಯಾಭಾವವನ್ನು ಸಾಧಿಸುವ ಅಂದರೆ ವೇದವಿದ್ಯಾನಧಿಕಾರವೆಂಬ ಸಾಧ್ಯದ ಅಭಾವವನ್ನು ಸಾಧಿಸುವ ಹೇತುವಾಗಲಾರದು?

ಈ ಶಂಕೆಯನ್ನು ಪರಿಹರಿಸಲು ಭಾಷ್ಯದಲ್ಲಿ ''ತೇಷಾಮಪಿ'' ಎಂದು ಹೇಳಲಾಗಿದೆ. 'ಅಪಿ'ಶಬ್ದವು ಎರಡೂ ಕಡೆ ಅನ್ವಯವನ್ನು ಹೊಂದುವುದು. ಅವುಗಳಲ್ಲಿ ಮೊದಲನೆ-ಯದು ಸಮುಚ್ಚಯವನ್ನು ಹೇಳುವುದು. 'ಅಧಿಕಾರಃ' ಎಂಬ ಪದವು ಇಲ್ಲಿ ಶೇಷ-ವಾಗಿದೆ. ತಥಾ ಚ – ದೇವತೆಗಳಿಗೆ ಮಾತ್ರವಲ್ಲ, ಕಿಂತು ತಿರ್ಯಕ್ ಪ್ರಾಣಿಗಳಿಗೂ ಅಧಿ ಕಾರವಿದ್ದರೂ ವಿರೋಧವಿಲ್ಲ.

ಭಾ.ದೀ.– ನನು ಕಥಮ್ ಅವಿರೋಧಸ್ತಿರ್ಯಕ್ಷು ಸರ್ವತ್ರ ವೇದಾಧಿಕಾರೇ ಮಾನವಿರೋಧಾಪಾತಾದಿತ್ಯತ ಆಹ – ತೇಷಾಮಪೀತಿ ॥ ತಿರಶ್ಚಾಂ ಮಧ್ಯೇಽಪಿ ಇತ್ಯರ್ಥಃ । 'ಯತ್ರ' ಯೇಷು ವಿಶಿಷ್ಟಬುದ್ಧ್ಯರ್ಥಿತ್ವಾಖ್ಯರಾಗಾದಿಭಾವಃ ತತ್ತತ್ತ್ವಂ ತತ್ರೈವಾಧಿಕಾರೇ 'ಅವಿರೋಧಃ' ಮಾನಾವಿರೋಧಃ । ಬಾಧೋ ನ ಸರ್ವತ್ರ - ಇತ್ಯರ್ಥಃ । ಅನೇನ ಅಪಿನಾ ಸೌತ್ರೋಽಪಿಶಬ್ದೋ ಜರಿತಾರ್ಯಾದಿಸಮುಚ್ಚಾಯಕಶ್ಚೇತಿ ಸೂಚಿತಮ್ । ಯದಾಹ ತತ್ತ್ವಪ್ರದೀಪಿಕಾಕಾರಃ – 'ತೇಷಾಮಪೀತ್ಯಾದಿರಪಿಪದವ್ಯಾಖ್ಯಾ' ಇತಿ ॥

ಆನಂದಮಾಲಾಕಾರೋಽಪಿ – 'ತಿರ್ಯಂಚೋಽಪಿ ಕೇಚಿದಪಿಶಬ್ದಗೃಹೀತಾಃ' ಇತ್ಯಾಹ । ತಥಾ ಚ – ಮನುಷ್ಯಭಿನ್ನೇಷ್ವಪಿ ತಿರ್ಯಕ್ಷ್ವಧಿಕಾರಸದ್ಭಾವಾತ್ ವ್ಯಭಿಚಾರಾದಧಿಕಾರಾಭಾವೇ ನಾಮನುಷ್ಯತ್ವಂ ಹೇತುಃ, ಕಿಂತು ವಿಶಿಷ್ಟಬುದ್ಧ್ಯಾದಿರಾಹಿತ್ಯಮೇವಾವ್ಯಭಿಚಾರಾತ್ । ಅತೋ ಭವತ್ಯೇವ ಸ ಉಪಾಧಿಃ । ಅತ ಏವ ಸೌತ್ರಮನುಷ್ಯಪದಸ್ಯ ವ್ಯಾವರ್ತ್ಯಸಂಕೋಚೋಽಪಿ ಯುಕ್ತ ಇತಿ ಭಾವಃ ।

ವಿರೋಧವಿಲ್ಲದಿರುವುದೆಂದು ಹೇಳುವುದು ಹೇಗೆ? ಎಲ್ಲಾ ತಿರ್ಯಕ್‌ಪ್ರಾಣಿಗಳಿಗೂ ವೇದಾಧಿಕಾರವು ಇರುವುದಾದಲ್ಲಿ ಪ್ರಮಾಣವಿರೋಧ ಬಂದೀತು? ಎಂಬ ಶಂಕೆಗೆ ಉತ್ತರವಾಗಿ ''ತೇಷಾಮಪಿ'' ಎಂದು ಹೇಳಲಾಗಿದೆ. 'ತೇಷಾಮಪಿ' ಅಂದರೆ 'ತಿರ್ಯಕ್‌ಪ್ರಾಣಿಗಳ ಮಧ್ಯದಲ್ಲೂ' ಎಂದು ಅರ್ಥ. 'ಯತ್ರ' - ಯಾವುಗಳಲ್ಲಿ ವಿಶಿಷ್ಟಬುದ್ಧಿ, ಅರ್ಥಿತ್ವ ಅಂದರೆ ಫಲೇಚ್ಛೆ ಮೊದಲಾದವುಗಳು ಇರುವವೋ, (ತತ್ರೈವ) ಅವುಗಳಲ್ಲಿ ಮಾತ್ರ ಅಧಿಕಾರವನ್ನು ಒಪ್ಪಿದರೆ 'ಅವಿರೋಧಃ' - ಪ್ರಮಾಣವಿರೋಧವಿಲ್ಲ. ಪ್ರಮಾಣಬಾಧವು ಎಲ್ಲ ತಿರ್ಯಕ್ ಪ್ರಾಣಿಗಳ ವಿಷಯದಲ್ಲಿ ಇಲ್ಲ ಎಂದು ಅರ್ಥ.

ಈ ಅಪಿಶಬ್ದದಿಂದ ಜರಿತಾರ್ಯಾದಿಗಳ ಸಮುಚ್ಚಯವನ್ನೂ ಸೂತ್ರದ ಅಪಿಶಬ್ದವು ಹೇಳುವುದೆಂದು ಸೂಚಿತವಾಗುವುದು. ಇದನ್ನೇ ತತ್ವಪ್ರದೀಪಿಕಾಕಾರರು 'ತೇಷಾಮಪಿ ಇತ್ಯಾದಿ ಅಪಿಪದವ್ಯಾಖ್ಯಾ' - 'ತೇಷಾಮಪಿ ಇತ್ಯಾದಿ ಭಾಷ್ಯವಾಕ್ಯವು ಸೂತ್ರದ ಅಪಿಪದದ ವ್ಯಾಖ್ಯೆಯಾಗಿದೆ' ಎಂದು ಹೇಳಿದ್ದಾರೆ.

ಆನಂದಮಾಲಾಗ್ರಂಥಕಾರರು ಕೂಡ – 'ತಿರ್ಯಂಚೋಽಪಿ ಕೇಚಿದಪಿ ಶಬ್ದ-ಗೃಹೀತಾಃ' - 'ಕೆಲವು ತಿರ್ಯಕ್‌ಪ್ರಾಣಿಗಳೂ ಕೂಡ ಸೂತ್ರದ ಅಪಿಶಬ್ದದಿಂದ ಗ್ರಹಿಸ-ಲ್ಪಟ್ಟಿದ್ದಾರೆ' ಎಂದು ಹೇಳುವರು. ತಥಾ ಚ – ಮನುಷ್ಯಭಿನ್ನರಾಗಿದ್ದರೂ ಕೆಲವು ತಿರ್ಯಕ್‌ಪ್ರಾಣಿಗಳಲ್ಲಿ ವೇದವಿದ್ಯಾ ಅಧಿಕಾರವಿರುವುದರಿಂದ ವ್ಯಭಿಚಾರರೂಪ ದೋಷವಿರುವ ಕಾರಣ ಆ ಮನುಷ್ಯತ್ವವು ಅಧಿಕಾರಾಭಾವವನ್ನು ಸಾಧಿಸುವ ಹೇತು-ವಾಗಲಾರದು. ಕಿಂತು ವ್ಯಭಿಚಾರದೋಷವಿಲ್ಲದಿರುವುದರಿಂದ ವಿಶಿಷ್ಟಬುದ್ಧ್ಯಾದಿ-ರಾಹಿತ್ಯವೇ ಅಧಿಕಾರಾಭಾವವನ್ನು ಸಾಧಿಸುವ ಹೇತುವಾಗುವುದು. ಆದ್ದರಿಂದ ವಿಶಿಷ್ಟ-ಬುದ್ಧ್ಯಾದಿರಾಹಿತ್ಯವು ಅಮನುಷ್ಯತ್ವ ಅನುಮಾನದಲ್ಲಿ ಉಪಾಧಿಯಾಗಿಯೇ ತೀರು-ವುದು. ಆದ್ದರಿಂದಲೇ ಸೂತ್ರದಲ್ಲಿರುವ ಮನುಷ್ಯಪದದಿಂದ ವ್ಯಾವೃತ್ತಿಗೊಳಿಸುವುದಕ್ಕೆ ಸಂಕೋಚವನ್ನು ಮಾಡುವುದೂ ಯುಕ್ತವಾಗಿದೆ ಎಂದು ಭಾವ.

**ಭಾ.ದೀ. – ನನು ಕಥಂ ತಿರಶ್ಚಾಮಪ್ಯಧಿಕಾರೇಽಪ್ಯವಿರೋಧಃ। ತೇಷಾಮಧಿ-ಕಾರನಿಷೇಧಸ್ಯ ತದದರ್ಶನಸ್ಯ ವಾ ವಿರೋಧಿತ್ವಾತ್ ಇತ್ಯಾಶಂಕ್ಯ, ನಾಽದ್ಯ ಇತ್ಯಾಹ – ನಿಷೇಧೇತಿ॥**

ತಿರ್ಯಕ್‌ಪ್ರಾಣಿಗಳಿಗೆ ಅಧಿಕಾರವನ್ನು ಒಪ್ಪಿದರೂ ಪ್ರಮಾಣವಿರೋಧವಿಲ್ಲ ಎಂದು ಹೇಳುವುದು ಹೇಗೆ? ಅವುಗಳಿಗೆ ಅಧಿಕಾರನಿಷೇಧ ಮಾಡಿರುವುದು ಅಥವಾ ಅಧಿಕಾರವಿರುವುದು ಎಲ್ಲೂ ದೃಷ್ಟವಾಗದಿರುವುದು ವಿರೋಧಿಯಾಗುವುದು? ಎಂದು ಶಂಕಿಸಿ, ಮೊದಲನೆಯ ಪಕ್ಷವಾದ ಅಧಿಕಾರನಿಷೇಧವು ಇಲ್ಲವೆಂದು ''ನಿಷೇಧ'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**ಭಾಷ್ಯಮ್ – ನಿಷೇಧಾಭಾವಾತ್ ॥ ೨೬ ॥**

ನಿಷೇಧವಿಲ್ಲದಿರುವುದರಿಂದ.

ಭಾ.ದೀ. – 'ತೇಷಾಮ್' ಇತ್ಯತ್ರಾಪಿ ಸಂಬಧ್ಯತೇ। 'ಅಧಿಕಾರೇ' ಇತ್ಯಾದೌ ಸಂಯೋಜ್ಯಮ್ । ತೇನ ನಿಷೇಧರಾಹಿತ್ಯೇ ಸತಿ ವಿಶಿಷ್ಟಬುದ್ಧ್ಯಾದಿಮತ್ತ್ವಮೇವ

ಅಧಿಕಾರೇ ಪ್ರಯೋಜಕಮ್, ನ ಕೇವಲಂ ಯೇನ ಶೂದ್ರಾದೌ ವ್ಯಭಿಚಾರಃ ಸ್ಯಾದಿತಿ ಸೂಚಿತಮ್ ।

'ತೇಷಾಂ' ಎಂಬ ಹಿಂದಿನ ವಾಕ್ಯದ ಪದವು ಇಲ್ಲೂ ಸಂಬಂಧವನ್ನು ಪಡೆಯುತ್ತದೆ. 'ಅಧಿಕಾರೇ' ಎಂಬ ಪದವನ್ನು ಈ ವಾಕ್ಯದ ಆದಿಯಲ್ಲಿ ಸೇರಿಸಬೇಕು. ಆದರಿಂದ – ವೇದವಿದ್ಯಾಧಿಕಾರವನ್ನು ಕುರಿತು 'ನಿಷೇಧರಾಹಿತ್ಯೇ ಸತಿ ವಿಶಿಷ್ಟ-ಬುದ್ಧ್ಯಾದಿಮತ್ವಮ್' - 'ನಿಷೇಧವಿಲ್ಲದಿರುವಿಕೆಯ ಜೊತೆಗೆ ವಿಶಿಷ್ಟಬುದ್ಧ್ಯಾದಿಗಳು ಇರುವುದು' ಪ್ರಯೋಜಕವಾಗಿದೆ ಹೊರತು, ಕೇವಲ ವಿಶಿಷ್ಟಬುದ್ಧ್ಯಾದಿಗಳು ಇರುವುದು ಪ್ರಯೋಜಕವಲ್ಲ. ಅಷ್ಟುಮಾತ್ರವೇ ಪ್ರಯೋಜಕವಾಗಿದ್ದ ಪಕ್ಷದಲ್ಲಿ ಶೂದ್ರಾದಿಗಳಲ್ಲಿ ವ್ಯಭಿಚಾರದೋಷ ಬರುತ್ತಿತ್ತು ಎಂದು ಸೂಚಿತವಾಗುವುದು.

ಭಾ.ದೀ. – ನ ದ್ವಿತೀಯ ಇತ್ಯಾಹ – 'ದೃಶ್ಯಂತೇ ಹಿ' ಇತಿ ॥

ತಿರ್ಯಕ್‌ಪ್ರಾಣಿಗಳಿಗೆ ಅಧಿಕಾರವಿರುವುದು ಎಲ್ಲೂ ದೃಷ್ಟವಾಗಿಲ್ಲವಲ್ಲ; ಅವುಗಳಿಗೆ ಅಧಿಕಾರ ಒಪ್ಪಲು ಆದೇ ವಿರೋಧಿಯಾಗುವುದು ಎಂಬ ಎರಡನೆಯ ಪಕ್ಷವೂ ಸರಿಯಲ್ಲ ಎಂದು ''ದೃಶ್ಯಂತೇ ಹಿ'' ಎಂಬುದರಿಂದ ಹೇಳುತ್ತಿದ್ದಾರೆ.

## ಭಾಷ್ಯಮ್ – ದೃಶ್ಯಂತೇ ಹಿ ಜರಿತಾರ್ಯಾದಯಃ ॥ ೨೬ ॥

ಜರಿತಾರಿ ಮೊದಲಾದ ತಿರ್ಯಕ್‌ಪ್ರಾಣಿಗಳು ವೇದವಿದ್ಯಾಧಿಕಾರಿಗಳು ಆಗಿರುವುದು ದೃಷ್ಟವಾಗಿದೆಯಷ್ಟೇ.

ಭಾ.ದೀ. – 'ವೇದಾಧಿಕಾರಿತಯಾ' ಇತಿ ಶೇಷಃ । 'ಹಿ'ಶಬ್ದೋ ಭಾರತಾದಿ-ಪ್ರಸಿದ್ಧಿಸೂಚಕಃ । ಅತ ಏವ ಭಾರತೇ –

'ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ ।
ತುಷ್ಟಾವ ಪ್ರಾಂಜಲಿಭೂರ್ತ್ವಾ ಯತ್ ತಚ್ಛೃಣು ನರಾಧಿಪ ॥'

(ಮಯದರ್ಶನಪರ್ವಣಿ; ಆದಿಪರ್ವ)

ಇತ್ಯಾದಿನಾ ಜರಿತಾರಿಸಾರಿಸೃಕ್ವಸ್ತಂಬಮಿತ್ರದ್ರೋಣಾಖ್ಯೇಷು ಪಕ್ಷಿಷು ಮಧ್ಯೇ ಜರಿತಾರಿರಗ್ರಜಃ ಸ್ವಭ್ರಾತೃಭಿರಸ್ಮಾನ್ ಮೋಚಯೇತಿ ಪ್ರಾರ್ಥಿತಃ 'ಅಯಮಗ್ನೇ ಜರಿತಾ' (ಋ.೧೦.೧೪೨.೧) ಇತ್ಯಾಗ್ನೇಯಸೂಕ್ತೇನಾಗ್ನಿಂ ಸ್ತುತ್ವಾ ಖಾಂಡವ-ದಹನೇ ಸ್ವಭ್ರಾತ್ರನಗ್ನಿದಾಹಾದಮೋಚಯತ್ ಇತಿ ಪ್ರತಿಪಾದಿತಮ್ । 'ಯತಃ' ಇತ್ಯರ್ಥೇ ವಾ ಹಿಶಬ್ದಃ।

ಅತ್ರ ಜರಿತಾರ್ಯಾದಯ ಇತ್ಯೇವ ಪಾಠೋ ಯುಕ್ತಃ, ನ ತು ಜರಿತರ್ಯಾ-ದಯ ಇತಿ ಹ್ರಸ್ವಯುಕ್ತಪಾಠಃ, ಭಾರತವಿರೋಧಾತ್, ತತ್ತ್ವಪ್ರದೀಪವಿರೋಧಾಚ್ಚ ಇತಿ ಧ್ಯೇಯಮ್ ।

'ದೃಶ್ಯಂತೇ ಹಿ' ಇತ್ಯನೇನ ದೇವಾ ವೇದವಿದ್ಯಾಧಿಕಾರಿಣಃ ನಿಷೇಧರಾಹಿತ್ಯೇ ಸತಿ ವಿಶಿಷ್ಟಬುದ್ಧ್ಯಾದಿಮತ್ತ್ವಾತ್ ತಾದೃಶಮರ್ತ್ಯವದಿತಿ ಸಿದ್ಧಾಂತ್ಯಭಿಮತಾನು-ಮಾನೇ ಮನುಷ್ಯತ್ವೋಪಾಧಿರ್ನಿರಸ್ತೋ ಭವತಿ । ಜರಿತಾರೌ ಆದಿಶಬ್ದಗೃಹೀತ-ಸಾರಿಸೃಕ್ವಾದೌ ಚ ಸಾಧ್ಯಾವ್ಯಾಪಕತ್ವಾತ್ ॥

'ವೇದಾಧಿಕಾರಿತಯಾ' - 'ವೇದಾಧಿಕಾರಿಗಳಾಗಿ' ಎಂಬ ಪದವು ಇಲ್ಲಿ ಶೇಷ-ವಾಗಿದೆ. 'ಹಿ'ಶಬ್ದವು ಭಾರತಮೊದಲಾದವುಗಳಲ್ಲಿ ಈ ವಿಷಯವು ಪ್ರಸಿದ್ಧವಾಗಿರು-ವುದೆಂದು ಸೂಚಿಸುವುದು. ಆದ್ದರಿಂದಲೇ ಭಾರತದಲ್ಲಿ –

'ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ ।
ತುಷ್ಟಾವ ಪ್ರಾಂಜಲಿರ್ಭೂತ್ವಾ ಯತ್ ತಚ್ಛೃಣು ನರಾಧಿಪ ॥'

– ಹೀಗೆ ತನ್ನ ಸಹೋದರರಿಂದ ಹೇಳಲ್ಪಟ್ಟ ಜರಿತಾರಿಯು ಅಂಜಲಿ ಬದ್ಧನಾಗಿ ಅಗ್ನಿಯನ್ನು ಕುರಿತು ಏನೆಂದು ಪ್ರಾರ್ಥಿಸಿದನೋ ಹೇ ರಾಜ! ಅದನ್ನು ಕೇಳು.

ಇತ್ಯಾದಿ ವಾಕ್ಯದಿಂದ ಜರಿತಾರಿ, ಸಾರಸೃಕ್ವ, ಸ್ತಂಬಮಿತ್ರ, ದ್ರೋಣ ಎಂಬ ಹೆಸರಿನ ಪಕ್ಷಿಗಳ ಮಧ್ಯೆ ಅಗ್ರಜನಾದ ಜರಿತಾರಿಯು ತನ್ನ ಸಹೋದರರಿಂದ ನಮ್ಮನ್ನು ಬಿಡುಗಡೆ ಮಾಡು ಎಂದು ಪ್ರಾರ್ಥಿತನಾಗಿ 'ಅಯಮಗ್ನೇ ಜರಿತಾ' ಎಂಬ ಆಗ್ನೇಯ-

ಸೂಕ್ತದಿಂದ ಅಗ್ನಿಯನ್ನು ಸ್ತೋತ್ರಮಾಡಿ ಖಾಂಡವವನದಹನವಾಗುವ ಸಂದರ್ಭದಲ್ಲಿ ತನ್ನ ಸಹೋದರರನ್ನು ಅಗ್ನಿದಾಹದಿಂದ ಮುಕ್ತಗೊಳಿಸಿದನು - ಎಂದು ಪ್ರತಿಪಾದಿತ-ವಾಗಿದೆ. ಅಥವಾ ಭಾಷ್ಯದ "ಹಿ" ಶಬ್ದವು ಯಾವ ಕಾರಣದಿಂದ ಎಂಬ ಅರ್ಥವನ್ನು ಹೇಳುವುದು.

ಈ ಭಾಷ್ಯವಾಕ್ಯದಲ್ಲಿ 'ಜರಿತಾರ್ಯಾದಯಃ' ಎಂಬ ಪಾಠವೇ ಯುಕ್ತವಾಗಿದೆ ಹೊರತು ಜರಿತರ್ಯಾದಯಃ ಎಂಬ ಹ್ರಸ್ವಯುಕ್ತವಾದ ಪಾಠ ಸರಿಯಲ್ಲ; ಏಕೆಂದರೆ, ಭಾರತವಿರೋಧ ಮತ್ತು ತತ್ತ್ವಪ್ರದೀಪವಿರೋಧ ಎಂದು ತಿಳಿಯತಕ್ಕದ್ದು.

'ದೃಶ್ಯಂತೇ ಹಿ' ಎಂಬ ಪದಗಳಿಂದ 'ದೇವತೆಗಳು ವೇದವಿದ್ಯಾಧಿಕಾರಿಗಳಾ-ಗಿರುವುದು ನಿಷೇಧವಿಲ್ಲದೇ ವಿಶಿಷ್ಟಬುದ್ಧ್ಯಾದಿಗಳನ್ನು ಅವರು ಹೊಂದಿರುವುದರಿಂದ, ಹಾಗಿರುವ ಮನುಷ್ಯರಂತೆ' ಎಂಬ ಸಿದ್ಧಾಂತಿಗಳಿಗೆ ಸಮ್ಮತವಾದ ಅನುಮಾನದಲ್ಲಿ ಮನುಷ್ಯತ್ವವೆಂಬ ಉಪಾಧಿಯನ್ನು ನಿರಾಕರಿಸಿದಂತಾಯಿತು. ಏಕೆಂದರೆ, ಈ ಉಪಾಧಿ-ಯು ಜರಿತಾರಿಯಲ್ಲಿ ಮತ್ತು ಆದಿಶಬ್ದದಿಂದ ಗ್ರಹಿಸಲ್ಪಡುವ ಸಾರಸೃಕ್ವ ಮೊದಲಾದ ಪಕ್ಷಿಗಳಲ್ಲಿ ಪ್ರಕೃತ ಅನುಮಾನದ ಸಾಧ್ಯವನ್ನು ಕುರಿತು ವ್ಯಾಪಕವಾಗಿಲ್ಲ.

**ಭಾ.ದೀ. – ದೇವಾನಾಂ ವೇದವಿದ್ಯಾಧಿಕಾರಸಿದ್ಧ್ಯರ್ಥಂ 'ತದುಪರಿ' ಇತ್ಯ-ನೇನೋಕ್ತಂ ಸಾದಿತ್ವಮಾಕ್ಷಿಪ್ಯ ಸಮಾದಧತ್ಸೂತ್ರಂ ಪಠಿತ್ವಾSಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ವಿರೋಧ ಇತಿ ॥**

ದೇವತೆಗಳಿಗೆ ವೇದಾಧಿಕಾರಸಿದ್ಧಿಗೋಸ್ಕರವಾಗಿ 'ತದುಪರಿ' ಎಂಬ ಸೂತ್ರದಿಂದ ಹೇಳಿದ ದೇವತೆಗಳಿಗೆ ಸಾದಿತ್ವವಿರುವುದನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳುವ ಸೂತ್ರವನ್ನು ಪಠಿಸಿ, ಸೂತ್ರದಲ್ಲಿರುವ ಆಕ್ಷೇಪಾಂಶವನ್ನು ಮೊದಲು "ವಿರೋಧ" ಎಂಬ ಸೂತ್ರವನ್ನು ಪಠಿಸಿ "ಮನುಷ್ಯಾ ಏವ" ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ಓಂ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇ-ರ್ದರ್ಶನಾತ್ ಓಂ ॥ ೨೭ ॥**

ಮನುಷ್ಯರೇ ದೇವತೆಗಳೇ ಮೊದಲಾದವರು ಆಗುವರೆಂದು ಹೇಳಿದ ಪಕ್ಷದಲ್ಲಿ ಆ ದೇವತೆಗಳನ್ನು ಉದ್ದೇಶಿಸಿ ವಿಹಿತವಾಗಿರುವ ಕರ್ಮಗಳಿಗೆ ವೈಯರ್ಥ್ಯ ಬರುವುದು ಎಂದರೆ ಅದು ಸರಿಯಲ್ಲ. ಏಕೆಂದರೆ, ಅನೇಕ ಮನುಷ್ಯರು ದೇವತಾಪದವನ್ನು ಹೊಂದಿರುವುದು ದೃಷ್ಟವಾಗಿದೆ.

**ಭಾಷ್ಯಮ್ – ಮನುಷ್ಯಾ ಏವ ದೇವಾದಯೋ ಭವಂತೀತಿ ತದುಪರೀತ್ಯುಕ್ತಮ್ । ತತ್ರ ಯದಿ ಮನುಷ್ಯಾಃ ಸಂತೋ ದೇವಾದಯೋ ಭವಂತಿ ತತ್ಪೂರ್ವಂ ದೇವತಾಭಾವಾದ್ದೇವತೋದ್ದಿಷ್ಟಕರ್ಮಣಿ ವಿರೋಧ ಇತಿ ಚೇತ್, ನ, ಅನೇಕೇಷಾಂ ದೇವತಾಪದಪ್ರಾಪ್ತೇರ್ದರ್ಶನಾತ್ ।**

**'ತೇ ಹ ನಾಕಂ ಮಹಿಮಾನಃ ಸಚಂತೇ ।**

**ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಇತಿ** (ತೈ.ಆ.೩.೧೨)**॥ ೨೭**

ಮನುಷ್ಯರೇ ದೇವಾದಿಗಳಾಗುವರೆಂದು ತದುಪರಿ ಎಂಬ ಸೂತ್ರದಲ್ಲಿ ಹೇಳಲಾಗಿದೆ. ಮನುಷ್ಯರಾಗಿದ್ದವರು ದೇವತೆಗಳೇ ಮೊದಲಾಗಿ ಆಗುವರೆಂದು ಹೇಳಿದ ಪಕ್ಷದಲ್ಲಿ ಅವರು ದೇವತೆಗಳಾಗುವ ಮುಂಚೆ ದೇವತೆಗಳಿಲ್ಲದೇ ಇರುವುದರಿಂದ ಆ ದೇವತೆಗಳನ್ನು ಉದ್ದೇಶಿಸಿ ವಿಹಿತವಾದ ಕರ್ಮದ ವಿಷಯದಲ್ಲಿ ವಿರೋಧ ಬರುವುದೆಂದರೆ, ಅದು ಸರಿಯಲ್ಲ. ಏಕೆಂದರೆ 'ತೇಹ ನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬುದಾಗಿ ಅನೇಕರು ದೇವತಾಪದವನ್ನು ಪಡೆದಿರುವುದು ದೃಷ್ಟವಾಗಿದೆ.

ಭಾ.ದೀ. – ಮನುಷ್ಯಾ ಏವೇತಿ ॥ 'ದೇವಾದಿಪದಯೋಗ್ಯಾ ಜೀವಾಃ ಪೂರ್ವಂ ಭೂಮೌ ಕಿಂಚಿತ್‌ಕಾಲಂ ಮನುಷ್ಯಾಃ ಸಂತ ಏವ ಅಥ ದೇವಾದಯೋ

ಭವಂತಿ - ಇತ್ಯರ್ಥಃ । ನ ತು ಮನುಷ್ಯಭಾವಂ ವಿನಾ' - ಇತ್ಯೇವಶಬ್ದಾರ್ಥಃ । ಇತ್ಯುಕ್ತಮಿತಿ ॥ ಅತ್ರ 'ಉಕ್ತಮ್' ಇತ್ಯನಂತರಂ 'ತದಯುಕ್ತಮ್' ಇತಿ ಶೇಷಃ ।

ಕುತಃ? ಇತ್ಯತಃ ತತ್ಪಕ್ಷೇ ಬಾಧಕೋಕ್ತಿಪರಂ 'ವಿರೋಧಃ' ಇತ್ಯಂಶಂ ಸಹೇತುಕಂ ವ್ಯಾಚಷ್ಟೇ – ತತ್ರ ಯದೀತಿ ॥ 'ಯದಿ' ಇತ್ಯಾರಭ್ಯ 'ಭವಂತಿ' ಇತ್ಯಂತಂ ಪೂರ್ವ-ವಾಕ್ಯಾರ್ಥಾನುವಾದಃ, ತಸ್ಯಾಃ ಆಪಾದಕತ್ವಪ್ರದರ್ಶನಾರ್ಥಃ । 'ತತ್ರ' ಇತ್ಯವ್ಯಯಂ 'ತರ್ಹಿ' ಇತ್ಯರ್ಥಕಂ, 'ಭವಂತಿ' ಇತ್ಯತಃ ಪರಂ ಯೋಜ್ಯಮ್ ।

ಯದ್ವಾ, 'ಮನುಷ್ಯಾ ಏವ ದೇವಾದಯೋ ಭವಂತಿ' ಇತ್ಯುಕ್ತ್ಯಾ ಪ್ರಾಪ್ತಾ-ಭೇದಶಂಕಾಂ ವಾರಯಿತುಂ 'ಮನುಷ್ಯಾ ಏವ' ಇತ್ಯಾದಿಸ್ವಪದಾನಿ ವರ್ಣಯತಿ – ತತ್ರೇತಿ ॥ ತತ್ರ ದೇವತೋದ್ದಿಷ್ಟಕರ್ಮಣಿ ಇತಿ ಸಾಮಾನಾಧಿಕರಣ್ಯಮ್ । ಅತ್ರ ಪಕ್ಷೇ 'ಯದಿ' ಇತಿ ಶ್ರವಣಾತ್ 'ತರ್ಹಿ' ಇತಿ ಲಭ್ಯತೇ । 'ಭವಂತಿ' ಇತ್ಯನಂತರಮ್ 'ಇತ್ಯುಕ್ತಮ್' ಇತ್ಯಸ್ತಿ । ಉಭಯತ್ರ ಆದಿಪದೇನ ಉಪದೇವಾದಯೋ ಗೃಹ್ಯಂತೇ । ಕರ್ಮಪದಂ ಶಬ್ದಸ್ಯಾಪ್ಯುಪಲಕ್ಷಕಮ್ ।

ತಥಾ ಚ – 'ಯದಿ' ಪೂರ್ವಂ ಮನುಷ್ಯಾಃ 'ಸಂತಃ' ಅಪಿ, ಅಥ 'ದೇವಾ-ದಯೋ ಭವಂತಿ' ಇತ್ಯುಕ್ತಮ್ ಇತ್ಯುಚ್ಯತೇ, ತರ್ಹಿ 'ತತ್ಪೂರ್ವಂ' ತೇಭ್ಯಃ ಪೂರ್ವಂ ತೇಷಾಂ ದೇವಾದಿಪದಪ್ರಾಪ್ತೇಃ ಪೂರ್ವಂ ಸಾಧಕತ್ವಾವಸ್ಥಾಯಾಂ 'ದೇವತಾ-ಭಾವಾತ್' ದೇವತಾಯಾ ಅಸತ್ತ್ವಾದ್ ಯೇನ ಕರ್ಮಣಾ ದೇವಾದಿತ್ವಂ ಸಾಧ್ಯಮಿತ್ಯುಕ್ತಮ್, ತಸ್ಮಿನ್ನೇವ 'ದೇವತೋದ್ದಿಷ್ಟಕರ್ಮಣಿ' ಪೂರ್ವಕಲ್ಪೇ ದೇವತೋದ್ದೇಶೇನ ಪ್ರವೃತ್ತಕರ್ಮಣಿ ದೇವತಾವಾಚಕಶಬ್ದೇ ಚ 'ವಿರೋಧಃ' ತಯೋರ್ವೈಯರ್ಥ್ಯಮ್ - ಇತಿ ಯೋಜನಾ । 'ಉದ್ದೇಶ್ಯಾಭಾವಾದ್ ವಾಚ್ಯಾ-ಭಾವಾಚ್ಚ' ಇತಿ ಭಾವಃ ।

'ಮನುಷ್ಯಾ ಏವ' ಎಂಬ ವಾಕ್ಯಕ್ಕೆ 'ದೇವಾದಿಪದಗಳಿಗೆ ಯೋಗ್ಯರಾದ ಜೀವರು ಮುಂಚೆ ಭೂಮಿಯಲ್ಲಿ ಕೆಲವು ಕಾಲ ಮನುಷ್ಯರಾಗಿದ್ದೇ ಅನಂತರ ದೇವಾದಿಗಳು

ಆಗುವರು' – ಎಂದರ್ಥ; ಹೊರತು ಮನುಷ್ಯರಾಗದೇ ದೇವಾದಿತ್ವವನ್ನು ಪಡೆಯು-ವುದಿಲ್ಲ ಎಂದು ''ಏವ''ಶಬ್ದದ ಅರ್ಥ. 'ತದುಪರಿ ಇತ್ಯುಕ್ತಮ್' ಎಂದರೆ 'ತದುಪರಿ' ಎಂಬ ಸೂತ್ರದಲ್ಲಿ ಹೇಳಲಾಗಿದೆ ಎಂದರ್ಥ. ''ಉಕ್ತಮ್'' ಎಂಬ ಪದದ ನಂತರ 'ತದಯುಕ್ತಮ್' ಎಂಬ ಪದಗಳು ಶೇಷವಾಗಿವೆ.

ಏಕೆ ಅಯುಕ್ತವಾಗಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ ಹಾಗೆ ಒಪ್ಪಿದಲ್ಲಿ ಬಾಧಕವಿದೆ ಎಂದು ಹೇಳುವ ತಾತ್ಪರ್ಯವುಳ್ಳ ಸೂತ್ರದ ''ವಿರೋಧಃ'' ಎಂಬ ಅಂಶವನ್ನು ಹೇತುಸಹಿತವಾಗಿ ''ತತ್ರ ಯದಿ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ''ಯದಿ'' ಎಂದಾರಂಭಿಸಿ ''ಭವಂತಿ'' ಎಂಬ ಪದದ ವರೆಗೆ ಹಿಂದಿನ ವಾಕ್ಯದ ಅರ್ಥವನ್ನು ಅನುವಾದ ಮಾಡಿರುವುದು; ಅದು ಇಲ್ಲಿ ಹೇಳುವ ತರ್ಕದಲ್ಲಿ ಆಪಾದಕವಾಗಿದೆ ಎಂದು ತೋರಿಸುವ ಉದ್ದೇಶದಿಂದ. ಭಾಷ್ಯದ ''ತತ್ರ'' ಎಂಬ ಅವ್ಯಯವನ್ನು 'ತರ್ಹಿ' ಎಂಬ ಅರ್ಥವುಳ್ಳದ್ದಾಗಿ, 'ಭವಂತಿ' ಎಂಬ ಪದದ ಅನಂತರ ಯೋಜಿಸಬೇಕು.

ಅಥವಾ ಮನುಷ್ಯರೇ ದೇವಾದಿಗಳಾಗುವರೆಂದು ಹೇಳಿದ್ದರಿಂದ ಮನುಷ್ಯರಿಗೂ ದೇವತೆಗಳಿಗೂ ಅಭೇದವಿರುವುದೆಂಬ ಶಂಕೆಯನ್ನು ನಿವಾರಿಸಲು ''ಮನುಷ್ಯಾ ಏವ''ಇತ್ಯಾದಿ ತಮ್ಮ ಪದಗಳನ್ನೇ ಭಾಷ್ಯಕಾರರು ''ತತ್ರ'' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ಅಥವಾ – 'ತತ್ರ' - ದೇವತೋದ್ದಿಷ್ಟಕರ್ಮಣಿ ಎಂಬ ಪದಗಳು ಸಾಮಾನಾಧಿಕರಣ್ಯವನ್ನು ಪಡೆದಿರುವ ಅಂದರೆ ಒಂದೇ ವಿಷಯವನ್ನು ಹೇಳುವ ಪದಗಳಾಗಿವೆ. ಈ ಪಕ್ಷದಲ್ಲಿ 'ಯದಿ' ಎಂಬ ಪದವು ಭಾಷ್ಯದಲ್ಲಿ ಶ್ರುತವಾಗಿರು-ವುದರಿಂದ 'ತರ್ಹಿ' ಎಂಬ ಪದವು ಲಭಿಸುವುದು. 'ಭವಂತಿ' ಎಂಬ ಪದದ ನಂತರ 'ಇತ್ಯುಕ್ತಮ್' ಎಂಬ ಪದವನ್ನು ಸೇರಿಸಬೇಕು. 'ದೇವಾದಯಃ' ಎಂಬ ಎರಡೂ ಪದಗಳಲ್ಲಿ 'ಆದಿ'ಶಬ್ದದಿಂದ ಉಪದೇವ ಮೊದಲಾದವರು ಗ್ರಹಿಸಲ್ಪಡುವರು. ಸೂತ್ರ ಮತ್ತು ಭಾಷ್ಯದಲ್ಲಿ 'ಕರ್ಮ'ಪದವು ಲಕ್ಷಣಯಾ ಶಬ್ದವನ್ನೂ ಹೇಳುವುದು.

ತಥಾ ಚ – 'ಯದಿ' - ಒಂದು ವೇಳೆ ಮೊದಲು ಮನುಷ್ಯರಾಗಿದ್ದವರೂ ಕೂಡ ದೇವಾದಿಗಳಾಗುವರು ಎಂದು ಹೇಳಿದ ಪಕ್ಷದಲ್ಲಿ, 'ತತ್ಪೂರ್ವಂ' - ಅಂದರೆ ತೇಭ್ಯಃ ಪೂರ್ವಂ - ಆ ಜೀವರಿಗೆ ದೇವಾದಿಪದಪ್ರಾಪ್ತಿಯಾಗುವ ಮುಂಚೆ ಅವರು ಸಾಧಕ-

ರಾಗಿರುವ ಅವಸ್ಥೆಯಲ್ಲಿ 'ದೇವತಾಭಾವಾತ್' - ಆ ದೇವತೆಯು ಇಲ್ಲದಿರುವುದರಿಂದ, ಯಾವ ಕರ್ಮದಿಂದ ದೇವಾದಿಪದವು ಗ್ರಹಿಸುವುದು ಎಂದು ಹೇಳಲಾಗಿದೆಯೋ 'ತತ್ರ' - ಅದೇ ದೇವತೆಯನ್ನು ಉದ್ದೇಶಿಸಿ ಮಾಡಲಾದ ಕರ್ಮದಲ್ಲಿ ಅಂದರೆ ಹಿಂದಿನ ಕಲ್ಪದಲ್ಲಿ ದೇವತೆಗಳನ್ನು ಉದ್ದೇಶಿಸಿ ಮಾಡಲಾದ ಕರ್ಮದ ವಿಷಯದಲ್ಲಿ ಮತ್ತು ಆ ದೇವತಾವಾಚಕವಾದ ಶಬ್ದದ ವಿಷಯದಲ್ಲಿ 'ವಿರೋಧಃ' ಅಂದರೆ ಅವುಗಳಿಗೆ ವೈಯರ್ಥ್ಯ ಉಂಟಾಗುವುದೆಂದು ಪದಗಳ ಯೋಜನೆಯಾಗಿದೆ. ಏಕೆಂದರೆ, ಉದ್ದೇಶ್ಯ-ರಾದ ದೇವತೆಯೇ ಇಲ್ಲದಿರುವುದರಿಂದ ಮತ್ತು ಆ ದೇವತಾವಾಚಕ ಪದಗಳಿಗೆ ವಾಚ್ಯರಾದವರು ಇಲ್ಲದಿರುವುದರಿಂದ ಎಂದು ಭಾವ.

ಭಾ.ದೀ. – ಪರಿಹಾರಾಂಶಂ ವ್ಯಾಚಷ್ಟೇ – ನೇತಿ ॥

ಇದಂ ಚಾವರ್ತತೇ । ಯೋಜನಾ ತು – ನ ಕರ್ಮಣಿ ವಿರೋಧಃ, ಕುತಃ? ಯತೋ ನ ಪೂರ್ವಂ ದೇವತಾಭಾವ ಇತಿ । ತೇಷಾಂ ಪ್ರವಾಹತೋಽ-ನಾದಿತ್ವೇನ ಏತದ್‌ದೇವಾನಾಂ ಪೂರ್ವಮಭಾವೇಽಪಿ ದೇವತಾಂತರಸದ್ಭಾವಾತ್ ಇತಿ ಭಾವಃ । ನ ಚ ಪ್ರಮಾಣಾಭಾವಃ? ಇತ್ಯತಃ ಪ್ರಾಪ್ತಮ್ 'ಅನೇಕ' ಇತ್ಯಂಶಂ 'ಪ್ರತಿಪತ್ತಿ'ಶಬ್ದಸ್ಯ ಜ್ಞಾನಾರ್ಥತ್ವಭ್ರಮಂ ವಾರಯನ್ ತತ್ಸಂಬಂಧಿಪ್ರದರ್ಶನ-ಪೂರ್ವಕಂ ವ್ಯಾಚಷ್ಟೇ – ಅನೇಕೇಷಾಮಿತಿ ॥ 'ತೇ ಹ ನಾಕಮ್' ಇತಿ ಶ್ರುತೌ 'ಅನೇಕೇಷಾಮ್' ಏಕೈಕಗಣಶೋಽನಂತಾನಾಂ ದೇವತ್ವಾದಿಯೋಗ್ಯಮನು-ಷ್ಯಾಣಾಂ ವಿದ್ಯಾಕರ್ಮಭ್ಯಾಂ ಪೂರ್ವಪೂರ್ವದೇವತಾಪದಪ್ರಾಪ್ತೇಃ ದರ್ಶನಾತ್ ಇತ್ಯರ್ಥಃ ।

ಅನೇನ – 'ತದುಪರಿ' ಇತ್ಯತ್ರೋಕ್ತಂ ದೇವಾನಾಂ ಸಾದಿತ್ವಮಯುಕ್ತಮ್, ತಥಾ ಸತಿ ಯೇನ ಕರ್ಮಣಾ ದೇವಾದಿತ್ವಂ ಸಾಧ್ಯಮಿತ್ಯುಕ್ತಮ್, ತತ್ರ ಕರ್ಮಣಿ ಶಬ್ದೇ ಚ ವಿರೋಧಃ, ತಸ್ಯ ವೈಯರ್ಥ್ಯಂ ಸ್ಯಾತ್, ತತ್ಪೂರ್ವಂ ದೇವತಾಭಾವಾತ್ ಇತಿ ಚೇತ್, ನ । ಯತೋ ನ ಪೂರ್ವಂ ದೇವತಾಽಭಾವಃ । ತತ್ಕಥಮ್? ಏತದ್ ದೇವಾನಾಂ ಪೂರ್ವಮಭಾವೇಽಪಿ ದೇವತಾಂತರಸದ್ಭಾವಾತ್ । ನ ಚ ತತ್ರ

**ಮಾನಾಭಾವಃ । 'ಅನೇಕಪ್ರತಿಪತ್ತಿದರ್ಶನಾತ್' ಅನೇಕೇಷಾಂ ಯೋಗ್ಯಮನುಷ್ಯಾಣಾಂ ಪೂರ್ವಪೂರ್ವಪದಪ್ರಾಪ್ತೇಃ 'ತೇ ಹ ನಾಕಮ್' ಇತ್ಯತ್ರೋಕ್ತತ್ವಾದಿತಿ ಸೂತ್ರಾರ್ಥ ಉಕ್ತೋ ಭವತಿ।**

ಪೂರ್ವಪಕ್ಷವನ್ನು ಪರಿಹರಿಸುವ ಸೂತ್ರದ ಅಂಶವನ್ನು 'ನ' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ನ ಎಂಬ ಪದವು ಆವೃತ್ತಿಯನ್ನು ಹೊಂದುತ್ತದೆ. ಈ ಪದದ ಯೋಜನೆ ಹೀಗಿದೆ – 'ನ ಕರ್ಮಣಿ ವಿರೋಧಃ ಕುತಃ? ಯತೋ ನ ಪೂರ್ವಂ ದೇವತಾಭಾವಃ' - ಕರ್ಮದ ವಿಷಯದಲ್ಲಿ ವಿರೋಧವಿಲ್ಲ. ಏಕೆಂದರೆ, ಹಿಂದೆ ದೇವತೆಗಳು ಇಲ್ಲ ಎಂಬುದಿಲ್ಲ-ಎಂದು. ಆ ದೇವತೆಗಳು ಪ್ರವಾಹತಃ ಅನಾದಿಗಳಾದ್ದರಿಂದ ಈ ದೇವತೆಗಳು ಹಿಂದೆ ಇಲ್ಲದಿದ್ದರೂ ಇನ್ನೊಬ್ಬ ದೇವತೆ ಇರುವ ಕಾರಣದಿಂದ ಎಂದು ಭಾವ. 'ಈ ವಿಷಯದಲ್ಲಿ ಪ್ರಮಾಣವಿಲ್ಲ' ಎಂಬ ಶಂಕೆಗೆ ಉತ್ತರವಾಗಿ ಪ್ರಾಪ್ತವಾಗಿರುವ 'ಅನೇಕ' ಎಂಬ ಸೂತ್ರಾಂಶವನ್ನು ಅಲ್ಲಿರುವ 'ಪ್ರತಿಪತ್ತಿ' ಎಂಬ ಶಬ್ದಕ್ಕೆ ಜ್ಞಾನವೆಂಬ ಅರ್ಥ-ವಿರುವುದೆಂಬ ಭ್ರಮೆಯನ್ನು ನಿವಾರಿಸುತ್ತಾ ಅದಕ್ಕೆ ಅದರ (ಜ್ಞಾನದ)ಸಂಬಂಧಿಯನ್ನು ತೋರಿಸುವ ಮೂಲಕ ''ಅನೇಕೇಷಾಂ'' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿ-ದ್ದಾರೆ. 'ತೇ ಹ ನಾಕಂ' ಎಂಬ ಶ್ರುತಿಯಲ್ಲಿ 'ಅನೇಕೇಷಾಮ್' ಒಂದೊಂದು ಗಣವಾಗಿ ಅನಂತರಾಗಿರುವ ದೇವತ್ವ ಮೊದಲಾದ ಪದಗಳಿಗೆ ಯೋಗ್ಯರಾದ ಮನುಷ್ಯರಿಗೆ ಅವರ ವಿದ್ಯೆ ಮತ್ತು ಕರ್ಮಗಳಿಂದ ಪೂರ್ವಪೂರ್ವ ಕಾಲದಲ್ಲಿ ದೇವತಾಪದಪ್ರಾಪ್ತಿ-ಯಾಗಿರುವುದು ಕಂಡುಬಂದಿರುವುದರಿಂದ ಎಂದು ಅರ್ಥ.

ಇದರಿಂದ – 'ತದುಪರಿ' ಎಂಬಲ್ಲಿ ಹೇಳಿರುವ ದೇವತೆಗಳ ಸಾದಿತ್ವವು ಅಯುಕ್ತ-ವಾಗಿದೆ. ಏಕೆಂದರೆ, ಹಾಗಿರುವ ಪಕ್ಷದಲ್ಲಿ ಯಾವ ಕರ್ಮದಿಂದ ದೇವಾದಿಪದ-ಪ್ರಾಪ್ತಿಯು ಆಗುವುದೆಂದು ಹೇಳಲಾಗಿದೆಯೋ, ಆ ಕರ್ಮದಲ್ಲಿ ಮತ್ತು ಅದನ್ನು ಹೇಳುವ ಶಬ್ದದಲ್ಲಿ ವಿರೋಧವುಂಟಾದೀತು! ಅಂದರೆ ಆ ಕರ್ಮ ಮತ್ತು ಶಬ್ದಗಳಿಗೆ, ಅದಕ್ಕೂ ಮುಂಚೆ ದೇವತೆಗಳೇ ಇಲ್ಲದ್ದರಿಂದ ವೈಯರ್ಥ್ಯ ಬಂದೀತು! ಎಂದರೆ ಇದು ಸರಿಯಲ್ಲ. ಏಕೆಂದರೆ, ಪೂರ್ವ ಕಾಲದಲ್ಲಿ ದೇವತೆಗಳ ಅಭಾವವೆಂಬುದಿಲ್ಲ. ಅದು

ಹೇಗೆಂದರೆ, ಈ ದೇವತೆಗಳು ಆ ಪೂರ್ವಕಾಲದಲ್ಲಿ ಇಲ್ಲದಿದ್ದರೂ ಬೇರೆ ದೇವತೆಗಳು ಇರುವರು. ಆ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಹೇಳಲಾಗದು. ಏಕೆಂದರೆ, 'ಅನೇಕಪ್ರತಿಪತ್ತೇರ್ದರ್ಶನಾತ್' - ಅನೇಕ ಯೋಗ್ಯ ಮನುಷ್ಯರಿಗೆ ಪೂರ್ವಕಾಲದಲ್ಲಿ ಪದಪ್ರಾಪ್ತಿಯಾಗಿರುವುದನ್ನು 'ತೇ ಹ ನಾಕಮ್' ಎಂಬ ಶ್ರುತಿಯಲ್ಲಿ ಹೇಳಿರುವು-ದರಿಂದ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಶ್ರುತೌ 'ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್' ಇತಿ ಪೂರ್ವವಾಕ್ಯೇ ಪ್ರಕೃತಾಃ ದೇವಾಃ ತಚ್ಛಬ್ದೇನ ಗೃಹ್ಯಂತೇ । 'ಹ'ಶಬ್ದಃ ಪುನರರ್ಥೇ ಪ್ರಸಿದ್ಧೌ ಚ ।

ತಥಾ ಚ – ಯೇ 'ದೇವಾಃ' ದೇವತ್ವಯೋಗ್ಯಾಃ ಮನುಷ್ಯಾ ಜ್ಞಾನಕರ್ಮಾ-ತ್ಮಕತ್ವೇನ 'ಯಜ್ಞೇನ' 'ಯಜ್ಞಂ' -ವಿಷ್ಣುಮ್, 'ಅಯಜಂತ' - ಅಪೂಜಯನ್ । ತತಸ್ತೇನ ಜ್ಞಾನಪೂರ್ವಕಕರ್ಮಣಾ ದೇವಪದಂ ಪ್ರಾಪ್ಯ, 'ಪ್ರಥಮಾನಿ' - ಪ್ರಥಮಾಃ ಮುಖ್ಯಾಃ, 'ಧರ್ಮಾಣಿ' ಧರ್ಮಾಃ ಲೋಕಧಾರಕಾ ಆಸನ್ । 'ಮಹಿಮಾನಃ' ಮಹಾತ್ಮಾನಃ ಮಹಿಮಗುಣಾತ್ಮಕಾ ವಾ । 'ತೇ' ದೇವಾಃ 'ಹ' ಪುನಃ ಅನಂತರಂ ಸ್ವಾಧಿಕಾರಾವಸಾನೇ 'ನಾಕಂ' - ಕಂ ಸುಖಂ ತದನ್ಯತ್ ದುಃಖಾತ್ಮಕಮ್ ತನ್ನೇತಿ ನಾಕಮ್ - ನಞ್‍ದ್ವಯೇನ ಪೂರ್ಣಸುಖಾತ್ಮಕಮ್ ಇತಿ ಲಭ್ಯತೇ । ಏವಂಭೂತಂ ಮೋಕ್ಷಂ 'ಸಚಂತೇ' ಆಪ್ನುವನ್ । ಲಙರ್ಥೇ ಲಟ್ । ಲಙ್ ವಾ, ಏತ್ವಡಭಾವೌ ಛಾಂದಸೌ । 'ಯತ್ರ' - ಮೋಕ್ಷೇ, 'ಪೂರ್ವೇ' - ಪೂರ್ವಕಲ್ಪೇ ಮುಕ್ತಾಃ, 'ಸಾಧ್ಯಾಃ' ಬಹುವಚನಮಾದ್ಯರ್ಥೇ ।

'ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ ।
ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥'

ಇತ್ಯುಕ್ತಾಃ ಸಾಧ್ಯಾದಯೋ ದೇವಾಃ ಸಂತಿ – ಇತಿ ಶ್ರುತ್ಯರ್ಥಃ ।

ನ ಚ ''ವಸುರುದ್ರಾದಿತ್ಯಮರುತ್ಸಾಧ್ಯೇಷು ವಸೂನಾಮ್ ಆದಿತ್ವಾತ್ ಟೀಕಾಯಾಂ 'ವಸ್ವಾದಿದೇವಾಃ' ಇತಿ ವಕ್ತವ್ಯಮ್, ನ ತು 'ಸಾಧ್ಯಾದಿ' ಇತಿ । ಅತ

**ಮಾನಾಭಾವಃ । 'ಅನೇಕಪ್ರತಿಪತ್ತಿದರ್ಶನಾತ್' ಅನೇಕೇಷಾಂ ಯೋಗ್ಯಮನುಷ್ಯಾಣಾಂ ಪೂರ್ವಪೂರ್ವಪದಪ್ರಾಪ್ತೇಃ 'ತೇ ಹ ನಾಕಮ್' ಇತ್ಯತ್ರೋಕ್ತತ್ವಾದಿತಿ ಸೂತ್ರಾರ್ಥ ಉಕ್ತೋ ಭವತಿ।**

ಪೂರ್ವಪಕ್ಷವನ್ನು ಪರಿಹರಿಸುವ ಸೂತ್ರದ ಅಂಶವನ್ನು 'ನ' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ನ ಎಂಬ ಪದವು ಆವೃತ್ತಿಯನ್ನು ಹೊಂದುತ್ತದೆ. ಈ ಪದದ ಯೋಜನೆ ಹೀಗಿದೆ – 'ನ ಕರ್ಮಣಿ ವಿರೋಧಃ ಕುತಃ? ಯತೋ ನ ಪೂರ್ವಂ ದೇವತಾಭಾವಃ' - ಕರ್ಮದ ವಿಷಯದಲ್ಲಿ ವಿರೋಧವಿಲ್ಲ. ಏಕೆಂದರೆ, ಹಿಂದೆ ದೇವತೆಗಳು ಇಲ್ಲ ಎಂಬುದಿಲ್ಲ-ಎಂದು. ಆ ದೇವತೆಗಳು ಪ್ರವಾಹತಃ ಅನಾದಿಗಳಾದ್ದರಿಂದ ಈ ದೇವತೆಗಳು ಹಿಂದೆ ಇಲ್ಲದಿದ್ದರೂ ಇನ್ನೊಬ್ಬ ದೇವತೆ ಇರುವ ಕಾರಣದಿಂದ ಎಂದು ಭಾವ. 'ಈ ವಿಷಯದಲ್ಲಿ ಪ್ರಮಾಣವಿಲ್ಲ' ಎಂಬ ಶಂಕೆಗೆ ಉತ್ತರವಾಗಿ ಪ್ರಾಪ್ತವಾಗಿರುವ 'ಅನೇಕ' ಎಂಬ ಸೂತ್ರಾಂಶವನ್ನು ಅಲ್ಲಿರುವ 'ಪ್ರತಿಪತ್ತಿ' ಎಂಬ ಶಬ್ದಕ್ಕೆ ಜ್ಞಾನವೆಂಬ ಅರ್ಥ-ವಿರುವುದೆಂಬ ಭ್ರಮೆಯನ್ನು ನಿವಾರಿಸುತ್ತಾ ಅದಕ್ಕೆ ಅದರ (ಜ್ಞಾನದ)ಸಂಬಂಧಿಯನ್ನು ತೋರಿಸುವ ಮೂಲಕ ''ಅನೇಕೇಷಾಂ'' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿ-ದ್ದಾರೆ. 'ತೇ ಹ ನಾಕಂ' ಎಂಬ ಶ್ರುತಿಯಲ್ಲಿ 'ಅನೇಕೇಷಾಮ್' ಒಂದೊಂದು ಗಣವಾಗಿ ಅನಂತರಾಗಿರುವ ದೇವತ್ವ ಮೊದಲಾದ ಪದಗಳಿಗೆ ಯೋಗ್ಯರಾದ ಮನುಷ್ಯರಿಗೆ ಅವರ ವಿದ್ಯೆ ಮತ್ತು ಕರ್ಮಗಳಿಂದ ಪೂರ್ವಪೂರ್ವ ಕಾಲದಲ್ಲಿ ದೇವತಾಪದಪ್ರಾಪ್ತಿ-ಯಾಗಿರುವುದು ಕಂಡುಬಂದಿರುವುದರಿಂದ ಎಂದು ಅರ್ಥ.

ಇದರಿಂದ – 'ತದುಪರಿ' ಎಂಬಲ್ಲಿ ಹೇಳಿರುವ ದೇವತೆಗಳ ಸಾದಿತ್ವವು ಅಯುಕ್ತ-ವಾಗಿದೆ. ಏಕೆಂದರೆ, ಹಾಗಿರುವ ಪಕ್ಷದಲ್ಲಿ ಯಾವ ಕರ್ಮದಿಂದ ದೇವಾದಿಪದ-ಪ್ರಾಪ್ತಿಯು ಆಗುವುದೆಂದು ಹೇಳಲಾಗಿದೆಯೋ, ಆ ಕರ್ಮದಲ್ಲಿ ಮತ್ತು ಅದನ್ನು ಹೇಳುವ ಶಬ್ದದಲ್ಲಿ ವಿರೋಧವುಂಟಾದೀತು! ಅಂದರೆ ಆ ಕರ್ಮ ಮತ್ತು ಶಬ್ದಗಳಿಗೆ, ಅದಕ್ಕೂ ಮುಂಚೆ ದೇವತೆಗಳೇ ಇಲ್ಲದ್ದರಿಂದ ವೈಯರ್ಥ್ಯ ಬಂದೀತು! ಎಂದರೆ ಇದು ಸರಿಯಲ್ಲ. ಏಕೆಂದರೆ, ಪೂರ್ವ ಕಾಲದಲ್ಲಿ ದೇವತೆಗಳ ಅಭಾವವೆಂಬುದಿಲ್ಲ. ಅದು

ಹೇಗೆಂದರೆ, ಈ ದೇವತೆಗಳು ಆ ಪೂರ್ವಕಾಲದಲ್ಲಿ ಇಲ್ಲದಿದ್ದರೂ ಬೇರೆ ದೇವತೆಗಳು ಇರುವರು. ಆ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಹೇಳಲಾಗದು. ಏಕೆಂದರೆ, 'ಅನೇಕಪ್ರತಿಪತ್ತೇರ್ದರ್ಶನಾತ್' - ಅನೇಕ ಯೋಗ್ಯ ಮನುಷ್ಯರಿಗೆ ಪೂರ್ವಕಾಲದಲ್ಲಿ ಪದಪ್ರಾಪ್ತಿಯಾಗಿರುವುದನ್ನು 'ತೇ ಹ ನಾಕಮ್' ಎಂಬ ಶ್ರುತಿಯಲ್ಲಿ ಹೇಳಿರುವು-ದರಿಂದ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಶ್ರುತೌ 'ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್' ಇತಿ ಪೂರ್ವವಾಕ್ಯೇ ಪ್ರಕೃತಾಃ ದೇವಾಃ ತಚ್ಛಬ್ದೇನ ಗೃಹ್ಯಂತೇ। 'ಹ'ಶಬ್ದಃ ಪುನರರ್ಥೇ ಪ್ರಸಿದ್ಧೌ ಚ।

ತಥಾ ಚ – ಯೇ 'ದೇವಾಃ' ದೇವತ್ವಯೋಗ್ಯಾಃ ಮನುಷ್ಯಾ ಜ್ಞಾನಕರ್ಮಾ-ತ್ಮಕತ್ವೇನ 'ಯಜ್ಞೇನ' 'ಯಜ್ಞಂ' -ವಿಷ್ಣುಮ್, 'ಅಯಜಂತ' - ಅಪೂಜಯನ್ । ತತಸ್ತೇನ ಜ್ಞಾನಪೂರ್ವಕಕರ್ಮಣಾ ದೇವಪದಂ ಪ್ರಾಪ್ಯ, 'ಪ್ರಥಮಾನಿ' - ಪ್ರಥಮಾಃ ಮುಖ್ಯಾಃ, 'ಧರ್ಮಾಣಿ' ಧರ್ಮಾಃ ಲೋಕಧಾರಕಾ ಆಸನ್ । 'ಮಹಿಮಾನಃ' ಮಹಾತ್ಮಾನಃ ಮಹಿಮಗುಣಾತ್ಮಕಾ ವಾ। 'ತೇ' ದೇವಾಃ 'ಹ' ಪುನಃ ಅನಂತರಂ ಸ್ವಾಧಿಕಾರಾವಸಾನೇ 'ನಾಕಂ' - ಕಂ ಸುಖಂ ತದನ್ಯತ್ ದುಃಖಾತ್ಮಕಮ್ ತನ್ನೇತಿ ನಾಕಮ್ - ನಞ್ದ್ವಯೇನ ಪೂರ್ಣಸುಖಾತ್ಮಕಮ್ ಇತಿ ಲಭ್ಯತೇ । ಏವಂಭೂತಂ ಮೋಕ್ಷಂ 'ಸಚಂತೇ' ಆಪ್ನುವನ್ । ಲಙರ್ಥೇ ಲಟ್ । ಲಙ್ ವಾ, ಏತ್ವಾಭಾವೌ ಛಾಂದಸೌ । 'ಯತ್ರ' - ಮೋಕ್ಷೇ, 'ಪೂರ್ವೇ' - ಪೂರ್ವಕಲ್ಪೇ ಮುಕ್ತಾಃ, 'ಸಾಧ್ಯಾಃ' ಬಹುವಚನಮಾದ್ಯರ್ಥೇ।

'ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ।
ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ॥'

ಇತ್ಯುಕ್ತಾಃ ಸಾಧ್ಯಾದಯೋ ದೇವಾಃ ಸಂತಿ – ಇತಿ ಶ್ರುತ್ಯರ್ಥಃ।

ನ ಚ ''ವಸುರುದ್ರಾದಿತ್ಯಮರುತಾಸ್ವ್ಯೇಷು ವಸೂನಾಮ್ ಆದಿತ್ವಾತ್ ಟೀಕಾಯಾಂ 'ವಸ್ವಾದಿದೇವಾಃ' ಇತಿ ವಕ್ತವ್ಯಮ್, ನ ತು 'ಸಾಧ್ಯಾದಿ' ಇತಿ। ಅತ

ಏವ ತತ್ತ್ವಪ್ರದೀಪೇ – 'ಪೂರ್ವೇ ಸಾಧ್ಯಾಃ ವಸ್ವಾದಯೋ ದೇವಾಃ ಪೂರ್ವಸಿದ್ಧಾ ಮುಕ್ತಾ ವಾ' ಇತ್ಯುಕ್ತಮ್'' ಇತಿ ವಾಚ್ಯಮ್ । 'ಸಾಧ್ಯ'ಶಬ್ದಿತಾನಾಂ ಪ್ರಾಧಾನ್ಯೇನ ಕ್ರಮೋಲ್ಲಂಘನಾತ್ । ಛಂದೋಗಶ್ರುತಿಕ್ರಮಾನುಸಾರೇಣ ತತ್ತ್ವಪ್ರದೀಪಪ್ರವೃತ್ತೇಃ।

ನ ಚೈವಂ ವ್ಯಾಖ್ಯಾನೇ ಪುರುಷಾರ್ಥಾಧಿಕರಣೇಽಸ್ಯಾಃ ಪ್ರಾಪ್ತಪದ-ದೇವತಾಪರತ್ವೇನೋದಾಹರಣಾನುಪಪತ್ತಿರಿತಿ ವಾಚ್ಯಮ್ । 'ಯೇ ಪದಂ ಪ್ರಾಪ್ಯ ಜಗದ್ಧಾರಕಾ ಅಭೂವನ್ ತೇ ದೇವಾ ಯಜ್ಞೇನ ಯಜ್ಞಮ್ ಅಯಜಂತ ತೇ ಹ ನಾಕಂ ಮೋಕ್ಷಗತಾತಿಶಯಂ ಸಚಂತೇ' ಇತಿ ಶ್ರುತೇರರ್ಥಾಂತರವಿವಕ್ಷಯಾ ತದುಪಪತ್ತೇಃ, ತದನುಸಾರೇಣ ತಟ್ಟೀಕಾಯಾಂ ವ್ಯಾಕರಣಸ್ಯಾಪಿ ಉಪಪತ್ತೇಶ್ಚ।

ಶ್ರುತಿಯಲ್ಲಿ – 'ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್' ಎಂಬ ಹಿಂದಿನ ವಾಕ್ಯದಲ್ಲಿ ಪ್ರಸ್ತುತರಾಗಿರುವ ದೇವತೆಗಳು 'ತೇ ಹ' ಎಂಬಲ್ಲಿರುವ ತಚ್ಛಬ್ದದಿಂದ ಗ್ರಹಿಸಲ್ಪಡುವರು. ಈ 'ಹ' ಎಂಬ ಶಬ್ದವು ಪುನಃ ಎಂಬ ಅರ್ಥವನ್ನು ಅಥವಾ ಪ್ರಸಿದ್ಧಿಯನ್ನು ಹೇಳುವುದು.

ತಥಾ ಚ – ಯೇ ಯಾವ 'ದೇವಾಃ' - ದೇವತೆಗಳು ಅಂದರೆ ದೇವತ್ವಯೋಗ್ಯ-ರಾದ ಮನುಷ್ಯರು 'ಯಜ್ಞೇನ'- ತಮ್ಮ ಜ್ಞಾನ ಮತ್ತು ಕರ್ಮಾತ್ಮಕವಾದ ಯಜ್ಞದಿಂದ, 'ಯಜ್ಞಂ' ವಿಷ್ಣುವನ್ನು 'ಅಯಜಂತ' ಪೂಜಿಸಿದರೋ ಅನಂತರ 'ತೇನ' - ಆ ಜ್ಞಾನ-ಪೂರ್ವಕವಾದ ಕರ್ಮದಿಂದ ದೇವಪದವನ್ನು ಪಡೆದು 'ಪ್ರಥಮಾನಿ' - ಪ್ರಥಮಾಃ ಮುಖ್ಯವಾದ, 'ಧರ್ಮಾಣಿ' - ಧರ್ಮಾಃ ಆಸನ್ - ಲೋಕಧಾರಕರು ಆಗಿದ್ದರೋ, ಮಹಿಮಾನಃ - ಮಹಾತ್ಮರು ಅಥವಾ ಮಹಿಮಾರೂಪವಾದ ಗುಣಸ್ವರೂಪರೂ ಆದರೋ, 'ತೇ' - ಆ ದೇವತೆಗಳು, 'ಹ' ಪುನಃ ಅಂದರೆ ತಮ್ಮ ಅಧಿಕಾರಕಾಲ ಮುಗಿದ ನಂತರದಲ್ಲಿ 'ನಾಕಂ' - ಕ ಎಂದರೆ ಸುಖ, ಅದಕ್ಕಿಂತ ಭಿನ್ನವಾದ ದುಃಖವು ಅಕ ಎಂದೆನಿಸುವುದು. ಅದಿಲ್ಲದಿರುವುದು ನಾಕ, ಎರಡು ನಞ್‌ಗಳಿಂದ ಪೂರ್ಣ-ಸುಖಾತ್ಮಕವಾದ ಎಂಬ ಅರ್ಥವು ಲಭಿಸುವುದು. ಹೀಗಿರುವ ಮೋಕ್ಷವನ್ನು 'ಸಚಂತೇ' - ಹೊಂದಿದರು. ಈ ಪದದಲ್ಲಿರುವ ಲಟ್ ಲಕಾರವು ಲಙ್‌ಲಕಾರದ ಅರ್ಥವನ್ನು

ಹೇಳುವುದು. ಅಥವಾ ಇದು ಲಙ್‌ಲಕಾರವೇ ಆಗಿರುವುದು. ಹಾಗಿದ್ದ ಪಕ್ಷದಲ್ಲಿ ಏತ್ವ ಇರುವುದು ಮತ್ತು ಅಡಾಗಮವಿಲ್ಲದಿರುವುದು ಛಾಂದಸವಾಗಿದೆ. 'ಯತ್ರ' - ಯಾವ ಮೋಕ್ಷದಲ್ಲಿ, 'ಪೂರ್ವೇ' - ಪೂರ್ವಕಲ್ಪದಲ್ಲಿ ಮುಕ್ತರಾದ, 'ಸಾಧ್ಯಾಃ' - ಇಲ್ಲಿ ಬಹು-ವಚನವು 'ಮೊದಲಾದ' ಎಂಬರ್ಥದಲ್ಲಿರುವುದು –

'ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ ।
ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥'

ಬ್ರಹ್ಮ ಚತುರ್ಮುಖನೇ ಮೊದಲಾದ ಋಜುಗಳು, ಸುಪರ್ಣ ಮತ್ತು ಶೇಷ ಹಾಗೂ ಸರಸ್ವತೀ ಸುಪರ್ಣೀ ಮತ್ತು ವಾರುಣೀ ಇವರು ಸಾಧ್ಯ ಎಂದೆನಿಸುವರು – ಎಂದು ಹೇಳಲಾದ ಸಾಧ್ಯರೇ ಮೊದಲಾದ ದೇವತೆಗಳು ಇರುವರು - ಎಂದು ಶ್ರುತಿಯ ಅರ್ಥ.

ಶಂಕೆ - ವಸು, ರುದ್ರ, ಆದಿತ್ಯ, ಮರುತ್ ಮತ್ತು ಸಾಧ್ಯದೇವತೆಗಳ ಮಧ್ಯೆ ವಸುಗಳು ಮೊದಲಿರುವುದರಿಂದ ಟೀಕೆಯಲ್ಲಿ ವಸ್ವಾದಿದೇವತೆಗಳು ಎಂದಿರಬೇಕಾಗಿತ್ತು ಹೊರತು 'ಸಾಧ್ಯಾದಿ' ಎಂದಿರಬಾರದಿತ್ತು. ಆದ್ದರಿಂದಲೇ ತತ್ತ್ವಪ್ರದೀಪದಲ್ಲಿ 'ಪೂರ್ವೇ ಸಾಧ್ಯಾಃ - ವಸ್ವಾದಯೋ ದೇವಾಃ ಪೂರ್ವಸಿದ್ಧಾ ಮುಕ್ತಾ ವಾ' - 'ವಸ್ವಾದಿ ದೇವತೆಗಳು ಅಥವಾ ಪೂರ್ವದಲ್ಲೇ ಮುಕ್ತಿಯನ್ನು ಪಡೆದವರು ಎಂದು ಹೇಳಲಾಗಿದೆ' ಅಥವಾ ಮೊದಲೇ ಮುಕ್ತರಾದವರು ಎಂದರ್ಥ ಹೇಳಲಾಗಿದೆ.

ಸಮಾಧಾನ – ಈ ಶಂಕೆ ಸರಿಯಲ್ಲ. ಏಕೆಂದರೆ ಸಾಧ್ಯಶಬ್ದವಾಚ್ಯರಾದ ದೇವತೆ-ಗಳು ಪ್ರಧಾನರಾದ್ದರಿಂದ ಕ್ರಮವನ್ನು ಉಲ್ಲಂಘಿಸಲಾಗಿದೆ. ತತ್ತ್ವಪ್ರದೀಪವಾದರೋ ಛಾಂದೋಗ್ಯಶ್ರುತಿಯ ಕ್ರಮವನ್ನು ಅನುಸರಿಸಿ ಪ್ರವೃತ್ತವಾಗಿದೆ. ಹೀಗೆ ವ್ಯಾಖ್ಯಾನ ಮಾಡಿದಲ್ಲಿ ಪುರುಷಾರ್ಥಾಧಿಕರಣದಲ್ಲಿ ಈ ಶ್ರುತಿಗೆ ದೇವತಾಪದವನ್ನು ಪಡೆದವರನ್ನು ಹೇಳುವ ತಾತ್ಪರ್ಯವುಳ್ಳದ್ದು ಎಂಬುದಾಗಿ ಉದಾಹರಿಸಿರುವುದು ಅನುಪಪನ್ನ-ವಾಗುವುದು ಎಂದರೆ, ಅದು ಸರಿಯಲ್ಲ. ಯಾರು, ಪದವನ್ನು ಪಡೆದು ಜಗದ್ಧಾರಕರು ಆಗಿದ್ದರೋ ಆ ದೇವತೆಗಳು ಯಜ್ಞದಿಂದ ವಿಷ್ಣುವನ್ನು ಆರಾಧಿಸಿದರು ಮತ್ತು ಅವರು

ನಾಕವನ್ನು ಅಂದರೆ ಮೋಕ್ಷದ ಅತಿಶಯವನ್ನು ಪಡೆದರು ಎಂಬುದಾಗಿ ಶ್ರುತಿಗೆ ಮತ್ತೊಂದು ಅರ್ಥದ ಅಭಿಪ್ರಾಯದಿಂದ ಆ ವ್ಯಾಖ್ಯಾನವು ಉಪಪನ್ನವಾಗುವುದು. ಅದಕ್ಕನುಸಾರವಾಗಿ ಅದರ ಟೀಕೆಯಲ್ಲಿ ವ್ಯಾಕರಣವೂ ಯುಕ್ತವಾಗಿರುವುದು.

**ಭಾ.ದೀ. – ಯದ್ ದೇವಾನಾಮ್ ಅಧಿಕಾರಸಿದ್ಧ್ಯರ್ಥಮ್ ಆದ್ಯಂತವತ್ತ್ವ-ಮುಕ್ತಂ ತದುಪರ್ಯನೇಕೇತ್ಯಾಭ್ಯಾಂ, ತದಾಕ್ಷಿಪ್ಯ ಸಮಾದಧತ್ಸೂತ್ರಂ ಪಠಿತ್ವಾ, ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – ಶಬ್ದ ಇತಿ ॥**

ದೇವತೆಗಳಿಗೆ ವೇದಾಧಿಕಾರದ ಸಿದ್ಧಿಗೋಸ್ಕರವಾಗಿ 'ತದುಪರಿ', 'ಅನೇಕ' ಎಂಬ ಎರಡು ಸೂತ್ರಗಳಿಂದ ಯಾವ ಆದ್ಯಂತಗಳನ್ನು ಹೇಳಲಾಗಿದೆಯೋ ಅದನ್ನು ಆಕ್ಷೇಪಿಸಿ ಪರಿಹರಿಸುವ ಸೂತ್ರವನ್ನು ಪಠಿಸಿ, ಅಲ್ಲಿರುವ ಆಕ್ಷೇಪಾಂಶವನ್ನು ''ಶಬ್ದೇ'' ಎಂಬುದಾಗಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಓಂ ॥ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನು-ಮಾನಾಭ್ಯಾಮ್ ॥ ಓಂ ॥೨೮॥**

ವೇದನಿತ್ಯತ್ವವನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯಬಂದೀತು ಎಂದರೆ, ಅದು ಸರಿಯಲ್ಲ. ಏಕೆಂದರೆ, ಎಲ್ಲ ಕಲ್ಪಗಳಲ್ಲೂ ದೇವತೆಗಳು ವಿಷ್ಣು-ವಿನಿಂದ ಉತ್ಪತ್ತಿಯನ್ನು ಹೊಂದುವರು. ಹಾಗೆ ಉತ್ಪತ್ತಿಯನ್ನು ಹೊಂದುವರು ಎಂಬ ವಿಷಯದಲ್ಲಿ ಯೋಗಿಗಳ ಪ್ರತ್ಯಕ್ಷವಚನದಿಂದ ಸೂಚಿತವಾಗುವ ಪ್ರತ್ಯಕ್ಷವೂ ಹಾಗೆಯೇ ಇತರ ಜ್ಞಾನಿಗಳ ಅನು-ಮಾನವು ಪ್ರಮಾಣವಾಗಿರುವುದು.

**'ವಾಚಾ ವಿರೂಪ ನಿತ್ಯಯಾ' ಇತ್ಯಾದಿಶ್ರುತೇರಾಪ್ತ್ಯನಿಶ್ಚಯಾ-ನ್ನಿತ್ಯತ್ವಾಪೇಕ್ಷತ್ವಾಚ್ಚ ಮೂಲಪ್ರಮಾಣಸ್ಯ, ಸ್ವತಃ ಪ್ರಾಮಾಣ್ಯ-ಪ್ರಸಿದ್ಧೇಶ್ಚ ನಿತ್ಯತ್ವಾದ್ ವೇದಸ್ಯ ತದುದಿತಾನಾಂ ದೇವಾನಾಮ-**

**ನಿತ್ಯತ್ವಾತ್ ಪುನರನ್ಯಭಾವನಿಯಮಾಭಾವಾಚ್ಚ ಶಬ್ದೇ ವಿರೋಧ ಇತಿ ಚೇತ್,**

'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯಿಂದ ವೇದವು ನಿತ್ಯ-ವೆಂದು ತಿಳಿದುಬರುವುದು. ಆದರೆ ದೇವತೆಗಳು ಅನಿತ್ಯರಾದ್ದರಿಂದ ಆ ದೇವತೆಗಳಿಲ್ಲದ ಕಾಲದಲ್ಲಿ ವೇದಗಳಿಗೆ ಅಪ್ರಾಮಾಣ್ಯವುಂಟಾ-ಗುವುದು. ವೇದಗಳು ನಿತ್ಯವಲ್ಲ; ಅವು ಪೌರುಷೇಯವಾದದ್ದು ಎಂದು ಹೇಳಿದರೂ ಅದಕ್ಕೆ ಅಪ್ರಾಮಾಣ್ಯ ಅನಿವಾರ್ಯವಾಗು-ವುದು. ಅವುಗಳು ಅನಿತ್ಯವಾದರೂ ವೇದಕರ್ತೃವು ಆಪ್ತನಾದ್ದರಿಂದ ವೇದಕ್ಕೆ ಅಪ್ರಾಮಾಣ್ಯವಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ವೇದಕರ್ತೃವು ಸರ್ವಜ್ಞತ್ವಾದಿಗಳನ್ನು ಪಡೆದಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ವೇದಕರ್ತೃವು ಆಪ್ತ-ನೆಂದು ನಿಶ್ಚಯವಾಗಲು ಸಾಧ್ಯವಿಲ್ಲ. ಆದ್ದರಿಂದ ವೇದವನ್ನು ನಿತ್ಯ-ವೆಂದೇ ಅಂಗೀಕರಿಸಬೇಕು. ವೇದವು ನಿತ್ಯವೆಂದು ಕೇವಲ ಶ್ರುತಿಯಿಂದ ಸಿದ್ಧವಾಗಿದೆ ಎಂದಿಷ್ಟೇ ಅಲ್ಲ; ವೇದವು ಆಪ್ತರಚಿತ-ವಾದುದ್ದೆಂಬ ಪಕ್ಷದಲ್ಲಿ ಪೌರುಷೇಯವಾದ ವೇದಕ್ಕೆ ಮೂಲ-ಪ್ರಮಾಣದ ಅಪೇಕ್ಷೆ ನಿಯಮೇನ ಇರುವುದರಿಂದ ಆ ಮೂಲ-ಪ್ರಮಾಣವು ಅನವಸ್ಥಾಪರಿಹಾರಕ್ಕೋಸ್ಕರವಾಗಿ ನಿತ್ಯವೆಂದೇ ಅಂಗೀಕರಿಸಬೇಕು. ಅದರ ಬದಲು ವೇದಕ್ಕೇ ನಿತ್ಯತ್ವವನ್ನು ಶ್ರುತಿ-ಸಿದ್ಧವೆಂದು ಅಂಗೀಕರಿಸುವುದು ಯುಕ್ತ.

ವೇದಕ್ಕೆ ಸ್ವತ ಏವ ಪ್ರಾಮಾಣ್ಯವಿರುವುದೆಂದು ಪ್ರಸಿದ್ಧಿ ಇರುವ ಕಾರಣದಿಂದ ವೇದಗಳು ನಿತ್ಯವಾದ ಕಾರಣ, ಅದರಿಂದ ಉಕ್ತರಾದ ದೇವತೆಗಳು ಅನಿತ್ಯರೆಂದು ಒಪ್ಪಿದ ಪಕ್ಷದಲ್ಲಿ ವೇದಕ್ಕೆ ಅಪ್ರಾಮಾಣ್ಯ ಬಂದೀತು!

ಭಾ.ದೀ.– 'ಅನೇಕಪ್ರತಿಪತ್ತೇರ್ದರ್ಶನಾತ್ ನ ವಿರೋಧಃ' ಇತ್ಯಾದ್ಯನುಷಜ್ಯತೇ । 'ಯದಿತರ್ಹ್ಯೋಃ' ಅಪ್ಯನುಷಂಗಃ । ತಥಾ ಚ ಇತ್ಥಂ ಯೋಜನಾ – ಯದಿ ಅನೇಕೇಷಾಂ ಪೂರ್ವಪೂರ್ವಮುಕ್ತ್ಯಾ ದೇವತಾಪದಪ್ರಾಪ್ತೇರ್ದರ್ಶನಾನ್ನ ಕರ್ಮಣಿ ವಿರೋಧ ಇತಿ ಉಚ್ಯತೇ, ತರ್ಹಿ ತತ್ರೈವ ಶಬ್ದೇ ದರ್ಶನಪದೋಕ್ತೇ ವೇದೇಽಪ್ರಾಮಾಣ್ಯಾಖ್ಯೋ ವಿರೋಧಃ ಸ್ಯಾತ್ । ಕುತಃ? ದೇವಾನಾಮನಿತ್ಯತ್ವಾತ್ । 'ಅನೇಕೇ'ತ್ಯಾದಿನಾ ದೇವಾನಾಮನಿತ್ಯತ್ವಸ್ಯ ಅಂತವತ್ತ್ವಸ್ಯೋಕ್ತತ್ವಾತ್ । ನನು ದೇವಾನಾಮನಿತ್ಯತ್ವೇಽಪಿ ವೇದಾನಾಮಪ್ರಾಮಾಣ್ಯಂ ಕುತಃ? ಇತ್ಯತಃ – ತದುದಿತಾನಾಮಿತ್ಯಾಹ । ಅನೇನ 'ಅನಿತ್ಯದೇವವಾಚಕತ್ವಾತ್' ಇತಿ ಹೇತುಃ ಸೂಚಿತಃ।

ನನು ದೇವಾನಾಮನಿತ್ಯತ್ವೇಽಪಿ ತದ್ವಾಚಕವೇದಸ್ಯ ವಾಚ್ಯಹೀನತ್ವರೂಪಾಪ್ರಾಮಾಣ್ಯಂ ಪ್ರಸಜ್ಯತೇ, ದೇವವದ್ ವಾಚಕವೇದಸ್ಯಾಪಿ ಅನಿತ್ಯತ್ವೇನ ಕದಾಽಪಿ ವಾಚ್ಯಹೀನತ್ವಾಭಾವಾತ್ ಇತ್ಯತ ಉಕ್ತಮ್ – ವೇದಸ್ಯ ನಿತ್ಯತ್ವಾದಿತಿ ॥ ವೇದಸ್ಯ ನಿತ್ಯತ್ವಮೇವ ಕುತಃ ಇತ್ಯತ ಉಕ್ತಮ್ – ವಾಚೇತಿ ॥ 'ಶ್ರುತೇಃ' ಇತ್ಯಸ್ಯ 'ವೇದಸ್ಯ ನಿತ್ಯತ್ವಾತ್' ಇತ್ಯನೇನಾನ್ವಯಃ । ಜ್ಞಾನೋಪಲಕ್ಷಕಂ ಚೈತತ್ । ಆದಿಶಬ್ದೇನ 'ನಿತ್ಯಯಾಽನಿತ್ಯಯಾ' (ಪೌಷ್ಯಾಯಣಶ್ರುತಿಃ) 'ನಿತ್ಯಾ ವಾವ ಶ್ರುತಿಃ' ಇತ್ಯಾದಿಕಂ ಗೃಹ್ಯತೇ।

ಅನೇಕ ಪ್ರತಿಪತ್ತೇರ್ದರ್ಶನಾತ್ ನ ವಿರೋಧಃ ಇವೇ ಪದಗಳು ಇಲ್ಲಿ ಅನುವೃತ್ತಿಯನ್ನು ಹೊಂದುತ್ತವೆ. 'ಯದಿ' 'ತರ್ಹಿ' ಎಂಬ ಪದಗಳೂ ಅನುವೃತ್ತಿ ಹೊಂದುತ್ತವೆ.

ತಥಾ ಚ ಭಾಷ್ಯವಾಕ್ಯದ ಯೋಜನೆ ಹೀಗಿರುವುದು – ಅನೇಕ ಯೋಗ್ಯಮನುಷ್ಯರಿಗೆ ಹಿಂದು ಹಿಂದಿನವರಿಗೆ ಮುಕ್ತಿಯಾದ ನಂತರ ದೇವತಾಪದಪ್ರಾಪ್ತಿಯಾಗಿರುವುದು ದೃಷ್ಟವಾಗಿರುವುದರಿಂದ ಕರ್ಮವಿಷಯದಲ್ಲಿ ಯಾವ ವಿರೋಧವೂ ಇಲ್ಲ ಎಂದು ಹೇಳಿದ್ದಾದರೆ, ಅದೇ ಶಬ್ದದಲ್ಲಿ ಅಂದರೆ ಸೂತ್ರದಲ್ಲಿ ದರ್ಶನಪದದಿಂದ

ಹೇಳಿದ ವೇದಕ್ಕೆ ಅಪ್ರಾಮಾಣ್ಯವೆಂಬ ವಿರೋಧವು ಉಂಟಾದೀತು! ಏಕೆಂದರೆ, ದೇವತೆಗಳು ಅನಿತ್ಯರಾಗಿದ್ದಾರೆ. ದೇವತೆಗಳಿಗೆ ಅನಿತ್ಯತ್ವವನ್ನು ಅಂದರೆ ಅಂತವಿರುವುದನ್ನು 'ಅನೇಕ' ಇತ್ಯಾದಿ ಸೂತ್ರದಿಂದ ಹೇಳಲಾಗಿದೆ. ದೇವತೆಗಳು ಅನಿತ್ಯರಾಗಿದ್ದರೂ ವೇದಗಳಿಗೆ ಅಪ್ರಾಮಾಣ್ಯವೇಕೆ? ಎಂಬ ಶಂಕೆಗೆ ಉತ್ತರವಾಗಿ ಭಾಷ್ಯದಲ್ಲಿ ''ತದುದಿತಾನಾಮ್'' ಎಂದು ಹೇಳಲಾಗಿದೆ. ಈ ಪದವು ಹೇತುಗರ್ಭವಿಶೇಷಣವಾಗಿದೆ. ಈ ಪದದಿಂದ 'ಅನಿತ್ಯರಾದ ದೇವತೆಗಳಿಗೆ ವಾಚಕವಾಗಿರುವುದರಿಂದ' ಎಂಬ ಹೇತುವು ಸೂಚಿತವಾಗುವುದು.

''ದೇವತೆಗಳು ಅನಿತ್ಯರಾಗಿದ್ದರೂ ಅವರನ್ನು ಹೇಳುವ ವೇದಕ್ಕೆ ವಾಚ್ಯಾರ್ಥಹೀನತ್ವವೆಂಬ ಅಪ್ರಾಮಾಣ್ಯವು ಬರಲಾರದು? ಏಕೆಂದರೆ, ದೇವತೆಗಳು ಹೇಗೆ ಅನಿತ್ಯರೋ ಹಾಗೆಯೇ ಅವರನ್ನು ಹೇಳುವ ವೇದವೂ ಅನಿತ್ಯವಾಗಿರುವುದರಿಂದ ಆ ವೇದವಾಕ್ಯಗಳಿಗೆ ಎಂದೂ ವಾಚ್ಯಾರ್ಥವಿಲ್ಲದಿರುವ ಸಂದರ್ಭವೇ ಬರಲಾರದು'' ಎಂಬ ಶಂಕೆಗೆ ಉತ್ತರವಾಗಿ ''ವೇದಸ್ಯ ನಿತ್ಯತ್ವಾತ್'' ಎಂದು ಹೇಳಲಾಗಿದೆ. ವೇದದ ನಿತ್ಯತ್ವವಾದರೂ ಹೇಗೆ ಸಿದ್ಧವಾಗುವುದು? ಎಂಬ ಪ್ರಶ್ನೆಗೆ ಉತ್ತರವಾಗಿ ''ವಾಚಾ'' ಎಂದು ವಾಕ್ಯವು ಹೊರಟಿದೆ. ಇಲ್ಲಿ ಶ್ರುತೇಃ ಎಂಬ ಪದಕ್ಕೆ 'ವೇದಸ್ಯ ನಿತ್ಯತ್ವಾತ್' ಎಂಬ ಪದಗಳೊಂದಿಗೆ ಅನ್ವಯವಾಗುವುದು. ಈ ಪದವು ಜ್ಞಾನವನ್ನು ಲಕ್ಷಣಯಾ ಹೇಳುವುದು. 'ಇತ್ಯಾದಿಶ್ರುತೇಃ' ಎಂಬಲ್ಲಿರುವ 'ಆದಿ'ಪದದಿಂದ 'ನಿತ್ಯಯಾಽನಿತ್ಯಯಾ' 'ನಿತ್ಯಾ ವಾವ ಶ್ರುತಿಃ' ಎಂಬ ಶ್ರುತಿಗಳು ಗ್ರಹಿಸಲ್ಪಡುತ್ತವೆ.

ಭಾ.ದೀ.– ನನು ನ ನಿತ್ಯೋ ವೇದಃ। ನ ಚ ಶ್ರುತಿವಿರೋಧಃ, ಶ್ರುತೇರ್ಬಹುಕಾಲೀನತ್ವರೂಪನಿತ್ಯತ್ವಾರ್ಥಕತ್ವೇನ ಉಪಚರಿತಾರ್ಥತ್ವಾತ್ ಇತ್ಯತೋಽಪ್ಯಾಹ । ತಥಾ ಸತಿ ವೇದಸ್ಯಾನಿತ್ಯತ್ವಾದ್ ಅಪ್ರಾಮಾಣ್ಯಾಖ್ಯವಿರೋಧಃ ಸ್ಯಾತ್ ಇತಿ। ನನು ವೇದಸ್ಯಾನಿತ್ಯತ್ವೇ ಅವ್ಯಾಪ್ತಿಮೂಲತ್ವೇನ ಪ್ರಾಮಾಣ್ಯಂ ಸಂಭವತೀತ್ಯತ ಆಹ – ಆಪ್ತನಿಶ್ಚಯಾದಿತಿ ॥ 'ವೇದಕರ್ತುಃ' ಇತಿ ಶೇಷಃ । ತಥಾ ಚ – ಕರ್ತುಃ ಸಾರ್ವಜ್ಞಾದೌ ಮಾನಾಭಾವೇನ ವೇದಕರ್ತುಃ ಸಾರ್ವಜ್ಞತ್ವಾದಿರೂಪಾಪ್ತನಿಶ್ಚಯಾದಿತ್ಯರ್ಥಃ।

ಅಸ್ತು ವಾ ಕರ್ತರಿ ಆಪ್ತಿನಿಶ್ಚಯಃ, ತಥಾಽಪಿ ನ ವೇದೇ ತನ್ಮೂಲತ್ವನಿಶ್ಚಯ ಇತ್ಯಾಹ – ಆಪ್ತ್ಯನಿಶ್ಚಯಾದಿತಿ ॥ 'ವೇದಸ್ಯ' ಇತ್ಯಾಕೃಷ್ಯತೇ । ತಥಾ ಚ – ವೇದಸ್ಯ ಆಪ್ತಪ್ರಣೀತತ್ವರೂಪಾಪ್ತಿಮೂಲತ್ವಾನಿಶ್ಚಯಾದಿತ್ಯರ್ಥಃ । ತಸ್ಮಾತ್ ಮಾನಾ-ಭಾವೇನ ಆಪ್ತಿತನ್ಮೂಲತ್ವಾನಿಶ್ಚಯಾದ್ ವೇದಾನಿತ್ಯತ್ವೇ ತತ್ಪ್ರಾಮಾಣ್ಯಾಭಾವಾಪತ್ತೇಃ ನ ನಿತ್ಯತ್ವಶ್ರುತೇರುಪಚರಿತಾರ್ಥತ್ವಂ ವಾಚ್ಯಮ್ - ಇತಿ ಭಾವಃ । ನ ಕೇವಲಂ ಶ್ರುತೇರ್ವೇದನಿತ್ಯತ್ವಸಿದ್ಧಿಃ, ಕಿಂತು ಪರಿಶೇಷಾನುಮಾನಾದಪಿ ಇತ್ಯಾಹ – ನಿತ್ಯತ್ವೇತಿ ॥ ಮೂಲಪ್ರಮಾಣಸ್ಯ ನಿತ್ಯತ್ವಾಪೇಕ್ಷತ್ವಾದ್ ವೇದಸ್ಯ ನಿತ್ಯತ್ವಾವಗಮಾತ್ ಇತ್ಯನ್ವಯಃ।

''ವೇದಗಳು ನಿತ್ಯವಲ್ಲ; ಹಾಗೆ ಹೇಳಿದಲ್ಲಿ ಶ್ರುತಿವಿರೋಧ ಬರುವುದು'' ಎನ್ನು-ವುದೂ ಸರಿಯಲ್ಲ. ಏಕೆಂದರೆ, ನಿತ್ಯತ್ವವನ್ನು ಹೇಳುವಂತೆ ತೋರುವ ಶ್ರುತಿಗಳು ವೇದಗಳು ಬಹುಕಾಲೀನವಾದವು ಎಂಬರ್ಥದಲ್ಲಿ ನಿತ್ಯವೆಂದು ಹೇಳುತ್ತವೆ ಎಂದು ಔಪಚಾರಿಕವಾದ ಅರ್ಥವನ್ನು ಹೊಂದಿರುವುದು ಎಂಬ ಆಶಂಕೆಯನ್ನು ಪರಿಹರಿಸಲೂ ''ವಿರೋಧಃ ಸ್ಯಾತ್'' - ಹಾಗಿದ್ದ ಪಕ್ಷದಲ್ಲಿ ವೇದಗಳು ಅನಿತ್ಯವಾದುದರಿಂದ ಅಪ್ರಾಮಾಣ್ಯವೆಂಬ ವಿರೋಧ ಬಂದೀತು! ಎಂದು ಹೇಳಲಾಗಿದೆ. ವೇದಗಳು ಅನಿತ್ಯ-ವಾಗಿದ್ದರೂ ಆಪ್ತರಾದ ಪುರುಷರಿಂದ ರಚಿತವಾಗಿರುವುದರಿಂದ ಅವುಗಳಿಗೆ ಪ್ರಾಮಾಣ್ಯವಿರಲು ಸಾಧ್ಯವಿದೆ ಎಂಬ ಶಂಕೆಗೆ ಉತ್ತರವಾಗಿ ''ಆಪ್ತ್ಯನಿಶ್ಚಯಾತ್'' ಎಂದು ಹೇಳಿದೆ. ಇಲ್ಲಿ 'ವೇದಕರ್ತುಃ' ಎಂಬ ಪದವು ಶೇಷವಾಗಿದೆ. ತಥಾ ಚ – ವೇದಕರ್ತೃವಿಗೆ ಸರ್ವಜ್ಞತ್ವವೇ ಮೊದಲಾದವು ಇರುವವೆಂಬ ವಿಷಯದಲ್ಲಿ ಪ್ರಮಾಣ-ವಿಲ್ಲದ್ದರಿಂದ ಅವರಿಗೆ ಸರ್ವಜ್ಞತ್ವಾದಿರೂಪವಾದ ಆಪ್ತಿಯು ನಿಶ್ಚಿತವಾಗದಿರುವುದ-ರಿಂದ ಎಂದು ಅರ್ಥ.

ಅಥವಾ – ಕರ್ತೃಗಳಿಗೆ ಆಪ್ತಿ ಇರುವುದೆಂದು ನಿಶ್ಚಯವಾಗಬಹುದು; ಆದರೂ ವೇದವು ಆ ಆಪ್ತಿಮೂಲಕವಾದದ್ದು ಎಂಬ ವಿಷಯದಲ್ಲಿ ನಿಶ್ಚಯವಿಲ್ಲ ಎಂದು ''ಆಪ್ತ್ಯನಿಶ್ಚಯಾತ್'' ಎಂಬ ಪದದಿಂದ ಹೇಳುತ್ತಿದ್ದಾರೆ. 'ವೇದಸ್ಯ' ಎಂಬ ಮುಂದಿನ ಪದವು ಇಲ್ಲಿ ಅನ್ವಯವನ್ನು ಹೊಂದುವುದು. ತಥಾ ಚ – ವೇದಕ್ಕೆ ಆಪ್ತಿಮೂಲತ್ವ

ಅಂದರೆ ಆಪ್ತಪ್ರಣೀತತ್ವವು ನಿಶ್ಚಯವಾಗದಿರುವುದರಿಂದ ಎಂದು ಅರ್ಥ. ಆದ್ದರಿಂದ, ಪ್ರಮಾಣವಿಲ್ಲದ ಪ್ರಯುಕ್ತ ವೇದಕರ್ತೃವಿಗೆ ಆಪ್ತತ್ವವಾಗಲೀ, ವೇದಗಳಿಗೆ ಆಪ್ತಿ-ಮೂಲತ್ವವಾಗಲೀ ನಿಶ್ಚಯವಾಗದಿರುವುದರಿಂದ ವೇದಗಳು ಅನಿತ್ಯವಾದ ಪಕ್ಷದಲ್ಲಿ ಅವುಗಳಿಗೆ ಅಪ್ರಾಮಾಣ್ಯ ಬರುವ ಪ್ರಸಂಗವಿರುವುದರಿಂದ ವೇದಗಳು ನಿತ್ಯ ಎಂದು ಹೇಳುವ ಶ್ರುತಿಗಳು ಔಪಚಾರಿಕವಾಗಿ ಹಾಗೆ ಹೇಳುವವು ಎಂದು ಹೇಳತಕ್ಕದ್ದಲ್ಲ ಎಂದು ಭಾವ. ವೇದಗಳ ನಿತ್ಯತ್ವವು ಶ್ರುತಿಯಿಂದ ಮಾತ್ರವಲ್ಲ; ಪರಿಶೇಷಾನುಮಾನದಿಂದಲೂ ಕೂಡ ಸಿದ್ಧವಾಗುವುದು ಎಂದು "ನಿತ್ಯತ್ವ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಮೂಲಪ್ರಮಾಣವು ನಿತ್ಯತ್ವವನ್ನು ಅಪೇಕ್ಷಿಸುವುದರಿಂದ ವೇದವು ನಿತ್ಯವೆಂದು ತಿಳಿ-ಯುವುದು; ಆದ್ದರಿಂದ ಎಂದು ಅನ್ವಯ.

ಭಾ.ದೀ. – ಅಯಂ ಭಾವಃ – ಪ್ರಾಮಾಣ್ಯಸಿದ್ಧ್ಯರ್ಥಂ ವೇದಸ್ಯ ಆಪ್ತ-ಪ್ರಣೇತತ್ವೇ ಮೂಲಪ್ರಮಾಣೇನ ಭಾವ್ಯಮ್, ಪೌರುಷೇಯಸ್ಯ ಮೂಲಪ್ರಮಾಣ-ಸಾಪೇಕ್ಷತ್ವನಿಯಮಾತ್ । ಅನ್ಯಥಾಽನಾಶ್ವಾಸಾದ್ । ಯಜ್ಞಾದೇಃ ಪುಣ್ಯ-ಸಾಧನತಾದಿಬೋಧಕಂ ವೇದಮೂಲಂ ಚ ಭವತ್ ಪ್ರತ್ಯಕ್ಷಾನುಮಾಯೋ-ರಸಂಭವಾತ್ ಪರಿಶೇಷಾದ್ 'ವಾಕ್ಯಮೇವ' ಇತಿ ವಾಚ್ಯಮ್, ತಸ್ಯ ಚ ಅನಿತ್ಯತಾಮುಪೇತ್ಯ ಮೂಲಾನ್ವೇಷಣೇಽನವಸ್ಥಾಪತ್ತ್ಯಾ ನಿತ್ಯತ್ವಮೇವ ವಾಚ್ಯಮ್, ತತೋ ವರಂ ವೇದಸ್ಯೈವ ನಿತ್ಯತ್ವಾಂಗೀಕರಣಂ, ಶ್ರುತಿಸಿದ್ಧತ್ವಾದಿತಿ ॥

ಈ ವಾಕ್ಯದ ಅಭಿಪ್ರಾಯ ಹೀಗಿದೆ – "ವೇದದ ಪ್ರಾಮಾಣ್ಯಸಿದ್ಧಿಗೋಸ್ಕರವಾಗಿ ವೇದವು ಆಪ್ತಪ್ರಣೀತವೆಂದು ಅಂಗೀಕರಿಸಿದರೆ ಅದಕ್ಕೂ ಒಂದು ಮೂಲಪ್ರಮಾಣ-ವಿರುವುದೆಂದು ಹೇಳಬೇಕಾಗುವುದು. ಏಕೆಂದರೆ, ಯಾವುದೇ ಪೌರುಷೇಯಗ್ರಂಥಕ್ಕೆ ಮೂಲಪ್ರಮಾಣದ ಅಪೇಕ್ಷೆಯಿದೆ ಎಂಬ ನಿಯಮವಿದೆ. ಹಾಗಿಲ್ಲದೇ ಇದ್ದರೆ ಅಲ್ಲಿ ಅವಿಶ್ವಾಸವುಂಟಾಗುವುದು. ಯಜ್ಞಾದಿಗಳಿಗೆ ಪುಣ್ಯಸಾಧನತ್ವ ಮೊದಲಾದವುಗಳೂ ಇರುವುದೆಂದು ತಿಳಿಸುವ ವೇದಮೂಲವೂ ಆಗಿರತಕ್ಕಂತಹ ಪ್ರಮಾಣವು ಪ್ರತ್ಯಕ್ಷ ಅಥವಾ ಅನುಮಾನವಾಗಲು ಸಾಧ್ಯವಿಲ್ಲದ್ದರಿಂದ ಪರಿಶೇಷಾತ್ - ಪರಿಶೇಷದಿಂದ ಆ ಪ್ರಮಾಣವೂ ವಾಕ್ಯವೇ ಎಂದು ಹೇಳಬೇಕಾಗುವುದು. ಆ ವಾಕ್ಯವೂ ಅನಿತ್ಯವೆಂದು

ಅಂಗೀಕರಿಸಿ ಅದಕ್ಕೂ ಮೂಲವನ್ನು ಅನ್ವೇಷಿಸುವುದಾದಲ್ಲಿ ಅನವಸ್ಥೆ ಬರುವುದರಿಂದ ಆ ವಾಕ್ಯವು ನಿತ್ಯವೆಂದೇ ಹೇಳಬೇಕಾಗುವುದು. ಅದರ ಬದಲು ವೇದವೇ ನಿತ್ಯವೆಂದು ಅಂಗೀಕರಿಸುವುದು ಆ ವೇದನಿತ್ಯತ್ವವು ಶ್ರುತಸಿದ್ಧವಾದುದರಿಂದ ಶ್ರೇಷ್ಠವಾಗಿದೆ'' – ಎಂದು.

ಭಾ.ದೀ. – ನನು ಯಥಾ ವೇದಾನಿತ್ಯತ್ವೇ ಆಪ್ತ್ಯನಿಶ್ಚಯಾತ್ ಪ್ರಾಮಾಣ್ಯಾಭಾವಾಪತ್ತಿರ್ಬಾಧಿಕಾ, ತಥಾ ತಸ್ಯ ನಿತ್ಯತ್ವೇಽಪಿ ಆಪ್ತೋಕ್ತತ್ವರೂಪಗುಣಜನ್ಯತ್ವಾಭಾವೇನ ಪ್ರಾಮಾಣ್ಯಾಭಾವಾಪತ್ತಿರಿತಿ ಸಮಂ ಬಾಧಕಮ್, ಇತ್ಯತ ಆಹ – ಸ್ವತ ಇತಿ ॥ 'ವೇದಸ್ಯ' ಇತ್ಯನುವರ್ತತೇ । ತಥಾ ಚ – 'ವೇದಸ್ಯ' ವೇದಜನ್ಯಜ್ಞಾನಗತಯಾಥಾರ್ಥ್ಯರೂಪಪ್ರಾಮಾಣ್ಯಸ್ಯ 'ಸ್ವತ ಏವ' ಜ್ಞಾನಸಾಮಾನ್ಯಕಾರಣಾದೇವ 'ಪ್ರಸಿದ್ಧೇಃ' ಉಪಪತ್ತೇಃ ಪ್ರಮಿತತ್ವಾತ್ ಇತ್ಯರ್ಥಃ ।

ಯದ್ವಾ, ವೇದಗತಯಥಾರ್ಥಜ್ಞಾನಕರಣತ್ವರೂಪಕರಣಪ್ರಾಮಾಣ್ಯಸ್ಯ 'ಸ್ವತ ಏವ' ಜ್ಞಾನಕರಣತ್ವಸಹಜಶಕ್ತ್ಯಭಿನ್ನಯಥಾರ್ಥಜ್ಞಾನಜನಕತ್ವಶಕ್ತಿರೂಪತ್ವೇನೈವ ಪ್ರಮಿತತ್ವಾದಿತ್ಯರ್ಥಃ । ಅಸ್ಯಾಪಿ 'ವೇದಸ್ಯ ನಿತ್ಯತ್ವಸಂಭವಾತ್' ಇತ್ಯನೇನಾನ್ವಯಃ । ತಥಾ ಚ – ವೇದಸ್ಯ ನಿತ್ಯತ್ವಸ್ಯ ಸಿದ್ಧತ್ವಾತ್ ತದ್ವಾಚ್ಯದೇವಾನಾಮ್ ಅನಿತ್ಯತ್ವೇ ವಾಚ್ಯಹೀನತ್ವರೂಪಾಪ್ರಾಮಾಣ್ಯಾಪತ್ತಿರಿತಿ ಭಾವಃ ।

ಭಾ.ದೀ. ಶಂಕೆ – ಹೀಗೆ ವೇದವು ಅಯುಕ್ತವಾದ ಪಕ್ಷದಲ್ಲಿ ವೇದಕರ್ತೃವಿನಲ್ಲಿ ಆಪ್ತತ್ವದ ನಿಶ್ಚಯವಿಲ್ಲದಿರುವುದರಿಂದ ವೇದಕ್ಕೆ ಪ್ರಾಮಾಣ್ಯವಿಲ್ಲವೆಂದಾಗುವುದು ಬಾಧಕವೋ, ಹಾಗೆಯೇ ವೇದವನ್ನು ನಿತ್ಯವೆಂದು ಹೇಳಿದ ಪಕ್ಷದಲ್ಲೂ ಅದಕ್ಕೆ ಆಪ್ತೋಕ್ತತ್ವವೆಂಬ ಗುಣದಿಂದ ಉತ್ಪತ್ತಿಯಿಲ್ಲದಿರುವುದರಿಂದ ಪ್ರಾಮಾಣ್ಯವಿಲ್ಲವೆಂದಾದೀತು! ಎಂದು ಬಾಧಕವು ಸಮಾನವಾಗಿದೆ.

ಉತ್ತರ – ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಭಾಷ್ಯದಲ್ಲಿ ''ಸ್ವತಃ'' ಎಂದು ಹೇಳಲಾಗಿದೆ.

'ವೇದಸ್ಯ' ಎಂಬ ಪದವು ಇಲ್ಲಿ ಅನುವೃತ್ತವಾಗುವುದು. ತಥಾ ಚ – 'ವೇದಸ್ಯ' - ವೇದಜನ್ಯವಾದ ಜ್ಞಾನದಲ್ಲಿ ಇರುವ ಯಾಥಾರ್ಥ್ಯರೂಪಪ್ರಾಮಾಣ್ಯವು 'ಸ್ವತ ಏವ' - ಆ ಜ್ಞಾನದ ಉತ್ಪತ್ತಿಗೆ ಕಾರಣವಾದದ್ದರಿಂದಲೇ 'ಪ್ರಸಿದ್ಧೇಃ' - ಉಪಪನ್ನವಾಗುವುದೆಂದು ಪ್ರಮಾಣಸಿದ್ಧವಾಗಿರುವುದರಿಂದ ಎಂದು ಅರ್ಥ.

ಅಥವಾ– ವೇದದಲ್ಲಿರುವ ಯಥಾರ್ಥಜ್ಞಾನಕರಣತ್ವರೂಪವಾದ ಕರಣ-ಪ್ರಾಮಾಣ್ಯವು 'ಸ್ವತ ಏವ' - ಜ್ಞಾನಕರಣತ್ವವೆಂಬ ಸಹಜವಾದ ಶಕ್ತಿಸ್ವರೂಪವೇ ಆಗಿರುವ (ಶಕ್ತಿಸ್ವರೂಪದಿಂದ ಅಭಿನ್ನವಾಗಿರುವ) ಯಥಾರ್ಥಜ್ಞಾನಜನಕತ್ವಶಕ್ತಿರೂಪ-ವಾದದ್ದು ಎಂಬುದಾಗಿ ಪ್ರಮಾಣಸಿದ್ಧವಾಗಿರುವುದು ಎಂದರ್ಥ. ಈ ವಾಕ್ಯಕ್ಕೂ 'ವೇದಸ್ಯ ನಿತ್ಯತ್ವಸಂಭವಾತ್' ಎಂಬ ವಾಕ್ಯದೊಂದಿಗೆ ಅನ್ವಯವಿರುವುದು. ತಥಾ ಚ – ವೇದದ ನಿತ್ಯತ್ವವು ಪ್ರಮಾಣಸಿದ್ಧವಾಗಿರುವುದರಿಂದ ವೇದವಾಚ್ಯರಾದ ದೇವತೆಗಳು ಅನಿತ್ಯರಾದ ಪಕ್ಷದಲ್ಲಿ ವೇದಕ್ಕೆ ವಾಚ್ಯಹೀನತ್ವವೆಂಬ ಅಪ್ರಾಮಾಣ್ಯ ಬಂದೀತು! - ಎಂದು ಭಾವ.

ಭಾ.ದೀ.– ನನು ಅತೀತಕಲ್ಪೇ ಏಕದೇವತಾಽಭಾವೇ ದೇವತಾಂತರ-ಸದ್ಭಾವಾದ್ ಯಥಾ ಕರ್ಮಣಿ ಉದ್ದೇಶ್ಯಾಭಾವನಿಮಿತ್ತೋ ವಿರೋಧೋ ನಾಸ್ತಿ, ತಥಾ ಅತ್ರಾಪಿ ಏಕದೇವತಾನಾಶೇಽಪಿ ಪುನರನ್ಯದೇವತೋತ್ಪತ್ತಿಸಂಭವಾನ್ನ ವಾಚ್ಯಹೀನತ್ವಾಖ್ಯೋ ವಿರೋಧಃ ಇತ್ಯತ ಆಹ – ಪುನರನ್ಯಭಾವನಿಯಮಾ-ಭಾವಾಚ್ಚೇತಿ ॥ 'ಪೂರ್ವಕಲ್ಪೀಯನಾಶಾನಂತರಮ್' ಇತ್ಯಾನಂತರ್ಯಾರ್ಥೇ ಪುನಃ ಶಬ್ದಃ । 'ಅನ್ಯಭಾವಃ' - ಅನ್ಯೋತ್ಪತ್ತಿಃ । 'ತಸ್ಯ ನಿಯಮೇ ಪ್ರಮಾಣಾ-ಭಾವಾತ್' ಇತ್ಯರ್ಥಃ । ಅತೀತದೇವತಾಪ್ರವಾಹೇ ತು ಪ್ರಮಾಣಮಸ್ತೀತಿ ವೈಷಮ್ಯಮ್ - ಇತಿ ಭಾವಃ।

ಸಿದ್ಧಾಂತಿಗಳ ಶಂಕೆ – ಹಿಂದಿನ ಕಲ್ಪದಲ್ಲಿ (ಹೇಗೆ) ಒಬ್ಬ ದೇವತೆ ಇಲ್ಲದಿದ್ದರೂ ಮತ್ತೊಬ್ಬ ದೇವತೆ ಇರುವುದರಿಂದ ಕರ್ಮಗಳಿಗೆ ಉದ್ದೇಶ್ಯರಾದವರೇ ಇಲ್ಲದಿರುವ ಕಾರಣ ಬರಬಹುದಾದ ವಿರೋಧವಿಲ್ಲವೋ ಹಾಗೆಯೇ ಒಬ್ಬ ದೇವತೆ ನಾಶವಾದರೂ

ಮತ್ತೊಬ್ಬ ದೇವತೆಯ ಉತ್ಪತ್ತಿಯಾಗಲು ಸಾಧ್ಯವಿರುವುದರಿಂದ ವೇದಗಳಿಗೆ ವಾಚ್ಯ-ಹೀನತ್ವರೂಪವಾದ ವಿರೋಧವಿಲ್ಲ.

ಈ ಶಂಕೆಯನ್ನು ನಿರಾಕರಿಸಲು ಪೂರ್ವಪಕ್ಷಿಯು ''ಪುನಃ ಅನ್ಯಭಾವಾಚ್ಚ'' ಎಂದು ಹೇಳುತ್ತಿದ್ದಾನೆ. ಇಲ್ಲಿ ಪುನಃ ಶಬ್ದವು 'ಪೂರ್ವಕಲ್ಪದ ದೇವತೆಯ ನಾಶಾನಂತರದಲ್ಲಿ' ಎಂಬುದಾಗಿ ಆನಂತರ್ಯರೂಪವಾದ ಅರ್ಥವನ್ನು ಹೇಳುವುದು. ಅಥವಾ- 'ಉತ್ತರ-ಕಲ್ಪದಲ್ಲಿ' ಎಂಬ ಅರ್ಥದಲ್ಲಿ ಪುನಃಶಬ್ದವನ್ನು ಇಲ್ಲಿ ಪ್ರಯೋಗಿಸಲಾಗಿದೆ. ಅನ್ಯಭಾವ ಎಂದರೆ ಅನ್ಯದೇವತೆಯ ಉತ್ಪತ್ತಿ. ನಿಯಮೇನ ಆ ರೀತಿ ಆಗುವುದೆಂಬ ವಿಷಯದಲ್ಲಿ ಪ್ರಮಾಣವಿಲ್ಲವಾದ್ದರಿಂದ ಎಂದು ಅರ್ಥ. ಹಿಂದೆ ಹಿಂದಿನ ಕಲ್ಪಗಳಲ್ಲಿ ದೇವತೆಗಳ ಪ್ರವಾಹವಿತ್ತು ಎಂಬ ವಿಷಯದಲ್ಲಿ ಪ್ರಮಾಣವಿರುವುದೆಂದು ವೈಷಮ್ಯವಿದೆ ಎಂದು (ಪೂರ್ವಪಕ್ಷಿಯ) ಭಾವ.

ಭಾ.ದೀ. – ಅನೇನ – ಉತ್ತರಕಾಲೇ ದೇವತಾಭಾವವಿರೋಧಃ ಕರ್ಮಣ್ಯಪಿ ಸಮಾನ ಇತಿ ಸೌತ್ರಶಬ್ದಶಬ್ದೇನ ಕರ್ಮಾಪಿ ಉಪಲಕ್ಷಣೀಯಮ್ ಇತ್ಯುಕ್ತಂ ಭವತಿ। ನ ಚೈವಮತ್ರಾಪಿ ವಿರೋಧಪದಾಕರ್ಷಣಮಿತಿ ಟೀಕಾವಿರೋಧಃ। 'ತದುಪರಿ' ಇತಿ ಸೂತ್ರಾದಪೇರನುಕರ್ಷೋಕ್ತೇಃ ತಸ್ಯ ಚ ನ ಕೇವಲಂ ಶಬ್ದೇ ಉತ್ತರಕಾಲೇ ದೇವತಾಭಾವವಿರೋಧಃ, ಕರ್ಮಣ್ಯಪಿ ಇತ್ಯೇತದರ್ಥಕತ್ವಾತ್ ಇತಿ ವಾಚ್ಯಮ್। ಆಕರ್ಷಣಶಬ್ದಸ್ಯಾನ್ವಯಾರ್ಥತ್ವಮಾಶ್ರಿತ್ಯ ನ ಕೇವಲಂ ಪೂರ್ವಸೂತ್ರೇ ವಿರೋಧ-ಪದಾನ್ವಯಃ, ಕಿಂತು ಏತತ್ಸೂತ್ರೇಽಪಿ ಇತಿ ಟೀಕಾರ್ಥಾಂಗೀಕಾರೇಣ 'ಅಪಿ-ವಿರೋಧ'ಪದಯೋಃ ಆಕರ್ಷಣಮ್ ಇತ್ಯರ್ಥಾನಭ್ಯುಪಗಮಾತ್।

ಅಸ್ತು ವಾ ದ್ವಂದ್ವಃ, ತಥಾಽಪಿ ನಾನುಪಪತ್ತಿಃ, ಅಪೇಃ ಸ್ವರೂಪನಿತ್ಯತ್ವಾ-ಭಾವೇಽಪಿ ಇತ್ಯರ್ಥಾಭ್ಯುಪಗಮೇನ ಕರ್ಮಸಮುಚ್ಚಯಾರ್ಥತ್ವಾನಭ್ಯುಪ-ಗಮಾತ್। ಅತ ಏವ ಟೀಕಾಯಾಂ 'ದೇವಾನಾಂ ಸ್ವರೂಪನಿತ್ಯತ್ವಾಭಾವೇಽಪಿ' ಇತ್ಯುಕ್ತಿಃ। ಅತ್ರ (೧)ನಿತ್ಯತ್ವಸಾಧಕಯೋಃ ಶ್ರುತ್ಯನುಮಾನಯೋಃ ಸಮುಚ್ಚಯೇ ಏಕಃ 'ಚ'ಶಬ್ದಃ। (೨) ಅನಿತ್ಯತ್ವಬಾಧಕಸ್ಯ ನಿತ್ಯತ್ವೇ ತದಭಾವಸ್ಯ ಚ ಸಮು-

ಚ್ಚಯೇऽನ್ಯಃ। (೩) ಅನಿತ್ಯತ್ವಾನ್ಯಭಾವನಿಯಮಾಭಾವಯೋಃ ಸಮುಚ್ಚಯೇऽಪರ ಇತಿ ವಿವೇಕಃ।

ಇದರಿಂದ – ಉತ್ತರಕಾಲದಲ್ಲಿ ದೇವತೆಗಳ ಅಭಾವರೂಪವಾದ ವಿರೋಧವು ಕರ್ಮದ ವಿಷಯದಲ್ಲೂ ಸಮಾನವಾಗಿದೆ. ಆದ್ದರಿಂದ ಸೂತ್ರದಲ್ಲಿರುವ 'ಶಬ್ದ' ಎಂಬ ಶಬ್ದದಿಂದ ಕರ್ಮವನ್ನೂ ಲಕ್ಷಣಯಾ ಗ್ರಹಿಸಬೇಕೆಂದು ಹೇಳಿದಂತಾಗುವುದು.

ಶಂಕೆ – ಹೀಗೆ ಸೂತ್ರದ 'ಶಬ್ದ'ಪದದಿಂದ ಕರ್ಮವನ್ನೂ ಲಕ್ಷಣಯಾ ಗ್ರಹಿಸುವುದಾದರೆ 'ಅತ್ರ ಅಪಿವಿರೋಧಪದಾಕರ್ಷಣಮ್' 'ಅಪಿ, ವಿರೋಧಪದಗಳನ್ನು ಮುಂದಿನ ಸೂತ್ರದಿಂದ ಆಕರ್ಷಿಸಬೇಕು'' ಎಂಬ ಟೀಕಾವಾಕ್ಯದ ವಿರೋಧ ಬರುವುದು. ಏಕೆಂದರೆ, ಟೀಕೆಯಲ್ಲಿ ಇಲ್ಲಿ 'ತದುಪರಿ' ಎಂಬ ಸೂತ್ರದಿಂದ ಅಪಿಶಬ್ದದ ಅನುವೃತ್ತಿಯನ್ನು ಹೇಳಲಾಗಿದೆ. ಆ 'ಅಪಿ'ಶಬ್ದಕ್ಕೆ - ವೇದವಾಕ್ಯಗಳಿಗೆ ಮುಂದಿನ ಕಾಲದಲ್ಲಿ ದೇವತಾಭಾವವೆಂಬ ವಿರೋಧಮಾತ್ರವಲ್ಲ; ಕರ್ಮಕ್ಕೂ ಆ ವಿರೋಧವಿರುವುದು - ಎಂಬ ಅರ್ಥವಿರುವುದರಿಂದ (ಸೂತ್ರದ 'ಶಬ್ದ' ಎಂಬ ಪದದಿಂದ ಕರ್ಮವನ್ನೂ ಲಕ್ಷಣಯಾ ಗ್ರಹಿಸುವುದಾದಲ್ಲಿ ಮುಂದಿನ ಸೂತ್ರದಿಂದ ಇಲ್ಲಿ ವಿರೋಧ ಪದವನ್ನು ತಂದು ಸೇರಿಸುವುದು ವ್ಯರ್ಥವಾಗುವುದೆಂದು ಭಾವ.)

ಸಮಾಧಾನ – ಇದು ಸರಿಯಲ್ಲ; ಏಕೆಂದರೆ, ಟೀಕೆಯ ಆಕರ್ಷಣಶಬ್ದಕ್ಕೆ ಅನ್ವಯ -ವೆಂಬ ಅರ್ಥವನ್ನು ಆಶ್ರಯಿಸಿ, 'ಕೇವಲ ಹಿಂದಿನ ಸೂತ್ರದಲ್ಲಿ ವಿರೋಧ ಪದದ ಅನ್ವಯವಷ್ಟೇ ಅಲ್ಲ; ಕಿಂತು ಈ ಸೂತ್ರದಲ್ಲೂ' ಎಂದು ಟೀಕಾವಾಕ್ಯದ ಅರ್ಥವೆಂದು ಅಂಗೀಕರಿಸಲಾಗಿದೆ ಹೊರತು 'ಅಪಿ ಮತ್ತು ವಿರೋಧ ಎಂಬ ಪದಗಳನ್ನು ಮುಂದಿನ ಸೂತ್ರದಿಂದ ಇಲ್ಲಿ ಆಕರ್ಷಿಸಬೇಕು' ಎಂಬ ಅರ್ಥವನ್ನು ಒಪ್ಪಿಲ್ಲ. ಅಥವಾ 'ಅತ್ರಾಪಿ ವಿರೋಧಪದಾಕರ್ಷಣಮ್' ಎಂಬಲ್ಲಿ ಅಪಿ ವಿರೋಧ ಎಂಬ ಪದಗಳಿಗೆ ದ್ವಂದ್ವಸಮಾಸವಾಗಿರುವುದೆಂದು ಒಪ್ಪಿದರೂ ಅನುಪಪತ್ತಿಯಿಲ್ಲ. ಆ ಸಂದರ್ಭದಲ್ಲಿ ಅಪಿಶಬ್ದಕ್ಕೆ 'ಸ್ವರೂಪನಿತ್ಯತ್ವವಿಲ್ಲದೇ ಹೋದರೂ' ಎಂಬರ್ಥವನ್ನು ಒಪ್ಪಲಾಗಿದೆಯೇ ಹೊರತು 'ಅಪಿಶಬ್ದವು ಕರ್ಮಸಮುಚ್ಚಯವನ್ನು ಹೇಳುವುದು' ಎಂದು ಒಪ್ಪಲಾಗಿಲ್ಲ. ಆದ್ದರಿಂದಲೇ ಟೀಕೆಯಲ್ಲಿ 'ದೇವಾನಾಂ ಸ್ವರೂಪನಿತ್ಯತ್ವಾಭಾವೇऽಪಿ' ಎಂದು ಹೇಳಲಾಗಿದೆ.

('ವಾಚಾ ವಿರೂಪ ನಿತ್ಯಯಾ' ಎಂದು ಪ್ರಾರಂಭವಾಗಿ 'ಶಬ್ದೇ ವಿರೋಧ ಇತಿ ಚೇತ್' ಎಂದು ಕೊನೆಗೊಳ್ಳುವ ವಾಕ್ಯದಲ್ಲಿ) ಒಂದು ಚಶಬ್ದವು ವೇದನಿತ್ಯತ್ವಸಾಧಕ-ವಾದ ಶ್ರುತಿ ಮತ್ತು ಅನುಮಾನಗಳ ಸಮುಚ್ಚಯವನ್ನು ಹೇಳುವುದು. ವೇದದ ಅನಿತ್ಯತ್ವಕ್ಕೆ ಬಾಧಕ ಮತ್ತು ನಿತ್ಯತ್ವವನ್ನು ಒಪ್ಪಿದಾಗ ಬಾಧಕದ ಅಭಾವ ಇವುಗಳ ಸಮುಚ್ಚಯವನ್ನು ಮತ್ತೊಂದು ಚಶಬ್ದವು ಹೇಳುವುದು. ದೇವತೆಗಳ ಅನಿತ್ಯತ್ವ, ಮತ್ತು ಪೂರ್ವಕಲ್ಪದ ದೇವತೆಗಳ ನಾಶದ ಅನಂತರ ಇನ್ನೊಬ್ಬ ದೇವತೆಯ ಉತ್ಪತ್ತಿಯ ನಿಯಮದ ಅಭಾವ ಇವುಗಳ ಸಮುಚ್ಚಯವನ್ನು ಇನ್ನೊಂದು ಚಶಬ್ದವು ಹೇಳುವು-ದೆಂದು ತಿಳಿಯಬೇಕು.

ಭಾ.ದೀ. – ''ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್'' (ಋ. ೮-೬೪-೬) ಇತಿ ಋಗ್ಯಜುರ್ಮಂತ್ರಾರ್ಥಸ್ತು ನ ವಿಲಕ್ಷಣತ್ವಾಧಿಕರಣಟೀಕಾಯಾಮ್(ಬ್ರ.ಸೂ.೨.೧.೪) ಉಕ್ತಃ।

ತತ್ರ ಯದ್ಯಪಿ 'ವಿರೂಪ' ಇತಿ ಸ್ವಾತ್ಮಾನಂ ಪ್ರತಿ ಸಂಬೋಧನಮ್ ಇತ್ಯುಕ್ತೇಃ, ವಿಷ್ಣುತತ್ತ್ವನಿರ್ಣಯಟೀಕಾಯಾಂ 'ವಿರೂಪಾಖ್ಯ ಋಷೇಃ ಸಂಬೋಧನಮ್' ಇತ್ಯುಕ್ತೇಶ್ಚ ವಿರೋಧೋ ಭಾತಿ । ತಥಾಽಪಿ ವಿರೂಪರ್ಷಿಕರ್ತೃಕಂ ಸ್ವಾಂತ-ರ್ಯಾಮಿಸಂಬೋಧನಮ್ ಇತಿ ತದರ್ಥಾಭ್ಯುಪಗಮಾತ್ ನ ವಿರೋಧಃ। ಉಕ್ತಂ ಹಿ ತತ್ತ್ವಪ್ರದೀಪೇ – 'ಪ್ರೇರಯ' ಇತಿ ಪ್ರಾರ್ಥನಂ ವಿರೂಪಸ್ಯ ಋಷೇರಂತ-ರ್ಯಾಮಿವಿಷಯಮ್ - ಇತಿ । ವಿರೂಪಕರ್ತೃಕಂ ತದುದ್ದೇಶ್ಯಕಂ ಸಂಬೋ-ಧನಮ್ ಇತಿ ಪಕ್ಷೇಽಪಿ ಸ್ವಾತ್ಮಶಬ್ದಿತಸ್ವಜೀವಂ ಪ್ರತಿ ಸಂಬೋಧನಮ್ ಇತಿ ಟೀಕಾರ್ಥಾಭ್ಯುಪಗಮಾನ್ನ ವಿರೋಧಃ । ಅಸ್ಮಿನ್ ಪಕ್ಷೇ ತತ್ತ್ವಪ್ರದೀಪೋಕ್ತಂ ವ್ಯಾಖ್ಯಾನಾಂತರಂ ಭವಿಷ್ಯತಿ।

ನ ಚ ಪದ್ಮನಾಭತೀರ್ಥಕೃತವಿಷ್ಣುತತ್ತ್ವನಿರ್ಣಯಟೀಕಾಯಾಂ ನ್ಯಾಯರತ್ನಾ-ವಲ್ಯಾಂ 'ಧರ್ಮೇಣ ವಿರೂಪರ್ಷಿಂ ಪ್ರತಿ ಏತದುಚ್ಯತೇ' ಇತ್ಯುಕ್ತತ್ವಾತ್ ತದ್ ವಿರೋಧ ಇತಿ ವಾಚ್ಯಮ್ । ಪ್ರಥಮಂ ಯಮದೃಷ್ಟಸ್ಯ ಮಂತಸ್ಯ ಅನಂತರಂ

ವಿರೂಪೇಣಾಪಿ ದೃಷ್ಟತ್ವಸಂಭವೇನ ತದಾ ಸ್ವಸಂಬೋಧನಸಂಭವೇನ ಅವಿರೋ-ಧಾತ್ ।

ತಥಾ ಚ – ಹೇ ವಿರೂಪ! ಅಭಿತೋ ದ್ಯೌಃ ಪ್ರಕಾಶೋ ಯಸ್ಯಾಸೌ ಅಭಿದ್ಯುಃ, ತಸ್ಮೈ 'ವೃಷ್ಣೇ' ವರ್ಷಿಣೇ - ಅತಿಸಮರ್ಥಾಯ ಇತಿ । ತತ್ತ್ವಪ್ರದೀಪ-ರೀತ್ಯಾ – ವೃಷಾ ಶ್ರೇಷ್ಠಃ ತಸ್ಯ ಚತುರ್ಥೀ ವೃಷ್ಣೇ ಇತಿ ವಾ । 'ತಸ್ಮೈ' ಭಗವತೇ ಏನಮುದ್ದಿಶ್ಯ 'ನೂನಂ' ನಿಶ್ಚಿತಂ 'ನಿತ್ಯಯಾ' ಅನಾದಿನಿಧನಯಾ ವೇದಲಕ್ಷಣ-ವಾಚಾ 'ಸುಷ್ಟುತಿಂ' ಶೋಭನಾಂ ಸ್ತುತಿಂ 'ಚೋದಸ್ವ' ಪ್ರೇರಯ ಕುರು ಇತ್ಯರ್ಥಃ।

'ತಸ್ಮೈ ನ್ಯೂನಮಭಿದ್ಯವೇ...' ಎಂಬ ಋಗ್ವೇದ ಮತ್ತು ಯಜುರ್ವೇದಗಳಲ್ಲಿ-ರುವ ಮಂತ್ರದ ಅರ್ಥವಾದರೋ ನ ವಿಲಕ್ಷಣತ್ವಾಧಿಕರಣದ ತತ್ತ್ವಪ್ರಕಾಶಿಕೆಯಲ್ಲಿ ಹೇಳಲಾಗಿದೆ. (*)

ಯದ್ಯಪಿ ಈ ಮಂತ್ರದಲ್ಲಿ 'ವಿರೂಪ' ಎಂಬುದಾಗಿ ಮಾಡಿರುವ ಸಂಬೋಧನೆ-ಯು ಸ್ವಾತ್ಮನನ್ನು ಎಂದರೆ ತನಗೆ ಸ್ವಾಮಿಯಾದ ಪರಮಾತ್ಮನನ್ನು ಕುರಿತು ಎಂದು ತತ್ತ್ವಪ್ರಕಾಶಿಕೆಯಲ್ಲಿ ಹೇಳಿರುವುದರಿಂದ ವಿಷ್ಣುತತ್ವವಿನಿರ್ಣಯ ಟೀಕೆಯಲ್ಲಿ 'ವಿರೂಪ' ಎಂಬ ಹೆಸರಿನ ಋಷಿಯನ್ನು ಕುರಿತು ಮಾಡಿರುವ ಸಂಬೋಧನೆ ಎಂದು ಹೇಳಿ-ರುವುದರಿಂದ ವಿರೋಧವಿರುವುದೆಂದು ತೋರುವುದು. ಆದರೂ ವಿಷ್ಣುತತ್ತ್ವವಿನಿ-ರ್ಣಯ ಟೀಕೆಯಲ್ಲಿರುವ ವಾಕ್ಯಕ್ಕೆ ವಿರೂಪ ಋಷಿಯು ತನ್ನ ಅಂತರ್ಯಾಮಿಯನ್ನು ಕುರಿತು ಮಾಡುವ ಸಂಬೋಧನೆಯೆಂದು ಅರ್ಥವನ್ನು ಅಂಗೀಕರಿಸುವುದರಿಂದ ಯಾವ ವಿರೋಧವೂ ಇಲ್ಲ. ತತ್ವಪ್ರದೀಪದಲ್ಲಿ ಹೀಗೆ ಹೇಳಲಾಗಿದೆ – 'ಪ್ರೇರಯೇತಿ ಪ್ರಾರ್ಥನಂ ವಿರೂಪಸ್ಯ ಋಷೇರಂತರ್ಯಾಮಿವಿಷಯಮ್' - 'ಪ್ರೇರಿಸು ಎಂಬುದಾಗಿ ವಿರೂಪ ಋಷಿಯು ತನ್ನ ಅಂತರ್ಯಾಮಿಯನ್ನು ಕುರಿತು ಮಾಡುವ ಪ್ರಾರ್ಥನೆ-ಯಾಗಿದೆ' ಎಂದು. ವಿರೂಪಋಷಿಯು ವಿರೂಪನನ್ನು ಉದ್ದೇಶಿಸಿ ಮಾಡುವ ಸಂಬೋಧನೆ ಎಂಬ ಪಕ್ಷದಲ್ಲೂ ಸ್ವಾತ್ಮ ಎಂಬ ಶಬ್ದವು ಹೇಳುವ ತನ್ನಿಂದ ಅಭಿನ್ನನಾದ ಜೀವನನ್ನು ಕುರಿತು ಮಾಡುವ ಸಂಬೋಧನೆ ಎಂಬುದಾಗಿ ತತ್ತ್ವಪ್ರಕಾಶಿಕಾವಾಕ್ಯದ

ಅರ್ಥವನ್ನು ಒಪ್ಪುವುದರಿಂದ ವಿರೋಧವಿಲ್ಲ. ಈ ಪಕ್ಷದಲ್ಲಿ ತತ್ತ್ವಪ್ರದೀಪದಲ್ಲಿ ಹೇಳಿರುವುದು ಬೇರೆಯೇ ವ್ಯಾಖ್ಯಾನವಾಗಿದೆ.

ಶಂಕೆ – ಪದ್ಮನಾಭತೀರ್ಥರು ರಚಿಸಿರುವ ವಿಷ್ಣುತತ್ತ್ವವಿನಿರ್ಣಯಟೀಕೆಯಾದ ನ್ಯಾಯರತ್ನಾವಳಿಯಲ್ಲಿ ವಿರೂಪನಾಮಕ ಋಷಿಯನ್ನು ಕುರಿತು ಯಮಧರ್ಮನಿಂದ ಈ ವಾಕ್ಯವು ಹೇಳಲ್ಪಟ್ಟಿದೆ ಎಂದು ಹೇಳಿರುವುದರಿಂದ ಆ ಟೀಕೆಯ ವಿರೋಧ ಬರು-ವುದು?

ಸಮಾಧಾನ – ಮೊದಲು ಯಮನಿಂದ ದೃಷ್ಟವಾದ ಈ ಮಂತ್ರವು ಅನಂತರ ವಿರೂಪಾಖ್ಯ ಋಷಿಯಿಂದಲೂ ದೃಷ್ಟವಾಗಿರುವ ಸಂಭವವಿರುವುದರಿಂದ ಆ ಸಂದರ್ಭದಲ್ಲಿ ತನ್ನನ್ನು ಕುರಿತು ಸಂಬೋಧನೆ ಮಾಡಿದ್ದರ ಸಂಭವವಿರುವುದರಿಂದ ವಿರೋಧವಿಲ್ಲ.

ತಥಾ ಚ – ಹೇ ವಿರೂಪ! ಅಭಿತಃ ದ್ಯೌಃ ಪ್ರಕಾಶೋ ಯಸ್ಯಾಸೌ - ಸುತ್ತಲೂ ದ್ಯೌಃ ಎಂದರೆ ಪ್ರಕಾಶ ಯಾರಿಗಿರುವುದೋ ಅವನು ಅಭಿದ್ಯು, ಅವನಿಗೆ - ಎಂದು ಅಭಿದ್ಯವೇ ಎಂಬ ಪದದ ಅರ್ಥ. 'ವೃಷ್ಣೇ' - ವರ್ಷಿಸುವವನಿಗೆ ಅಥವಾ ಅತಿ ಸಮರ್ಥನಾದವನಿಗೆ ಎಂದರ್ಥ. ಅಥವಾ ತತ್ತ್ವಪ್ರದೀಪದ ಪ್ರಕಾರ ವೃಷಾ ಎಂದರೆ ಶ್ರೇಷ್ಠ. ಆ ಶಬ್ದದ ಚತುರ್ಥೀ 'ವೃಷ್ಣೇ' ಎಂದು ರೂಪವಾಗುವುದು. 'ತಸ್ಮೈ' - ಆ ಭಗವಂತನಿಗೆ ಅವನನ್ನು ಉದ್ದೇಶಿಸಿ, 'ನೂನಂ' - ನಿಶ್ಚಿತವಾಗಿ, 'ನಿತ್ಯಯಾ' - ಅನಾದಿನಿಧನ ಅಂದರೆ ಅನಾದಿನಿತ್ಯವಾಗಿರುವ 'ವಾಚಾ' - ವೇದಗಳೆಂಬ ವಾಕ್ಯದಿಂದ, 'ಸುಷ್ಟುತಿಂ' - ಶೋಭನವಾದ ಸ್ತುತಿಯನ್ನು, 'ಚೋದಸ್ವ' - ಪ್ರೇರಿಸು ಮಾಡು ಎಂದು ಅರ್ಥ.

(★) 'ತಸ್ಮೈ ಸರ್ವತಃ ಪ್ರಕಾಶಾಯ ಅತಿಸಮರ್ಥಾಯ ವಿಷ್ಣವೇ ನಿತ್ಯಯಾ ವಾಚಾ ಸಾಧ್ವೀಂ ಸ್ತುತಿಂ ಪ್ರೇರಯ ಕುರು ಇತ್ಯರ್ಥಃ। ವಿರೂಪೇತಿ ಸ್ವಾತ್ಮಾನಂ ಪ್ರತಿ ಸಂಬೋಧನಮ್।' – ಎಂದು ತತ್ವಪ್ರಕಾಶಿಕಾ

ಭಾ.ದೀ. – ಪರಿಹಾರಾಂಶಂ ವ್ಯಾಖ್ಯಾತಿ – ನೇತಿ ॥

ಆಕ್ಷೇಪವನ್ನು ಪರಿಹರಿಸುವ ಸೂತ್ರಾಂಶವನ್ನು ''ನ'' ಎಂದು ವ್ಯಾಖ್ಯಾನ ಮಾಡು-ತ್ತಿದ್ದಾರೆ.

**ಭಾಷ್ಯಮ್ – ನ । 'ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವ-ಮಕಲ್ಪಯತ್',**

**'ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ ।**
**ತಸ್ಮಾನ್ನಾನೀದೃಶಂ ಕ್ವಾಪಿ ವಿಶ್ವಮೇತದ್ ಭವಿಷ್ಯತಿ' ॥ ಇತ್ಯಾದೇಃ,**

**ಅತ ಏವ ಶಬ್ದಾತ್ ತೇಷಾಂ ಪ್ರಭವನಿಯಮಾತ್, ಮಹತಾಂ ಪ್ರತ್ಯಕ್ಷಾತ್ । ಯಥೇದಾನೀಂ ತಥೋಪರ್ಯಪಿ ದೇವಾ ಭವಿಷ್ಯಂತೀತೀತರೇಷಾಮನುಮಾನಾಚ್ಚ ॥೨೮॥**

ಈ ಪೂರ್ವಪಕ್ಷವು ಸಮಂಜಸವಲ್ಲ. 'ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್';

'ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ ।
ತಸ್ಮಾನ್ನಾನೀದೃಶಂ ಕ್ವಾಪಿ ವಿಶ್ವಮೇತದ್ ಭವಿಷ್ಯತಿ'

ಇತ್ಯಾದಿ ವಾಕ್ಯಗಳಿಂದ. ಆದ್ದರಿಂದಲೇ ವೇದವಾಕ್ಯಗಳಿಂದ ಆ ದೇವತೆಗಳು ಪುನಃ ಉತ್ಪನ್ನರಾಗುವರೆಂಬ ನಿಯಮವಿರುವುದರಿಂದ ಮತ್ತು ಜ್ಞಾನಿಗಳ ಪ್ರತ್ಯಕ್ಷವಿರುವುದರಿಂದ. ಈಗ ದೇವತೆಗಳು ಹೇಗಿರುವರೋ ಹಾಗೆಯೇ ಮುಂದಿನ ಕಾಲದಲ್ಲೂ ದೇವತೆಗಳು ಇರುವರೆಂದು ಇತರರ ಅನುಮಾನದಿಂದಲೂ. (ದೇವತೆಗಳು ಎಲ್ಲಾ ಕಾಲದಲ್ಲೂ ಇರುವರೆಂದು ನಿಶ್ಚಯವಾಗುವುದು).

ಭಾ.ದೀ. – ವಿರೋಧಃ ಇತ್ಯಸ್ತಿ । ತಥಾ ಚ ವೇದಸ್ಯ ವಾಚ್ಯಹೀನತ್ವಪ್ರಯುಕ್ತಾ-ಪ್ರಾಮಾಣ್ಯಾಖ್ಯವಿರೋಧೋ ನೇತ್ಯರ್ಥಃ । ಕುತಃ? ಇತ್ಯತಃ ಪ್ರಾಪ್ತಂ 'ಪ್ರಭವಾತ್'

ಇತಿ ಹೇತುಂ ತತ್ಸಂಬಂಧಿಪ್ರದರ್ಶನಪೂರ್ವಕಂ ಪ್ರವಾಹತಃ ಪ್ರಭವನಿಯಮಪರತಯಾ ಚ ವ್ಯಾಚಷ್ಟೇ – ತೇಷಾಂ ಪ್ರಭವನಿಯಮಾದಿತಿ ॥ 'ತೇಷಾಂ' ವೇದವಾಚ್ಯದೇವಾನಾಂ 'ಪ್ರಭವಸ್ಯ' ಪ್ರವಾಹತ ಉತ್ಪತ್ತೇಃ 'ನಿಯಮಾತ್' ಪ್ರತಿಕಲ್ಪಂ ನಿಯಮೇನೋತ್ಪತ್ತೇಃ - ಇತಿ ಯಾವತ್ । ತಥಾ ಚ – ದೇವಾನಾಂ ಸ್ವರೂಪೇಣ ನಿತ್ಯತ್ವಾಭಾವೇಽಪಿ ಪ್ರವಾಹರೂಪೇಣ ನಿತ್ಯತ್ವಾತ್ ನ ತದ್ವಾಚಕವೇದಾಪ್ರಾಮಾಣ್ಯಮ್ – ಇತಿ ಭಾವಃ ।

ನನು ಪ್ರಮಾಣಾಭಾವಾದಸಿದ್ಧೋ ಹೇತುರಿತ್ಯತಃ ಪ್ರಾಪ್ತಮತಃಶಬ್ದಮನೂದ್ಯ ಸಾವಧಾರಣತ್ವೇನ ವ್ಯಾಚಷ್ಟೇ – ಅತ ಏವ ಶಬ್ದಾದಿತಿ ॥ ಕೋಽಸೌ ಶಬ್ದಃ? ಇತ್ಯತೋ ಯಸ್ಮಿನ್ ವಿರೋಧಃ ಶಂಕಿತಃ ತಸ್ಮಾದೇವ, ನಾನ್ಯಸ್ಮಾದಪ್ರಕೃತ್ಯಾದ್ ಇತ್ಯಾಶಯೇನ ತದುದಾಹರತಿ – ಸೂರ್ಯೇತ್ಯಾದಿನಾ ॥ ಶ್ರುತೋಽಸ್ಮಿನ್ ಕಲ್ಪೇಽಪಿ ಇತಿ ಶೇಷಃ ।

ನನು ಉತ್ಪಾದಕಾಭಾವ ಇತ್ಯತೋಽಪ್ಯಾಹ – ಅತ ಏವೇತಿ ॥ ಅಕಾರವಾಚ್ಯಾತ್ ಶ್ರುತ್ಯುಕ್ತಾದ್ ಧಾತುರ್ವಿಷ್ಣೋರೇವ, ನಾನ್ಯಸ್ಮಾದ್ ಇತ್ಯರ್ಥಃ । ಅಸ್ಮಿನ್ ಪಕ್ಷೇ ಅತಃಶಬ್ದಾತ್ ಇತಿ ವ್ಯಾಖ್ಯಾನಾಂತರಮ್ ।

ನನು 'ಅಕಲ್ಪಯತ್' ಇತಿ ಲಙ್ಯೋಗಾದಿಯಂ ಶ್ರುತಿರತೀತವಿಷಯೈವ, ಅತೋ ನ ದೇವಪ್ರಭವನಿಯಮಂ ಪ್ರಮಾಪಯತಿ ಇತ್ಯತೋಽಪಿ ಆಹ – ಅತ ಏವೇತಿ ॥ ತಥಾ ಚ 'ಧಾತಾ' ಯಥಾ ಪೂರ್ವಕಲ್ಪೇ ಸೂರ್ಯಾಚಂದ್ರಮಸೌ ಅಕಲ್ಪಯತ್ ತಥಾಽಸ್ಮಿನ್ ಕಲ್ಪೇಽಪೀತಿ ಪ್ರತಿಕಲ್ಪಂ ಶ್ರುತ್ಯಾ ಕಥನೇ ದೇವಾನಾಂ ಸರ್ವಕಲ್ಪೇಷು ಪ್ರಜನನಾಖ್ಯಸದ್ಭಾವಸಿದ್ಧೇರಧ್ಯಾಹಾರಂ ವಿನಾ ಅತಏವಶಬ್ದಾದ್ ಬುದ್ಧಿಸ್ಥಾದ್ ''ಯಥೈವ'' ಇತಿ ಸ್ಪಷ್ಟಶ್ರುತ್ಯಂತರಾಚ್ಚ ತೇಷಾಂ ಸರ್ವಕಲ್ಪೇಷು ಪ್ರಭವಸಿದ್ಧೇರ್ನೋಕ್ತಚೋದ್ಯಾವಕಾಶ ಇತಿ ಭಾವಃ ।

ನನು ಶ್ರುತಾವುಪಚಾರೇಣಾಪಿ ಉಕ್ತಿಃ ಸಂಭವತೀತಿ ನ ತಯಾ ದೇವಪ್ರಭವ-

ನಿಯಮನಿಶ್ಚಯಃ? ಇತ್ಯತಃ ಪ್ರಾಪ್ತಂ 'ಪ್ರತ್ಯಕ್ಷ' ಇತ್ಯಂಶಂ ವ್ಯಾಚಷ್ಟೇ – ಮಹತಾಮಿತಿ ॥ 'ಅತೀತಾನಾಗತವಿದಾಮ್' ಇತ್ಯರ್ಥಃ । ಅಸ್ಯಾಪಿ ತೇಷಾಂ 'ಪ್ರಭವನಿಯಮಾತ್' ಇತ್ಯನೇನಾನ್ವಯಃ । ನನು ಪರಪ್ರತ್ಯಕ್ಷಸ್ಯ ಅಪ್ರತ್ಯಕ್ಷತ್ವಾತ್ ತದನಿಶ್ಚಯ ಇತ್ಯತೋಽಪ್ಯಾಹ – ಮಹತಾಂ ಪ್ರತ್ಯಕ್ಷಾದಿತಿ ॥

ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥

ಇತ್ಯಾದಿರೂಪಾತ್ 'ಮಹತಾಂ' ಭಾರತಾಚಾರ್ಯಾಣಾಂ 'ಪ್ರತ್ಯಕ್ಷಾತ್' ಪ್ರತ್ಯಕ್ಷವಚನಾತ್ ಇತ್ಯರ್ಥಃ । ಅಸ್ಮಿನ್ ಪಕ್ಷೇ 'ಪ್ರತ್ಯಕ್ಷಾತ್' ನಿಶ್ಚಿತಾತ್ ಪ್ರತ್ಯಕ್ಷಾತ್ ಇತ್ಯನ್ವಯಃ ।

ಇಲ್ಲಿ ವಿರೋಧಃ ಎಂಬ ಪದವನ್ನು ಸೇರಿಸಬೇಕು. ತಥಾ ಚ – ವೇದಕ್ಕೆ ವಾಚ್ಯ-ರಾದ ದೇವತೆಗಳು ಇಲ್ಲದಿರುವ ಪ್ರಯುಕ್ತ ಉಂಟಾಗುವ ಅಪ್ರಾಮಾಣ್ಯರೂಪವಾದ ವಿರೋಧವು ಇಲ್ಲ ಎಂದು ಅರ್ಥ. ಏಕಿಲ್ಲ? ಎಂಬ ಪ್ರಶ್ನೆಪರಿಹಾರಕ್ಕಾಗಿ ಸೂತ್ರದಿಂದ ಪ್ರಾಪ್ತವಾಗಿರುವ 'ಪ್ರಭವಾತ್' ಎಂಬ ಹೇತುವನ್ನು ಅದಕ್ಕೆ ಸಂಬಂಧಿಯಾದದ್ದನ್ನು ಪ್ರದರ್ಶಿಸುವ ಮೂಲಕ ಆ ಶಬ್ದವು ದೇವತೆಗಳಿಗೆ ಪ್ರವಾಹತಃ ಉತ್ಪತ್ತಿನಿಯಮವನ್ನು ಹೇಳುವ ತಾತ್ಪರ್ಯವುಳ್ಳದ್ದೆಂದು ''ತೇಷಾಂ ಪ್ರಭವನಿಯಮಾತ್'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತೇಷಾಂ' - ವೇದದಿಂದ ವಾಚ್ಯರಾಗಿರುವ ದೇವತೆಗಳಿಗೆ 'ಪ್ರಭವಸ್ಯ' - ಪ್ರವಾಹತಃ ಉತ್ಪತ್ತಿಯಾಗುವ, 'ನಿಯಮಾತ್' - ನಿಯಮವಿರುವು-ದರಿಂದ ಪ್ರತಿಕಲ್ಪದಲ್ಲೂ ನಿಯಮೇನ ದೇವತೆಗಳಿಗೆ ಉತ್ಪತ್ತಿ ಇರುವುದೆಂದು ಆಶಯ. ತಥಾ ಚ – ದೇವತೆಗಳಿಗೆ ಸ್ವರೂಪತಃ ನಿತ್ಯತ್ವವಿಲ್ಲದೇ ಇದ್ದರೂ ಪ್ರವಾಹರೂಪದಿಂದ ನಿತ್ಯತ್ವವಿರುವುದರಿಂದ ಆ ದೇವತಾವಾಚಕವಾದ ವೇದಕ್ಕೆ ಅಪ್ರಾಮಾಣ್ಯವಿಲ್ಲವೆಂದು ಭಾವ.

'ಪ್ರಮಾಣವಿಲ್ಲದ್ದರಿಂದ ಪ್ರಭವವೆಂಬ ಹೇತುವು ಅಸಿದ್ಧವಾಗಿದೆ' ಎಂಬ ಶಂಕೆಯ ಪರಿಹಾರಕ್ಕಾಗಿ ಪ್ರಾಪ್ತವಾದ ಸೂತ್ರದಲ್ಲಿರುವ 'ಅತಃ' ಎಂಬ ಶಬ್ದವನ್ನು ಅನುವಾದ

ಮಾಡಿ ಅವಧಾರಣಸಹಿತವಾದುದೆಂದು ''ಅತ ಏವ ಶಬ್ದಾತ್'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಅಸಿದ್ಧಿದೋಷವನ್ನು ಪರಿಹಾರ ಮಾಡುವ ಆ ಶಬ್ದವು ಯಾವುದು? ಎಂಬ ಪ್ರಶ್ನೆಗೆ ಉತ್ತರವಾಗಿ 'ಯಾವ ವೇದಕ್ಕೆ ಅಪ್ರಾಮಾಣ್ಯಾಖ್ಯ ವಿರೋಧವನ್ನು ಶಂಕಿಸಲಾಯಿತೋ ಆ ವೇದದ ವಾಕ್ಯದಿಂದಲೇ ಅಸಿದ್ಧಿದೋಷ ಪರಿ- ಹಾರವಾಗುವುದು; ಹೊರತು ಅಪ್ರಸ್ತುತವಾದ ಮತ್ತೊಂದರಿಂದಲ್ಲ' ಎಂಬ ಆಶಯ- ದಿಂದ ಆ ವೇದವಾಕ್ಯವನ್ನು ''ಸೂರ್ಯ'' ಇತ್ಯಾದಿ ವಾಕ್ಯದಿಂದ ಉದಾಹರಿಸುತ್ತಿದ್ದಾರೆ. ಭಾಷ್ಯದಲ್ಲಿ 'ಇತ್ಯಾದೇಃ' ಎಂಬ ಪದದ ನಂತರ 'ಶ್ರುತಃ ಅಸ್ಮಿನ್ ಕಲ್ಪೇಽಪಿ' - ಎಂಬ ವಾಕ್ಯವು ಶೇಷವಾಗಿದೆ.

ಹಾಗೆ ದೇವತೆಗಳಿಗೆ ಉತ್ಪತ್ತಿಯನ್ನು ಹೇಳಲಾಗದು; ಉತ್ಪಾದಕರಿಲ್ಲವಾದ್ದರಿಂದ ಎಂಬ ಶಂಕೆಗೆ ''ಅತ ಏವ'' ಎಂಬ ವಾಕ್ಯ ಉತ್ತರ ನೀಡುತ್ತಿದೆ. ಅಕಾರವಾಚ್ಯನಾದ ಶ್ರುತ್ಯುಕ್ತನಾದ ಧಾತೃ ಅಂದರೆ ಸೃಷ್ಟಿಕರ್ತನಾದ ವಿಷ್ಣುವಿನಿಂದಲೇ ಹೊರತು ಮತ್ತೊಬ್ಬ- ರಿಲ್ಲ ಎಂದು ಅರ್ಥ. ಈ ಪಕ್ಷದಲ್ಲಿ 'ಅತಃಶಬ್ದಾತ್' ಎಂಬ ವಾಕ್ಯವು ಸೂತ್ರದ ಮತ್ತೊಂದು ವ್ಯಾಖ್ಯಾನವಾಗಿದೆ.

ಈ ಶ್ರುತಿಯಲ್ಲಿ 'ಅಕಲ್ಪಯತ್' ಎಂದು ಲಙ್‌ಲಕಾರದ ಸಂಬಂಧವಿರುವುದರಿಂದ ಶ್ರುತಿಯು ಭೂತಕಾಲಕ್ಕೆ ಮಾತ್ರ ಸಂಬಂಧಪಟ್ಟಿದೆ. ಆದ್ದರಿಂದ ಈ ಶ್ರುತಿಯು ಪ್ರತಿಕಲ್ಪದಲ್ಲೂ ದೇವತೆಗಳು ನಿಯಮೇನ ಉತ್ಪನ್ನರಾಗುವರೆಂದು ತಿಳಿಸುವುದಿಲ್ಲ ಎಂಬ ಶಂಕೆಗೆ ಉತ್ತರವಾಗಿಯೂ ''ಅತ ಏವ'' ಎಂಬ ವಾಕ್ಯವು ಸಮಾಧಾನವನ್ನು ಹೇಳುತ್ತಿದೆ. ತಥಾ ಚ – 'ಧಾತಾ ಯಥಾ ಪೂರ್ವಮ್' - ಅಂದರೆ ಸೃಷ್ಟಿಕರ್ತನಾದ ಭಗವಂತನು ಹೇಗೆ ಪೂರ್ವಕಲ್ಪದಲ್ಲಿ 'ಸೂರ್ಯಾಚಂದ್ರಮಸೌ ಅಕಲ್ಪಯತ್' ಸೂರ್ಯಚಂದ್ರರನ್ನು ಸೃಷ್ಟಿಮಾಡಿದನೋ ಹಾಗೆಯೇ ಈ ಕಲ್ಪದಲ್ಲೂ ಕೂಡ ಸೃಷ್ಟಿಮಾಡಿದ್ದಾನೆ ಎಂದು ಪ್ರತಿಕಲ್ಪದಲ್ಲೂ ಸೃಷ್ಟಿಯಾಗುವುದೆಂದು ಶ್ರುತಿಯು ಹೇಳಿದಾಗ ದೇವತೆಗಳಿಗೆ ಎಲ್ಲ ಕಲ್ಪಗಳಲ್ಲೂ ಉತ್ಪತ್ತಿರೂಪವಾದ ಸದ್ಭಾವವು ಸಿದ್ಧವಾಗುವುದೆಂಬ ಮತ್ತು ಅಧ್ಯಾಹಾರ- ವಿಲ್ಲದೇ 'ಅತ ಏವ ಶಬ್ದಾತ್' - ಬುದ್ಧಿಸ್ಥವಾದ 'ಯಥೈವ' ಎಂಬ ಸ್ಪಷ್ಟವಾದ ಮತ್ತೊಂದು ಶ್ರುತಿಯಿಂದಲೂ ಆ ದೇವತೆಗಳಿಗೆ ಎಲ್ಲ ಕಲ್ಪಗಳಲ್ಲೂ ಉತ್ಪತ್ತಿ ಇರುವು- ದೆಂದು ಸಿದ್ಧವಾಗುವುದರಿಂದ ಹಿಂದೆ ಮಾಡಿದ ಪ್ರಶ್ನೆಗೆ ಅವಕಾಶವಿಲ್ಲವೆಂದು ಭಾವ.

'ಶ್ರುತಿಯಲ್ಲಿ ಔಪಚಾರಿಕವಾಗಿ ಹೇಳುವ ಸಂಭವವು ಇರುವುದರಿಂದ ಆ ಶ್ರುತಿ-ಯಿಂದ ದೇವತೆಗಳಿಗೆ ನಿಯಮೇನ ಉತ್ಪತ್ತಿಯಾಗುವುದೆಂದು ನಿಶ್ಚಯಿಸಲು ಸಾಧ್ಯವಿಲ್ಲ' ಎಂಬ ಶಂಕೆಗೆ ಉತ್ತರವಾಗಿ ಪ್ರಾಪ್ತವಾದ ಸೂತ್ರದಲ್ಲಿರುವ 'ಪ್ರತ್ಯಕ್ಷ' ಎಂಬ ಅಂಶವನ್ನು ''ಮಹತಾಂ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಮಹತಾಂ' ಎಂದರೆ 'ಭೂತಭವಿಷ್ಯತ್ತುಗಳನ್ನು ತಿಳಿದವರ' ಎಂದು ಅರ್ಥ. ಈ ವಾಕ್ಯಕ್ಕೂ 'ತೇಷಾಂ ಪ್ರಭವನಿಯಮಾತ್' 'ಆ ದೇವತೆಗಳಿಗೆ ನಿಯಮೇನ ಜನ್ಮವಿರುವುದರಿಂದ' ಎಂಬ ವಾಕ್ಯದೊಂದಿಗೆ ಅನ್ವಯ.

ಮತ್ತೊಬ್ಬರ ಪ್ರತ್ಯಕ್ಷವು ಪ್ರತ್ಯಕ್ಷಕ್ಕೆ ವಿಷಯವಲ್ಲವಾದುದರಿಂದ ಹಾಗೆ ಜ್ಞಾನಿಗಳ ಪ್ರತ್ಯಕ್ಷವಿರುವುದು ನಿಶ್ಚಿತವಲ್ಲ ಎಂಬ ಶಂಕೆಗೆ ಉತ್ತರವಾಗಿಯೂ 'ಮಹತಾಂ ಪ್ರತ್ಯಕ್ಷಾತ್' ಎಂದು ಹೇಳಲಾಗಿದೆ.

''ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು'' –

ಹೀಗೆ 'ಋತುಗಳ ಪರಿವರ್ತನೆಯಾಗುವ ಕಾಲದಲ್ಲಿ ನಾನಾವಿಧವಾದ ಆ ಋತು-ಗಳ ಚಿಹ್ನೆಗಳು ಹಿಂದೆ ಆ ಕಾಲದಲ್ಲಿ ಕಂಡು ಬಂದಿದ್ದಂತೆ ಕಾಣಿಸಿಕೊಳ್ಳುವವೋ ಹಾಗೆಯೇ ಯುಗದ ಪ್ರಾರಂಭಗಳಲ್ಲಿ ಆ ಋತುಗಳ ಚಿಹ್ನೆಗಳು ಹಿಂದಿನ ಯುಗದಂತೆ-ಯೇ ಕಾಣಿಸಿಕೊಳ್ಳುವವು' ಇವೇ ಮೊದಲಾದ ''ಮಹತಾಂ'' - ಭಾರತಕರ್ತೃಗಳಾದ (ವೇದವ್ಯಾಸರ) ''ಪ್ರತ್ಯಕ್ಷಾತ್'' ಪ್ರತ್ಯಕ್ಷವಾಕ್ಯದಿಂದ ಎಂದು ಅರ್ಥ. ಈ ವ್ಯಾಖ್ಯಾನದ ಪಕ್ಷದಲ್ಲಿ ''ಪ್ರತ್ಯಕ್ಷಾತ್'' ಅಂದರೆ ನಿಶ್ಚಿತವಾಗಿರುವ ಪ್ರತ್ಯಕ್ಷದಿಂದ ಎಂದು ಅನ್ವಯ.

ಭಾ.ದೀ. – ನನ್ವಯೋಗಿನಾಂ ಶ್ರುತಿಪ್ರತ್ಯಕ್ಷಯೋರವಿಶ್ವಾಸೇನ ತೇಷಾಂ ದೇವಪ್ರಭವನಿಶ್ಚಯಾಭಾವ ಇತ್ಯತಃ ಪ್ರಾಪ್ತಮ್ 'ಅನುಮಾನೇ'ತ್ಯಂಶಂ ವ್ಯಾಚಷ್ಟೇ – ಯಥೇತಿ ॥

ಇದಾನೀಂತನಕಾಲೇ ಯಥಾ ದೇವಾಃ ಸಂತಿ ತಥಾ ಉಪರಿಭಾವಿಕಾಲೇಽಪಿ ದೇವಾ ಭವಿಷ್ಯಂತಿ ಇತೀತರೇಷಾಂ ಮಹದ್ಭ್ಯೋಽನ್ಯೇಷಾಮ್ ಅಯೋಗಿನಾಮ್

ಅನುಮಾನಾತ್ ಇತ್ಯರ್ಥಃ । ಅಸ್ಯಾಪಿ 'ಪ್ರಭವನಿಯಮಾತ್' ಇತ್ಯನೇನಾನ್ವಯಃ । ಚಶಬ್ದಃ ಪ್ರಭವನಿಯಮೇ, ಶಬ್ದಪ್ರತ್ಯಕ್ಷಾನುಮಾನಾಖ್ಯಪ್ರಮಾಣತ್ರಯಸಮುಚ್ಚಯೇ ವಕ್ಷ್ಯಮಾಣಯುಕ್ತ್ಯಂತರಸಮುಚ್ಚಯೇ ಚ ॥

ಅನುಮಾನಾಕಾರಸ್ತು – 'ಉಪರಿತನಕಾಲೋ ದೇವವಾನ್ ಅಪ್ರಲಯಕಾಲತ್ವಾದ್ ಇದಾನೀಂತನಕಾಲವದ್' ಇತಿ ॥

'ಅಯೋಗಿಗಳಿಗೆ ಶ್ರುತಿ ಮತ್ತು ಜ್ಞಾನಿಗಳ ಪ್ರತ್ಯಕ್ಷದ ವಿಷಯದಲ್ಲಿ ವಿಶ್ವಾಸವಿಲ್ಲದಿರುವುದರಿಂದ ಅವರಿಗೆ ದೇವತೆಗಳ ಜನ್ಮನಿರ್ಣಯವಿಲ್ಲ' ಎಂಬ ಶಂಕೆಯ ಪರಿಹಾರಕ್ಕಾಗಿ ಸೂತ್ರದಲ್ಲಿರುವ 'ಅನುಮಾನ' ಎಂಬ ಅಂಶವನ್ನು ''ಯಥಾ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ''ಈಗಿನ ಕಾಲದಲ್ಲಿ ಹೇಗೆ ದೇವತೆಗಳು ಇರುವರೋ ಹಾಗೆಯೇ ಮುಂದಿನ ಕಾಲದಲ್ಲೂ ಕೂಡ 'ದೇವಾಃ ಭವಿಷ್ಯಂತಿ' - ದೇವತೆಗಳು ಇರುವರು ಎಂದು 'ಇತರೇಷಾಂ' - ಜ್ಞಾನಿಗಳಿಂದ ಭಿನ್ನರಾದ ಅಯೋಗಿಗಳ ಅನುಮಾನದಿಂದ ಎಂದು ಅರ್ಥ. ಈ ವಾಕ್ಯಕ್ಕೂ 'ಪ್ರಭವನಿಯಮಾತ್' - ಎಂಬ ಪದದೊಂದಿಗೆ ಅನ್ವಯವಾಗುವುದು. 'ಅನುಮಾನಾಚ್ಚ' ಎಂಬಲ್ಲಿರುವ ಚಶಬ್ದವು ದೇವತೆಗಳ ಜನ್ಮನಿಯಮವನ್ನು, ಶಬ್ದ ಪ್ರತ್ಯಕ್ಷ ಅನುಮಾನಗಳ ಸಮುಚ್ಚಯವನ್ನು ಮತ್ತು ಮುಂದೆ ಹೇಳುವ ಇನ್ನೊಂದು ಯುಕ್ತಿಯ ಸಮುಚ್ಚಯವನ್ನು ಹೇಳುವುದು.

ಅನುಮಾನದ ಆಕಾರವಾದರೋ – 'ಮುಂದಿನ ಕಾಲವು ದೇವತೆಗಳನ್ನು ಹೊಂದಿ -ರುವುದು ಪ್ರಳಯಭಿನ್ನವಾದ ಕಾಲವಾಗಿರುವುದರಿಂದ ಈಗಿನ ಕಾಲದಂತೆ' ಎಂದು.

ಭಾ.ದೀ. – ಅನೇನ – ದೇವಾನಾಮ್ ಅಧಿಕಾರಸಿದ್ಧ್ಯರ್ಥಂ ಯದಿ ಆದ್ಯಂತವತ್ತ್ವಮಭ್ಯುಪಗಮ್ಯತೇ, ತರ್ಹಿ ಪೂರ್ವಸೂತ್ರೇ ಯದ್‌ಬಲಾತ್ ಪೂರ್ವಪೂರ್ವದೇವತಾಪ್ರವಾಹಸ್ಯ ಅನಾದಿತ್ವಮುಕ್ತಮ್, ತಸ್ಮಿನ್ 'ಶಬ್ದೇ' - 'ವಾಚಾ ವಿರೂಪ ನಿತ್ಯಯಾ' ಇತ್ಯಾದಿಶ್ರುತೌ ನಿತ್ಯತಯಾ ಸಿದ್ಧೇ ವೇದೇ ಕರ್ಮಣಿ ಚ ಉತ್ತರಕಲ್ಪೇ ವಾಚ್ಯೋದ್ದೇಶ್ಯಹೀನತ್ವರೂಪಾಪ್ರಾಮಾಣ್ಯಾಖ್ಯೋ ವಿರೋಧಃ ಸ್ಯಾದಿತಿ ಚೇತ್, ನ । ಕುತಃ? 'ಪ್ರಭವಾತ್' ದೇವಾನಾಂ ಸರ್ವಕಲ್ಪೇಷು ಪ್ರಭವ-

ನಿಯಮಾತ್ ನಿಯಮೇನೋಪಪತ್ತೇಃ । ತೇಷಾಂ ಪ್ರವಾಹತೋ ನಿತ್ಯತ್ವಾತ್ ಇತಿ ಯಾವತ್ । ನ ಚೋತ್ಪಾದಕಾಭಾವಃ । 'ಅತಃ' ವಿಷ್ಣೋರೇವ ಪ್ರಭವಾತ್ । ನ ಚಾಸಿದ್ಧಿಃ । 'ಅತಃ' 'ಧಾತಾ ಯಥಾಪೂರ್ವಮ್' ಇತಿ ಪ್ರಕೃತಾಚ್ಛಬ್ದಾತ್ ಶ್ರುತೇಃ 'ಯಥಾ' ಇತಿ ಸ್ಪಷ್ಟಶ್ರುತೇಶ್ಚ । ಯಥಾ ''ಮಹತಾಮ್'' - ಅತೀತಾನಾಗತ-ಕಾಲವಿದಾಂ ಯೋಗಿನಾಂ ''ಪ್ರತ್ಯಕ್ಷಾತ್'' 'ಯಥರ್ತುಷು' ಇತಿ ಪ್ರತ್ಯಕ್ಷವಚನಾದ್ ಜ್ಞಾಪಿತಾತ್ ಮಹತಾಮ್ ಅತೀತಾನಾಗತಕಾಲಯೋಃ ದೇವಪ್ರಭವನಿಯಮ-ಗ್ರಾಹಿಪ್ರತ್ಯಕ್ಷಾತ್ । ತಥಾ ಮಹದ್ಭ್ಯಃ, ಇತರೇಷಾಮ್ ಅಯೋಗಿನಾಮನು-ಮಾನಾಚ್ಚ ತತ್ಸಿದ್ಧೇಃ - ಇತಿ ಸೂತ್ರಾರ್ಥ ಉಕ್ತೋ ಭವತಿ ।

ಇದರಿಂದ – ದೇವತೆಗಳಿಗೆ ವೇದಾಧಿಕಾರಸಿದ್ಧಿಗೋಸ್ಕರವಾಗಿ ಅವರಿಗೆ ಆದ್ಯಂತ-ಗಳು (ಆದಿ-ಅಂತಗಳು) ಇರುವವೆಂದು ಒಪ್ಪಿದ ಪಕ್ಷದಲ್ಲಿ ಹಿಂದಿನ ಸೂತ್ರದಲ್ಲಿ ಯಾವ ಶ್ರುತಿಯ ಬಲದಿಂದ ಹಿಂದು ಹಿಂದಿನ ದೇವತಾಪ್ರವಾಹಕ್ಕೆ ಅನಾದಿತ್ವವನ್ನು ಹೇಳಲಾ-ಯಿತೋ ಆ 'ಶಬ್ದೇ' - ಅಂದರೆ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿಶ್ರುತಿಯಲ್ಲಿ ನಿತ್ಯದಲ್ಲೂ ಸಿದ್ಧವಾಗಿರುವ ವೇದದಲ್ಲಿ ಮತ್ತು ಯಾಗಾದಿ ಕರ್ಮಗಳ ವಿಷಯದಲ್ಲಿ ಮುಂದಿನ ಕಲ್ಪದಲ್ಲಿ ಆ ದೇವತಾವಾಚಕಪದಗಳಿಗೆ ವಾಚ್ಯರು ಇಲ್ಲದಿರುವುದು ಹಾಗೂ ಕರ್ಮಗಳಿಗೆ ಉದ್ದೇಶ್ಯರಾದ ದೇವತೆಗಳು ಇಲ್ಲದಿರುವುದರ ನಿಮಿತ್ತವಾಗಿ ಅಪ್ರಾಮಾ-ಣ್ಯವೆಂಬ ವಿರೋಧ ಬಂದೀತು! ಎಂದರೆ ಅದು ಸರಿಯಲ್ಲ. ಏಕೆಂದರೆ, 'ಪ್ರಭವ-ನಿಯಮಾತ್' – ದೇವತೆಗಳಿಗೆ ಎಲ್ಲ ಕಲ್ಪಗಳಲ್ಲೂ ಉತ್ಪತ್ತಿಯಾಗುವ ನಿಯಮವಿರು-ವುದರಿಂದ. (ನಿಯಮೇನೋತ್ಪತ್ತೇಃ - ನಿಯಮೇನ ಉತ್ಪತ್ತಿ ಇರುವುದರಿಂದ ಎಂಬ ಪಾಠವು ಯುಕ್ತವೆಂದು ತೋರುವುದು). ಆ ದೇವತೆಗಳು ಪ್ರವಾಹತಃ ನಿತ್ಯರಾಗಿರುವು-ದರಿಂದ ಎಂದು ಭಾವ. ಅವರಿಗೆ ಉತ್ಪಾದಕರೇ ಇಲ್ಲವೆಂದು ಶಂಕಿಸಲಾಗದು. ಏಕೆಂದರೆ 'ಅತಃ' ಅಂದರೆ ವಿಷ್ಣುವಿನಿಂದಲೇ ಉತ್ಪತ್ತಿ ಇರುವುದರಿಂದ. ಈ ಹೇತುವಿಗೆ ಅಸಿದ್ಧಿ ದೋಷವಿರುವುದೆಂದೂ ಶಂಕಿಸಲಾಗದು. ಏಕೆಂದರೆ, 'ಅತಃ' - 'ಧಾತಾ ಯಥಾ ಪೂರ್ವಮ್' ಎಂದು ಪ್ರಕೃತವಾಗಿರುವ ಶಬ್ದಾತ್ - ಶ್ರುತಿಯಿಂದ ಮತ್ತು 'ಯಥೈವ' ಎಂಬ ಸ್ಪಷ್ಟಶ್ರುತಿ ಇರುವುದರಿಂದ. ಹಾಗೆಯೇ 'ಮಹತಾಮ್' ಅತೀತಾನಾಗತಕಾಲ-

ಜ್ಞಾನಿಗಳಾದ ಯೋಗಿಗಳ 'ಪ್ರತ್ಯಕ್ಷಾತ್' - ಯಥರ್ತುಷು ಎಂಬ ಪ್ರತ್ಯಕ್ಷವಚನದಿಂದ ತಿಳಿದು ಬರುವ ಅತೀತಾನಾಗತಕಾಲಗಳಲ್ಲಿ ದೇವತೆಗಳ ಜನ್ಮನಿಯಮವನ್ನು ಗ್ರಹಿಸುವ ಜ್ಞಾನಿಗಳ ಪ್ರತ್ಯಕ್ಷದಿಂದ ಎಂದು ಅರ್ಥ. ಹಾಗೆಯೇ ಜ್ಞಾನಿಗಳಿಂದ ಭಿನ್ನರಾದ ಅಯೋಗಿಗಳ ಅನುಮಾನದಿಂದಲೂ ಪ್ರತಿಕಲ್ಪದಲ್ಲಿ ದೇವತೆಗಳ ಉತ್ಪತ್ತಿಯು ಇರುವು-ದೆಂದು ಸಿದ್ಧವಾಗುವುದರಿಂದ – ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – 'ಯಥೈವ' ಇತಿ ಶ್ರುತ್ಯರ್ಥಸ್ತು – ಯಥಾ ಪೂರ್ವಯುಗಾತ್ಯಯೇ ಕಲ್ಪಾತ್ಯಯೇ ವಾ ಪುನರ್ಯುಗಕಲ್ಪಾಂತರೋತ್ಪತ್ತಿರಿತಿ ಕಾಲೇ ಪ್ರಭವನಿಯಮಃ, ತಥಾ ಸುರಾದೇರ್ದೇವೋಪದೇವಾದೇಃ ಪೂರ್ವಪೂರ್ವಕಲ್ಪಾತ್ಯಯೇ ಪುನರನ್ಯ-ಭಾವನಿಯಮೋಽಸ್ತಿ। ಯಥೋಕ್ತಮ್ –

> 'ಸ ಹಿ ವಿಶ್ವಸೃಜೋ ವಿಭುಶಂಭು-
> ಪುರಂದರಸೂರ್ಯಮುಖಾನಪರಾನಮರಾನ್ ।
> ಸೃಜತೀಡ್ಯತಮೋಽವತಿ ಹಂತಿ ನಿಜಂ
> ಪದಮಾಪಯತಿ ಪ್ರಣತಾನ್ ಸುಧಿಯಾನ್ ॥

ಇತಿ। 'ಪ್ರತಿಕಲ್ಪಮ್' ಇತಿ ಶೇಷಃ। ತಸ್ಮಾತ್ ಪೂರ್ವಕಲ್ಪ ಇವೋತ್ತರಕಲ್ಪೇಽಪಿ ಪೂರ್ವಕಲ್ಪಸದೃಶಸರ್ವೋತ್ಪತ್ತಿನಿಯಮಾದೇವ 'ತಸ್ಮಾತ್' ವಿಷ್ಣೋಃ ಸಕಾಶಾದ್ ಏತದ್ ವಿಶ್ವಂ 'ಕ್ವಾಪಿ' - ಕದಾಪಿ 'ಅನೀದೃಶಂ' ಪೂರ್ವಪೂರ್ವವಿಸದೃಶಂ ದೇವತಾ -ಪ್ರಭವಶೂನ್ಯಂ ನ ಭವಿಷ್ಯತಿ, ಕಿಂತು ತತ್ತದ್ಭಾವಾವೋಪೇತಮೇವ ಭವಿಷ್ಯತಿ- ಇತಿ।

ಯದ್ವಾ – 'ಏತತ್' ಚೇತನಾಚೇತನಾತ್ಮಕಂ ವಿಶ್ವಮನೀದೃಶಂ ನ ಭವಿಷ್ಯತಿ, ಕಿಂತು ನಾಮರೂಪಾಭ್ಯಾಮೀದೃಶಮೇವ ಭವಿಷ್ಯತಿ ಇತ್ಯರ್ಥಃ। ತತ್ತ್ವಪ್ರದೀಪೇ ತು ಇಯಂ ಶ್ರುತಿಃ 'ಯಥೈವ ಕಾಲನಿಯಮಃ' ಇತಿ ವ್ಯತ್ಯಾಸೇನ ಪಠಿತಾ।

''ಯಥೈವ'' ಎಂಬ ಶ್ರುತಿಯ ಅರ್ಥವಾದರೋ ಹೀಗಿದೆ – 'ಯಥೈವ ನಿಯಮಃ ಕಾಲೇ' - ಹೇಗೆ ಹಿಂದಿನ ಯುಗ ಮುಗಿದಾಗ ಅಥವಾ ಹಿಂದಿನ ಕಲ್ಪ ಮುಗಿದಾಗ

ಪುನಃ ಮತ್ತೊಂದು ಯುಗ ಮತ್ತೊಂದು ಕಲ್ಪವು ಉತ್ಪನ್ನವಾಗುವುದು ಎಂದು ಕಾಲದಲ್ಲಿ ಉತ್ಪತ್ತಿನಿಯಮವಿರುವುದೋ, 'ತಥಾ ಸುರಾದಿ ನಿಯಮಸ್ತಥಾ' ಹಾಗೆಯೇ ಸುರಾದೇಃ - ದೇವ ಉಪದೇವ ಮುಂತಾದವರು ಹಿಂದು ಹಿಂದಿನ ಕಲ್ಪ ಮುಗಿದ ನಂತರ ಪುನಃ ಮತ್ತೊಬ್ಬ ದೇವ, ಉಪದೇವರು ಉತ್ಪನ್ನರಾಗುವರೆಂಬ ನಿಯಮವಿದೆ. ಇದನ್ನು ಹೀಗೆ ಹೇಳಲಾಗಿದೆ –

''ಸ ಹಿ ವಿಶ್ವಸೃಜೋ ವಿಭುಶಂಭುಪುರಂದರಸೂರ್ಯಮುಖಾನಪರಾನಮರಾನ್ । ಸೃಜತೀಡ್ಯತಮೋಽವತಿ ಹಂತಿ ನಿಜಂ ಪದಮಾಪಯತಿ ಪ್ರಣತಾನ್ ಸುಧಿಯಾನ್ ॥' ಆ ವಿಶ್ವದಲ್ಲೇ ಅತ್ಯಂತ ಸ್ತುತ್ಯರ್ಹನಾದ ವಿಷ್ಣುವು ಈ ವಿಶ್ವವನ್ನು ಸೃಜಿಸುವ ಚತುರ್ಮುಖ, ಶಂಭು, ಇಂದ್ರ, ಸೂರ್ಯ ಮೊದಲಾದ, ಸಮೀಚೀನವಾದ ಜ್ಞಾನಪೂರ್ವಕವಾಗಿ ತನ್ನನ್ನು ನಮಿಸುವ ದೇವತೆಗಳನ್ನು ಸೃಜಿಸುವನು, ಪಾಲಿಸುವನು, ಸಂಹರಿಸುವನು, ತನ್ನ ಪದವನ್ನು ಹೊಂದುವಂತೆ ಅನುಗ್ರಹಿಸುವನು. - ಎಂದು. ಇಲ್ಲಿ 'ಪ್ರತಿಕಲ್ಪಮ್' - ಪ್ರತಿಕಲ್ಪದಲ್ಲೂ ಎಂದು ಶೇಷವಾಗಿದೆ. ಆದ್ದರಿಂದ ಪೂರ್ವಕಲ್ಪದಂತೆ ಉತ್ತರಕಲ್ಪದಲ್ಲೂ ಪೂರ್ವಕಲ್ಪಕ್ಕೆ ಸದೃಶವಾದ ಎಲ್ಲವೂ ಉತ್ಪತ್ತಿಯನ್ನು ಹೊಂದುವುದು ಎಂಬ ನಿಯಮವಿರುವುದಿಂದಲೇ 'ತಸ್ಮಾತ್' - ಆ ವಿಷ್ಣುವಿನಿಂದ, 'ಏತದ್ ವಿಶ್ವಮ್' ಈ ವಿಶ್ವವು 'ಕ್ವಾಪಿ' ಯಾವಕಾಲದಲ್ಲೂ ಅನೀದೃಶಂ - ಹಿಂದು ಹಿಂದಿನ ಕಲ್ಪಗಳಿಗೆ ವಿಸದೃಶವಾಗಿ ದೇವತೆಗಳ ಉತ್ಪತ್ತಿರಹಿತವಾಗಿ 'ನ ಭವಿಷ್ಯತಿ' - ಆಗುವುದಿಲ್ಲ. ಕಿಂತು ಮುಂದಿನ ಎಲ್ಲ ಕಲ್ಪಗಳೂ ಆ ದೇವತೆಗಳ ಅಸ್ತಿತ್ವವನ್ನು ಹೊಂದಿಯೇ ಇರುವುದು – ಎಂದು.

ಅಥವಾ – 'ಏತತ್' - ಚೇತನಾಚೇತನಾತ್ಮಕವಾದ ವಿಶ್ವವು, 'ಅನೀದೃಶಂ ನ ಭವಿಷ್ಯತಿ' - ಇದಕ್ಕೆ ವಿಸದೃಶವಾಗಿ ಎಂದೂ ಆಗುವುದಿಲ್ಲ. ಕಿಂತು ನಾಮರೂಪಗಳಿಂದ ಇದಕ್ಕೆ ಸದೃಶವಾಗಿಯೇ ಇರುವುದೆಂದು ಅರ್ಥ. ತತ್ತ್ವಪ್ರದೀಪದಲ್ಲಿ ಈ ಶ್ರುತಿಯನ್ನು 'ಯಥೈವ ಕಾಲನಿಯಮಃ' ಎಂದು ವ್ಯತ್ಯಾಸದಿಂದ ಪಠಿಸಲಾಗಿದೆ.

ಭಾ.ದೀ. – ಯುಕ್ತ್ಯಂತರೇಣ ದೇವಪ್ರವಾಹಸ್ಯ ನಿತ್ಯತಾಂ ಸಾಧಯತ್ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಅತ ಏವೇತಿ ॥

ಮತ್ತೊಂದು ಯುಕ್ತಿಯಿಂದ ದೇವತಾಪ್ರವಾಹದ ನಿತ್ಯತ್ವವನ್ನು ಸಾಧಿಸುವ ಸೂತ್ರವನ್ನು ಪಠಿಸಿ ''ಅತ ಏವ'' ಎಂಬುದಾಗಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿ-ದ್ದಾರೆ.

**ಸೂತ್ರಮ್ – ಓಂ ॥ ಅತ ಏವ ಚ ನಿತ್ಯತ್ವಮ್ ॥ ಓಂ**

ಆದ್ದರಿಂದಲೇ ದೇವಪ್ರವಾಹವು ನಿತ್ಯವಾಗಿದೆ.

**ಭಾಷ್ಯಮ್ – ಅತ ಏವ ಶಬ್ದಸ್ಯ ನಿತ್ಯತ್ವಾದೇವ ಚ ದೇವಪ್ರವಾಹನಿತ್ಯತ್ವಂ ಯುಕ್ತಮ್ ॥ ೨೯ ॥**

'ಅತ ಏವ'– ಆದ್ದರಿಂದಲೇ ಶಬ್ದವು (ವೇದರೂಪವಾದ) ನಿತ್ಯವಾಗಿ-ರುವುದರಿಂದಲೇ ದೇವಪ್ರವಾಹದ ನಿತ್ಯತ್ವವು ಯುಕ್ತವಾಗಿದೆ.

ಭಾ.ದೀ. – 'ಅತ ಏವ' ಇತ್ಯನುವಾದಃ । ತಸ್ಯ ವ್ಯಾಖ್ಯಾನಂ – 'ಶಬ್ದಸ್ಯ' ವೇದಸ್ಯ ನಿತ್ಯತ್ವಾದೇವ ಇತಿ । 'ಏವ'ಕಾರೇಣ ನ ದೇವಪ್ರವಾಹನಿತ್ಯತ್ವೇ ಯುಕ್ತ್ಯಂತರಂ ಗವೇಷಣೀಯಂ, ಕಿಂತು ಯತ್ ಪೂರ್ವಪಕ್ಷಿಣಾ ವೇದನಿತ್ಯತ್ವಂ ಸಪ್ರಮಾಣಕ-ಮುಕ್ತಂ, ತತ ಏವ ತದನ್ಯಥಾನುಪಪತ್ತ್ಯಾ ಏತತ್ ಸಿದ್ಧ್ಯತೀತಿ ಸೂಚಯತಿ । 'ನಿತ್ಯತ್ವಾದೇವ' ಇತ್ಯುಪಲಕ್ಷಣಮ್, 'ಪ್ರಾಮಾಣ್ಯಸ್ಯ ಸಾಧಿತತ್ವೇನ ಅಪ್ರಾಮಾಣ್ಯಾ-ಭಾವಾದೇವ' ಇತ್ಯಪಿ ಅತಃಶಬ್ದವ್ಯಾಖ್ಯಾನಂ ದ್ರಷ್ಟವ್ಯಮ್ । ಅನ್ಯಥಾ ಪೂರ್ವಪಕ್ಷೀ ಅಪ್ರಾಮಾಣ್ಯೇನ ಅನ್ಯಥೋಪಪತ್ತಿಂ ಬ್ರೂಯಾತ್ ದೇವಪ್ರವಾಹಸ್ಯ । ಯುಕ್ತಮಿತಿ ಚ ಸೂತ್ರಶೇಷೋಕ್ತಿಃ । 'ಯುಕ್ತಂ' ವೇದನಿತ್ಯತ್ವಾನ್ಯಥಾನುಪಪತ್ತ್ಯಾಖ್ಯಯುಕ್ತಿ-ಸಿದ್ಧಮ್ । 'ಚ'ಶಬ್ದಸ್ತು ಸಮುಚ್ಚೇತವ್ಯಯುಕ್ತೀನಾಂ ಶಬ್ದಾತ್ ಪ್ರತ್ಯಕ್ಷಾದನು-ಮಾನಾತ್ ಇತ್ಯನೇನ ದರ್ಶಿತತ್ವಾತ್ ತತ್ಸಮುಚ್ಚಯಾರ್ಥಕತಯಾ ಅರ್ಥಾದ್ ವ್ಯಾಖ್ಯಾತಃ । ಅತ ಏವ ಪೂರ್ವಸೂತ್ರಭಾಷ್ಯೇ ಚಶಬ್ದಃ ಸಂಯೋಜಿತಃ । ಅತ್ರಾಪಿ ಭಾಷ್ಯೇ ಚಶಬ್ದೇನ ಚ ತದ್ವಾಚ್ಯದೇವತಾಸ್ವರೂಪಸ್ಯೈವ ನಿತ್ಯತ್ವೇನ ಅನ್ಯಥೋಪ-ಪತ್ತಿಃ ।

ಅತ ಏವ 'ಸೂರ್ಯಾಚಂದ್ರಮಸೌ' (ಮಹಾನಾ.೫.೭) 'ಯಥೈವ' ಇತ್ಯು-
ದಾಹೃತಶ್ರುತೇರೇವ 'ಯಮಪ್ಯೇತಿ ಭುವನಂ ಸಾಂಪರಾಯೇ' (ನೃ.ಪು.೨.೫)
'ಯತ್ ಪ್ರಯಂತ್ಯಭಿಸಂವಿಶಂತಿ' (ತೈ.೩.೧) ಇತ್ಯಾದಿ ಬಹುಲಂ ಪ್ರಲಯಶ್ರುತೇಶ್ಚ
ಸೂರ್ಯಾದಿದೇವಾನಾಮುತ್ಪತ್ತಿನಾಶಾವಗಮಾತ್, ಅತ ಏವ ಸ್ವರೂಪನಿತ್ಯತ್ವಾ-
ಯೋಗೇನ ಪ್ರವಾಹರೂಪೇಣೈವ ತೇಷಾಂ ನಿತ್ಯತ್ವಾವಶ್ಯಂಭಾವಾತ್ ಇತ್ಯಾದಿ-
ಟೀಕೋಕ್ತಾರ್ಥಃ ಸರ್ವೋಽಪಿ ಸಂಗೃಹೀತಃ ।

ಭಾಷ್ಯದಲ್ಲಿ 'ಅತ ಏವ' ಎಂಬ ಸೂತ್ರದ ಪದವನ್ನು ಅನುವಾದ ಮಾಡಿದೆ. 'ಶಬ್ದಸ್ಯ' - ಅಂದರೆ ವೇದವು 'ನಿತ್ಯತ್ವಾದೇವ' - ನಿತ್ಯವಾಗಿರುವುದರಿಂದಲೇ ಎಂದು 'ಅತ ಏವ' ಎಂಬ ಪದಗಳ ವ್ಯಾಖ್ಯಾನ ಮಾಡಲಾಗಿದೆ. ಈ ಸೂತ್ರದಲ್ಲಿ 'ಏವ'ಕಾರ-ದಿಂದ ದೇವಪ್ರವಾಹದ ನಿತ್ಯತ್ವವಿಷಯದಲ್ಲಿ ಯುಕ್ತ್ಯಂತರವನ್ನು ಅನ್ವೇಷಿಸಬೇಕಾಗಿಲ್ಲ; ಕಿಂತು ಪೂರ್ವಪಕ್ಷಿಯು ಯಾವ ವೇದನಿತ್ಯತ್ವವನ್ನು ಪ್ರಮಾಣಯುಕ್ತವಾದುದೆಂದು ಹೇಳಿದನೋ, ಅದರಿಂದಲೇ ಅಂದರೆ ಆ ವೇದನಿತ್ಯತ್ವವು ದೇವಪ್ರವಾಹನಿತ್ಯತ್ವವನ್ನು ಒಪ್ಪದೇ ಇದ್ದ ಪಕ್ಷದಲ್ಲಿ ಅನುಪಪನ್ನವಾಗುವ ಕಾರಣದಿಂದಲೇ ಈ ದೇವಪ್ರವಾಹ-ನಿತ್ಯತ್ವವು ಸಿದ್ಧವಾಗುವುದೆಂದು ಸೂಚಿಸುತ್ತಿದ್ದಾರೆ.

ಭಾಷ್ಯದಲ್ಲಿ 'ನಿತ್ಯತ್ವಾದೇವ' ಎಂಬುದು ಉಪಲಕ್ಷಣವಾಗಿದೆ. ವೇದಪ್ರಾಮಾಣ್ಯವು ಸಾಧಿತವಾಗಿರುವುದರಿಂದ ವೇದಕ್ಕೆ ಅಪ್ರಾಮಾಣ್ಯವಿಲ್ಲದಿರುವುದರಿಂದಲೇ ಎಂದು ಸೂತ್ರದ ಅತಃ ಎಂಬ ಶಬ್ದದ ವ್ಯಾಖ್ಯಾನವನ್ನು ಮಾಡಬಹುದೆಂದು ತಿಳಿಯಬೇಕು. ಹೀಗೆ ಹೇಳದಿದ್ದರೆ ಪೂರ್ವಪಕ್ಷಿಯು ವೇದವು ಅಪ್ರಮಾಣವಾಗಿರುವುದರಿಂದ ದೇವ-ಪ್ರವಾಹಕ್ಕೆ ಅನ್ಯಥಾ ಉಪಪತ್ತಿಯನ್ನೇ ಹೇಳಬಹುದು. ಭಾಷ್ಯದಲ್ಲಿ 'ಯುಕ್ತಮ್' ಎಂಬ ಪದವು ಸೂತ್ರಶೇಷವನ್ನು ಹೇಳುವ ಪದವಾಗಿದೆ. 'ಯುಕ್ತಮ್' ಎಂದರೆ ವೇದನಿತ್ಯತ್ವವು ದೇವತೆಗಳಿಗೆ ಪ್ರವಾಹತಃ ನಿತ್ಯತ್ವವನ್ನು ಒಪ್ಪದಿರುವ ಪಕ್ಷದಲ್ಲಿ ಅನುಪಪನ್ನವಾಗುವುದು ಎಂಬ ಯುಕ್ತಿಯಿಂದ ಸಿದ್ಧವಾಗಿದೆ ಎಂದು ಅರ್ಥ. ಸೂತ್ರದಲ್ಲಿರುವ ಚಶಬ್ದವಾದರೋ ಸಮುಚ್ಚಯವನ್ನು ಹೊಂದುವ ಯುಕ್ತಿಗಳು ಶಬ್ದಾತ್, ಪ್ರತ್ಯಕ್ಷಾತ್, ಅನುಮಾನಾತ್ ಎಂಬ ಪದಗಳಿಂದಲೇ ಪ್ರದರ್ಶಿಸಲ್ಪಟ್ಟಿರುವುದರಿಂದ ಅವುಗಳ ಸಮುಚ್ಚಯವೆಂಬ

ಅರ್ಥವುಳ್ಳದ್ದೆಂದು ಅರ್ಥಾತ್ ವ್ಯಾಖ್ಯಾನಿಸಲ್ಪಟ್ಟಿದೆ. ಆದ್ದರಿಂದಲೇ ಹಿಂದಿನ ಸೂತ್ರಕ್ಕೆ ಸಂಬಂಧಪಟ್ಟ ಭಾಷ್ಯದಲ್ಲಿ ಚಶಬ್ದವನ್ನು ಯೋಜಿಸಲಾಗಿದೆ.

ಈ ಸೂತ್ರಕ್ಕೆ ಸಂಬಂಧಪಟ್ಟ ಭಾಷ್ಯದಲ್ಲೂ ಚಶಬ್ದದಿಂದ ವೇದದ ಪದಗಳಿಂದ ವಾಚ್ಯರಾದ ದೇವತೆಗಳ ಕೇವಲ ದೇವತಾಸ್ವರೂಪಕ್ಕೆ ನಿತ್ಯತ್ವವಿರುವುದರಿಂದ ಅನ್ಯಥಾ ಉಪಪತ್ತಿಯು ಸೂಚಿತವಾಗುವುದು. 'ಅತ ಏವ' ಆದ್ದರಿಂದಲೇ ಅಂದರೆ 'ಸೂರ್ಯಾಚಂದ್ರಮಸೌ' 'ಯಥೈವ' ಇತ್ಯಾದಿ ಶ್ರುತಿಗಳಿಂದಲೇ ಹಾಗೂ 'ಯಮಪ್ಯೇತಿ ಭುವನಂ ಸಾಂಪರಾಯೇ' 'ಯತ್ ಪ್ರಯತ್ಯಭಿಸಂವಿಶಂತಿ' ಇತ್ಯಾದಿ ಅನೇಕ ಪ್ರಲಯವನ್ನು ಹೇಳುವ ಶ್ರುತಿಗಳಿಂದಲೂ ಸೂರ್ಯಾದಿ ದೇವತೆಗಳಿಗೆ ಉತ್ಪತ್ತಿ-ನಾಶಗಳು ಇರುವುದು ತಿಳಿದು ಬರುವುದರಿಂದ 'ಅತ ಏವ' ಸ್ವರೂಪನಿತ್ಯತ್ವವು ಇರಲು ಸಾಧ್ಯವಿಲ್ಲದಿರುವುದರಿಂದ ಪ್ರವಾಹರೂಪದಿಂದಲೇ ಅವರಿಗೆ ನಿತ್ಯತ್ವವನ್ನು ಅವಶ್ಯವಾಗಿ ಒಪ್ಪಬೇಕಾಗುವುದು – ಇತ್ಯಾದಿ ಟೀಕೆಯಲ್ಲಿ ಹೇಳಿದ ಎಲ್ಲ ವಿಷಯವೂ ಕೂಡ ಸಂಗೃಹೀತವಾಗಿದೆ.

ಭಾ.ದೀ. – ನನು ದೇವಾನಾಂ ಪ್ರವಾಹನಿತ್ಯತ್ವೇನಾಪಿ ವೇದಪ್ರಾಮಾಣ್ಯೋ-ಪಪತ್ತಿಃ । ತಥಾಹಿ – ಕಿಂ ಪೂರ್ವಕಲ್ಪೇ ಮುಕ್ತಾ ಏವ ದೇವಾ ಉತ್ತರಕಲ್ಪೇ ಪುನರಾವರ್ತಂತೇ, ತದನ್ಯೇ ವಾ । ನಾಽದ್ಯಃ । ಮುಕ್ತೇರಪುನರಾವೃತ್ತಿತ್ವಾತ್ । ನ ದ್ವಿತೀಯಃ । ತಥಾತ್ವೇ ಧರ್ಮಿಭೂತದೇವಾನಿತ್ಯತ್ವಹೇತುಕವಿರೋಧಾಭಾವೇಽಪಿ ನಾಮರೂಪಾದಿಧರ್ಮವೈಚಿತ್ರ್ಯಕೃತವಿರೋಧಪ್ರಾಪ್ತೇಃ, ವಾಚಕವೇದಸ್ಯ ಪ್ರತಿ-ಕಲ್ಪಂ ಪಾಠಭೇದಾಭಾವೇನೈಕವಿಧತ್ವಾತ್, ಅನ್ಯಥಾ ನಿತ್ಯತ್ವವ್ಯಾಘಾತಾತ್ । ವಾಚ್ಯದೇವಾನಾಂ ಚ ನಾನಾವಿಧನಾಮರೂಪವತ್ತ್ವಾದಿತ್ಯಾಶಂಕಾಂ ಪರಿಹರತ್-ಸೂತ್ರಮುಪನ್ಯಸ್ಯ ವ್ಯಾಚಷ್ಟೇ – ಸಮಾನೇತಿ ॥

ಶಂಕೆ – ದೇವತೆಗಳಿಗೆ ಪ್ರವಾಹತಃ ನಿತ್ಯತ್ವವನ್ನು ಹೇಳಿದರೂ ವೇದಪ್ರಾಮಾಣ್ಯವು ಉಪಪನ್ನವಾಗುವುದಿಲ್ಲ. ತಥಾ ಹಿ – ಹಿಂದಿನ ಕಲ್ಪದಲ್ಲಿ ಮುಕ್ತರಾದ ದೇವತೆಗಳೇ ಪುನಃ ಉತ್ತರಕಲ್ಪದಲ್ಲಿ ಮುಂದುವರೆಯುವರೋ, ಅಥವಾ ಬೇರೆ ದೇವತೆಗಳೋ?

ಮೊದಲನೆಯದು ಸರಿಯಲ್ಲ; ಏಕೆಂದರೆ, ಮುಕ್ತಿಯೆಂದರೆ ಪುನರಾವೃತ್ತಿ ಇಲ್ಲದಿರುವುದೇ ಆಗಿದೆ. ಎರಡನೆಯ ಪಕ್ಷವೂ ಸರಿಯಲ್ಲ; ಹಾಗಿದ್ದ ಪಕ್ಷದಲ್ಲಿ ಧರ್ಮಿಗಳಾದ ದೇವತೆಗಳ ಅನಿತ್ಯತ್ವವೇ ಹೇತುವಾಗಿರುವ ಅನುಮಾನದಿಂದ ವಿರೋಧವಿಲ್ಲದಿದ್ದರೂ, ಆ ದೇವತೆಗಳ ನಾಮ ರೂಪ ಮೊದಲಾದ ಧರ್ಮಗಳ ವೈಚಿತ್ರ್ಯದಿಂದಾಗಿ ಉಂಟಾಗುವ ವಿರೋಧವು ಪ್ರಾಪ್ತವಾಗುವುದು. ಏಕೆಂದರೆ, ವಾಚಕವಾದ ಆ ದೇವತೆಗಳನ್ನು ಹೇಳುವ ವೇದವಾಕ್ಯಗಳಿಗೆ ಪ್ರತಿಕಲ್ಪದಲ್ಲೂ ಪಾಠಭೇದವಿಲ್ಲದೆ ಏಕವಿಧವಾಗಿರುವುದು. ಅದಿಲ್ಲದಿದ್ದರೆ ವೇದಗಳಿಗೆ ನಿತ್ಯತ್ವವೇ ವ್ಯಾಹತವಾಗುವುದು. ವೈದಿಕಪದಗಳಿಂದ ವಾಚ್ಯರಾದ ದೇವತೆಗಳಿಗೆ ನಾನಾವಿಧವಾದ ನಾಮರೂಪಗಳು ಇರುವುದರಿಂದ ಈ ವಿರೋಧವು ಅಪರಿಹಾರ್ಯವಾಗಿದೆ.

ಈ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸ ಮಾಡಿ ಭಾಷ್ಯಕಾರರು ''ಸಮಾನ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ –**

**॥ ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ ॥ ೩೦ ॥**

ಹಿಂದಿನ ಕಲ್ಪದ ದೇವತೆಗಳು ಮುಂದಿನ ಕಲ್ಪಗಳಲ್ಲಿ ಇಲ್ಲದಿದ್ದರೂ ಆ ದೇವತೆಗಳನ್ನು ಹೇಳುವ ವೇದಗಳಿಗೆ (ಅಪ್ರಾಮಾಣ್ಯವೆಂಬ) ವಿರೋಧವು ಇಲ್ಲ. ಏಕೆಂದರೆ ಆ ದೇವತೆಗಳು ಹಿಂದಿನ ಕಲ್ಪದ ದೇವತೆಗಳ ನಾಮ ರೂಪಗಳಿಗೆ ಸಮಾನವಾದ ನಾಮರೂಪಗಳನ್ನೇ ಹೊಂದಿರುವರು. ಈ ವಿಷಯವು ಶ್ರುತಿಯಿಂದಲೂ ಮತ್ತು ಸ್ಮೃತಿಯಿಂದಲೂ ಸಿದ್ಧವಾಗಿದೆ.

**ಭಾಷ್ಯಮ್– ಅತೀತಾನಾಗತಾನಾಂ ದೇವಾನಾಂ ಸಮಾನನಾಮರೂಪತ್ವಾತ್ ಪ್ರಾಪ್ತಪದಾನಾಂ ಮುಕ್ತ್ಯಾಽಽವೃತ್ತಾವಪ್ಯವಿರೋಧಃ ।**

**'ಯಥಾಪೂರ್ವಮ್' ಇತಿ ದರ್ಶನಾತ್ ।**

**'ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।**
**ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ ।**
**ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ'**

**ಇತಿ ಸ್ಮೃತೇಶ್ಚ ॥ ೩೦ ॥**

ಹಿಂದಿನ ಈಗಿರುವ ಮತ್ತು ಮುಂದೆ ಬರುವ ದೇವತೆಗಳಿಗೆ ಸಮಾನವಾದ ನಾಮ ಮತ್ತು ಆಕಾರವಿರುವುದರಿಂದ ಇಂದ್ರಾದಿ ಪದವನ್ನು ಹೊಂದಿದ ದೇವತೆಗಳು ಮುಕ್ತರಾದ ಕಾರಣದಿಂದ ತಮ್ಮ ಸ್ಥಾನಗಳಲ್ಲಿ ಇಲ್ಲದಿದ್ದರೂ ವೇದಗಳಿಗೆ ಸ್ವತಃಪ್ರಾಮಾಣ್ಯರೂಪವಾದ ವಿರೋಧವಿಲ್ಲ.

ಎಲ್ಲ ದೇವತೆಗಳೂ ಸಮಾನನಾಮರೂಪವುಳ್ಳವರು ಎಂಬ ವಿಷಯದಲ್ಲಿ 'ಧಾತಾ ಯಥಾ ಪೂರ್ವಮ್' ಎಂಬ ಶ್ರುತಿಯು ಪ್ರಮಾಣವಾಗಿದೆ. ಹಾಗೆಯೇ ''ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ...'' ಎಂಬ ಸ್ಮೃತಿಯು ಪ್ರಮಾಣವಾಗಿದೆ.

ಭಾ.ದೀ. – ಅತ್ರ 'ಅತೀತ'ಪದಂ ಪ್ರಾಚೀನಪರಮ್ । 'ಅನಾಗತ'ಪದಂ ತದನ್ಯಭವಿಷ್ಯದ್ವರ್ತಮಾನಪರಮ್ । ಧರ್ಮಪ್ರತಿಯೋಗ್ಯುಭಯಸಮರ್ಪಕಮೇತತ್ । 'ಸಮಾನಧರ್ಮಕರ್ಮವತ್ತ್ವಾಚ್ಚ' ಇತಿ ತದರ್ಥಃ । 'ಸ್ವಪದೇಷು' ಇತಿ ಶೇಷಃ । ಮುಕ್ತ್ಯಾಽಽವೃತ್ತಾವಪಿ ಇತ್ಯುಕ್ತಿಃ ಪೂರ್ವಪಕ್ಷ್ಯಾಶಂಕಿತವಿರೋಧೇ ಹೇತುಸೂಚನಾರ್ಥಾ ।

'ಯದ್ಯಪಿ ತಥಾಪಿ' ಇತ್ಯರ್ಥೇಽಪಿ ಶಬ್ದಃ ಆವರ್ತತೇ । ಶಬ್ದ ಇತ್ಯಸ್ತಿ । ತಥಾ ಚೇತ್ಥಂ ಯೋಜನಾ – 'ಪ್ರಾಪ್ತಪದಾನಾಂ' ಪ್ರಾಚೀನಾನಾಂ ದೇವಾನಾಂ 'ಮುಕ್ತ್ಯಾ' ಪ್ರಾಪ್ತಮುಕ್ತಿತ್ವೇನ ಕಾರಣೇನ ಪುನಸ್ತೇಷಾಮೇವ ಸ್ವಪದೇಷು 'ಆವೃತ್ತಾವಪಿ'

ಅಸತ್ತ್ವೇऽಪಿ ತದನ್ಯೇಷಾಂ ತತ್ರ ಸತ್ತ್ವೇऽಪಿ ಚ 'ಅವಿರೋಧಃ' ತದ್ವಾಚಕೇ ಏಕವಿಧೇऽಪಿ ಶಬ್ದೇ ವೇದೇऽಪ್ರಾಮಾಣ್ಯಾಖ್ಯೋ ವಿರೋಧಃ । ಕುತಃ? ವಾಚ್ಯಾನಾಮ್ ಅಪಿ ಅತೀತಾನಾಗತಾನಾಂ ದೇವಾನಾಂ ಪರಸ್ಪರಂ 'ಸಮಾನ-ನಾಮರೂಪತ್ವಾತ್' ಸಮಾನೇ ಏಕವಿಧೇ ನಾಮರೂಪೇ ಯೇಷಾಂ ತೇ ತಥೋಕ್ತಾಃ, ತೇಷಾಂ ಭಾವಃ ತತ್ತ್ವಂ ತಸ್ಮಾದಿತಿ।

ಚಂದ್ರಿಕಾಯಾಂ ತು ಸೂತ್ರೇ ಭಾಷ್ಯೇ ಚ ತತ್ತ್ವಪ್ರದೀಪಾನುಸಾರಾದ್ ಆವೃತ್ತಾವಿತಿ ವಿಚ್ಛೇದಂ ಭಾಷ್ಯೇ ಮುಕ್ತ್ಯಾವೃತ್ತಾವಿತ್ಯಸ್ಯ ಏಕಪದ್ಯಂ ಚಾऽಶ್ರಿತ್ಯ ಏಕಸ್ಯ ಪದಪ್ರಾಪ್ತಾವನ್ಯಸ್ಯ ಮುಕ್ತಿಃ, ಪುನಸ್ತಸ್ಯ ಮುಕ್ತೌ ಪುನರನ್ಯಸ್ಯ ಪದಪ್ರಾಪ್ತಿರಿತಿ ಕ್ರಮೇಣ ಮುಕ್ತೇರಾವೃತ್ತಾವಪೀತಿ ವಾ, ಸ್ವಸ್ವಪದಸ್ಯ ಆವೃತ್ತಾವಪೀತಿ ವೇತಿ ಟೀಕಾ-ನುಕ್ತಪ್ರಕಾರದ್ವಯೇನಾಪಿ 'ಆವೃತ್ತೌ' ಇತ್ಯಂಶೋ ವ್ಯಾಖ್ಯಾತಃ।

ಈ ಭಾಷ್ಯದಲ್ಲಿ 'ಅತೀತ'ಪದವು ಪ್ರಾಚೀನ ಎಂಬ ಅರ್ಥ ಹೇಳುವ ತಾತ್ಪರ್ಯ-ವುಳ್ಳದ್ದು. 'ಅನಾಗತ' ಪದವಾದರೋ ಅವರಿಂದ ಭಿನ್ನರಾದ ಭವಿಷ್ಯತ್ ಮತ್ತು ವರ್ತಮಾನಕಾಲದವರನ್ನು ಹೇಳುವ ಅಭಿಪ್ರಾಯವುಳ್ಳದ್ದು. ಈ ಪದವು ಸಾದೃಶ್ಯದ ಧರ್ಮಿ ಮತ್ತು ಪ್ರತಿಯೋಗಿ ಇಬ್ಬರನ್ನೂ ಹೇಳುವ ತಾತ್ಪರ್ಯವುಳ್ಳದ್ದು. ''ನಾಮ'' ಅಂದರೆ ಇಂದ್ರಾದಿ ನಾಮಗಳು; ''ರೂಪ''ವೆಂದರೆ ಆಕಾರ. ಸೂತ್ರವನ್ನು ಅನುಸರಿಸಿ ಇಲ್ಲೂ ಚಶಬ್ದವನ್ನು ಯೋಜಿಸಬೇಕು. ಸಮಾನವಾದ ಧರ್ಮ ಮತ್ತು ಕರ್ಮಗಳನ್ನು ಪಡೆದಿರುವುದರಿಂದಲೂ ಕೂಡ ಎಂದು ಅದರ ಅರ್ಥ. 'ಸ್ವಪದೇಷು' ಎಂಬ ಪದವು ಇಲ್ಲಿ ಶೇಷವಾಗಿದೆ. ಭಾಷ್ಯದಲ್ಲಿ 'ಮುಕ್ತ್ಯಾऽವೃತ್ತಾವಪಿ'' ಎಂದು ಹೇಳಿರುವುದು ಪೂರ್ವ-ಪಕ್ಷಿಯು ಶಂಕಿಸಿದ ವಿರೋಧವಿಷಯದಲ್ಲಿ ಹೇತುವನ್ನು ಸೂಚಿಸುವ ಅಭಿಪ್ರಾಯ-ವುಳ್ಳದ್ದು.

'ಯದ್ಯಪಿ ತಥಾಪಿ' ಎಂಬ ಅರ್ಥದಲ್ಲಿ ಭಾಷ್ಯದ 'ಅಪಿ'ಶಬ್ದವು ಆವೃತ್ತಿಯನ್ನು ಹೊಂದುವುದು. 'ಶಬ್ದೇ' ಎಂಬ ಪದವು ಅನುವೃತ್ತಿ ಹೊಂದುವುದು. ತಥಾ ಚ – ಭಾಷ್ಯಪದಗಳ ಯೋಜನೆಯು ಹೀಗಿರುವುದು – 'ಪ್ರಾಪ್ತಪದಾನಾಂ' - ಹಿಂದೆ

ಇಂದ್ರಾದಿಪದಗಳನ್ನು ಪಡೆದಿದ್ದ ಪ್ರಾಚೀನದೇವತೆಗಳು 'ಮುಕ್ತಾ' - ಮುಕ್ತಿಯನ್ನು ಪಡೆದಿರುವ ಕಾರಣದಿಂದ ಪುನಃ ಆ ದೇವತೆಗಳೇ ತಮ್ಮ ಸ್ಥಾನಗಳಲ್ಲಿ 'ಆವೃತ್ತಾವಪಿ' - ಇಲ್ಲದಿದ್ದರೂ 'ತದನ್ಯೇಷಾಂ' - ಅವರಿಗಿಂತ ಭಿನ್ನರಾದವರು ಆ ಸ್ಥಾನಗಳಲ್ಲಿ ಇದ್ದರೂ ಕೂಡ 'ಅವಿರೋಧಃ' - ಆ ದೇವತೆಗಳನ್ನು ಹೇಳುವ ಒಂದೇ ವಿಧವಾದ 'ಶಬ್ದೇ' ವೇದದಲ್ಲಿ ಅಪ್ರಾಮಾಣ್ಯವೆಂಬ ವಿರೋಧವಿಲ್ಲ. ಏಕೆಂದರೆ, ಆ ವೈದಿಕಪದಗಳಿಂದ ವಾಚ್ಯರಾಗಿದ್ದರೂ ಅತೀತರಾದ ಹಾಗೂ ಅನಾಗತರಾದ ದೇವತೆಗಳು ಪರಸ್ಪರವಾಗಿ 'ಸಮಾನನಾಮರೂಪತ್ವಾತ್' – ಸಮಾನೇ - ಅಂದರೆ ಏಕವಿಧವಾದ, ನಾಮರೂಪೇ - ನಾಮ ಮತ್ತು ರೂಪಗಳು ಯಾರಿಗಿವೆಯೋ ಅಂಥವರಾದ್ದರಿಂದ.

ಚಂದ್ರಿಕಾದಲ್ಲಾದರೋ – ಸೂತ್ರದಲ್ಲಿ ಮತ್ತು ಭಾಷ್ಯದಲ್ಲಿ ತತ್ತ್ವಪ್ರದೀಪವನ್ನು ಅನುಸರಿಸಿ 'ಆವೃತ್ತೌ' ಎಂಬ ಪದಚ್ಛೇದವನ್ನು ಭಾಷ್ಯದಲ್ಲಿ 'ಮುಕ್ತ್ಯಾವೃತ್ತೌ' ಎಂಬ ಪದವು ಒಂದೇ ಪದವಾಗಿರುವುದು ಎಂದು ಅಂಗೀಕರಿಸಿ ಒಬ್ಬರಿಗೆ ಪದಪ್ರಾಪ್ತಿಯಾ-ದಾಗ ಮತ್ತೊಬ್ಬರಿಗೆ ಮುಕ್ತಿ, ಪುನಃ ಆ ಪದವನ್ನು ಹೊಂದಿದವರಿಗೆ ಮುಕ್ತಿಯಾದಾಗ ಮತ್ತೊಬ್ಬರಿಗೆ ಆ ಪದಪ್ರಾಪ್ತಿ ಹೀಗೆ ಕ್ರಮದಿಂದ ಮುಕ್ತಿಯ ಆವೃತ್ತಿ ಇದ್ದರೂ – ಎಂಬುದಾಗಿ, ಅಥವಾ ತಮ್ಮ ತಮ್ಮ ಪದದ ಆವೃತ್ತಿ ಇದ್ದರೂ - ಎಂಬುದಾಗಿ ಟೀಕೆಯಲ್ಲಿ ಹೇಳಿಲ್ಲದ ಎರಡು ಪ್ರಕಾರವನ್ನು ಆಶ್ರಯಿಸಿ 'ಆವೃತ್ತೌ' ಎಂಬ ಅಂಶವನ್ನು ವ್ಯಾಖ್ಯಾನಮಾಡಲಾಗಿದೆ.

ಭಾ.ದೀ. – ನನು ಸರ್ವದೇವಾನಾಂ ಸಮಾನನಾಮರೂಪತ್ವೇ ಪ್ರಮಾಣಾ-ಭಾವಾದ್ ಅಸಿದ್ಧೋ ಹೇತುಃ, ಇತ್ಯತಃ ಪ್ರಾಪ್ತಂ 'ದರ್ಶನಾತ್' ಇತ್ಯಂಶಂ ವ್ಯಾಖ್ಯಾತಿ – ಯಥೇತಿ ॥ 'ಧಾತಾ ಯಥಾಪೂರ್ವಮ್' ಇತಿ ಶ್ರುತೇರಿತ್ಯರ್ಥಃ।

''ಎಲ್ಲ ದೇವತೆಗಳು ಏಕರೂಪವಾದ ನಾಮರೂಪಗಳನ್ನು ಪಡೆದಿರುವರು ಎಂಬ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ 'ಸಮಾನನಾಮರೂಪತ್ವ' ಎಂಬ ಹೇತುವು ಅಸಿದ್ಧವಾಗಿದೆ'' – ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರದಲ್ಲಿ ಇರುವ 'ದರ್ಶನಾತ್' ಎಂಬ ಅಂಶವನ್ನು ''ಯಥಾ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಧಾತಾ ಯಥಾಪೂರ್ವಮ್' ಎಂಬ ಶ್ರುತಿ ಇರುವುದರಿಂದ ಎಂದು ಅರ್ಥ.

ಭಾ.ದೀ. – ನನ್ವೇತಚ್ಛ್ರುತೇಃ ತತ್ತತ್ಸ್ವರೂಪಕಲ್ಪನಾನಿಯಮಪರತ್ವಮಪಿ ಸಂಭವತಿ ಇತಿ ನ ಅನಯಾ ಸಮಾನನಾಮರೂಪತ್ವನಿಶ್ಚಯೋ ಭವತಿ । ಕಿಂ ಚ ದೇವ-ಪ್ರವಾಹಸ್ಯ ನಿತ್ಯತ್ವೇ ತೇಷಾಂ ಸಮಾನನಾಮರೂಪತ್ವೇ ವಾ ನ ತದ್ವಾಚಿತ್ವೇನ ನಿತ್ಯವೇದಪ್ರಾಮಾಣ್ಯೋಪಪತ್ತಿಃ, ತದ್ವಾಚಿತ್ವಸ್ಯೈವ ಅಸಂಭವಾತ್ । ನ ಹಿ ಅಪೌರುಷೇಯಸ್ಯ ವೇದಸ್ಯ 'ಏತಾವತ್ಕಾಲಮಯಂ ದೇವೋ ಮಯೋಕ್ತಃ, ಅತಃ ಪರಮೇನಂ ವಕ್ಷ್ಯಾಮಿ' ಇತಿ ವಿಮೃಶ್ಯ ವೃತ್ತಿಃ ಸಂಭವತೀತ್ಯತಃ ಪ್ರಾಪ್ತಃ 'ಸ್ಮೃತೇ'-ರಿತ್ಯಂಶಃ ಇತ್ಯಾಶಯೇನ ತಾಂ ದರ್ಶಯತಿ – ಅನಾದೀತಿ ॥

ಶಂಕೆ – ಈ ಶ್ರುತಿಯು ಆಯಾಯ ದೇವತಾಸ್ವರೂಪವನ್ನು ಕಲ್ಪಿಸುವ ನಿಯಮವಿದೆ ಎಂಬ ತಾತ್ಪರ್ಯವುಳ್ಳದ್ದು ಎಂದು ವ್ಯಾಖ್ಯಾನಮಾಡಲು ಸಾಧ್ಯವಿರುವುದರಿಂದ ಈ ಶ್ರುತಿಯಿಂದ ಎಲ್ಲ ದೇವತೆಗಳೂ ಸಮಾನನಾಮರೂಪವುಳ್ಳವರು ಎಂದು ನಿಶ್ಚಯ-ವಾಗುವುದಿಲ್ಲ. ಮತ್ತು ದೇವಪ್ರವಾಹವು ನಿತ್ಯವಾಗಿದ್ದರೆ ಮತ್ತು ಆ ದೇವತೆಗಳು ಏಕವಿಧವಾದ ನಾಮರೂಪಗಳನ್ನು ಹೊಂದಿದ್ದರೆ ಅಂಥ ದೇವತೆಗಳನ್ನು ಹೇಳುವು-ದರಿಂದ ನಿತ್ಯವಾದ ವೇದಕ್ಕೆ ಪ್ರಾಮಾಣ್ಯವು ಯುಕ್ತವಾಗಲಾರದು. ಏಕೆಂದರೆ, ಆ ವೇದಶಬ್ದಗಳಿಗೆ ಆ ದೇವತಾವಾಚಕತ್ವವೇ ಕೂಡಲಾರದು. ಅಪೌರುಷೇಯವಾದ ವೇದಕ್ಕೆ 'ಇಷ್ಟು ಕಾಲ ಈ ದೇವತೆ ನನ್ನಿಂದ ಉಕ್ತನಾಗಿದ್ದಾನೆ, ಇನ್ನು ಮುಂದೆ ಇವನನ್ನು ಹೇಳುವೆನು' ಎಂದು ವಿಮರ್ಶೆ ಮಾಡಿ ವಾಚಕತ್ವವು ಇರಲು ಸಾಧ್ಯವಿಲ್ಲವಷ್ಟೇ ?

ಈ ಶಂಕೆಯನ್ನು ನಿವಾರಿಸುವುದಕ್ಕೋಸ್ಕರವೇ ಪ್ರಾಪ್ತವಾಗಿರುವ ಸೂತ್ರದ 'ಸ್ಮೃತೇಃ' ಎಂಬಂಶವು ಪ್ರಾಪ್ತವಾಗಿದೆ ಎಂಬ ಆಶಯದಿಂದ ಭಾಷ್ಯದಲ್ಲಿ ಆ ಸ್ಮೃತಿ-ಯನ್ನು ''ಅನಾದಿ'' ಎಂದು ತೋರಿಸುತ್ತಿದ್ದಾರೆ.

ಭಾ.ದೀ. – ನಿತ್ಯತ್ವೋಕ್ತೇರುಪಚರಿತತ್ವವಾರಣಾಯ – ''ಅನಾದಿನಿಧನಾ'' ಇತ್ಯುಕ್ತಮ್ । ಅತೋ ನ ಪೌನರುಕ್ತ್ಯಮ್ । ಅತ ಏವ ತತ್ತ್ವಪ್ರದೀಪೇ – 'ಅನಾದಿ-ನಿಧನತ್ವೇನ ನಿತ್ಯಾ, ನ ತು ನಿಧನತ್ವಮಾತ್ರೇಣ' ಇತ್ಯುಕ್ತಮ್ । ಬಹುಕಾಲೀನತ್ವೇನ

ವಾ ಇತ್ಯಪಿ ದ್ರಷ್ಟವ್ಯಮ್ । 'ವೇದೇಷು' ಇತ್ಯನಂತರಮ್ 'ಉಕ್ತಾ' ಇತಿ ಶೇಷಃ । 'ನಿರ್ಮಮೇ' ಇತ್ಯಸ್ಯಾವೃತ್ತಿಃ । 'ತಥಾ' ಇತಿ ಶೇಷಃ । ತೇನಾಪಿ ಏವಶಬ್ದಸ್ಯಾನ್ವಯಃ ।

ತಥಾ ಚ – 'ಆದೌ' ಸೃಷ್ಟಿಕಾಲೇ, 'ಸ್ವಯಂಭುವಾ' - ಸ್ವತಂತ್ರೇಣ ಮಹೇಶ್ವರೇಣ ವಿಷ್ಣುನಾ 'ಅನಾದಿನಿಧನಾ ನಿತ್ಯಾ' - ಆದ್ಯಂತಶೂನ್ಯತಯೈವ ನಿತ್ಯಾ, ನ ತೂಪಚಾರೇಣ ಬಹುಕಾಲೀನತಾಮಾತ್ರೇಣ ಅನಿಧನತ್ವಮಾತ್ರೇಣ ನಿತ್ಯಾ । ಯಾ 'ವಾಕ್' ವೇದರೂಪಾ 'ಉತ್ಸೃಷ್ಟಾ' - ಉಚ್ಚಾರಿತಾ 'ತದ್ವೇದ-ಶಬ್ದೇಭ್ಯಃ' - ವೇದಗತೇಭ್ಯಃ ತೇಭ್ಯಃ ಶಬ್ದೇಭ್ಯ ಏವ, ನಾನ್ಯೇಭ್ಯಃ, 'ಸಃ' - ಮಹೇಶ್ವರೋ ವಿಷ್ಣುಃ, 'ಋಷೀಣಾಂ' ಬ್ರಹ್ಮಾದಿವಿಬುಧಾನಾಂ, 'ನಾಮಧೇಯಾನಿ ನಿರ್ಮಮೇ' ತಾನೇವ ಶಬ್ದಾನ್ ತೇಷು ಸಂಕೇತಿತವಾನ್ ಪ್ರತಿಕಲ್ಪಮಯಂ ಶಬ್ದೋಽತ್ರ ಶಕ್ತ ಇತಿ ಜ್ಞಾಪಿತವಾನ್ । 'ಯಾಶ್ಚ' ಋಷೀಣಾಂ ದೇವಾನಾಂ, ವೇದೇಷೂಕ್ತಾ ದೃಶ್ಯಂತ ಇತಿ ದೃಷ್ಟಯೋ ರೂಪಾಣಿ, ತಾಶ್ಚ ತಾನಿ ಚ ತಥೈವ ಪೂರ್ವಕಲ್ಪೀಯರೂಪಸಾದೃಶ್ಯೇನೈವ ನಿರ್ಮಮೇ – ಇತಿ ಸ್ಮೃತ್ಯರ್ಥಃ ।

ಚಃ ಸಮುಚ್ಚಯೇ । 'ದರ್ಶನಾತ್' 'ಸ್ಮೃತೇಃ' ಇತ್ಯನಯೋಃ 'ಸಮಾನರೂಪ-ತ್ವಾತ್' ಇತ್ಯನೇನಾನ್ವಯಃ । ಆಗಮೋಪಲಕ್ಷಕಂ ಚೈತತ್ । ತಥಾ ಚ – 'ನಾಸಿದ್ಧಿಃ' ಇತಿ ಭಾವಃ ।

ಅನೇನ – ಪ್ರಾಚೀನಾನಾಂ ದೇವಾನಾಂ ಮುಕ್ತ್ಯಾ ಪುನಃ ಸ್ವಪದೇಷ್ವವೃತ್ತಾವಪಿ ತದನ್ಯೇಷಾಂ ತತ್ರ ವೃತ್ತಾವಪಿ ನ ತದ್ವಾಚಕೇ ಏಕವಿಧೇಽಪಿ ಶಬ್ದೇಽಪ್ರಾಮಾ-ಣ್ಯಾಖ್ಯೋ ವಿರೋಧಃ । ಕುತಃ? ಪ್ರಾಚೀನಾನಾಂ ತದನ್ಯೇಷಾಂ ಚಾನ್ಯೋನ್ಯಂ 'ಸಮಾನನಾಮರೂಪತ್ವಾತ್' ತದ್‌ಯೋಗ್ಯಕರ್ಮಧರ್ಮವತ್ತ್ವಾಚ್ಚ । ನ ಚ ಹೇತ್ವಸಿದ್ಧಿಃ । 'ದರ್ಶನಾತ್' 'ಯಥಾಪೂರ್ವಮ್' ಇತಿ ಶ್ರುತೇಃ, 'ಅನಾದಿನಿಧನಾ' ಇತಿ ಸ್ಮೃತೇಶ್ಚ - ಇತಿ ಸೂತ್ರಾರ್ಥ ಉಕ್ತೋ ಭವತಿ ।

ನಿತ್ಯಾ ಎಂಬ ಪದದಿಂದ ಹೇಳಿರುವ ನಿತ್ಯತ್ವವು ಔಪಚಾರಿಕವಾದದ್ದು ಎಂಬ

ಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ''ಅನಾದಿನಿಧನಾ'' ಎಂದು ಹೇಳಲಾಗಿದೆ. ಆದ್ದರಿಂದ ಪುನರುಕ್ತಿಯಿಲ್ಲ. ಆದ್ದರಿಂದಲೇ ತತ್ತ್ವಪ್ರದೀಪದಲ್ಲಿ – 'ಅನಾದಿನಿಧನ-ವಾದ್ದರಿಂದ ನಿತ್ಯಾ, ಹೊರತು ಕೇವಲ ನಿಧನ ಅಂದರೆ ನಾಶವಿಲ್ಲದ ಪ್ರಯುಕ್ತ' - ಎಂಬುದಾಗಿ ಹೇಳಿದೆ. ಅಥವಾ ಬಹುಕಾಲೀನವಾದದ್ದರಿಂದ ನಿತ್ಯಾ ಎಂದು ಹೇಳಿದೆ ಎಂಬ ಶಂಕೆಯನ್ನು ಪರಿಹರಿಸಲು ಪುನಃ 'ಅನಾದಿನಿಧನಾ' ಎಂದು ಹೇಳಿದೆ. 'ವೇದೇಷು' ಎಂಬ ಪದದ ನಂತರ 'ಮುಕ್ತಾಃ' ಎಂಬ ಪದವು ಶೇಷವಾಗಿದೆ. 'ನಿರ್ಮಮೇ' ಎಂಬ ಪದವು ಆವೃತ್ತಿಯನ್ನು ಹೊಂದುವುದು. 'ತಥಾ' ಎಂಬ ಪದವು ಶೇಷವಾಗಿದೆ. ಆ ಪದದೊಂದಿಗೂ 'ಏವ'ಶಬ್ದವು ಅನ್ವಯವನ್ನು ಹೊಂದುವುದು.

ತಥಾ ಚ – 'ಆದೌ' - ಸೃಷ್ಟಿಕಾಲದಲ್ಲಿ 'ಸ್ವಯಂಭುವಾ' ಸ್ವತಂತ್ರನಾದ ಮಹೇ-ಶ್ವರನಾದ ವಿಷ್ಣುವಿನಿಂದ 'ಅನಾದಿನಿಧನಾ ನಿತ್ಯಾ' - ಆದ್ಯಂತವು ಇಲ್ಲದೇ ಇರುವ ಕಾರಣದಿಂದಲೇ ನಿತ್ಯವಾಗಿರುವ, ಹೊರತು ಔಪಚಾರಿಕವಾಗಿ ಬಹುಕಾಲ ಇರುವ ಕಾರಣದಿಂದ ಅಥವಾ ನಾಶವಿಲ್ಲದೇ ಇರುವ ಕಾರಣದಿಂದ ನಿತ್ಯವೆಂದೆನಿಸದ, ಯಾವ 'ವಾಕ್' - ವೇದರೂಪವಾದ ಶಬ್ದವು 'ಉತ್ಸೃಷ್ಟಾ' ಉಚ್ಚರಿಸಲ್ಪಟ್ಟಿತೋ, ಆ 'ವೇದ-ಶಬ್ದೇಭ್ಯಃ ಏವ' - ವೇದದಲ್ಲಿರುವ ಅದೇ ಶಬ್ದಗಳಿಂದಲೇ- ಹೊರತು ಅನ್ಯಶಬ್ದಗಳಿಂದ ಅಲ್ಲ - 'ಸಃ ಮಹೇಶ್ವರಃ' ಆ ಮಹೇಶ್ವರನಾದ ವಿಷ್ಣುವು, 'ಋಷೀಣಾಂ' ಬ್ರಹ್ಮಾದಿದೇವತೆಗಳ, 'ನಾಮಧೇಯಾನಿ ನಿರ್ಮಮೇ' ಆ ಶಬ್ದಗಳನ್ನೇ ಆ ದೇವತೆಗಳ ವಿಷಯದಲ್ಲಿ ಸಂಕೇತಗಳೆಂದು ಸಂಕಲ್ಪಿಸಿದ್ದಾನೆ. ಅಂದರೆ ಪ್ರತಿಕಲ್ಪದಲ್ಲೂ ಈ ಶಬ್ದವು ಈ ದೇವತೆಯನ್ನು ಹೇಳುವ ಶಕ್ತಿಯುಳ್ಳದ್ದು ಎಂದು ತಿಳಿಸಿದ್ದಾನೆ. 'ಯಾಶ್ಚ' - ದೇವತೆಗಳಿಗೆ 'ವೇದೇಷು' - ವೇದಗಳಲ್ಲಿ ಹೇಳಲಾದ, ದೃಷ್ಟಯಃ - ದೃಷ್ಟವಾಗಿವೆ ಎಂಬ ನಿಮಿತ್ತದಿಂದ ದೃಷ್ಟಿ ಎಂದೆನಿಸುವ ರೂಪಗಳಿವೆಯೋ, 'ತಾಶ್ಚ' ಆ ರೂಪಗಳನ್ನು 'ತಥೈವ' ಹಿಂದಿನ ಕಲ್ಪದ ರೂಪಕ್ಕೆ ಸದೃಶವಾದದ್ದನ್ನಾಗಿಯೇ 'ನಿರ್ಮಮೇ' ನಿರ್ಮಿಸಿದ್ದಾನೆ ಎಂದು ಸ್ಮೃತಿಯ ಅರ್ಥ.

'ಸ್ಮೃತೇಶ್ಚ' ಎಂಬಲ್ಲಿರುವ ಚಕಾರವು ಸಮುಚ್ಚಯವನ್ನು ಹೇಳುವುದು. 'ದರ್ಶನಾತ್' 'ಸ್ಮೃತೇಃ' ಎಂಬ ಪದಗಳಿಗೆ 'ಸಮಾನನಾಮರೂಪತ್ವಾತ್' ಎಂಬ

ಪದದೊಂದಿಗೆ ಅನ್ವಯ. ಈ ಪದವು ಇತರ ಆಗಮಗಳಿಗೂ ಉಪಲಕ್ಷಕವಾಗಿದೆ. ತಥಾ ಚ – ಸಮಾನನಾಮರೂಪತ್ವಾತ್ ಎಂಬುದು ಹೇಳಲಾದ ಹೇತುವಿಗೆ ಅಸಿದ್ಧಿ ಇಲ್ಲ-ವೆಂದು ಭಾವ.

ಇದರಿಂದ – ಪ್ರಾಚೀನದೇವತೆಗಳು ಮುಕ್ತಿಯನ್ನು ಹೊಂದಿದ ಕಾರಣ ಅವರು ಪುನಃ ತಮ್ಮ ಪದಗಳಲ್ಲಿ ಇಲ್ಲದಿದ್ದರೂ ಅವರಿಂದ ಭಿನ್ನರಾದವರು ಆ ಪದಗಳಲ್ಲಿ ಇದ್ದರೂ ಅವರನ್ನು ಹೇಳುವ ಏಕವಿಧವಾದ ಶಬ್ದದ ವಿಷಯದಲ್ಲಿ ಅಪ್ರಾಮಾಣ್ಯವೆಂಬ ವಿರೋಧವು ಇಲ್ಲ. ಏಕೆಂದರೆ, ಪ್ರಾಚೀನ ದೇವತೆಗಳು ಅವರಿಂದ ಅನ್ಯರಾದ ದೇವತೆಗಳೂ ಕೂಡ ಪರಸ್ಪರವಾಗಿ 'ಸಮಾನನಾಮರೂಪತ್ವಾತ್' ಆ ಪದಕ್ಕೆ ಯೋಗ್ಯ-ವಾದ ಕರ್ಮ ಮತ್ತು ಧರ್ಮಗಳನ್ನು ಪಡೆದಿರುವುದರಿಂದ. ಈ ಹೇತುವಿಗೆ ಅಸಿದ್ಧಿ ದೋಷವಿಲ್ಲ. ಏಕೆಂದರೆ 'ದರ್ಶನಾತ್' 'ಯಥಾ ಪೂರ್ವಮ್' ಎಂಬ ಶ್ರುತಿ ಇರುವು-ದರಿಂದ. ಹಾಗೂ 'ಅನಾದಿನಿಧನಾ' ಎಂಬ ಸ್ಮೃತಿಯೂ ಇರುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಅತ್ರ ತತ್ತ್ವಪ್ರದೀಪೇ ಪ್ರಲಯೇ ಕಸ್ಯಾಪಿ ದೇವಸ್ಯ ಅಭಾವೇನ ತದಾ ವೇದಸ್ಯ ವಾಚ್ಯಹೀನತ್ವರೂಪಾಪ್ರಾಮಾಣ್ಯಮಾಶಂಕ್ಯ, ಭಗವನ್ಮಾತ್ರ-ವಿಷಯತ್ವೇನ ತದುಪಪತ್ತಿಃ - ಇತಿ ಸಮಾಧಾನಮಭಿಪ್ರೇತ್ಯ 'ಶಬ್ದೇ' ಇತ್ಯಾದಿ-ಸೂತ್ರಾಣಿ ಭಗವತ್ಪರತಯಾ ವ್ಯಾಖ್ಯಾತಾನಿ । ತಥಾ ಹಿ – ನ ಶಬ್ದೇ ಕದಾಽಪಿ ವಾಚ್ಯಹೀನತ್ವಕೃತೋ ವಿರೋಧಃ ಅಪ್ರಾಮಾಣ್ಯಮ್ । ಕುತಃ? ಮುಖ್ಯವಾಚ್ಯಸ್ಯ ವಿಷ್ಣೋಃ ಸರ್ವದಾ ವಿದ್ಯಮಾನತ್ವಾತ್ । ಕುತ ಏತತ್? 'ಅತ ಏವ' ಶಬ್ದಾತ್ ತೇಷಾಂ ದೇವಾನಾಂ ಪ್ರಭವನಿಯಮಾದಿಕರ್ತುರಪಿ ಈಶಸ್ಯ ಸದಾ ಸತ್ತ್ವಾವ-ಗಮಾತ್ । ಪ್ರತ್ಯಕ್ಷಶ್ಚಾಸೌ ಮಹತಾಮ್ । ಕುತಃ? 'ಅತ ಏವ' 'ಪುರುಷಮೀಹತೇ' 'ಕವಯೋ ವಯಂತಿ' (ಮಹಾನಾ.೧.೩) ಇತ್ಯಾದಿಶ್ರುತೇರೇವ ಇತರೇಷಾಮನು-ಮಾನಾಚ್ಚ । 'ಯಥಾ ಯೇನ ಪ್ರಕಾರೇಣ ಇದಾನೀಂ ದೇವಾ ಭವಂತಿ, ತಥಾಽ-ನ್ಯದಾಽಪಿ' ಇತ್ಯನುಮಾನಾಚ್ಚ ತದವಗಮಃ ।

ಏವಮ್ 'ಅತ ಏವ' ಶಬ್ದನಿತ್ಯತ್ವಾದೇವ ಪ್ರವೋಢುರ್ನಿತ್ಯತ್ವಮ್ । ತಥಾ ವಿಷ್ಣೋಃ ಸಮಾನನಾಮರೂಪತ್ವಾದನ್ಯೇಷಾಂ ತದಭಾವಾಚ್ಚ 'ಅವಿರೋಧಃ' ನ ತಸ್ಯ ಸರ್ವಶಬ್ದವಾಚ್ಯತ್ವವಿರೋಧಃ । ಸಮಾನಾನಿ ಸದೃಶಾನಿ ನಾಮಾನಿ ಯೇಷಾಂ ರೂಪಾಣಾಂ ತಾನಿ ತಥೋಕ್ತಾನಿ, ತಾದೃಶಾನಿ ರೂಪಾಣಿ ಯಸ್ಯ ಸ ತಥೋಕ್ತಃ ತಸ್ಯ ಭಾವಃ ತಸ್ಮಾತ್ । ನ ಹಿ ವಿಷ್ಣ್ವನ್ಯರೂಪಾಣಾಂ ಸದೃಶನಾಮರೂಪತ್ವಂ, ಶಬ್ದ-ಪ್ರವೃತ್ತಿಹೇತುವೈಕಲ್ಯಾತ್ ।

ನ ಚ – ಅತ್ರ ಮಾನಾಭಾವಃ, 'ಯಥಾಪೂರ್ವಮ್' ಇತಿ ದರ್ಶನಾತ್ । ಯಥಾಪೂರ್ವಂ ಪೂರ್ಣಜ್ಞಾನಃ ಸರ್ವಸ್ವತಂತ್ರಃ ಸರ್ವನಾಮರೂಪಸ್ಥಿತಃ, ತಥೈವ ಸ ಧಾತಾ ಸೂರ್ಯಾದೀನಾಮಕಲ್ಪಯತ್ ಇತಿ ಶ್ರುತೇಃ । ಅತಃ ಸೂಯಾದಿಕ್ಲೃಪ್ತೇಃ ಪ್ರಾಗಪಿ ಪ್ರಲಯೇ ಶಬ್ದಪ್ರಾಮಾಣ್ಯವಿರೋಧ ಇತಿ ಸಿದ್ಧಮ್ – ಇತಿ । ಇದಮೇವ ಅಭಿಪ್ರೇತ್ಯ ಟೀಕಾಯಾಂ 'ನ ಚ' ಇತ್ಯಾದಿನಾ ಶಂಕೋತ್ತರೇ ದರ್ಶಿತೇ । 'ಅತೀತ-ವಿಷಯತ್ವಸ್ಯ ಚ' ಇತಿ ಪರಿಹಾರಾಂತರಂ ಚಾಭಿಹಿತಮ್ ।

ತತ್ವಪ್ರದೀಪದಲ್ಲಿ – ಪ್ರಲಯಕಾಲದಲ್ಲಿ ಯಾವ ದೇವತೆಯೂ ಇಲ್ಲದಿರುವು-ದರಿಂದ ಆ ಕಾಲದಲ್ಲಿ ವೇದಕ್ಕೆ ವಾಚ್ಯಹೀನತ್ವ - 'ವಾಚ್ಯಾರ್ಥವೇ ಇಲ್ಲದಿರುವಿಕೆ' ಎಂಬ ಅಪ್ರಾಮಾಣ್ಯವನ್ನು ಆಶಂಕಿಸಿ, ಆ ಸಮಯದಲ್ಲಿ ವೇದವು ಕೇವಲ ಭಗವದ್ವಿಷಯಕ-ವಾಗಿರುವುದರಿಂದ ಪ್ರಾಮಾಣ್ಯವು ಯುಕ್ತವಾಗಿದೆ ಎಂಬ ಸಮಾಧಾನವನ್ನು ಅಭಿ-ಪ್ರಾಯಪಟ್ಟು 'ಶಬ್ದೇ' ಇತ್ಯಾದಿ ಸೂತ್ರಗಳನ್ನು ಭಗವತ್ಪರವಾಗಿ ವ್ಯಾಖ್ಯಾನ ಮಾಡ-ಲಾಗಿದೆ. ಆ ವ್ಯಾಖ್ಯಾನವು ಹೀಗಿರುವುದು – 'ನ ಶಬ್ದೇ' - ವೇದರೂಪವಾದ ಶಬ್ದದಲ್ಲಿ ಎಂದೂ ವಾಚ್ಯಹೀನತ್ವದಿಂದ ಉಂಟಾಗುವ ವಿರೋಧ ಅಂದರೆ ಅಪ್ರಾಮಾಣ್ಯವು ಇಲ್ಲ. ಏಕೆಂದರೆ, ಆ ವೈದಿಕಶಬ್ದಗಳಿಗೆ ಮುಖ್ಯವಾಚ್ಯನಾದ ವಿಷ್ಣುವು ಎಲ್ಲಾ ಕಾಲದಲ್ಲೂ ಇರುವುದರಿಂದ. ಆ ವಿಷಯದಲ್ಲಿ ಪ್ರಮಾಣವೇನು? ಎಂಬ ಶಂಕೆಯು ಸರಿಯಲ್ಲ. ಏಕೆಂದರೆ 'ಅತ ಏವ' ಆ ವೇದರೂಪವಾದ ಶಬ್ದದಿಂದಲೇ ಆ ದೇವತೆಗಳ ಉತ್ಪತ್ತಿ-ನಿಯಮನಾದಿಗಳನ್ನು ಮಾಡುವ ಭಗವಂತನು ಸರ್ವದಾ ಇರುವನೆಂದು ತಿಳಿದುಬರು-

ವುದು. ಈ ವಿಷಯವು ಜ್ಞಾನಿಗಳ ಪ್ರತ್ಯಕ್ಷವಿಷಯವೂ ಆಗಿದೆ. ಏಕೆಂದರೆ 'ಅತ ಏವ' 'ಪುರುಷ ಮೀಹತೇ' 'ಕವಯೋ ವಯಂತಿ' ಇತ್ಯಾದಿ ಶ್ರುತಿಗಳಿಂದಲೇ ಅಂತಹ ಪ್ರತ್ಯಕ್ಷವು ಸಿದ್ಧವಾಗಿದೆ. 'ಇತರೇಷಾಂ ಅನುಮಾನಾಚ್ಚ' - 'ಯಾವ ಪ್ರಕಾರದಿಂದ ಈಗ ದೇವತೆಗಳಿರುವರೋ ಹಾಗೆಯೇ ಬೇರೆ ಕಾಲದಲ್ಲೂ ಇರುವರು' ಎಂಬ ಅನುಮಾನ-ದಿಂದಲೂ ಇತರರಿಗೆ ಭಗವಂತನು ಸರ್ವದಾ ಇರುವನೆಂದು ತಿಳಿದು ಬರುವುದು.

ಹಾಗೆಯೇ 'ಅತ ಏವ' ವೇದನಿತ್ಯವಾಗಿರುವ ಕಾರಣದಿಂದಲೇ ಅದನ್ನು ಅಭಿವ್ಯಕ್ತಿಗೊಳಿಸುವ ಭಗವಂತನ ನಿತ್ಯತ್ವವು ಸಿದ್ಧವಾಗುವುದು. ಹಾಗೆಯೇ ವಿಷ್ಣುವಿಗೆ ಸಮಾನನಾಮರೂಪಗಳಿರುವ ಕಾರಣದಿಂದಲೇ ಇತರರಿಗೆ ಅದಿಲ್ಲದಿರುವುದರಿಂದಲೂ 'ಅವಿರೋಧಃ' – ಅವನಿಗೆ ಸರ್ವಶಬ್ದವಾಚ್ಯತ್ವವನ್ನು ಒಪ್ಪಿದರೆ ಯಾವ ವಿರೋಧವೂ ಇಲ್ಲ. 'ಸಮಾನನಾಮರೂಪತ್ವಾತ್' ಅಂದರೆ 'ಸಮಾನಾನಿ' - ಸದೃಶವಾದ, 'ನಾಮಾನಿ' - ನಾಮಗಳು ಯಾವ ರೂಪಗಳಿಗೆ ಇವೆಯೋ ಆ ರೂಪಗಳು ಸಮಾನ-ನಾಮರೂಪಗಳೆಂದೆನಿಸುತ್ತವೆ. ಅಂತಹ ರೂಪಗಳು ಯಾರಿಗಿರುವುದೋ ಅವನು ಸಮಾನನಾಮರೂಪನು. ಹೀಗೆ ಸಮಾನನಾಮರೂಪನಾಗಿರುವುದರಿಂದ ಎಂದು ಅರ್ಥ. ವಿಷ್ಣು ಭಿನ್ನವಾದ ರೂಪಗಳಿಗೆ ಸದೃಶನಾಮರೂಪಗಳು ಸರ್ವಥಾ ಇಲ್ಲ. ಏಕೆಂದರೆ, ಆಯಾಯ ಶಬ್ದದ ಪ್ರವೃತ್ತಿಗೆ ನಿಮಿತ್ತವಾದ ಧರ್ಮಗಳು ಅಂತಹ ರೂಪ-ಗಳಿಗೆ ಇಲ್ಲ. ಈ ವಿಷಯದಲ್ಲಿ ಪ್ರಮಾಣವಿಲ್ಲ ಎನ್ನಲಾಗದು. ಏಕೆಂದರೆ 'ಯಥಾ-ಪೂರ್ವಮ್' ಎಂಬ ಶ್ರುತಿಯೇ ಈ ವಿಷಯದಲ್ಲಿ ಪ್ರಮಾಣವಾಗಿದೆ. 'ಯಥಾ-ಪೂರ್ವಮ್' - ಹೇಗೆ ಆ ಸೃಷ್ಟಿಕರ್ತನಾದ ಭಗವಂತನು ಪೂರ್ಣಜ್ಞಾನನೂ, ಸರ್ವ-ಸ್ವತಂತ್ರನೂ, ಸರ್ವನಾಮರೂಪಗಳಲ್ಲಿ ಇರತಕ್ಕವನೂ ಆಗಿದ್ದನೋ ಹಾಗೆಯೇ ಇರುವ ಭಗವಂತನು ಸೂರ್ಯಾದಿಗಳನ್ನು ಸೃಷ್ಟಿಸಿದನು ಎಂದು ಶ್ರುತಿಯು ಹೇಳುವುದು. ಆದ್ದರಿಂದ ಸೂರ್ಯಾದಿಗಳ ಸೃಷ್ಟಿಯ ಮುಂಚೆಯೂ ಪ್ರಲಯಕಾಲದಲ್ಲಿ ವೇದಗಳ ಪ್ರಾಮಾಣ್ಯಕ್ಕೆ ಯಾವ ವಿರೋಧವೂ ಇಲ್ಲ ಎಂದು ಸಿದ್ಧವಾಗುವುದು. ಇದೇ ಆಶಯ-ದಿಂದ ತತ್ವಪ್ರಕಾಶಿಕೆಯಲ್ಲಿ 'ನ ಚ' ಇತ್ಯಾದಿ ವಾಕ್ಯದಿಂದ ಶಂಕೆ ಸಮಾಧಾನಗಳನ್ನು ಸೂಚಿಸಲಾಗಿದೆ. 'ಅತೀತವಿಷಯತ್ವಸ್ಯ ಚ' - ಎಂದು ಮತ್ತೊಂದು ಪರಿಹಾರವನ್ನು ಹೇಳಲಾಗಿದೆ.

ಭಾ.ದೀ. – ನನು ನ ದೇವಾನಾಂ ವೇದವಿದ್ಯಾಧಿಕಾರೋ ಯುಕ್ತಃ। ತಥಾ ಹಿ – ದ್ವಿವಿಧಾ ವೇದವಿದ್ಯಾಃ – ಮುಕ್ತಿಫಲಾರ್ಥಾಃ, ತದಿತರಫಲಾರ್ಥಾ ಇತಿ । ಮೋಕ್ಷೇತರಫಲಾ ಅಪಿ ದ್ವಿವಿಧಾಃ । ಬ್ರಹ್ಮಕರ್ಮವಿದ್ಯಾಭೇದಾತ್ । ತತ್ರ ಆದ್ಯಾ ಯಥಾ ಮಧುವಿದ್ಯಾ । ದ್ವಿತೀಯಾ ಯಥಾ ಅಗ್ನಿಷ್ಟೋಮವಿದ್ಯಾ । ತತ್ರ ನ ತಾವದ್ ದೇವಾನಾಂ ಮೋಕ್ಷೇತರಫಲಕದ್ವಿವಿಧವಿದ್ಯಾಸು ಅಧಿಕಾರೋ ಯುಜ್ಯತೇ, ತತ್ಸಾಧ್ಯಾನಾಂ ಮೋಕ್ಷೇತರಫಲಾನಾಂ ಮಧ್ಯೇ ಕೇಷಾಂಚಿದ್ ಯೋಗ್ಯಾನಾಂ ಪ್ರಾಪ್ತತ್ವೇನ ಅಯೋಗ್ಯಾನಾಂ ಚ ಪ್ರಾಪ್ತಮಶಕ್ಯತ್ವೇನ ಅರ್ಥಿತ್ವಾಭಾವಾತ್ ಇತಿ ಜೈಮಿನಿಮತಾವಲಂಬೇನ ಆಕ್ಷಿಪತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ – ಮಧ್ವಾದಿಷು ಇತಿ ॥

ಶಂಕೆ – ದೇವತೆಗಳಿಗೆ ವೇದವಿದ್ಯಾಧಿಕಾರವಿದೆ ಎನ್ನುವುದು ಯುಕ್ತವಲ್ಲ. ತಥಾ ಹಿ - ವೇದವಿದ್ಯೆಗಳು ಎರಡು ವಿಧವಾಗಿವೆ. ಮುಕ್ತಿರೂಪಪ್ರಯೋಜನವುಳ್ಳದ್ದು, ಮತ್ತು ತದ್ಭಿನ್ನ ಪ್ರಯೋಜನವುಳ್ಳದ್ದು ಎಂಬುದಾಗಿ. ಮೋಕ್ಷೇತರವಾದ ಫಲವುಳ್ಳದ್ದೂ ಕೂಡ ಬ್ರಹ್ಮವಿದ್ಯೆ ಕರ್ಮವಿದ್ಯೆ ಎಂಬುದಾಗಿ ಎರಡು ವಿಧ. ಇವುಗಳಲ್ಲಿ ಮೊದಲನೆಯದಕ್ಕೆ 'ಮಧುವಿದ್ಯೆ' ಉದಾಹರಣೆ. ಎರಡನೆಯ ವಿದ್ಯೆಗೆ 'ಅಗ್ನಿಷ್ಟೋಮವಿದ್ಯೆಯು' ಉದಾಹರಣೆ. ಇವುಗಳಲ್ಲಿ ದೇವತೆಗಳಿಗೆ ಮೋಕ್ಷೇತರಫಲಕವಾದ ಎರಡು ವಿದ್ಯೆಗಳಲ್ಲೂ ಅಧಿ-ಕಾರವಿದೆಯೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ, ಆ ವಿದ್ಯೆಗಳಿಂದ ಲಭಿಸುವ ಮೋಕ್ಷಭಿನ್ನವಾದ ಫಲಗಳ ಮಧ್ಯೆ ಕೆಲವು ಹೊಂದಲು ಯೋಗ್ಯವಾದ ಫಲಗಳನ್ನು ದೇವತೆಗಳು ಈಗಾಗಲೇ ಪಡೆದಿರುತ್ತಾರೆ. ಅವರು ಹೊಂದಲು ಯೋಗ್ಯವಲ್ಲದ ಫಲಗಳನ್ನು ಅವರು ಹೊಂದುವುದು ಶಕ್ಯವಲ್ಲವಾದ್ದರಿಂದ ಆ ಫಲಗಳ ವಿಷಯದಲ್ಲಿ ಆ ದೇವತೆಗಳಿಗೆ ಅಪೇಕ್ಷೆಯೇ ಇರುವುದಿಲ್ಲ. ಹೀಗೆ ಅಭಿಪ್ರಾಯವಿರುವ ಜೈಮಿನಿ ಮತವನ್ನು ಅವಲಂಬಿಸಿ ಆಕ್ಷೇಪಿಸುವ ಸೂತ್ರವನ್ನು ಉಪನ್ಯಾಸ ಮಾಡಿ ಭಾಷ್ಯಕಾರರು ''ಮಧ್ವಾದಿಷು'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**॥ ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ ॥೩೧॥**

'ಅಸಾವಾದಿತ್ಯೋ ದೇವಮಧು' ಇತ್ಯಾದಿ ಮಧುವಿದ್ಯೆಗಳಲ್ಲಿ, ಆ ವಿದ್ಯೆಗಳಲ್ಲಿ ಹೇಳಲಾಗಿರುವ ಫಲದ ವಿಷಯದಲ್ಲಿ ಆ ದೇವತೆಗಳಿಗೆ ಅಪೇಕ್ಷೆಯೇ ಇಲ್ಲದಿರುವುದರಿಂದ ಅಧಿಕಾರವಿಲ್ಲವೆಂದು ಜೈಮಿನಿ ಮುನಿಗಳು ಅಭಿಪ್ರಾಯ ಪಡುತ್ತಾರೆ.

**ಭಾಷ್ಯಮ್– 'ವಸೂನಾಮೇವೈಕೋ ಭೂತ್ವಾ' ಇತ್ಯಾದಿನಾ ಪ್ರಾಪ್ಯ-ಫಲತ್ವಾತ್ ಪ್ರಾಪ್ತಪದಾನಾಂ ದೇವಾನಾಂ ಮಧ್ವಾದಿವಿದ್ಯಾಸು ಅನಧಿಕಾರಂ ಜೈಮಿನಿರ್ಮನ್ಯತೇ ॥ ೩೧ ॥**

'ವಸೂನಾಮೇವೈಕೋ ಭೂತ್ವಾ' ಎಂಬ ವಾಕ್ಯದಿಂದ ವಸುಪದವೇ ಮೊದಲಾದ ಪದಗಳು ಆ ವಿದ್ಯೆಗಳಲ್ಲಿ ಹೇಳಿದ ಉಪಾಸನೆ ಮಾಡುವುದರಿಂದ ಲಭಿಸುವ ಪದಗಳೆಂದು ಕೇಳಿ ಬರುವುದರಿಂದ ಆ ಪದಗಳನ್ನು ಈಗಾಗಲೇ ಹೊಂದಿರುವ ದೇವತೆಗಳಿಗೆ ಆ ಮಧು-ವಿದ್ಯೆ ಮೊದಲಾದವುಗಳಲ್ಲಿ ಅಧಿಕಾರವಿಲ್ಲವೆಂದು ಜೈಮಿನಿಗಳು ತಿಳಿಯುತ್ತಾರೆ.

ಭಾ.ದೀ. – ಪ್ರಥಮಮ್ 'ಆದಿ'ಪದೇನ ಶಿಷ್ಟವಾಕ್ಯಂ, ತಥಾ 'ದೇವೋ ಭೂತ್ವಾ ದೇವಾನಪ್ಯೇತಿ' (ಬೃ.೬.೧.೨) ಇತಿ ವಾಜಸನೇಯವಾಕ್ಯಮ್, ತಥಾ 'ಸ ಊರ್ಜಮುಪಗಚ್ಛಂತಿ' ಇತಿ ಶ್ರುತ್ಯಂತರವಾಕ್ಯಂ, ದ್ವಿತೀಯಮಧುವಿದ್ಯಾಂತರ್ಗತಂ 'ರುದ್ರಾಣಾಮೇವೈಕೋ ಭೂತ್ವಾ' (ಛಾಂ.೩.೭.೨) ಇತ್ಯಾದಿಕಂ ಗೃಹ್ಯತೇ। 'ಪ್ರಾಪ್ಯ-ಫಲತ್ವಾದ್' 'ಅಪ್ರಾಪ್ಯಫಲತ್ವಾತ್' ಇತ್ಯುಭಯಥಾ ವಿಚ್ಛೇದಃ । ಅಸ್ಯ ಉಭಯತ್ರಾನ್ವಯಃ। 'ವಸ್ವಾದಿಪದಾನಾಮ್' ಇತಿ ಶೇಷಃ। ತತ್ರ 'ಆದಿ'ಪದೇನ ದೇವರುದ್ರಾದಿಪದಾನಾಂ ಗ್ರಹಣಮ್।

ಯದ್ವಾ – 'ಪ್ರಾಪ್ತಪದಾನಾಮ್' ಇತಿ ಅತ್ರತ್ಯಂ ಪದಾನಾಮ್ ಇತ್ಯೇತದ್ ಬುದ್ಧ್ಯಾ ವಿವಿಚ್ಯ ಅತ್ರ ಧರ್ಮಿತ್ವೇನ ಸಂಬಧ್ಯತೇ । 'ಪ್ರಾಪ್ತಪದಾನಾಮ್' ಇತಿ ಬಹುವ್ರೀಹಿಃ, ಕರ್ಮಧಾರಯಶ್ಚ । ತತ್ರ ಆದ್ಯೋ ಹೇತುಗರ್ಭವಿಶೇಷಣರೂಪಃ । ದ್ವಿತೀಯಸ್ಯ ಉಭಯತ್ರಾನ್ವಯಃ । 'ದೇವಾನಾಮ್' ಇತಿ ಸೂತ್ರೇ ಅಧ್ಯಾಹೃತಂ ಪದಂ, ಪ್ರಕರಣಲಬ್ಧಂ ವಾ । ಮಧುಶಬ್ದೋ 'ಮಧು' ಇತ್ಯುಪಕ್ರಮ್ಯ ಆಮ್ನಾತ-ಪ್ರಥಮದ್ವಿತೀಯಾದ್ಯಮೃತವಿದ್ಯಾಪರಃ । ಅತ್ರ 'ಆದಿ'ಶಬ್ದೇನ ವಸ್ವಾದಿಪದಫಲಕ-ಕರ್ಮವಿದ್ಯಾ ವಾಜಸನೇಯೋಕ್ತವಾಗಾದಿವಿದ್ಯಾಶ್ಚ ಗೃಹ್ಯಂತೇ । ಏತಚ್ಚ ಆವರ್ತ-ನೀಯಮ್ । 'ಅಸಂಭವಾತ್' ಇತಿ ಸೌತ್ರೋ ಹೇತುರತ್ರಾಪಿ ಸಂಯೋಜ್ಯಃ । ತದುಪಪಾದಕೋಕ್ತ್ಯೈವ ತದುಕ್ತಿರ್ಭವತಿ ಇತಿ ತಸ್ಯ ಸಾಕ್ಷಾತ್ ಅನುಕ್ತಿಃ ।

ಯದ್ವಾ – ಪ್ರಾಪ್ತಪದಾನಾಮ್ ಅಪ್ರಾಪ್ಯಫಲತ್ವಾತ್ ಇತ್ಯುಕ್ತ್ಯೈವ ತಸ್ಯೋ-ಕ್ತತ್ವಾತ್ ಅಸಂಭವಾತ್ ಇತಿ ನ ಸಂಯೋಜ್ಯಮ್ । ತಥಾ ಚೇತ್ಥಂ ಭಾಷ್ಯ-ಯೋಜನಾ – ಮಧ್ವಾದಿವಿದ್ಯಾಸು 'ಅಸೌ ವಾ ಆದಿತ್ಯೋ ದೇವಮಧು' ಇತಿ ಪ್ರಸ್ತುತ್ಯಾಽಮ್ನಾತೇನ 'ಸ ಏತದೇವಾಮೃತಂ ವೇದ ವಸೂನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ' ಇತ್ಯಾದಿ ವಾಕ್ಯೇ 'ಪದಾನಾಂ' - ವಸ್ವಾದಿಪದಾನಾಂ 'ಪ್ರಾಪ್ಯಫಲತ್ವಾತ್' - ಮಧ್ವಾದಿವಿದ್ಯಾಸು ಉಕ್ತೋಪಾಸನಾಪ್ರಾಪ್ಯಫಲತ್ವಶ್ರವಣಾತ್ 'ಪ್ರಾಪ್ತಪದಾನಾಂ ಚ' ವಸ್ವಾದಿ-ದೇವಾನಾಂ ಪ್ರಾಪ್ತಸ್ವಪದತ್ವೇನ 'ಅಸಂಭವಾತ್' ತದರ್ಥಿತ್ವಾಸಂಭವಾತ್ 'ದೇವಾನಾಂ' ದೇವೈಃ ಪ್ರಾಪ್ತಪದಾನಾಂ ಪುನಸ್ತೈಃ 'ಅಪ್ರಾಪ್ಯಫಲತ್ವಾತ್' ಅಪ್ರಾರ್ಥ್ಯಫಲತ್ವಾದ್ ಇತಿ ವಾ ।

ದ್ವಿತೀಯವಿದ್ಯಾದ್ಯಮೃತವಿದ್ಯಾಫಲಾನಾಂ ರುದ್ರಾದಿಪದಾನಾಂ ಚ ವಸ್ವಾದಿ-ದೇವಾನಾಮ್ 'ಅಪ್ರಾಪ್ಯಫಲತ್ವಾತ್' ಪ್ರಾಪ್ತುಮಯೋಗ್ಯಫಲತ್ವಾತ್ ತತ್ರಾಪಿ ಅರ್ಥಿತ್ವಾಸಂಭವಾತ್ ತೇಷಾಂ ಮಧ್ವಾದಿವಿದ್ಯಾಸು 'ಅನಧಿಕಾರಮ್ ಅಧಿಕಾರಾ-

ಭಾವಂ ಜೈಮಿನಿರ್ಮನ್ಯತೇ' ಇತಿ । 'ಜೈಮಿನಿ'ಗ್ರಹಣೇನ 'ಆಪ್ತತಮೇನ ಜೈಮಿನಿನಾ ಏವಂ ಮತತ್ವಾಚ್ಚ ನ ತೇಷಾಮ್ ಅಧಿಕಾರಃ' ಇತಿ ಯುಕ್ತ್ಯಂತರಂ ಸೂಚ್ಯತೇ ।

ಅನೇನ – 'ಮಧ್ವಾದಿಷು' - 'ಅಸೌ ವಾ ಆದಿತ್ಯೋ ದೇವಮಧು - ಇತ್ಯಾದಿ ಮಧುವಿದ್ಯಾಸು ದೇವಾನಾಮ್ 'ಅನಧಿಕಾರಮ್' ಅಧಿಕಾರಾಭಾವಂ ಜೈಮಿನಿರ್ಮನ್ಯತೇ । ಕಸ್ಮಾದ್ಧೇತೋಃ 'ಅಸಂಭವಾತ್' ತೈಃ ತದ್ವಿದ್ಯಾಸು ಉಕ್ತಫಲಾನಾಂ ಮಧ್ಯೇ ಕೇಷಾಂಚಿದ್ ಯೋಗ್ಯಾನಾಂ ಪ್ರಾಪ್ತತ್ವೇನ ಕೇಷಾಂಚಿತ್ ಪ್ರಾಪ್ತುಮಯೋಗ್ಯತ್ವೇನ ತೇಷಾಂ ತತ್ರ ಅರ್ಥಿತ್ವಾಸಂಭವಾತ್ ಇತಿ ಆಪ್ತತಮೋ ಜೈಮಿನಿರ್ಮನ್ಯತೇ – ಇತಿ ಸೂತ್ರಾರ್ಥ ಉಕ್ತೋ ಭವತಿ ।

ಭಾಷ್ಯದಲ್ಲಿ ಮೊದಲನೆಯ ಆದಿಪದದಿಂದ 'ವಸೂನಾಮೇವೈಕೋ ಭೂತ್ವಾ' ಎಂಬ ವಾಕ್ಯದ ಉಳಿದ ಭಾಗ, ಹಾಗೆಯೇ 'ದೇವೋ ಭೂತ್ವಾ ದೇವಾನಪ್ಯೇತಿ' ಎಂಬ ಬೃಹದಾರಣ್ಯಕವಾಕ್ಯ, ಹಾಗೆಯೇ 'ಸ ಊರ್ಜಮುಪಗಚ್ಛತಿ' ಎಂಬ ಮತ್ತೊಂದು ಶ್ರುತಿವಾಕ್ಯ , ಮತ್ತು ಎರಡನೆಯ ಮಧುವಿದ್ಯೆಯಲ್ಲಿ ಇರುವ 'ರುದ್ರಾಣಾಮೇವ ಏಕೋ ಭೂತ್ವಾ' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಇತ್ಯಾದಿನಾ ಪ್ರಾಪ್ಯಫಲತ್ವಾತ್ ಎಂಬಲ್ಲಿ 'ಪ್ರಾಪ್ಯಫಲತ್ವಾತ್' 'ಅಪ್ರಾಪ್ಯಫಲತ್ವಾತ್' ಎಂದು ಎರಡು ರೀತಿಯ ಪದಚ್ಛೇದವಿದೆ. ಇತ್ಯಾದಿನಾ ಎಂಬ ಪದಕ್ಕೆ ಎರಡೂ ಕಡೆ ಅನ್ವಯವಿರುವುದು. 'ವಸ್ವಾದಿಪದಾನಾಮ್' ಎಂಬ ಪದವು ಶೇಷವಾಗಿದೆ. ಇಲ್ಲಿರುವ ಆದಿಪದದಿಂದ ದೇವರುದ್ರ ಮೊದಲಾದ ಪದಗಳನ್ನು ಗ್ರಹಿಸಬೇಕು.

ಯದ್ವಾ – 'ಪ್ರಾಪ್ತಪದಾನಾಮ್' ಎಂಬಲ್ಲಿರುವ 'ಪದಾನಾಂ' ಎಂಬ ಅಂಶವನ್ನು ಮನಸ್ಸಿನಿಂದಲೇ ಪ್ರತ್ಯೇಕಗೊಂಡಿದ್ದು ಇಲ್ಲಿ ಧರ್ಮಿಯಾಗಿ ಸಂಬಂಧವನ್ನು ಪಡೆಯುವುದು. 'ಪ್ರಾಪ್ತಪದಾನಾಮ್' ಎಂಬ ಪದವು ಬಹುವ್ರೀಹಿ ಮತ್ತು ಕರ್ಮಧಾರಯ ಎರಡೂ ಆಗಿರುವುದು. ಅವುಗಳಲ್ಲಿ ಮೊದಲನೆಯದು ಹೇತುಗರ್ಭವಿಶೇಷಣವಾಗಿದೆ. ಎರಡನೆಯ ಪದಕ್ಕೆ ಎರಡೂ ಕಡೆ ಅನ್ವಯವಿದೆ. ಸೂತ್ರದಲ್ಲಿ 'ದೇವಾನಾಂ' ಎಂಬ ಪದವು ಅಧ್ಯಾಹಾರದಿಂದ ಅಥವಾ ಪ್ರಕರಣಬಲದಿಂದ ಲಭಿಸುವುದು. ಮಧುಶಬ್ದವು

'ಮಧು' ಎಂದು ಆರಂಭವಾಗಿ ಹೇಳಲಾಗಿರುವ ಪ್ರಥಮಮಧುವಿದ್ಯೆ ದ್ವಿತೀಯಮಧು-ವಿದ್ಯೆ ಮೊದಲಾದ ಅಮೃತವಿದ್ಯೆಗಳನ್ನು ಹೇಳುವ ತಾತ್ಪರ್ಯವುಳ್ಳದ್ದು. ಇಲ್ಲಿ ಆದಿ-ಶಬ್ದದಿಂದ ವಸುಮೊದಲಾದ ಪದಗಳೇ ಫಲವಾಗಿರುವ ಕರ್ಮವಿದ್ಯೆಗಳು ಬೃಹದಾ-ರಣ್ಯಕದಲ್ಲಿ ಉಕ್ತವಾಗಿರುವ ವಾಗಾದಿವಿದ್ಯೆಗಳು ಗ್ರಹಿಸಲ್ಪಡುತ್ತವೆ. ಈ ಆದಿಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. 'ಅಸಂಭವಾತ್' ಎಂಬ ಸೂತ್ರದಲ್ಲಿ ಹೇಳಿರುವ ಹೇತು-ವನ್ನು ಇಲ್ಲೂ ಸಂಯೋಜಿಸಬೇಕು. ಆ ಅಸಂಭವವನ್ನು ಸಮರ್ಥಿಸುವ ಮಾತಿನಿಂದಲೇ ಅದನ್ನು ಹೇಳಿದಂತಾಗುವುದು ಎಂಬ ಅಭಿಪ್ರಾಯದಿಂದ ಆ ಅಸಂಭವವನ್ನು ಇಲ್ಲಿ ಸಾಕ್ಷಾತ್ತಾಗಿ ಹೇಳಲಾಗಿಲ್ಲ.

ಅಥವಾ – 'ಪ್ರಾಪ್ತಪದಾನಾಮಪ್ರಾಪ್ಯಫಲತ್ವಾತ್' ಎಂಬ ಪದಗಳಿಂದಲೇ ಆ ಅಸಂಭವವನ್ನು ಹೇಳಿರುವುದರಿಂದ ಇಲ್ಲಿ ಅಸಂಭವಾತ್ ಎಂಬ ಪದವನ್ನು ಸಂಯೋ-ಜಿಸಬೇಕಾಗಿಲ್ಲ.

ತಥಾ ಚ – ಭಾಷ್ಯದ ಯೋಜನೆ ಹೀಗಿರುವುದು – ಮಧುವಿದ್ಯೆ ಮೊದಲಾದ ವಿದ್ಯೆಗಳಲ್ಲಿ 'ಅಸೌ ವಾ ಆದಿತ್ಯೋ ದೇವಮಧು' ಎಂದು ಆರಂಭಿಸಿ ಹೇಳಲಾಗಿರುವ 'ಸ ಏತದೇವಾಮೃತಂ ವೇದ ವಸೂನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನ ಏತದೇವಾಮೃತಂ ದೃಷ್ಟ್ವಾ ತೃಪ್ಯತಿ' ಇತ್ಯಾದಿ ವಾಕ್ಯದಲ್ಲಿ 'ಪದಾನಾಂ' ವಸು ಮೊದಲಾದ ಪದಗಳು 'ಪ್ರಾಪ್ಯಫಲತ್ವಾತ್' - ಮಧ್ವಾದಿವಿದ್ಯೆಗಳಲ್ಲಿ ಹೇಳಲಾಗಿರುವ ಉಪಾಸನೆಯಿಂದ ಲಭಿಸುವ ಫಲಗಳೆಂದು ಶ್ರುತವಾಗಿರುವುದರಿಂದ 'ಪ್ರಾಪ್ತಪದಾನಾಂ ಚ' ವಸು ಮೊದಲಾದ ದೇವತೆಗಳು ಈಗಾಗಲೇ ತಮ್ಮ ತಮ್ಮ ಪದಗಳನ್ನು ಹೊಂದಿ-ರುವುದರಿಂದ 'ಅಸಂಭವಾತ್' ಆ ಪದದ ಅಪೇಕ್ಷೆಯು ಅವರಿಗೆ ಇರುವುದು ಇಲ್ಲದಿರುವುದರಿಂದ; ಅಥವಾ, 'ದೇವಾನಾಂ' - ದೇವತೆಗಳಿಂದ 'ಪ್ರಾಪ್ತಪದಾನಾಂ' ಆ ಪದಗಳನ್ನು ಪಡೆದಿರುವವರಿಂದ, 'ಪುನಃ' ಆ ದೇವತೆಗಳಿಂದ 'ಅಪ್ರಾಪ್ಯಫಲತ್ವಾತ್' ಆ ಪದಗಳು ಪ್ರಾರ್ಥನೆ ಮಾಡಲು ಯೋಗ್ಯವಲ್ಲದ ಫಲವಾಗಿರುವುದರಿಂದ ಎಂದು ಅರ್ಥ. ದ್ವಿತೀಯವಿದ್ಯೆಯೇ ಮೊದಲಾದ ಅಮೃತವಿದ್ಯೆಗೆ ಫಲವಾದ ರುದ್ರಾದಿ ಪದಗಳಾದರೋ ವಸುಮೊದಲಾದ ದೇವತೆಗಳಿಗೆ 'ಅಪ್ರಾಪ್ಯಫಲತ್ವಾತ್' ಹೊಂದಲು

ಯೋಗ್ಯವಲ್ಲದ ಪದಗಳಾಗಿರುವುದರಿಂದ ಅವುಗಳ ವಿಷಯದಲ್ಲೂ ಅವರಿಗೆ ಅಪೇಕ್ಷೆ ಇಲ್ಲದಿರುವುದರಿಂದ ಆ ದೇವತೆಗಳಿಗೆ ಮಧ್ವಾದಿ ವಿದ್ಯೆಗಳಲ್ಲಿ 'ಅನಧಿಕಾರಂ' ಅಧಿಕಾರವಿಲ್ಲವೆಂದು ಜೈಮಿನಿಃ ಮನ್ಯತೇ – ಜೈಮಿನಿಗಳು ತಿಳಿಯುತ್ತಾರೆ ಎಂದು. ಸೂತ್ರದಲ್ಲಿ 'ಜೈಮಿನಿ'ಪದವನ್ನು ಗ್ರಹಿಸಿರುವುದರಿಂದ ಅತ್ಯಂತ ಆಪ್ತರಾದ ಜೈಮಿನಿಗಳಿಂದ ಹೀಗೆ ಅಭಿಪ್ರೇತವಾಗಿರುವುದರಿಂದಲೂ ಕೂಡ ದೇವತೆಗಳಿಗೆ ಅಧಿಕಾರವಿಲ್ಲವೆಂಬ ವಿಷಯದಲ್ಲಿ ಮತ್ತೊಂದು ಯುಕ್ತಿಯೂ ಸೂಚಿತವಾಗುವುದು.

ಇದರಿಂದ 'ಮಧ್ವಾದಿಷು' 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿ ಮಧುವಿದ್ಯೆಗಳಲ್ಲಿ ದೇವತೆಗಳಿಗೆ 'ಅನಧಿಕಾರಮ್' ಅಧಿಕಾರವಿಲ್ಲವೆಂದು 'ಜೈಮಿನಿರ್ಮನ್ಯತೇ' ಜೈಮಿನಿಗಳು ತಿಳಿಯುತ್ತಾರೆ. ಯಾವ ಹೇತುವಿನಿಂದ? 'ಅಸಂಭವಾತ್' ಆ ವಿದ್ಯೆಗಳಲ್ಲಿ ಹೇಳಲಾಗದ ಪದಗಳ ಮಧ್ಯೆ ಯೋಗ್ಯವಾದ ಕೆಲವು ಪದಗಳು ಈಗಾಗಲೇ ಪ್ರಾಪ್ತವಾಗಿರುವುದರಿಂದ ಮತ್ತೆ ಕೆಲವು ಪದಗಳನ್ನು ಪಡೆಯಲು ಯೋಗ್ಯತೆ ಇಲ್ಲದಿರುವುದರಿಂದ ಆ ದೇವತೆಗಳಿಗೆ ಆ ಫಲಗಳಲ್ಲಿ ಅಪೇಕ್ಷೆಯೇ ಇಲ್ಲದಿರುವುದರಿಂದ ಎಂದು ಆಪ್ತತಮರಾದ ಜೈಮಿನಿಗಳು ತಿಳಿಯುತ್ತಾರೆ - ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಛಾಂದೋಗ್ಯೇ ಹಿ – 'ಅಸೌ ವಾ ಆದಿತ್ಯಃ' ಇತ್ಯನೇನ ಆದಿತ್ಯಸ್ಯ ವಿಷ್ಣೋಃ ಪರಮಾನಂದತ್ವೇನ ಮಧುತ್ವಮುಕ್ತ್ವಾ, 'ಸ ಏತತ್' ಇತ್ಯಾದಿನಾ ಮಧುಶಬ್ದಿತಸ್ಯ ಭಗವತ ಆದಿತ್ಯಮಂಡಲಸ್ಯ ಪೂರ್ವದಕ್ಷಿಣಪಶ್ಚಿಮೋತ್ತರೋರ್ಧ್ವರಶ್ಮಿಷು ಸ್ಥಿತಾನಾಂ ಪ್ರಥಮಾಮೃತಾದಿಶಬ್ದಪಂಚಕವಾಚ್ಯವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧನಾರಾಯಣಾಖ್ಯಪಂಚರೂಪಾಣಾಂ ಮಧ್ಯೇ ಪ್ರಾಚ್ಯಾದಿತತ್ತದ್ ದಿಕ್‌ಸ್ಥಿತೈಃ ತತ್ತದ್ ಪದಯೋಗ್ಯೈರ್ವಸುರುದ್ರಾದಿತ್ಯಮರುತ್ಸಾಧ್ಯಪದೋಕ್ತಋಜುರೂಪಪಂಚಗಣಶ್ರೇಷ್ಠೈರ್ದೇವೈಃ ಕ್ರಮೇಣ ಅಗ್ನಿವಾಯ್ವಿಂದ್ರಸೋಮವಿರಿಂಚಪ್ರಧಾನಕೈರಗ್ನ್ಯಾದಿಮುಖೇನೈಕೈಕೋಪಾಸ್ತೌ ಕೃತಾಯಾಂ ತದಪರೋಕ್ಷಜ್ಞಾನಜನಿತತತ್ಪ್ರಸಾದದ್ವಾರಾ ವಸ್ವಾದಿಪದಪ್ರಾಪ್ತಿಸ್ತತ್ತದ್ ಗಣಸ್ಥಾನಾಂ ಭವತಿ – ಇತ್ಯುಚ್ಯತೇ ।

ತಥಾ ಚ 'ಯಃ'- ಅಧಿಕಾರೀ, 'ಏತದ್ ಅಮೃತಂ' - ವಾಸುದೇವಾಖ್ಯಂ ರೂಪಮ್ 'ಏವಮ್' ಉಕ್ತಪ್ರಕಾರೇಣ 'ವೇದ' - 'ಸ ಚ ವಸೂನಾಮಪ್ಯೇಕೋ ಭೂತ್ವಾ' ವಸುಭೋಗ್ಯದೇಶಕಾಲಾಧಿಪೋ ಭೂತ್ವಾ, 'ಅಗ್ನಿನಾ ಮುಖೇನ' ತತ್ಪ್ರಾಧಾನ್ಯೇನ ತದುಪದೇಶೇನ ಇತಿ ಯಾವತ್ । 'ಏತದೇವಾಮೃತಂ' ವಾಸುದೇವಾಖ್ಯಂ 'ದೃಷ್ಟ್ವಾ' ಸಾಕ್ಷಾತ್ಕೃತ್ಯ 'ತೃಪ್ಯತಿ' ಮುಕ್ತೋ ಭವತಿ - ಇತ್ಯರ್ಥಃ।

ಏವಂ 'ಯಃ' ದೇವತ್ವಯೋಗ್ಯೋಽಧಿಕಾರೀ ವಾಕ್‌ಪ್ರಾಣಶ್ಚಕ್ಷುಃಶ್ರೋತ್ರಮನೋಹೃದಯನಾಮಕಂ ಬ್ರಹ್ಮೋಪಾಸ್ತೇ ಸ ದೇವತ್ವಮಪ್ಯೇತಿ ತತೋ 'ದೇವೋ ಭೂತ್ವಾ' ಸ್ವೋತ್ತಮದೇವೇಷು ಸಾಯುಜ್ಯಂ ಪ್ರಾಪ್ಯ ದೇವಾನ್ ಶ್ವೇತದ್ವೀಪಗತಭಗವದ್ರೂಪವಿಶೇಷಾನ್ ಚತುರ್ಮುಖಬ್ರಹ್ಮಣಾ ಸಹಾಪ್ಯೇತಿ । ಸೋಽಧಿಕಾರೀ 'ಊರ್ಜಮ್' ಅನ್ನಮ್ 'ಉಪಗಚ್ಛತಿ' ಯಥೇಷ್ಟಂ ಪ್ರಾಪ್ನೋತಿ – ಇತಿ ಶ್ರುತ್ಯಂತರಾರ್ಥಃ ।

ಛಾಂದೋಗ್ಯದಲ್ಲಾದರೋ –'ಅಸೌ ವಾ ಆದಿತ್ಯಃ' ಎಂಬ ವಾಕ್ಯದಿಂದ ಆದಿತ್ಯನೆನಿಸುವ ವಿಷ್ಣುವಿಗೆ ಪರಮಾನಂದಸ್ವರೂಪನಾದದ್ದರಿಂದ ಮಧು ಎಂದು ಹೇಳಿ 'ಸ ಏತತ್' ಎಂಬ ವಾಕ್ಯದಿಂದ ಮಧುಶಬ್ದವಾಚ್ಯನಾದ ಭಗವಂತನಿಗೆ ಆದಿತ್ಯಮಂಡಲದ ಪೂರ್ವದಕ್ಷಿಣಪಶ್ಚಿಮಉತ್ತರ ಮತ್ತು ಊರ್ಧ್ವ ರಶ್ಮಿಗಳಲ್ಲಿ ಇರುವ ಪ್ರಥಮ ಅಮೃತ ಮೊದಲಾದ ಐದುಶಬ್ದಗಳಿಂದ ವಾಚ್ಯವಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ ನಾಮಕವಾದ ಪಂಚರೂಪಗಳ ಮಧ್ಯೆ ಪೂರ್ವ ಮೊದಲಾದ ಆಯಾಯ ದಿಕ್ಕಿನಲ್ಲಿ ಇರುವ ಆಯಾಯ ಪದಕ್ಕೆ ಯೋಗ್ಯರಾದ ವಸು, ರುದ್ರ, ಆದಿತ್ಯ, ಮರುತ್ ಮತ್ತು ಸಾಧ್ಯ ಎಂಬ ಪದಗಳಿಂದ ಉಕ್ತರಾದ ಋಜು ಎಂಬ ಐದು ಗಣದಲ್ಲಿರುವ ಕ್ರಮವಾಗಿ ಅಗ್ನಿ, ವಾಯು, ಇಂದ್ರ, ಸೋಮ, ವಿರಿಂಚ ಇವರೇ ಪ್ರಮುಖರಾಗಿರುವ ದೇವತೆಗಳಿಂದ ಅಗ್ನಿ ಮೊದಲಾದವರ ಮೂಲಕ ಒಂದೊಂದು ಉಪಾಸನೆಯನ್ನು ಮಾಡಿದಾಗ ಆಯಾಯ ಭಗವದ್ರೂಪದ ಅಪರೋಕ್ಷಜ್ಞಾನದಿಂದ ಲಭಿಸುವ ಭಗವಂತನ ಪ್ರಸಾದದಿಂದಾಗಿ ವಸು ಮೊದಲಾದ ಪದಗಳ ಪ್ರಾಪ್ತಿಯು ಆಯಾಯ ಗಣದಲ್ಲಿದ್ದವರಿಗೆ ಆಗುವುದೆಂದು - ಹೇಳಿದೆ.

ತಥಾ ಚ – 'ಯಃ' ಯಾವ ಅಧಿಕಾರಿಯು 'ಏತದಮೃತಂ' ವಾಸುದೇವ ನಾಮಕವಾದ ರೂಪವನ್ನು 'ಏವಮ್' ಇಲ್ಲಿ ಹೇಳಿದ ರೀತಿಯಿಂದ 'ವೇದ' ತಿಳಿಯುವನೋ 'ಸ ಚ ವಸೂನಾಮಪ್ಯೇಕೋ ಭೂತ್ವಾ' ವಸುಪದವನ್ನು ಹೊಂದಿದವರಿಂದ ಯೋಗ್ಯವಾದ ದೇಶಕಾಲಗಳಿಗೆ ಅಧಿಪತಿಯಾಗಿ 'ಅಗ್ನಿನಾ ಮುಖೇನ' ಅಗ್ನಿಪ್ರಧಾನನಾಗಿ ಅಂದರೆ ಅಗ್ನಿಯ ಉಪದೇಶದಿಂದ ಎಂದು ಅಭಿಪ್ರಾಯ. 'ಏತದೇವಾಮೃತಂ' ವಾಸುದೇವನಾಮಕವಾದ ಭಗವಂತನನ್ನು 'ದೃಷ್ಟ್ವಾ' ಸಾಕ್ಷಾತ್ಕರಿಸಿ 'ತೃಪ್ಯತಿ' ಮುಕ್ತನಾಗುವನು – ಎಂದರ್ಥ.

ಇದೇ ರೀತಿಯಾಗಿ 'ಯಃ' ದೇವತ್ವಯೋಗ್ಯನಾದ ಯಾವ ಅಧಿಕಾರಿಯು ವಾಕ್, ಪ್ರಾಣ, ಚಕ್ಷು, ಶ್ರೋತ್ರ, ಮನಸ್ಸು, ಹೃದಯ ನಾಮಕನಾದ ಬ್ರಹ್ಮನನ್ನು ಉಪಾಸನೆ ಮಾಡುವನೋ ಅವನು 'ದೇವತ್ವಮಪ್ಯೇತಿ' ದೇವತ್ವವನ್ನು ಹೊಂದುವನು. ಅನಂತರ 'ದೇವೋ ಭೂತ್ವಾ' ಸ್ವೋತ್ತಮದೇವತೆಗಳಲ್ಲಿ ಸಾಯುಜ್ಯವನ್ನು ಪಡೆದು, 'ದೇವಾನ್' ಶ್ವೇತದ್ವೀಪದಲ್ಲಿರುವ ಭಗವಂತನ ರೂಪವಿಶೇಷಗಳನ್ನು ಚತುರ್ಮುಖಬ್ರಹ್ಮನಿಂದ ಸಹಿತನಾಗಿ 'ಅಪ್ಯೇತಿ' ಹೊಂದುವನು. 'ಸಃ' ಆ ಅಧಿಕಾರಿಯು 'ಊರ್ಜಮ್' ಅನ್ನವನ್ನು ಉಪಗಚ್ಛತಿ' - ಯಥೇಷ್ಟವಾಗಿ ಪಡೆಯುವನು ಎಂದು ಇನ್ನೊಂದು ಶ್ರುತಿಯ ಅರ್ಥ.

ಭಾ.ದೀ. – ನನು ಮಾಽಸ್ತು ಮೋಕ್ಷೇತರಫಲವಿದ್ಯಾಸು ಅಧಿಕಾರೋ ದೇವಾನಾಂ, ತಥಾಽಪಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' (ತೈ.೨.೧.೧) ಇತ್ಯಾದಿಮೋಕ್ಷಾರ್ಥವಿದ್ಯಾಸು ಅಧಿಕಾರೋ ಭವಿಷ್ಯತಿ, ತತ್ರ ಅರ್ಥಿತ್ವಸಂಭವಾದ್ ಇತ್ಯಾಶಂಕಾಂ ಪರಿಹರತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಜ್ಯೋತಿಷೀತಿ ॥

ಶಂಕೆ – ಮೋಕ್ಷೇತರಫಲಕಗಳಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿರಲಿ. ಆದರೂ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಮೋಕ್ಷಫಲಕವಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿದ್ದೇ ಇರುವುದು. ಏಕೆಂದರೆ, ಅಂತಹ ಫಲಗಳಲ್ಲಿ ಅವರಿಗೆ ಅಪೇಕ್ಷೆ ಇದ್ದೇ ಇರುವುದು.

ಸಮಾಧಾನ – ಈ ಆಶಂಕೆಯನ್ನು ಪರಿಹರಿಸುವ "ಜ್ಯೋತಿಷಿ" ಎಂಬ ಸೂತ್ರವನ್ನು ಪಠಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ಜ್ಯೋತಿಷಿ ಭಾವಾಚ್ಚ ಓಂ ॥ ೩೨ ॥**

ಸೂರ್ಯಪ್ರಕಾಶದಲ್ಲಿ ಹೇಗೋ ಹಾಗೆ ದೇವತೆಗಳ ಸರ್ವ-ವಿಷಯಕಜ್ಞಾನದಲ್ಲಿ ಎಲ್ಲ ವಸ್ತುಗಳೂ ವಿಷಯವಾಗಿರುವುದರಿಂದ ಮೋಕ್ಷಸಾಧನವಾದ ಜ್ಞಾನವು ಅವರಿಗೆ ಸಿದ್ಧವೇ ಆಗಿದೆ. (ಆದ್ದ-ರಿಂದ ಮೋಕ್ಷವೂ ಅವರಿಗೆ ಸಿದ್ಧಫಲದಂತೆ ಆಗಿರುವುದರಿಂದ ದೇವತೆಗಳಿಗೆ ಅಪೇಕ್ಷೆ ಇರುವುದಿಲ್ಲ.)

**ಭಾಷ್ಯಮ್ – ಜ್ಯೋತಿಷಿ ಸರ್ವಜ್ಞತ್ವೇ ಭಾವಾಚ್ಚ ಆದಿತ್ಯಪ್ರಕಾಶೇऽಂತ-ರ್ಭಾವವತ್ ತಜ್ಜ್ಞಾನೇ ಸರ್ವವಸ್ತೂನಾಮಂತರ್ಭಾವಾತ್ । ನಿತ್ಯಸಿದ್ಧತ್ವಾಚ್ಚ ವಿದ್ಯಾನಾಮ್ ॥ ೩೨ ॥**

'ಜ್ಯೋತಿಷಿ' - ಅಂದರೆ, ದೇವತೆಗಳ ಸರ್ವವಿಷಯಕವಾದ ಜ್ಞಾನ-ದಲ್ಲಿ 'ಭಾವಾಚ್ಚ'- ಸೂರ್ಯಪ್ರಕಾಶದಲ್ಲಿ ಎಲ್ಲವಸ್ತುಗಳೂ ವಿಷಯವಾಗಿ ಅಂತರ್ಭಾವಗೊಂಡಿರುವಂತೆ ದೇವತೆಗಳ ಜ್ಞಾನ-ದಲ್ಲಿ (ಎಲ್ಲವೂ) ಎಲ್ಲವಸ್ತುಗಳೂ ವಿಷಯವಾಗಿ ಅಂತರ್ಭಾವ-ವನ್ನು ಪಡೆದಿವೆ. ದೇವತೆಗಳು ಸರ್ವಜ್ಞರಾದ್ದರಿಂದ ಎಲ್ಲ ರೀತಿಯ ಫಲಗಳಿಗೆ ಸಾಧನವಾದ ಜ್ಞಾನಗಳು ಅವರಿಗೆ ನಿತ್ಯಸಿದ್ಧವೇ ಆಗಿವೆ.

ಭಾ.ದೀ. – 'ಜ್ಯೋತಿಷಿ' ಇತಿ ಸೂತ್ರಪದಾನುವಾದಃ । ತಸ್ಯ ವ್ಯಾಖ್ಯಾನಮ್ – ಸರ್ವಜ್ಞತ್ವ ಇತಿ ॥ ಯದ್ಯಪಿ 'ಜ್ಞಾನೇ' ಇತಿ ವ್ಯಾಖ್ಯೇಯಮ್, ತಥಾऽಪಿ ವಿಷಯಾ-ವಿಶೇಷಿತಜ್ಞಾನಸ್ಯ ಅನಿರೂಪ್ಯತ್ವಾತ್ ಯತ್ಕಿಂಚಿದ್ ವಿಷಯಕೇ ಜ್ಞಾನೇ ವಿಷಯ-ತಯಾ ಸರ್ವಭಾವಸ್ಯ ಅಸಿದ್ಧತ್ವಾತ್ ತಜ್ಜ್ಞಾಪನಾಯ 'ಸರ್ವಜ್ಞತ್ವೇ' ಇತಿ

ವ್ಯಾಖ್ಯಾತಮ್। ತೇನ ಸೂತ್ರೇ 'ವಸೂನಾಮ್' ಇತ್ಯಂತರ್ಭಾವಸಂಬಂಧಿ ಜ್ಞಾಪಕಂ ಪದಮಧ್ಯಾಹಾರ್ಯಮಿತಿ ಸೂಚಿತಂ ಭವತಿ।

'ಚಃ' ಸಮುಚ್ಚಯೇ। ಅಸ್ಯ ಹೇತೋಃ 'ಅಸಂಭವಾತ್' ಇತ್ಯನುವೃತ್ತಹೇತು-ದ್ವಾರಾ ಮಧ್ವಾದಿಷ್ವನಧಿಕಾರಂ ಮನ್ಯತೇ ಇತಿ ಪೂರ್ವೇಣಾನ್ವಯಃ। ಅನೇನ 'ಮಧ್ವಾದಿಷು' ಇತ್ಯಾದಿಶಬ್ದೇನ ಮೋಕ್ಷಾರ್ಥವಿದ್ಯಾ ಅಪಿ ಗ್ರಾಹ್ಯಾಃ। 'ಜ್ಯೋತಿಃ' ಶಬ್ದಶ್ಚ ಆವರ್ತನೀಯಃ, ಜ್ಯೋತಿಷೀವ ಜ್ಯೋತಿಷೀತಿ। ಸಪ್ತಮೀ ಚ 'ಚೈತ್ರರಥಸ್ಯ ಬುದ್ಧೌ ಶಾಸ್ತ್ರಾರ್ಥಃ' ಇತಿವದ್ ಯುಜ್ಯತ ಇತಿ ಸೂಚಿತಮ್। ಕಥಂ ವಸೂನಾಂ ಜ್ಞಾನೇಽಂತರ್ಭಾವ ಇತ್ಯತಃ ಸರ್ವಜ್ಞತ್ವೇ ಭಾವಾತ್ ಇತಿ ಸ್ವಪದೇ ವರ್ಣಯತಿ – ಆದಿತ್ಯ ಇತಿ ॥ ಸರ್ವವಸೂನಾಮಾದಿತ್ಯಪ್ರಕಾಶೇಽಂತರ್ಭಾವವತ್ ತದ್ ಗೃಹೀತತತ್ತ್ವವತ್ ತಜ್ಜ್ಞಾನೇ 'ತದುಪರಿ' ಇತಿ ಪ್ರಸ್ತುತದೇವತಾಕರ್ತೃಕಜ್ಞಾನೇ ಸರ್ವವಸೂನಾಮ್ 'ಅಂತರ್ಭಾವಾತ್' ವಿಷಯೀಭೂತತ್ವಾತ್ ಇತ್ಯರ್ಥಃ। ಅಭಿಪ್ರಾಯಂ ವ್ಯನಕ್ತಿ – ನಿತ್ಯೇತಿ ॥ ದೇವಾನಾಂ ಸಾರ್ವಜ್ಞೇನ 'ವಿದ್ಯಾನಾಂ' ಸರ್ವಬ್ರಹ್ಮಕರ್ಮವಿದ್ಯಾಸಾಧ್ಯಜ್ಞಾನಾನಾಂ 'ನಿತ್ಯಸಿದ್ಧತ್ವಾತ್' ನಿಯಮೇನ ಪ್ರಾಪ್ತತ್ವಾತ್ ಇತ್ಯರ್ಥಃ।

ಭಾಷ್ಯದಲ್ಲಿ ''ಜ್ಯೋತಿಷಿ'' ಎಂಬ ಪದವು ಸೂತ್ರದಲ್ಲಿರುವ ಪದದ ಅನು-ವಾದವಾಗಿದೆ. ''ಸರ್ವಜ್ಞತ್ವೇ'' ಎಂಬ ಪದವು ಆ ಪದದ ಅನುವಾದವಾಗಿದೆ. ಯದ್ಯಪಿ ಭಾಷ್ಯದಲ್ಲಿ ಜ್ಯೋತಿಷಿ ಎಂಬ ಪದಕ್ಕೆ 'ಜ್ಞಾನೇ' ಎಂದು ವ್ಯಾಖ್ಯಾನ ಮಾಡಬೇಕಾಗಿತ್ತು. ಆದರೂ ಯಾವುದೇ ವಿಷಯವನ್ನು ವಿಶೇಷಣವಾಗಿ ಹೊಂದದ ಜ್ಞಾನವನ್ನು ತಿಳಿಸಲು ಸಾಧ್ಯವಿಲ್ಲದಿರುವುದರಿಂದ, ಯಾವುದೋ ಒಂದು ವಸ್ತು-ವಿಷಯಕವಾದ ಜ್ಞಾನದಲ್ಲಿ ಸರ್ವಪದಾರ್ಥಗಳು ವಿಷಯವಾಗಿ ಇರಲು ಸಾಧ್ಯವಿಲ್ಲ-ದಿರುವುದರಿಂದ ಆ ಜ್ಞಾನಸ್ವರೂಪವನ್ನು ತಿಳಿಸಲು 'ಸರ್ವಜ್ಞತ್ವೇ' ಎಂದೇ ವ್ಯಾಖ್ಯಾನ ಮಾಡಲಾಗಿದೆ. ಇದರಿಂದ ಸೂತ್ರದಲ್ಲಿ ಜ್ಞಾನದಲ್ಲಿ ಅಂತರ್ಭಾವವನ್ನು ಪಡೆಯುವ ಜ್ಞಾನಸಂಬಂಧಿಗಳನ್ನು ತಿಳಿಸುವ 'ವಸೂನಾಮ್' ಎಂಬ ಪದವು ಅಧ್ಯಾಹಾರ್ಯ-ವೆಂದು ಸೂಚಿತವಾಗುವುದು.

ಸೂತ್ರಭಾಷ್ಯಗಳಲ್ಲಿ 'ಚ' ಶಬ್ದವು ಸಮುಚ್ಚಯಾರ್ಥಕವಾಗಿದೆ. ಈ ಸೂತ್ರದಲ್ಲಿ ಹೇಳಿರುವ ಹೇತುವಿಗೆ 'ಅಸಂಭವಾತ್' ಎಂದು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಪಡೆಯುವ ಹೇತುವಿನ ಮೂಲಕ ಮಧ್ವಾದಿವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರ-ವಿಲ್ಲವೆಂದು ಜೈಮಿನಿಗಳು ಅಭಿಪ್ರಾಯ ಪಡುತ್ತಾರೆ ಎಂದು ಹಿಂದಿನ ಸೂತ್ರದ ವಾಕ್ಯದೊಂದಿಗೆ ಅನ್ವಯವಾಗುವುದು. ಇದರಿಂದ 'ಮಧ್ವಾದಿಷು' ಎಂಬಲ್ಲಿ ಇರುವ ಆದಿಶಬ್ದದಿಂದ ಮೋಕ್ಷಫಲಕವಾದ ವಿದ್ಯೆಗಳು ಗ್ರಾಹ್ಯವಾಗಿವೆ. ಸೂತ್ರದ ಜ್ಯೋತಿಃ-ಶಬ್ದವನ್ನು 'ಜ್ಯೋತಿಷೀವ ಜ್ಯೋತಿಷಿ' ಎಂಬುದಾಗಿ ಆವೃತ್ತಿಮಾಡಿಕೊಳ್ಳಬೇಕು. ಜ್ಯೋತಿಷಿ ಎಂಬಲ್ಲಿರುವ ಸಪ್ತಮೀ ವಿಭಕ್ತಿಯು 'ಚೈತ್ರರಥನ ಬುದ್ಧಿಯಲ್ಲಿ ಶಾಸ್ತ್ರಾರ್ಥ-ವಿದೆ ಎಂಬ ವಾಕ್ಯದಲ್ಲಿ ಹೇಗೆ ಸಪ್ತಮೀವಿಭಕ್ತಿಯು ಯುಕ್ತವಾಗಿದೆಯೋ' ಅದರಂತೆ ಯುಕ್ತವಾಗಿದೆ ಎಂದು ಸೂಚಿತವಾಗುವುದು.

ವಸ್ತುಗಳು ಜ್ಞಾನದಲ್ಲಿ ಅಂತರ್ಭಾವವನ್ನು ಪಡೆಯುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಆಚಾರ್ಯರು 'ಸರ್ವಜ್ಞತ್ವೇ ಭಾವಾತ್' ಎಂಬ ತಮ್ಮ ಪದಗಳನ್ನೇ ''ಆದಿತ್ಯಪ್ರಕಾಶೇ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸೂರ್ಯ-ಪ್ರಕಾಶದಲ್ಲಿ ಎಲ್ಲ ವಸ್ತುಗಳೂ ಅಂತರ್ಭಾವವನ್ನು ಹೊಂದಿರುವಂತೆ ಅಂದರೆ ಆ ಸೂರ್ಯಪ್ರಕಾಶದಿಂದ ಗೃಹೀತವಾಗಿರುವಂತೆ, 'ತಜ್ಜ್ಞಾನೇ' ಅಂದರೆ ತದುಪರಿ ಎಂಬ ಸೂತ್ರದಲ್ಲಿ ಪ್ರಸ್ತುತವಾಗಿರುವ ದೇವತೆಗಳ ಜ್ಞಾನದಲ್ಲಿ ಎಲ್ಲವಸ್ತುಗಳೂ 'ಅಂತ-ರ್ಭಾವಾತ್' ಅಂದರೆ ವಿಷಯವಾಗಿರುವುದರಿಂದ ಎಂದು ಅರ್ಥ.

ಈ ಸೂತ್ರದ ಅಭಿಪ್ರಾಯವನ್ನು ''ನಿತ್ಯ'' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ದೇವತೆಗಳು ಸರ್ವಜ್ಞರಾಗಿರುವುದರಿಂದ 'ವಿದ್ಯಾನಾಂ' ಸಕಲ ಬ್ರಹ್ಮವಿದ್ಯಾ ಮತ್ತು ಕರ್ಮವಿದ್ಯೆಗಳಿಂದ ಉಂಟಾಗುವ ಜ್ಞಾನಗಳನ್ನು 'ನಿತ್ಯಸಿದ್ಧತ್ವಾತ್' ಆ ದೇವತೆಗಳು ನಿಯಮೇನ ಪಡೆದಿರುವುದರಿಂದ ಎಂದು ಅರ್ಥ.

ಯದ್ವಾ – 'ವಿದ್ಯಾನಾಂ' ಜ್ಞಾನಸಾಧನವಿದ್ಯಾನಾಂ, ನಿತ್ಯಂ - ನಿಯಮೇನ 'ಸಿದ್ಧತ್ವಾತ್' - ಉಪಲಬ್ಧತ್ವಾತ್ ಇತ್ಯರ್ಥಃ। ದೇವಾನಾಂ ವೇದದ್ರಷ್ಟೃತ್ವಾತ್ ಇತಿ

ಭಾವಃ । ಯದ್ವಾ – 'ವಿದ್ಯಾನಾಂ' - ಮೋಕ್ಷತದಿತರಫಲಸಾಧನಜ್ಞಾನಸಾಧನ-ವಿದ್ಯೋಕ್ತಾರ್ಥಾನಾಂ 'ನಿತ್ಯಸಿದ್ಧತ್ವಾತ್' ನಿಯಮೇನ ತೈರ್ಜ್ಞಾತತ್ವಾತ್ ಇತ್ಯರ್ಥಃ।

ತಥಾ ಚ – ನ ದೇವಾನಾಮುಭಯವಿದ್ಯಾಸಾಧ್ಯಜ್ಞಾನೇಽರ್ಥಿತಾ ಸಂಭವತಿ - ಇತಿ ಭಾವಃ। ಅನಯೋರಪಿ ಪಂಚಮ್ಯಂತಯೋಃ ಪೂರ್ವವದನ್ವಯಃ। ನ ಚಾಸ್ಯ ಹೇತೋಃ ಪೂರ್ವಸೂತ್ರೋಕ್ತಾಸಂಭವಹೇತೂಪಪಾದಕತ್ವಾತ್ ಕಥಮತ್ರ ಚಶಬ್ದ ಇತಿ ವಾಚ್ಯಮ್ । ಪೂರ್ವಂ ಫಲಮುಖೇನ ಅತ್ರ ಚ ಸಾಧನಮುಖೇನಾರ್ಥಿತ್ವಾ-ಸಂಭವಸ್ಯ ಅಭಿಪ್ರೇತತ್ವೇನಾಸ್ಯ ಹೇತೋರ್ದ್ವಿತೀಯಾಸಂಭವೋಪಪಾದಕತ್ವೇಽಪಿ ಅಸಂಭವಸಾಮಾನ್ಯೇ ಅನುಪಪಾದಕತ್ವೇನ ಚಶಬ್ದೋಪಪತ್ತೇಃ।

ಅಥವಾ 'ವಿದ್ಯಾನಾಂ' - ಜ್ಞಾನಸಾಧನವಾದ ವಿದ್ಯೆಗಳು (ದೇವತೆಗಳಿಗೆ) 'ನಿತ್ಯಂ' ನಿಯಮೇನ 'ಸಿದ್ಧತ್ವಾತ್' - ಪ್ರಾಪ್ತವಾಗಿರುವುದರಿಂದ ಎಂದು ಅರ್ಥ. ದೇವತೆಗಳು ವೇದದ್ರಷ್ಟೃಗಳಾಗಿರುವುದರಿಂದ ಅವರಿಗೆ ಅಪರೋಕ್ಷ ಜ್ಞಾನಸಾಧನವಾದ ವಿದ್ಯೆಗಳು ಈಗಾಗಲೇ ಪ್ರಾಪ್ತವಾಗಿರುವುದೆಂದು ಭಾವ. ಅಥವಾ 'ವಿದ್ಯಾನಾಂ' ಮೋಕ್ಷ ಮತ್ತು ತದ್ಭಿನ್ನವಾದ ಫಲಗಳಿಗೆ ಸಾಧನವಾದ ಜ್ಞಾನಕ್ಕೆ ಕಾರಣವಾದ ವಿದ್ಯೆಗಳಲ್ಲಿ ಈ ವಿದ್ಯೆಗಳು ದೇವತೆಗಳಿಗೆ 'ನಿತ್ಯಸಿದ್ಧತ್ವಾತ್' ನಿಯಮೇನ ಅವರಿಂದ ತಿಳಿಯಲ್ಪಟ್ಟಿರುವುದರಿಂದ ಎಂದು ಅರ್ಥ.

ತಥಾಚ – ದೇವತೆಗಳಿಗೆ ಉಭಯವಿಧವಾದ ವಿದ್ಯೆಗಳಿಂದ ಉಂಟಾಗುವ ಜ್ಞಾನದಲ್ಲಿ ಅರ್ಥಿತ್ವವು ಅಂದರೆ ಅಪೇಕ್ಷೆಯು ಉಂಟಾಗುವುದಿಲ್ಲ ಎಂದು ಭಾವ. ಭಾಷ್ಯದಲ್ಲಿ ಪಂಚಮ್ಯಂತವಾದ ಎರಡು ಪದಗಳಿಗೂ ಹಿಂದಿನಂತೆ ಅನ್ವಯವಿರುವುದು. ಈ ಹೇತುವು ಹಿಂದಿನ ಸೂತ್ರದಲ್ಲಿ ಹೇಳಿರುವ ಅಸಂಭವ ರೂಪವಾದ ಹೇತುವಿನ ಸಮರ್ಥಕವಾಗಿರುವುದರಿಂದ ಇಲ್ಲಿ ಚಶಬ್ದವು ಹೇಗೆ ಯುಕ್ತ ? ಎಂದು ಹೇಳತಕ್ಕದ್ದಲ್ಲ. ಹಿಂದೆ ದೇವತೆಗಳಿಗೆ ಫಲದಲ್ಲಿ ಅರ್ಥಿತ್ವವು ಉಂಟಾಗುವುದಿಲ್ಲವೆಂದು; ಇಲ್ಲಿ ಆ ಫಲಸಾಧನದಲ್ಲಿ ಅರ್ಥಿತ್ವವು ಸಂಭವಿಸುವುದಿಲ್ಲವೆಂಬ ಅಭಿಪ್ರಾಯವಿರುವುದರಿಂದ ಇಲ್ಲಿ ಹೇಳಿರುವ ಹೇತು ಎರಡನೆಯ ಅರ್ಥಿತ್ವವು ಇಲ್ಲದಿರುವುದಕ್ಕೆ ಉಪಪಾದಕ-

ವಾಗಿದ್ದರೂ ಎಲ್ಲ ವಿಧವಾದ ಅಸಂಭವಕ್ಕೆ ಉಪಪಾದಕವಲ್ಲವಾದ್ದರಿಂದ ಚಶಬ್ದವು ಯುಕ್ತವಾಗಿದೆ.

(ಭಾ.ದೀ.) ಯದ್ಯಪಿ ಭಾಷ್ಯೇ 'ಜ್ಯೋತಿಷಿ' ಇತಿ ಸೂತ್ರಂ ಕಿಂ ದೇವಾನಾಂ ಮೋಕ್ಷೇತರಫಲಾರ್ಥಾಯಾಮ್? ಉತ ಮೋಕ್ಷಫಲಾರ್ಥಾಯಾಂ ವಿದ್ಯಾಯಾ-ಮಧಿಕಾರ ಇತಿ ಪಕ್ಷದ್ವಯೇಽಪಿ ಸಾಧನಮುಖೇನ ದೋಷೋಕ್ತಿಪರತಯಾ ಪ್ರತೀಯತೇ। ಟೀಕಾಯಾಂ ತು ಮೋಕ್ಷಾರ್ಥವಿದ್ಯಾಯಾಮಪಿ ನ ದೇವಾನಾಮಧಿ-ಕಾರಃ, ತತ್ರ ಫಲೇಽರ್ಥಿತಾಸತ್ತ್ವೇಽಪಿ ತತ್ಸಾಧನವಿದ್ಯೋಪಾಸನಾತ್ಮಕಜ್ಞಾನೇ ಅರ್ಥಿತ್ವಾಭಾವಾತ್, ವಿದ್ಯಾಯಾಶ್ಚ ಜ್ಞಾನಾರ್ಥತ್ವಾತ್, ಜ್ಞಾನಸ್ಯ ಚ ಪ್ರಾಪ್ತತ್ವಾತ್ ಇತಿ ದ್ವಿತೀಯಪಕ್ಷಮಾತ್ರದೋಷೋಕ್ತಿಪರತಯಾ ವ್ಯಾಖ್ಯಾತಮ್ । ತಥಾ ಚ ವಿಸಂವಾದೋ ಭವತಿ।

ತಥಾಽಪಿ ಮೋಕ್ಷೇತರಫಲಕವಿದ್ಯಾಸು ಅನಧಿಕಾರ ಇತಿ ಪ್ರಾಚೀನಪಕ್ಷೇ ನ ಕೇವಲಂ ಮಧುವಿದ್ಯಾಫಲೇ ವಸುತ್ವಾದೌ ಪ್ರಾಪ್ತತ್ವಾದ್ ದೇವಾನಾಮ್ ಅರ್ಥಿತ್ವಾಭಾವಾತ್ ತದ್‌ವಿದ್ಯಾಯಾಮಧಿಕಾರಾಭಾವೋ ದೋಷಃ । ಕಿಂತು ವಸುತ್ವಾದಿಫಲಸಾಧನಜ್ಞಾನೇಽಪಿ ಅರ್ಥಿತ್ವಾಭಾವಾದ್ ಅಧಿಕಾರಾಭಾವ ಇತ್ಯಸಂಭವದೋಷೇ ಉಪಪಾದಕಾಂತರಮುಕ್ತಂ ಭವತಿ - ಇತಿ ಟೀಕಾಯಾಮ್ ಉಕ್ತತ್ವಾನ್ನ ವಿಸಂವಾದಃ । ಅತ ಏವ ನ ಚಶಬ್ದಾನುಪಪತ್ತಿಃ । ಪ್ರಾಚೀನಪಕ್ಷ-ವಿವಕ್ಷಯಾ ತದುಪಪತ್ತೇಃ। ಹೇತ್ವಂತರೇಣ ಏತತ್ ಸಾಧಯತೀತಿ ಸತ್ತರ್ಕದೀಪಾ-ವಲೀ ಚ ಆದ್ಯಪಕ್ಷವಿವಕ್ಷಯಾ ಪ್ರವೃತ್ತಾ। ದ್ವಿವಿಧವಿದ್ಯಾಸಮುಚ್ಚಯೇ ವಾ 'ಚ'-ಶಬ್ದಃ ।

ಅನೇನ – ನ ಕೇವಲಂ ಮೋಕ್ಷೇತರಫಲಾರ್ಥಂ ಮಧ್ವಾದಿಷು ಅನಧಿಕಾರಂ ಮನ್ಯತೇ ಜೈಮಿನಿಃ । ಕಿಂತು ಆದಿಶಬ್ದೇನ ವಾ ಆವೃತ್ತಜ್ಯೋತಿಃಶಬ್ದೇನ ವಾ ಗೃಹೀತಾಯಾಂ 'ಸತ್ಯಂ ಜ್ಞಾನಮ್' ಇತಿ ಮೋಕ್ಷಾರ್ಥವಿದ್ಯಾಯಾಮಪಿ। ಕುತಃ?

'ಜ್ಯೋತಿಷೀವ' ಆದಿತ್ಯಪ್ರಕಾಶೇ ಇವ 'ಜ್ಯೋತಿಷಿ' ಸರ್ವವಿಷಯಕದೇವತಾಜ್ಞಾನೇ ಸರ್ವವಸ್ತೂನಾಂ ವಿಷಯತಯಾ 'ಭಾವಾತ್' ಮೋಕ್ಷಸಾಧನಜ್ಞಾನಸ್ಯ ಸಿದ್ಧತ್ವಾತ್ । ಅತ ಏವ ನ ಮೋಕ್ಷೇ, ತಸ್ಯಾಪಿ ಸಿದ್ಧಪ್ರಾಯತ್ವಾದ್ ಅರ್ಥಿತ್ವಾಸಂಭವಾತ್ ।

ನ ಕೇವಲಂ ವಸ್ವಾದಿದೇವಾನಾಂ ಫಲೇಽರ್ಥಿತ್ವಾಭಾವಾತ್ ಮಧ್ವಾದಿಷು ಅನಧಿಕಾರಂ ಜೈಮಿನಿರ್ಮನ್ಯತೇ, ಕಿಂತು 'ಜ್ಯೋತಿಷಿ' ವಸುತ್ವಾದಿಫಲಸಾಧನಜ್ಞಾನೇಽಪಿ ಅರ್ಥಿತ್ವಾಸಂಭವಾತ್ । ಸೋಽಪಿ ಕುತಃ? 'ಜ್ಯೋತಿಷಿ' ದೇವಾನಾಂ ಜ್ಞಾನೇ 'ಭಾವಾತ್' ಸರ್ವೇಷಾಂ ವಸ್ತೂನಾಂ ವಿಷಯತಯಾಽಂತರ್ಭಾವಾತ್ ಫಲಸಾಧನಜ್ಞಾನಸ್ಯ ಸಿದ್ಧತ್ವಾದಿತಿ ಯಾವತ್ – ಇತಿ ವಾ ಸೂತ್ರಾರ್ಥ ಉಕ್ತೋ ಭವತಿ ॥

ಯದ್ಯಪಿ ಭಾಷ್ಯದಲ್ಲಿ – 'ಜ್ಯೋತಿಷಿ' ಎಂಬ ಸೂತ್ರವು ದೇವತೆಗಳಿಗೆ ಮೋಕ್ಷೇತರವಾದ ಫಲಕ್ಕೆ ಸಾಧನವಾದ ವಿದ್ಯೆಯಲ್ಲಿ ಅಧಿಕಾರವೋ ಅಥವಾ ಮೋಕ್ಷಫಲಕವಾದ ವಿದ್ಯೆಯಲ್ಲಿ ಅಧಿಕಾರವೋ? ಎಂದು ಎರಡೂ ಪಕ್ಷಗಳಲ್ಲಿ ಸಾಧನದಲ್ಲಿ ಅಧಿಕಾರವನ್ನು ಒಪ್ಪಿದರೆ ದೋಷವನ್ನು ಹೇಳುವ ಅಭಿಪ್ರಾಯವಿರುವುದೆಂದು ತೋರುತ್ತದೆ. ಟೀಕೆಯಲ್ಲಾದರೋ – ಮೋಕ್ಷಫಲಕವಾದ ವಿದ್ಯೆಯಲ್ಲೂ ದೇವತೆಗಳಿಗೆ ಅಧಿಕಾರವಿಲ್ಲ. ಏಕೆಂದರೆ, ಮೋಕ್ಷರೂಪಫಲದಲ್ಲಿ ಅವರಿಗೆ ಅಪೇಕ್ಷೆ ಇದ್ದರೂ ಅದಕ್ಕೆ ಸಾಧನವಾದ ವಿದ್ಯೆಯ ಉಪಾಸನಾರೂಪವಾದ ಜ್ಞಾನದಲ್ಲಿ ಅವರಿಗೆ ಅಪೇಕ್ಷೆ ಇಲ್ಲ. ವಿದ್ಯೆಯಾದರೋ ಜ್ಞಾನಕ್ಕೋಸ್ಕರವಾಗಿಯೇ ಇರುವುದು. ಜ್ಞಾನವಾದರೋ ಅವರು ಈಗಾಗಲೇ ಪ್ರಾಪ್ತವಾಗಿದೆ ಎಂದು ಕೇವಲ ಎರಡನೆ ಪಕ್ಷದಲ್ಲಿ ಮಾತ್ರ ದೋಷವನ್ನು ಹೇಳುವ ಅಭಿಪ್ರಾಯವಿರುವಂತೆ ವ್ಯಾಖ್ಯಾನ ಮಾಡಲಾಗಿದೆ. ತಥಾ ಚ ಭಾಷ್ಯ ಮತ್ತು ಟೀಕೆಗಳಿಗೆ ಏಕಾಭಿಪ್ರಾಯವಿರುವಂತೆ ಕಾಣುವುದಿಲ್ಲ.

ತಥಾಽಪಿ – 'ಮೋಕ್ಷೇತರಫಲಕವಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ' ಎಂಬ ಹಿಂದಿನ ಪಕ್ಷದಲ್ಲಿ ಮಧುವಿದ್ಯಾ ಫಲವಾದ ವಸುತ್ವ ಮೊದಲಾದವುಗಳು

ಪ್ರಾಪ್ತವಾಗಿರುವುದರಿಂದ ಆ ಫಲದಲ್ಲಿ ದೇವತೆಗಳಿಗೆ ಅರ್ಥಿತ್ವವಿಲ್ಲದೇ ಇರುವುದರಿಂದ ಆ ವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿರುವುದು ಮಾತ್ರ ದೋಷವಲ್ಲ; ಕಿಂತು ವಸುತ್ವಾದಿ ಫಲಗಳಿಗೆ ಸಾಧನವಾದ ಜ್ಞಾನದ ವಿಷಯದಲ್ಲೂ ಅವರಿಗೆ ಅಪೇಕ್ಷೆ ಇಲ್ಲದಿರುವುದರಿಂದ ಅಧಿಕಾರವಿಲ್ಲ ಎಂದು ಅಸಂಭವದೋಷಕ್ಕೆ ಮತ್ತೊಂದು ಉಪಪಾದಕವನ್ನು ಹೇಳಲಾಗಿದೆ - ಎಂದು ಟೀಕೆಯಲ್ಲಿ ಹೇಳುವುದರಿಂದ ಭಾಷ್ಯ ಮತ್ತು ಟೀಕೆಗಳಿಗೆ ವಿಸಂವಾದವಿಲ್ಲ. ಆದ್ದರಿಂದಲೇ ಇಲ್ಲಿ 'ಚ'ಶಬ್ದವು ಅನುಪಪನ್ನವಾಗುವುದಿಲ್ಲ. ಏಕೆಂದರೆ ಪ್ರಾಚೀನಪಕ್ಷದ ದೃಷ್ಟಿಯಿಂದ ಚಕಾರವು ಉಪಪನ್ನವಾಗುವುದು. 'ಹೇತ್ವಂತರೇಣ ಏತತ್ ಸಾಧಯತಿ' - 'ಮತ್ತೊಂದು ಹೇತುವಿನಿಂದ ಇದನ್ನು ಸಾಧಿಸುತ್ತಾರೆ' ಎಂಬ ಸತ್ತರ್ಕದೀಪಾವಲೀ ವಾಕ್ಯವಾದರೋ ಮೊದಲನೆಯ ಪಕ್ಷದ ದೃಷ್ಟಿಯಿಂದ ಪ್ರವೃತ್ತವಾಗಿದೆ. ಅಥವಾ ಎರಡು ವಿಧವಾದ ವಿದ್ಯೆಗಳ ಸಮುಚ್ಚಯವನ್ನು ಚಶಬ್ದವು ಹೇಳುವುದು.

ಇದರಿಂದ – 'ಮೋಕ್ಷೇತರಫಲಕ್ಕೋಸ್ಕರವಾಗಿ ಮಧ್ವಾದಿವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ' ಎಂದಷ್ಟೇ ಜೈಮಿನಿಗಳ ಅಭಿಪ್ರಾಯವಲ್ಲ; ಕಿಂತು ಆದಿಶಬ್ದದಿಂದಾಗಲೀ ಅಥವಾ ಆವೃತ್ತಿಯನ್ನು ಹೊಂದಿರುವ ಜ್ಯೋತಿಃಶಬ್ದದಿಂದಾಗಲೀ ಸ್ವೀಕೃತವಾಗಿರುವ 'ಸತ್ಯಂ ಜ್ಞಾನಂ' ಎಂಬ ಮೋಕ್ಷಫಲಕವಾದ ವಿದ್ಯೆಯಲ್ಲೂ ಕೂಡ (ಅಧಿಕಾರವಿಲ್ಲ). ಏಕೆಂದರೆ? 'ಜ್ಯೋತಿಷೀವ' ಆದಿತ್ಯಪ್ರಕಾಶದಲ್ಲಿ ಹೇಗೋ ಹಾಗೆ 'ಜ್ಯೋತಿಷಿ' ಸರ್ವವಿಷಯಕವಾದ ದೇವತೆಗಳ ಜ್ಞಾನದಲ್ಲಿ 'ಸರ್ವವಸ್ತೂನಾಂ ವಿಷಯತಾಭಾವಾತ್' ಮೋಕ್ಷಸಾಧನವಾದ ಜ್ಞಾನವು ಅವರಿಗೆ ಸಿದ್ಧವಾಗಿದೆ. ಆದ್ದರಿಂದಲೇ ಮೋಕ್ಷದಲ್ಲೂ ದೇವತೆಗಳಿಗೆ ಅಪೇಕ್ಷೆ ಇರುವುದಿಲ್ಲ. ಏಕೆಂದರೆ, ಆ ಫಲವೂ ಕೂಡ ಸಿದ್ಧಪ್ರಾಯವೇ ಆಗಿದೆ.

ವಸ್ವಾದಿದೇವತೆಗಳಿಗೆ ಫಲಾಪೇಕ್ಷೆ ಇಲ್ಲದಿರುವುದರಿಂದ ಮಧ್ವಾದಿ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ ಎಂದಷ್ಟೇ ಜೈಮಿನಿ ಋಷಿಗಳು ಅಭಿಪ್ರಾಯಪಡುವುದಲ್ಲ; ಕಿಂತು 'ಜ್ಯೋತಿಷಿ' ವಸುತ್ವವೇ ಮೊದಲಾದ ಫಲಕ್ಕೆ ಸಾಧನವಾದ ಜ್ಞಾನದಲ್ಲೂ ಅವರಿಗೆ ಅರ್ಥಿತ್ವವು ಇರುವುದಿಲ್ಲ. ಅದಾದರೂ ಹೇಗೆ? 'ಜ್ಯೋತಿಷಿ' ದೇವತೆಗಳ ಜ್ಞಾನದಲ್ಲಿ 'ಭಾವಾತ್' ಎಲ್ಲ ವಸ್ತುಗಳೂ ವಿಷಯವಾಗಿ ಅಂತರ್ಭಾವವನ್ನು

'ಜ್ಯೋತಿಷೀವ' ಆದಿತ್ಯಪ್ರಕಾಶೇ ಇವ 'ಜ್ಯೋತಿಷಿ' ಸರ್ವವಿಷಯಕದೇವತಾಜ್ಞಾನೇ ಸರ್ವವಸ್ತೂನಾಂ ವಿಷಯತಯಾ 'ಭಾವಾತ್' ಮೋಕ್ಷಸಾಧನಜ್ಞಾನಸ್ಯ ಸಿದ್ಧತ್ವಾತ್ । ಅತ ಏವ ನ ಮೋಕ್ಷೇ, ತಸ್ಯಾಪಿ ಸಿದ್ಧಪ್ರಾಯತ್ವಾದ್ ಅರ್ಥಿತ್ವಾಸಂಭವಾತ್ ।

ನ ಕೇವಲಂ ವಸ್ವಾದಿದೇವಾನಾಂ ಫಲೇಽರ್ಥಿತ್ವಾಭಾವಾತ್ ಮಧ್ವಾದಿಷು ಅನಧಿಕಾರಂ ಜೈಮಿನಿರ್ಮನ್ಯತೇ, ಕಿಂತು 'ಜ್ಯೋತಿಷಿ' ವಸುತ್ವಾದಿಫಲಸಾಧನಜ್ಞಾನೇಽಪಿ ಅರ್ಥಿತ್ವಾಸಂಭವಾತ್ । ಸೋಽಪಿ ಕುತಃ? 'ಜ್ಯೋತಿಷಿ' ದೇವಾನಾಂ ಜ್ಞಾನೇ 'ಭಾವಾತ್' ಸರ್ವೇಷಾಂ ವಸ್ತೂನಾಂ ವಿಷಯತಯಾಽಂತರ್ಭಾವಾತ್ ಫಲಸಾಧನಜ್ಞಾನಸ್ಯ ಸಿದ್ಧತ್ವಾದಿತಿ ಯಾವತ್ – ಇತಿ ವಾ ಸೂತ್ರಾರ್ಥ ಉಕ್ತೋ ಭವತಿ ॥

ಯದ್ಯಪಿ ಭಾಷ್ಯದಲ್ಲಿ – 'ಜ್ಯೋತಿಷಿ' ಎಂಬ ಸೂತ್ರವು ದೇವತೆಗಳಿಗೆ ಮೋಕ್ಷೇತರವಾದ ಫಲಕ್ಕೆ ಸಾಧನವಾದ ವಿದ್ಯೆಯಲ್ಲಿ ಅಧಿಕಾರವೋ ಅಥವಾ ಮೋಕ್ಷಫಲಕವಾದ ವಿದ್ಯೆಯಲ್ಲಿ ಅಧಿಕಾರವೋ? ಎಂದು ಎರಡೂ ಪಕ್ಷಗಳಲ್ಲಿ ಸಾಧನದಲ್ಲಿ ಅಧಿಕಾರವನ್ನು ಒಪ್ಪಿದರೆ ದೋಷವನ್ನು ಹೇಳುವ ಅಭಿಪ್ರಾಯವಿರುವುದೆಂದು ತೋರುತ್ತದೆ. ಟೀಕೆಯಲ್ಲಾದರೋ – ಮೋಕ್ಷಫಲಕವಾದ ವಿದ್ಯೆಯಲ್ಲೂ ದೇವತೆಗಳಿಗೆ ಅಧಿಕಾರವಿಲ್ಲ. ಏಕೆಂದರೆ, ಮೋಕ್ಷರೂಪಫಲದಲ್ಲಿ ಅವರಿಗೆ ಅಪೇಕ್ಷೆ ಇದ್ದರೂ ಅದಕ್ಕೆ ಸಾಧನವಾದ ವಿದ್ಯೆಯ ಉಪಾಸನಾರೂಪವಾದ ಜ್ಞಾನದಲ್ಲಿ ಅವರಿಗೆ ಅಪೇಕ್ಷೆ ಇಲ್ಲ. ವಿದ್ಯೆಯಾದರೋ ಜ್ಞಾನಕ್ಕೋಸ್ಕರವಾಗಿಯೇ ಇರುವುದು. ಜ್ಞಾನವಾದರೋ ಅವರು ಈಗಾಗಲೇ ಪ್ರಾಪ್ತವಾಗಿದೆ ಎಂದು ಕೇವಲ ಎರಡನೆ ಪಕ್ಷದಲ್ಲಿ ಮಾತ್ರ ದೋಷವನ್ನು ಹೇಳುವ ಅಭಿಪ್ರಾಯವಿರುವಂತೆ ವ್ಯಾಖ್ಯಾನ ಮಾಡಲಾಗಿದೆ. ತಥಾ ಚ ಭಾಷ್ಯ ಮತ್ತು ಟೀಕೆಗಳಿಗೆ ಏಕಾಭಿಪ್ರಾಯವಿರುವಂತೆ ಕಾಣುವುದಿಲ್ಲ.

ತಥಾಽಪಿ – 'ಮೋಕ್ಷೇತರಫಲಕವಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ' ಎಂಬ ಹಿಂದಿನ ಪಕ್ಷದಲ್ಲಿ ಮಧುವಿದ್ಯಾ ಫಲವಾದ ವಸುತ್ವ ಮೊದಲಾದವುಗಳು

ಪ್ರಾಪ್ತವಾಗಿರುವುದರಿಂದ ಆ ಫಲದಲ್ಲಿ ದೇವತೆಗಳಿಗೆ ಅರ್ಥಿತ್ವವಿಲ್ಲದೇ ಇರುವುದರಿಂದ ಆ ವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿರುವುದು ಮಾತ್ರ ದೋಷವಲ್ಲ; ಕಿಂತು ವಸುತ್ವಾದಿ ಫಲಗಳಿಗೆ ಸಾಧನವಾದ ಜ್ಞಾನದ ವಿಷಯದಲ್ಲೂ ಅವರಿಗೆ ಅಪೇಕ್ಷೆ ಇಲ್ಲದಿರುವುದರಿಂದ ಅಧಿಕಾರವಿಲ್ಲ ಎಂದು ಅಸಂಭವದೋಷಕ್ಕೆ ಮತ್ತೊಂದು ಉಪಪಾದಕವನ್ನು ಹೇಳಲಾಗಿದೆ - ಎಂದು ಟೀಕೆಯಲ್ಲಿ ಹೇಳುವುದರಿಂದ ಭಾಷ್ಯ ಮತ್ತು ಟೀಕೆಗಳಿಗೆ ವಿಸಂವಾದವಿಲ್ಲ. ಆದ್ದರಿಂದಲೇ ಇಲ್ಲಿ 'ಚ'ಶಬ್ದವು ಅನುಪಪನ್ನವಾಗುವುದಿಲ್ಲ. ಏಕೆಂದರೆ ಪ್ರಾಚೀನಪಕ್ಷದ ದೃಷ್ಟಿಯಿಂದ ಚಕಾರವು ಉಪಪನ್ನವಾಗುವುದು. 'ಹೇತ್ವಂತರೇಣ ಏತತ್ ಸಾಧಯತಿ' - 'ಮತ್ತೊಂದು ಹೇತುವಿನಿಂದ ಇದನ್ನು ಸಾಧಿಸುತ್ತಾರೆ' ಎಂಬ ಸತ್ತರ್ಕದೀಪಾವಲೀ ವಾಕ್ಯವಾದರೋ ಮೊದಲನೆಯ ಪಕ್ಷದ ದೃಷ್ಟಿಯಿಂದ ಪ್ರವೃತ್ತವಾಗಿದೆ. ಅಥವಾ ಎರಡು ವಿಧವಾದ ವಿದ್ಯೆಗಳ ಸಮುಚ್ಚಯವನ್ನು ಚಶಬ್ದವು ಹೇಳುವುದು.

ಇದರಿಂದ – 'ಮೋಕ್ಷೇತರಫಲಕ್ಕೋಸ್ಕರವಾಗಿ ಮಧ್ವಾದಿವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ' ಎಂದಷ್ಟೇ ಜೈಮಿನಿಗಳ ಅಭಿಪ್ರಾಯವಲ್ಲ; ಕಿಂತು ಆದಿಶಬ್ದದಿಂದಾಗಲೀ ಅಥವಾ ಆವೃತ್ತಿಯನ್ನು ಹೊಂದಿರುವ ಜ್ಯೋತಿಃಶಬ್ದದಿಂದಾಗಲೀ ಸ್ವೀಕೃತವಾಗಿರುವ 'ಸತ್ಯಂ ಜ್ಞಾನಂ' ಎಂಬ ಮೋಕ್ಷಫಲಕವಾದ ವಿದ್ಯೆಯಲ್ಲೂ ಕೂಡ (ಅಧಿಕಾರವಿಲ್ಲ). ಏಕೆಂದರೆ? 'ಜ್ಯೋತಿಷೀವ' ಆದಿತ್ಯಪ್ರಕಾಶದಲ್ಲಿ ಹೇಗೋ ಹಾಗೆ 'ಜ್ಯೋತಿಷಿ' ಸರ್ವವಿಷಯಕವಾದ ದೇವತೆಗಳ ಜ್ಞಾನದಲ್ಲಿ 'ಸರ್ವವಸ್ತೂನಾಂ ವಿಷಯತಾಭಾವಾತ್' ಮೋಕ್ಷಸಾಧನವಾದ ಜ್ಞಾನವು ಅವರಿಗೆ ಸಿದ್ಧವಾಗಿದೆ. ಆದ್ದರಿಂದಲೇ ಮೋಕ್ಷದಲ್ಲೂ ದೇವತೆಗಳಿಗೆ ಅಪೇಕ್ಷೆ ಇರುವುದಿಲ್ಲ. ಏಕೆಂದರೆ, ಆ ಫಲವೂ ಕೂಡ ಸಿದ್ಧಪ್ರಾಯವೇ ಆಗಿದೆ.

ವಸ್ವಾದಿದೇವತೆಗಳಿಗೆ ಫಲಾಪೇಕ್ಷೆ ಇಲ್ಲದಿರುವುದರಿಂದ ಮಧ್ವಾದಿ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ ಎಂದಷ್ಟೇ ಜೈಮಿನಿ ಋಷಿಗಳು ಅಭಿಪ್ರಾಯಪಡುವುದಲ್ಲ; ಕಿಂತು 'ಜ್ಯೋತಿಷಿ' ವಸುತ್ವವೇ ಮೊದಲಾದ ಫಲಕ್ಕೆ ಸಾಧನವಾದ ಜ್ಞಾನದಲ್ಲೂ ಅವರಿಗೆ ಅರ್ಥಿತ್ವವು ಇರುವುದಿಲ್ಲ. ಅದಾದರೂ ಹೇಗೆ? 'ಜ್ಯೋತಿಷಿ' ದೇವತೆಗಳ ಜ್ಞಾನದಲ್ಲಿ 'ಭಾವಾತ್' ಎಲ್ಲ ವಸ್ತುಗಳೂ ವಿಷಯವಾಗಿ ಅಂತರ್ಭಾವವನ್ನು

ಹೊಂದಿವೆ. ಆ ಕಾರಣದಿಂದಲೇ ಅವರಿಗೆ ಫಲಕ್ಕೆ ಸಾಧನವಾದ ಜ್ಞಾನವು ಸಿದ್ಧವಾಗಿದೆ ಎಂದು ಅಭಿಪ್ರಾಯವೆಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಏವಂ ದೇವೈರ್ಮೋಕ್ಷೇತರಯೋಗ್ಯಫಲಾನಾಂ ಪ್ರಾಪ್ತತ್ವಾದ್ ಅಯೋಗ್ಯಾನಾಂ ಪ್ರಾಪ್ತುಮಶಕ್ಯತ್ವಾತ್ ಮೋಕ್ಷಸ್ಯಾಪಿ ಬ್ರಹ್ಮಜ್ಞಾನಿತ್ವೇನಾರ್ಥತೋ ಲಬ್ಧತ್ವಾದರ್ಥಿತ್ವಾಭಾವೇನ ತೇಷಾಂ ಕಾಸ್ವಪಿ ವಿದ್ಯಾಸು ಅಧಿಕಾರಾಭಾವೇ ಜೈಮಿನಿಮತಾವಲಂಬಿನಾ ಸಮರ್ಥಿತೇ ಪುನರಧಿಕಾರಂ ಸಮರ್ಥಯತ್ಸೂತ್ರಂ ಪಠಿತ್ವಾ ವ್ಯಾಚಷ್ಟೇ – ಭಾವಮಿತಿ ॥

ಹೀಗೆ ದೇವತೆಗಳು ಮೋಕ್ಷಭಿನ್ನವಾದ ಯೋಗ್ಯ ಫಲಗಳನ್ನು ಪಡೆದಿರುವುದರಿಂದ ಅವರಿಗೆ ಯೋಗ್ಯತೆ ಇಲ್ಲದಿರುವ ಮೋಕ್ಷೇತರಫಲಗಳನ್ನು ಅವರು ಹೊಂದಲು ಅಶಕ್ಯವಾದುದರಿಂದ, ಬ್ರಹ್ಮಜ್ಞಾನಿಗಳಾದ್ದರಿಂದ ಮೋಕ್ಷರೂಪಪ್ರಯೋಜನವನ್ನು ಅವರು ಅರ್ಥಾತ್ ಪಡೆದಿರುವುದರಿಂದ ಈ ಫಲಗಳಲ್ಲಿ ಅವರಿಗೆ ಅಪೇಕ್ಷೆಯೇ ಇಲ್ಲ-ದಿರುವುದರಿಂದ ಯಾವ ವೇದವಿದ್ಯೆಗಳಲ್ಲೂ ಅವರಿಗೆ ಅಧಿಕಾರವಿಲ್ಲವೆಂದು ಜೈಮಿನಿ ಮತಾನುಯಾಯಿಯಿಂದ ಸಮರ್ಥಿಸಲ್ಪಟ್ಟಾಗ ಅವರಿಗೆ ಅಧಿಕಾರವಿದೆಯೆಂದು ಸಮರ್ಥಿಸುವ "ಭಾವಮ್" ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ –**

**॥ ಓಂ ಭಾವಂ ತು ಬಾದರಾಯಣೋಽಸ್ತಿ ಹಿ ಓಂ ॥ ೩೩ ॥**

ದೇವತೆಗಳಿಗೆ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವಿದೆಯೆಂದು ಬಾದ-ರಾಯಣರು ಅಭಿಪ್ರಾಯ ಪಡುತ್ತಾರೆ. ಏಕೆಂದರೆ, ಅವರಿಗೆ ವಿದ್ಯೆ-ಗಳಿಂದ ಜ್ಞಾನವಿಶೇಷವು ಉಂಟಾಗುವುದು.

**ಭಾಷ್ಯಮ್ – ಫಲವಿಶೇಷಭಾವಾತ್ ಪ್ರಾಪ್ತಪದಾನಾಮಪಿ ದೇವಾನಾಂ ಮಧ್ವಾದಿಷ್ವಪ್ಯಧಿಕಾರಂ ಬಾದರಾಯಣೋ ಮನ್ಯತೇ । ಅಸ್ತಿ ಹಿ ಪ್ರಕಾಶವಿಶೇಷಃ ।**

ಫಲವಿಶೇಷವಿರುವುದರಿಂದ ತಮಗೆ ಯೋಗ್ಯವಾದ ಪದವನ್ನು ಪಡೆದಿದ್ದರೂ ದೇವತೆಗಳಿಗೆ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರ-ವಿರುವುದೆಂದು ಬಾದರಾಯಣರು ಅಭಿಪ್ರಾಯ ಪಡುತ್ತಾರೆ. ಅವರಿಗೆ ಜ್ಞಾನವಿಶೇಷವು ಉಂಟಾಗುವುದಷ್ಟೇ .

ಭಾ.ದೀ. – 'ಫಲವಿಶೇಷಭಾವಾತ್' ಇತ್ಯನೇನ ಸೂತ್ರೇ ಪೂರ್ವಸ್ಮಾದ್ ಭಾವಾತ್ ಇತ್ಯಸ್ಯ ಅನುವೃತ್ತಿಃ ಸೂಚಿತಾ ।

ಪ್ರಾಪ್ತಪದಾನಾಮ್ ಇತಿ ॥ 'ಪದ್ಯತೇ' ಇತಿ ಪದಂ ಪ್ರಾಪ್ಯಫಲಮಾತ್ರಮ್ । 'ಅಪಿ' ಇತ್ಯನೇನ ವಿಶೇಷಾರ್ಥೋಽಪಿ । ತುಶಬ್ದೋಽಪ್ಯರ್ಥಃ । 'ಅಪಿಶ್ಚ ಯದ್ಯಪಿ-ತಥಾಽಪೀತ್ಯರ್ಥೇ' ಇತ್ಯುಕ್ತಂ ಭವತಿ । 'ದೇವಾನಾಮ್' ಇತಿ ಸೂತ್ರೇ ಶೇಷೋಕ್ತಿಃ । 'ಮಧ್ವಾದಿಷು' ಇತ್ಯನುವೃತ್ತಪದಾನುವಾದಃ । ಅತ್ರ 'ಆದಿ'ಶಬ್ದೇನ ಮೋಕ್ಷತದಿತರ-ಫಲಾರ್ಥಾಶೇಷಬ್ರಹ್ಮಕರ್ಮವಿದ್ಯಾ ಗೃಹ್ಯಂತೇ । 'ಅಧಿಕಾರಮ್' - ಅಧಿಕಾರ-ಭಾವಮ್ ಇತಿ । ಅನೇನ 'ಭಾವಮ್' ಇತ್ಯಸ್ಯಾರ್ಥ ಉಕ್ತಃ । 'ಮನ್ಯತೇ' ಇತಿ ಶೇಷೋಕ್ತಿಃ । 'ಅಸ್ತಿ' ಇತ್ಯಸ್ಯ ಕರ್ತೃಸಾಪೇಕ್ಷಾತ್ ತಂ ದರ್ಶಯತಿ – ಪ್ರಕಾಶವಿಶೇಷ ಇತಿ ॥ 'ಜ್ಞಾನಾತಿಶಯಃ' ಇತ್ಯರ್ಥಃ । 'ಹಿ'ಶಬ್ದೋ ಯತ ಇತ್ಯರ್ಥೇ ।

ತಥಾ ಚ ಇತ್ಥಂ ಯೋಜನಾ – ಬಾದರಾಯಣಸ್ತು ಭಗವಾನ್ ದೇವಾನಾಂ ಮಧ್ವಾದ್ಯಶೇಷವಿದ್ಯಾಸು ಅಧಿಕಾರಭಾವಂ ಮನ್ಯತೇ । ನ ಚ ಪ್ರಾಪ್ತಫಲತ್ವಾತ್ ತತ್ರ ಅರ್ಥಿತ್ವಾಭಾವೋ ದೋಷಃ ।

ಯದ್ಯಪಿ ದೇವಾಃ ಪ್ರಾಪ್ತಪದಾಃ ಬ್ರಹ್ಮಜ್ಞಾನಿತ್ವಾತ್ ಸಿದ್ಧಮೋಕ್ಷತದಿತರಫಲಾಃ ಪ್ರಾಪ್ತುಮಶಕ್ಯಾಯೋಗ್ಯಫಲಾಶ್ಚ , ತಥಾಪಿ ಪ್ರಾಪ್ತಪದಾನಾಮಪಿ ದೇವಾನಾಂ ಮಧ್ವಾದಿವಿದ್ಯಾಸು ಉಕ್ತೋಪಾಸನಾಕರ್ಮಕರಣಾಭ್ಯಾಂ ಫಲವಿಶೇಷಭಾವಾತ್ ಸ್ವಸ್ವಯೋಗ್ಯಸ್ಯ ಜ್ಞಾನಮಾತ್ರೇಣ ಅಸಾಧ್ಯಸ್ಯ ಮೋಕ್ಷಫಲೇಽತಿಶಯಸ್ಯ ಭಾವಾತ್ ಸಿದ್ಧೇರರ್ಥಿತ್ವಸಂಭವಾತ್ ।

ಭಾಷ್ಯದ 'ಫಲವಿಶೇಷಭಾವಾತ್' ಎಂಬ ಪದದಿಂದ ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ ಭಾವಾತ್ ಎಂಬ ಪದಕ್ಕೆ ಅನುವೃತ್ತಿ ಇರುವುದೆಂದು ಸೂಚಿತವಾಗುವುದು. 'ಪ್ರಾಪ್ತಪದಾನಾಮ್' ಎಂಬಲ್ಲಿ 'ಪದ್ಯತೇ ಇತಿ ಪದಮ್' ಹೊಂದಲ್ಪಡತಕ್ಕದ್ದು ಎಂಬ ವ್ಯುತ್ಪತ್ತಿಗನುಸಾರವಾಗಿ ದೇವತೆಗಳು ಪಡೆಯುವ ಎಲ್ಲ ಪದವೂ ಪದಶಬ್ದದಿಂದ ಸೂಚಿತವಾಗುವುದು. 'ಅಪಿ'ಪದದಿಂದ ವಿಶೇಷರೂಪವಾದ ಅರ್ಥವು ಸೂಚಿತ-ವಾಗುವುದು. ಸೂತ್ರದಲ್ಲಿ 'ತು'ಶಬ್ದವು ಅಪಿಶಬ್ದದ ಅರ್ಥವನ್ನು ಹೇಳುವುದು. ಆ ಅಪಿಶಬ್ದವು 'ಯದ್ಯಪಿ' 'ತಥಾಽಪಿ' ಎಂಬರ್ಥವನ್ನು ಹೇಳುವುದು. 'ದೇವಾನಾಮ್' ಎಂಬ ಭಾಷ್ಯದ ಪದವು ಸೂತ್ರದಲ್ಲಿ ಶೇಷವಾಗಿರುವ ಪದವನ್ನು ಸೂಚಿಸುವುದು. 'ಮಧ್ವಾದಿಷು' ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಪಡೆದಿರುವ ಪದದ ಅನುವಾದವಾಗಿದೆ. ಇಲ್ಲಿ ಆದಿಶಬ್ದದಿಂದ ಮೋಕ್ಷ- ತದಿತರ ಫಲಗಳನ್ನು ಪ್ರಯೋಜನವಾಗಿ ಹೊಂದಿರುವ ಸಮಸ್ತ ಬ್ರಹ್ಮವಿದ್ಯೆಗಳು ಮತ್ತು ಕರ್ಮವಿದ್ಯೆಗಳು ಗ್ರಹಿಸಲ್ಪಡುತ್ತವೆ. 'ಅಧಿಕಾರಮ್' ಅಂದರೆ ಅಧಿಕಾರದ ಇರುವಿಕೆಯನ್ನು ಎಂದರ್ಥ. ಇದರಿಂದ ಸೂತ್ರದ 'ಭಾವಮ್' ಎಂಬ ಪದದ ಅರ್ಥವು ಉಕ್ತವಾಗಿದೆ. 'ಮನ್ಯತೇ' ಎಂಬ ಪದವು ಸೂತ್ರದ ಶೇಷವನ್ನು ಹೇಳುವ ಪದವಾಗಿದೆ. ಸೂತ್ರದಲ್ಲಿ 'ಅಸ್ತಿ' ಎಂಬ ಕ್ರಿಯಾಪದವು ಕರ್ತೃಸಾಪೇಕ್ಷವಾದುದರಿಂದ ''ಪ್ರಕಾಶವಿಶೇಷಃ'' ಎಂದು ಕರ್ತೃವನ್ನು ತಿಳಿಸುತ್ತಿದ್ದಾರೆ. ಪ್ರಕಾಶವಿಶೇಷವೆಂದರೆ ಜ್ಞಾನಾತಿಶಯ ಎಂದು ಅರ್ಥ. ಸೂತ್ರ ಮತ್ತು ಭಾಷ್ಯಗಳಲ್ಲಿ 'ಹಿ'ಶಬ್ದವು 'ಯತಃ' ಎಂಬರ್ಥವನ್ನು ಹೇಳುವುದು. ತಥಾ ಚ – ಸೂತ್ರದ ಮತ್ತು ಭಾಷ್ಯದ ಪದಗಳ ಯೋಜನೆ ಹೀಗಿದೆ – 'ಬಾದರಾಯಣಃ' ಭಗವಾನ್ ಬಾದರಾಯಣರಾದರೋ ದೇವತೆಗಳಿಗೆ ಮಧುವಿದ್ಯೆ ಮೊದಲಾದ ಸಮಸ್ತ-ವಿದ್ಯೆಗಳಲ್ಲಿ ಅಧಿಕಾರವಿರುವುದೆಂದು ತಿಳಿಯುತ್ತಾರೆ. ಅವರು ಆ ಫಲಗಳನ್ನು ಈಗಾ-ಗಲೇ ಪಡೆದಿರುವುದರಿಂದ ಅವರಿಗೆ ಆ ಫಲಗಳ ಅರ್ಥಿತ್ವ ಇಲ್ಲದಿರುವುದು ದೋಷ-ವೆಂದು ಹೇಳತಕ್ಕದ್ದಲ್ಲ.

ಯದ್ಯಪಿ – ದೇವತೆಗಳು 'ಪ್ರಾಪ್ತಪದಾಃ' ಅಂದರೆ ಬ್ರಹ್ಮಜ್ಞಾನಿಗಳಾದ್ದರಿಂದ ಸಿದ್ಧವಾದ ಮೋಕ್ಷ ಮತ್ತು ಇತರ ಫಲವುಳ್ಳವರು. ಹಾಗೆಯೇ ಹೊಂದಲು ಅಶಕ್ಯವಾದ

ಅವರಿಗೆ ಅಯೋಗ್ಯವಾದ ಫಲಗಳೂ ಇರುವವು. ಆದರೂ ಹೀಗೆ ಫಲಪ್ರಾಪ್ತಿಯನ್ನು ಪಡೆದಿದ್ದರೂ ದೇವತೆಗಳಿಗೆ ಮಧ್ವಾದಿ ವಿದ್ಯೆಗಳಲ್ಲಿ ಉಕ್ತವಾಗಿರುವುದನ್ನು ಉಪಾಸನೆ ಮಾಡುವುದರಿಂದ ಹಾಗೂ ಕರ್ಮಗಳನ್ನು ಆಚರಿಸುವುದರಿಂದ ಫಲವಿಶೇಷ ಇರು-ವುದರಿಂದ ಅಂದರೆ ತಮಗೆ ಯೋಗ್ಯವಾದ ಆದರೆ ಕೇವಲ ಜ್ಞಾನದಿಂದ ಪಡೆಯ-ಲಾಗದ ಮೋಕ್ಷಫಲದಲ್ಲಿ ಅತಿಶಯವು ಇದ್ದ ಕಾರಣ ಅದರ ಸಿದ್ಧಿಗಾಗಿ ಅವರಿಗೆ ಅರ್ಥಿತ್ವವು ಇರುವುದು.

ಭಾ.ದೀ.– ನ ಚ – 'ಫಲೇಽತಿಶಯಸ್ಯಾಸಿದ್ಧತ್ವೇನ ತತ್ರ ಅರ್ಥಿತ್ವಸಂಭವೇಽಪಿ ತತ್ಸಾಧನವಿದ್ಯಾನಾಂ ನಿತ್ಯಸಿದ್ಧತ್ವಾತ್ ವಿದ್ಯಾವಿಚಾರಸ್ಯ ಜ್ಞಾನಾರ್ಥತ್ವಾತ್ ತತ್ರ ಅರ್ಥಿತ್ವಾಸಂಭವಃ' ಇತಿ ವಾಚ್ಯಮ್ । 'ಹಿ' - ಯತೋ ಭಗವದಿತರೇಷಾಂ ನಿರುಪಚರಿತಸಾರ್ವಜ್ಞಾಭಾವಾತ್ ವಿದ್ಯಾವಿಚಾರೇಣ 'ಪ್ರಕಾಶವಿಶೇಷಃ' ಜ್ಞಾನ-ವಿಶೇಷಃ 'ಅಸ್ತಿ' ಸಂಭವತಿ - ಇತಿ । ಅನೇನ ಸೂತ್ರವೃತ್ತೇರ್ದರ್ಶಿತಾ । ಅತ್ರ 'ಬಾದರಾಯಣ'ಪದಂ ಪೂಜಾರ್ಥಮ್ ।

ಶಂಕೆ – ಫಲದಲ್ಲಿ ಉಂಟಾಗುವ ಅತಿಶಯವು ಈಗ ಸಿದ್ಧವಲ್ಲವಾದ್ದರಿಂದ ಆ ವಿಷಯದಲ್ಲಿ ಅವರಿಗೆ ಅರ್ಥಿತ್ವ ಇರುವುದಾದರೂ ಅದಕ್ಕೆ ಸಾಧನವಾದ ಜ್ಞಾನಗಳು ಅವರಿಗೆ ನಿತ್ಯಸಿದ್ಧವಾಗಿರುವುದರಿಂದ ವಿದ್ಯಾವಿಚಾರವಾದರೋ ಜ್ಞಾನಕ್ಕೋಸ್ಕರವಾಗಿ-ರುವುದರಿಂದ ಆ ಜ್ಞಾನದಲ್ಲಿ ಅವರಿಗೆ ಅರ್ಥಿತ್ವವಿರುವುದು ಸಾಧ್ಯವಿಲ್ಲ.

ಸಮಾಧಾನ – ಹೀಗೆ ಹೇಳತಕ್ಕದ್ದಲ್ಲ. 'ಹಿ' ಏಕೆಂದರೆ, ಭಗವದಿತರರಿಗೆ ಮುಖ್ಯಾ-ರ್ಥದಲ್ಲಿ ಸರ್ವಜ್ಞತ್ವವಿಲ್ಲದಿರುವುದರಿಂದ ದೇವತೆಗಳಿಗೆ ಆ ವಿದ್ಯೆಗಳ ವಿಚಾರದಿಂದ 'ಪ್ರಕಾಶವಿಶೇಷಃ' ಅಂದರೆ ಜ್ಞಾನವಿಶೇಷವು 'ಅಸ್ತಿ' ಸಂಭವಿಸುವುದು – ಎಂದು. ಇದರಿಂದ ಸೂತ್ರದ ವ್ಯಾಖ್ಯಾನವು ದರ್ಶಿತವಾಗುವುದು. ಇಲ್ಲಿ 'ಬಾದರಾಯಣ'ಪದವು ಗೌರವಸೂಚಕವಾದ ಪದವಾಗಿದೆ.

ಭಾ.ದೀ. – 'ನನು ತತ್ತದ್ ವಿದ್ಯೋಕ್ತೋಪಾಸನಕರ್ಮಕರಣಾಭ್ಯಾಂ ತತ್ತದ್ ವಿದ್ಯೋಕ್ತಫಲಾದನ್ಯದಪಿ ಫಲಂ ಪ್ರಕಾಶವಿಶೇಷಶ್ಚ ದೇವಾನಾಂ ಭವತಿ ಇತ್ಯೇತದ್

**ಕುತೋ ಜ್ಞಾಯತೇ?' ಇತ್ಯಾಶಂಕಾಂ ಪರಿಹರ್ತುಮುಕ್ತಾರ್ಥೇ 'ಹಿ'ಶಬ್ದ-ಸೂಚಿತಾಂ ಸ್ಮೃತಿಂ ದರ್ಶಯತಿ – ಯಾವದಿತಿ ॥**

ಆಯಾಯ ವಿದ್ಯೆಯಲ್ಲಿ ಹೇಳಿರುವ ಉಪಾಸನೆ ಅಥವಾ ಕರಣ ಇವುಗಳನ್ನು ಮಾಡುವುದರಿಂದ ಆಯಾಯ ವಿದ್ಯೆಯಲ್ಲಿ ಹೇಳಿದ ಫಲಕ್ಕಿಂತಲೂ ಭಿನ್ನವಾದ ಫಲ ಮತ್ತು ಜ್ಞಾನವಿಶೇಷವು ದೇವತೆಗಳಿಗೆ ಲಭಿಸುವುದು ಎಂಬ ವಿಷಯವು ಯಾವ ಪ್ರಮಾಣದಿಂದ ತಿಳಿದು ಬರುತ್ತದೆ? ಎಂಬ ಆಶಂಕೆಯನ್ನು ಪರಿಹರಿಸಲು ತಾವು ಹೇಳಿದ ವಿಷಯದಲ್ಲಿ ಸೂತ್ರದಲ್ಲಿರುವ 'ಹಿ'ಶಬ್ದವು ಸೂಚಿಸುವ ಸ್ಮೃತಿಯನ್ನು ''ಯಾವತ್'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಯಾವತ್ಸೇವಾ ಪರೇ ತತ್ತ್ವೇ ತಾವತ್ ಸುಖವಿಶೇಷತಾ ।**
**ಸಂಭವಾಚ್ಚ ಪ್ರಕಾಶಸ್ಯ ಪರಮೇಕಮೃತೇ ಹರಿಮ್ ॥**
**ತೇಷಾಂ ಸಾಮರ್ಥ್ಯಯೋಗಾಚ್ಚ ದೇವಾನಾಮಪ್ಯುಪಾಸನಮ್ ।**
**ಸರ್ವಂ ವಿಧೀಯತೇ ನಿತ್ಯಂ ಸರ್ವಯಜ್ಞಾದಿಕರ್ಮ ಚ ॥'**
**– ಇತಿ ಸ್ಕಾಂದೇ ॥**

ಪರಮಾತ್ಮನ ವಿಷಯದಲ್ಲಿ ಮಧುವಿದ್ಯೆ ಮೊದಲಾದವಿದ್ಯೆಗಳಲ್ಲಿ ಹೇಳಲಾದ ಉಪಾಸನೆ ಮತ್ತು ಯಜ್ಞಾದಿ ಕರ್ಮಗಳನ್ನು ದೇವತೆ-ಗಳು ಎಷ್ಟು ಅಧಿಕವಾಗಿ ಮಾಡುವರೋ ಅಷ್ಟು ವಿಶೇಷವಾಗಿ ಅವರಿಗೆ ಸ್ವರ್ಗ ಮೋಕ್ಷಗಳ ಸುಖದಲ್ಲಿ ಅತಿಶಯವು ಮತ್ತು ಜ್ಞಾನವಿಶೇಷವು ಲಭಿಸುವುದು. ಸ್ವತಂತ್ರರಾದ ಶ್ರೀಹರಿಯನ್ನುಳಿದು ಇತರರಿಗೆ ನಿರತಿಶಯವಾದ ಸರ್ವಜ್ಞತ್ವ ಇಲ್ಲದಿರುವುದರಿಂದ ಮತ್ತು ವಿದ್ಯಾವಿಚಾರದಿಂದ ಅವರಿಗೆ ಜ್ಞಾನವಿಶೇಷವು ಸಂಭವಿ-ಸುವ ಕಾರಣ, ಆ ಜ್ಞಾನವನ್ನು ಪಡೆಯುವ ಇಚ್ಛೆಯುಳ್ಳ ಆ ದೇವತೆಗಳಿಗೆ ಸಾಮರ್ಥ್ಯವೂ ಇರುವುದರಿಂದ ವಸು ಮೊದಲಾದ

ಪದಗಳನ್ನು ಪಡೆದ ದೇವತೆಗಳಿಂದ ಎಲ್ಲ ವೇದವಿದ್ಯೆಗಳಲ್ಲಿ ಉಕ್ತ-ವಾಗಿರುವ ಉಪಾಸನೆ ಹಾಗೂ ಯಜ್ಞಾದಿ ಕರ್ಮಗಳನ್ನು ಶ್ರುತಿಗಳು ವಿಧಿಸುತ್ತಿವೆ – ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

ಭಾ.ದೀ. – 'ಕ್ರಿಯತೇ' ಇತಿ ಶೇಷಃ । ಸ್ವಾರ್ಥೇ ಲಟ್ । ಭಾವಭವಿತ್ರೋರ-ಭೇದವಿವಕ್ಷಯಾ ವಾ । 'ಸಿದ್ಧತ್ವಸ್ಯ' ಇತಿ ಶೇಷಃ । ಚೋ ಹೇತುಸಮುಚ್ಚಯೇ ।

ಯದ್ವಾ – ಆದ್ಯಃ 'ಚಃ' - 'ಪ್ರಕಾಶಸ್ಯ ಚ' ಇತಿ ಸಂಬಧ್ಯತೇ । ಫಲ-ಸಮುಚ್ಚಾಯಕಶ್ಚಾಯಮ್, ಅಸಂಭವಸಮುಚ್ಚಯೇ ಚ । 'ಸಂಭವಾತ್' ಇತ್ಯಾ-ವರ್ತತೇ । ತಥಾ ಚ 'ಪರೇ ತತ್ವೇ' ಪರಮಾತ್ಮಸ್ವರೂಪೇ 'ಅಸೌ ವಾ ಆದಿತ್ಯಃ' (ಛಾಂ.೩.೧.೧.) ಇತ್ಯಾದಿನೋಕ್ತೇ ತದ್ವಿಷಯೇ 'ದೇವಾನಾಂ' ದೇವೈರ್ವಸ್ವಾದಿಭಿಃ 'ಯಾವತ್' ಯಾವದಧಿಕಂ 'ಸೇವಾ' – 'ಏಷಾ ಸೇವಾ' ಇತ್ಯುಕ್ತಾ ಶ್ರವಣಾದಿ-ರೂಪೋಪಾಸಾ ಕ್ರಿಯತೇ 'ತಾವತ್' ತಾವದಧಿಕಂ ತೇಷಾಂ 'ಸುಖವಿಶೇಷತಾ' - ಸ್ವರ್ಗಾಪವರ್ಗಾದಿಸುಖೇऽತಿಶಯಃ ಸ್ವಸ್ವಯೋಗ್ಯೋ ಜ್ಞಾನಮಾತ್ರೇಣ ಸಾಧ್ಯಃ - ಸಿಧ್ಯತಿ । ಯತೋऽತಃ 'ಪರಂ' - ಸ್ವತಂತ್ರಂ ಹರಿಮ್ ಏಕಮ್ ಋತೇऽನ್ಯೇಷಾಂ 'ಪ್ರಕಾಶಸ್ಯಾಸಂಭವಾತ್' - ನಿರುಪಚರಿತಸಾರ್ವಜ್ಞ್ಯಾಭಾವಾತ್ । ಅತ ಏವ ವಿದ್ಯಾವಿಚಾರೇಣ ಸಾಧ್ಯಸ್ಯ ಪ್ರಕಾಶಸ್ಯ ಜ್ಞಾನವಿಶೇಷಸ್ಯ ಸಂಭವಾತ್, ಅತ ಏವ ಅರ್ಥಿತ್ವಸ್ಯ ಸಂಭವಾತ್ ತೇಷಾಂ ದೇವಾನಾಂ 'ಸಾಮರ್ಥ್ಯಯೋಗಾತ್' - ಸಾಮರ್ಥ್ಯಸಂಭವಾಚ್ಚ ವಿದ್ವತ್ತಾಸಂಭವಾಚ್ಚಾಪಿ ಪ್ರಾಪ್ತಪದಾನಾಮಪಿ 'ದೇವಾ-ನಾಂ' ದೇವೈಃ 'ಸರ್ವಮುಪಾಸನಂ' - ಸರ್ವವಿದ್ಯೋಕ್ತೋಪಾಸನಂ ಸರ್ವ-ಯಜ್ಞಾದಿಕರ್ಮ ಚ 'ನಿತ್ಯಂ' ನಿಯಮೇನ 'ವಿಧೀಯತೇ' ಶ್ರುತಿಷು ಕರ್ತವ್ಯತ್ವೇನ ಬೋಧ್ಯತೇ – ಇತಿ ಯೋಜನಾ । 'ಚಃ' ಸಮುಚ್ಚಯೇ ।

'ಅಪ್ರಕಾಶಸ್ಯ' ಇತಿ ಪಾಠೇ 'ನಿರುಪಚರಿತಸಾರ್ವಜ್ಞ್ಯಾಭಾವಸ್ಯ' ಇತ್ಯರ್ಥಃ । ತದಾ ಪ್ರಕಾಶಸ್ಯ 'ಚ'ಶಬ್ದೇನ ಗ್ರಹಣಮ್ । 'ಸಂಭವಾತ್' ಇತ್ಯಸ್ಯ 'ಸಿದ್ಧತ್ವಾತ್, ಸತ್ವಾತ್' ಇತ್ಯರ್ಥದ್ವಯಮ್ । ಪಾಠದ್ವಯೇऽಪಿ 'ಅನ್ಯೇಷಾಮ್' ಇತಿ ಶೇಷಃ ।

ಏಕಶಬ್ದೋ ಅವಧಾರಣಾರ್ಥೋ ವಿರಿಂಚಸ್ಯಾಪಿ ವರ್ಜ್ಯತ್ವನಿವಾರಕಃ । 'ಸ್ಕಾಂದೇ' - 'ಉಕ್ತಮ್' ಇತಿ ಶೇಷಃ । ಅತಃ 'ಫಲವಿಶೇಷಾಭಾವಾದ್ ಅಸ್ತಿ ಹಿ ಪ್ರಕಾಶ-ವಿಶೇಷಃ ಇತ್ಯನಯೋಃ ನಾಸಿದ್ಧಿಃ' ಇತಿ ವಾಕ್ಯಶೇಷಃ।

ಇಲ್ಲಿ 'ಕ್ರಿಯತೇ' ಎಂಬ ಪದವು ಶೇಷವಾಗಿದೆ. ವಿಶೇಷತಃ ಎಂಬಲ್ಲಿ ತಲ್ ಪ್ರತ್ಯಯವು ಪ್ರಕೃತ್ಯರ್ಥವನ್ನೇ ಹೇಳುವುದು. ಅಥವಾ ಧರ್ಮಧರ್ಮಿಗಳಿಗೆ ಅಭೇದ ವಿವಕ್ಷೆಯಿಂದ ಇಲ್ಲಿ ಪ್ರತ್ಯಯವನ್ನು ಪ್ರಯೋಗಿಸಲಾಗಿದೆ. 'ಸಿದ್ಧ್ಯತಿ' 'ಅಸ್ಯ' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ಸಂಭವಾಚ್ಚ' ಎಂಬಲ್ಲಿ ಚಕಾರಗಳು ಹೇತುಗಳ ಸಮುಚ್ಚಯವನ್ನು ಹೇಳುವವು.

ಅಥವಾ – ಇಲ್ಲಿರುವ ಚಕಾರಗಳಲ್ಲಿ ಮೊದಲನೆಯ ಚಕಾರವು 'ಪ್ರಕಾಶಸ್ಯ ಚ' ಎಂಬುದಾಗಿ ಸಂಬಂಧವನ್ನು ಹೊಂದುವುದು. ಈ ಚಕಾರವು ಫಲದ ಸಮುಚ್ಚಯ-ವನ್ನೂ ಹೇಳುವುದು. ಹಾಗೂ ಅಸಂಭವದ ಸಮುಚ್ಚಯವನ್ನೂ ಹೇಳುವುದು. 'ಸಂಭವಾತ್' ಎಂಬ ಪದವು ಆವೃತ್ತಿಯನ್ನು ಪಡೆಯುವುದು. ತಥಾ ಚ – 'ಪರೇ ತತ್ವೇ' 'ಅಸೌ ವಾ ಆದಿತ್ಯಃ' ಇತ್ಯಾದಿ ಶ್ರುತಿಗಳಿಂದ ಉಕ್ತವಾದ ಪರಮಾತ್ಮನ ಸ್ವರೂಪದ ವಿಷಯದಲ್ಲಿ 'ದೇವಾನಾಂ' - ಅಂದರೆ ವಸ್ವಾದಿ ದೇವತೆಗಳಿಂದ 'ಯಾವತ್' ಎಷ್ಟು ಅಧಿಕವಾಗಿ 'ಸೇವಾ' - 'ಏಷಾ ಸೇವಾ' ಎಂಬಲ್ಲಿ ಹೇಳಿರುವಂತೆ ಶ್ರವಣಾದಿ ರೂಪವಾದ ಉಪಾಸನೆಯು ಮಾಡಲ್ಪಡುವುದೋ 'ತಾವತ್' - ಅಷ್ಟು ಅಧಿ -ಕವಾಗಿ ಅವರಿಗೆ ತನಗೆ ಯೋಗ್ಯವಾದ ಆದರೆ ಕೇವಲ ಜ್ಞಾನಮಾತ್ರದಿಂದ ಲಭಿಸಲಾಗದ 'ಸುಖವಿಶೇಷತಾ' ಸ್ವರ್ಗ ಮೋಕ್ಷಾದಿಸುಖಗಳಲ್ಲಿ ಅತಿಶಯವು ಸಿದ್ಧಿಸುವುದು. ಹೀಗಿರುವ ಕಾರಣದಿಂದ 'ಪರಂ' - ಸ್ವತಂತ್ರನಾದ 'ಹರಿಮ್ ಏಕಮ್ ಋತೇ' - ಶ್ರೀಹರಿಯನ್ನು ಬಿಟ್ಟು ಉಳಿದವರಿಗೆ 'ಪ್ರಕಾಶಸ್ಯ ಅಸಂಭವಾತ್'- ನಿರವಧಿ ಕವಾದ ಸರ್ವಜ್ಞತ್ವವು ಇಲ್ಲದಿರುವುದರಿಂದ, ಆದ್ದರಿಂದಲೇ ವಿದ್ಯೆಯ ವಿಚಾರದಿಂದ ಉಂಟಾಗುವ 'ಪ್ರಕಾಶಸ್ಯ ಸಂಭವಾತ್' ಜ್ಞಾನವಿಶೇಷವು ಲಭಿಸುವ ಕಾರಣದಿಂದ ಆದ್ದರಿಂದಲೇ ಅವರಿಗೆ ಅರ್ಥಿತ್ವವು ಉಂಟಾಗುವುದರಿಂದ, ಆ ದೇವತೆಗಳಿಗೆ 'ಸಾಮರ್ಥ್ಯಯೋಗಾತ್' ಸಾಮರ್ಥ್ಯವಿರುವುದರಿಂದ, ವಿದ್ವತ್ತೆಯು ಉಂಟಾಗಲು

ಸಾಧ್ಯವಿರುವುದರಿಂದ, ಪದಪ್ರಾಪ್ತಿಯನ್ನು ಹೊಂದಿದ ದೇವತೆಗಳಿಂದಲೂ 'ಸರ್ವ-ಮುಪಾಸನಂ' - ಸರ್ವವಿದ್ಯೆಗಳಲ್ಲಿ ಉಕ್ತವಾದ ಉಪಾಸನೆ ಮತ್ತು ಸಮಸ್ತ ಯಜ್ಞಾದಿ-ಕರ್ಮಗಳು 'ನಿತ್ಯಂ' - ನಿಯಮದಿಂದ, 'ವಿಧೀಯತೇ' - ಶ್ರುತಿಗಳಲ್ಲಿ ಕರ್ತವ್ಯವೆಂದು ಬೋಧಿಸಲಾಗಿದೆ – ಎಂದು ಭಾಷ್ಯದ ಪದಗಳ ಯೋಜನೆ. 'ಕರ್ಮ ಚ' ಎಂಬಲ್ಲಿನ ಚಕಾರವು ಸಮುಚ್ಚಯವನ್ನು ಹೇಳುವುದು.

'ಅಪ್ರಕಾಶಸ್ಯ' ಎಂಬ ಪಾಠವಿರುವ ಪಕ್ಷದಲ್ಲಿ 'ನಿರುಪಚರಿತವಾದ ಸಾರ್ವಜ್ಞ್ಯದ ಅಭಾವವು' ಎಂದು ಅದರ ಅರ್ಥ. ಆ ಪಕ್ಷದಲ್ಲಿ ಚಶಬ್ದದಿಂದ ಪ್ರಕಾಶವನ್ನು ಗ್ರಹಿಸಬೇಕು. 'ಸಂಭವಾತ್' ಎಂಬ ಪದಕ್ಕೆ ಸಿದ್ಧವಾಗಿರುವುದರಿಂದ, ಇರುವುದರಿಂದ ಎಂದು ಎರಡೂ ಅರ್ಥಗಳಿವೆ. ಎರಡು ವಿಧವಾದ ಪಾಠದಲ್ಲೂ 'ಅನ್ಯೇಷಾಂ' ಎಂಬ ಪದವು ಶೇಷವಾಗಿದೆ. 'ಪರಮೇಕಂ' ಎಂಬಲ್ಲಿರುವ ಏಕಶಬ್ದವು ಅವಧಾರಣಾರ್ಥಕ-ವಾಗಿದ್ದು ಚತುರ್ಮುಖನನ್ನು ಹೊರತು ಪಡಿಸಿ ಇತರದೇವತೆಗಳಿಗೆ ಇಲ್ಲಿ ವ್ಯಾವೃತ್ತಿಯು ವಿವಕ್ಷಿತವಾಗಿದೆ ಎಂಬ ಶಂಕೆಯನ್ನು ನಿವಾರಿಸುತ್ತದೆ. 'ಸ್ಕಾಂದೇ' ಎಂಬ ಪದದ ನಂತರ 'ಉಕ್ತಮ್' ಎಂಬ ಪದವು ಶೇಷವಾಗಿದೆ. ಆದ್ದರಿಂದ 'ಅತಃ ಫಲವಿಶೇಷಭಾವಾತ್‌ಅಸ್ತಿ ಹಿ ಪ್ರಕಾಶವಿಶೇಷಃ ಇತ್ಯನಯೋಃ ನಾಸಿದ್ಧಿಃ' – 'ಫಲವಿಶೇಷಭಾವಾತ್‌ಅಸ್ತಿ ಹಿ ಪ್ರಕಾಶವಿಶೇಷಃ' ಎಂಬ ಭಾಷ್ಯದ ವಾಕ್ಯಗಳಿಗೆ ಈ ವಾಕ್ಯದಿಂದ ಹೇಳಿದ ಹೇತುಗಳಿಗೆ 'ನಾಸಿದ್ಧಿಃ' - ಅಸಿದ್ಧಿ ಇಲ್ಲ ಎಂದು ವಾಕ್ಯಶೇಷವಾಗಿದೆ.

ಭಾ.ದೀ. – ನನು ಅಸ್ತ್ವೇವಮ್ 'ಅಸಂಭವಾತ್' ಇತ್ಯುಕ್ತಯುಕ್ತಿಪರಾಭವಃ । ತಥಾಽಪಿ ದೇವಾನಾಮ್ ಅಧಿಕಾರಾಭ್ಯುಪಗತೌ ಆಪ್ತತಮಜೈಮಿನಿಮತವಿರೋಧ ಇತ್ಯತ ಆಹ – ಉಕ್ತೇತಿ ॥

ಹೀಗೆ ಹೇಳುವುದರಿಂದ 'ಮಧ್ವಾದಿಷು ಅಸಂಭವಾತ್' ಎಂದು ಹೇಳಿದ ಯುಕ್ತಿಯ ನಿರಾಕರಣೆ ಆಗಲಿ; ಆದರೆ ದೇವತೆಗಳಿಗೆ ಅಧಿಕಾರವನ್ನು ಒಪ್ಪಿದ ಪಕ್ಷದಲ್ಲಿ ಆಪ್ತತಮ-ರೆನಿಸಿದ ಜೈಮಿನಿಗಳ ಮತವಿರೋಧವು ಪ್ರಾಪ್ತವಾಗುವುದು!!.

ಈ ಶಂಕೆಯನ್ನು ಭಾಷ್ಯದಲ್ಲಿ ''ಉಕ್ತ'' ಎಂಬ ವಾಕ್ಯದಿಂದ ನಿವಾರಿಸಿದ್ದಾರೆ.

**ಭಾಷ್ಯಮ್ – ಉಕ್ತಫಲಾನಧಿಕಾರಮಾತ್ರಂ ಜೈಮಿನಿಮತಮ್ । ಅತೋ ನ ಮತವಿರೋಧಃ ।**

ಆಯಾಯ ವಿದ್ಯೆಯಲ್ಲಿ ಹೇಳಿದ ಫಲದಲ್ಲಿ ಮಾತ್ರ ಅಧಿಕಾರವಿಲ್ಲ-ವೆಂದು ಜೈಮಿನಿಗಳ ಮತವಾಗಿದೆ. ಆದ್ದರಿಂದ ಅವರ ಮತದ ವಿರೋಧವಿಲ್ಲ.

ಭಾ.ದೀ. – 'ಉಕ್ತಂ ಚ ತತ್ ಫಲಂ ಚ, ಉಕ್ತಫಲಂ ಯಸ್ಯ' ಇತಿ ವಿಗ್ರಹಃ । ತಥಾ ಚ – ತತ್ತದ್ ವಿದ್ಯೋಕ್ತಫಲಾರ್ಥಂ ತತ್ಫಲಕಪ್ರಾಗಾಪ್ತಜ್ಞಾನಾರ್ಥಂ ಚ ಯೋಽಯಮಧಿಕಾರಃ ತದಭಾವಮಾತ್ರಂ 'ಜೈಮಿನಿಮತಮ್' - ಜೈಮಿನ್ಯಭಿ-ಮತಮ್ ಇತ್ಯರ್ಥಃ । ಮಾತ್ರಶಬ್ದೇನ ಫಲಾಂತರಾರ್ಥಾಧಿಕಾರಾಭಾವೋ ವ್ಯಾವರ್ತ್ಯತೇ । ಕಿಮತೋ ಯದ್ಯೇವಮ್? ಇತ್ಯತ ಆಹ – 'ಅತಃ' ಇತಿ ಜೈಮಿನ್ಯುಕ್ತಸ್ಯ ಸೂತ್ರಕಾರೇಣಾಪಿ ಅಂಗೀಕೃತತ್ವಾತ್, ಸೂತ್ರಕೃದುಕ್ತಸ್ಯ ಚ ಜೈಮಿನಿ-ನಾಽನಿರಸ್ತತ್ವಾನ್ನ ತಯೋರ್ವಿರೋಧಃ - ಇತ್ಯರ್ಥಃ ।

'ಉಕ್ತಫಲ' ಎಂಬ ಭಾಷ್ಯದ ಪದಕ್ಕೆ 'ಉಕ್ತಂ ಚ ತತ್ ಫಲಂ ಚ ಮತ್ತು ಉಕ್ತಂ ಫಲಂ ಯಸ್ಯ ಎಂಬುದಾಗಿ ಎರಡೂ ರೀತಿಯ ವಿಗ್ರಹವು ಅಭಿಪ್ರೇತವಾಗಿದೆ. ತಥಾ ಚ – ಆಯಾಯ ವಿದ್ಯೆಗೆ ಹೇಳಿದ ಫಲಕ್ಕೋಸ್ಕರವಾಗಿ ಮತ್ತು ಆ ಫಲಸಾಧನವಾದ ಮೊದಲೇ ಅವರು ಪಡೆದಿರುವ ಜ್ಞಾನಕ್ಕೋಸ್ಕರವಾಗಿಯೂ ಯಾವ ಅಧಿಕಾರ-ವಿದೆಯೋ ಅದಿಲ್ಲವೆಂದು ಮಾತ್ರ 'ಜೈಮಿನಿಮತಮ್' - 'ಜೈಮಿನಿಗಳ ಅಭಿಮತವಾಗಿದೆ ಎಂದು ಅರ್ಥ. ಇಲ್ಲಿ ಮಾತ್ರ ಶಬ್ದದಿಂದ ಫಲಾಂತರದ ಬಗ್ಗೆ ಅಧಿಕಾರವಿಲ್ಲವೆಂಬುದನ್ನು ವ್ಯಾವರ್ತ್ಯಮಾಡಲಾಗಿದೆ. 'ಹೀಗೆ ಹೇಳುವುದರಿಂದ ಆದ ಫಲವೇನು?' ಎಂಬ ಶಂಕೆಗೆ ಉತ್ತರವಾಗಿ ''ಅತಃ'' ಎಂದು ಹೇಳಲಾಗಿದೆ. ಜೈಮಿನಿಗಳು ಹೇಳಿದ್ದನ್ನು ಸೂತ್ರಕಾರರೂ ಒಪ್ಪಿರುವುದರಿಂದ ಸೂತ್ರಕಾರರು ಹೇಳಿರುವುದನ್ನು ಜೈಮಿನಿಗಳು ನಿರಾಕರಿಸದಿರು-ವುದರಿಂದ ಅವರಿಬ್ಬರ ಮತಗಳಿಗೆ ವಿರೋಧವಿಲ್ಲ ಎಂದು ಅರ್ಥ.

ಭಾ.ದಿ. – ನನು ಕಿಮನಯೋರ್ಮತಯೋರ್ವಿಷಯವೈಲಕ್ಷಣ್ಯಕಲ್ಪನೇನ ವಿರೋಧ ಏವ ಕಿಂನ ಸ್ಯಾತ್? ಇತ್ಯತ ಆಹ – ಸರ್ವಜ್ಞಸ್ಯೇತಿ ॥

ಶಂಕೆ – ಹೀಗೆ ಈ ಎರಡು ಮತಗಳಿಗೆ ವಿಷಯವು ಭಿನ್ನವಾಗಿದೆ ಎಂದು ಕಲ್ಪಿಸು-ವುದೇಕೆ? ವಿರೋಧವೇ ಯಾಕಿರಬಾರದು?

ಸಮಾಧಾನ – ಈ ಶಂಕೆಯನ್ನು ಪರಿಹರಿಸಲು ''ಸರ್ವಜ್ಞಸ್ಯ'' ಎಂಬ ಭಾಷ್ಯ-ವಾಕ್ಯವು ಹೊರಟಿದೆ.

**ಭಾಷ್ಯಮ್– 'ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶವಿಚಿಂತಿತಮ್ ।**
**ಸ್ವೀಕೃತ್ಯ ಮುನಯೋ ಬ್ರೂಯುಸ್ತನ್ಮತಂ ನ ವಿರುಧ್ಯತೇ'**
**ಇತಿ ಬ್ರಾಹ್ಮೇ ॥ ೩೩ ॥**

॥ ಇತಿ ದೇವತಾಧಿಕರಣಮ್ ॥ ೮ ॥

ಸರ್ವಜ್ಞರಾದ ವೇದವ್ಯಾಸರು ನಿರೂಪಿಸಿದ ವಿಷಯದ ಏಕದೇಶ-ವನ್ನೇ ಸ್ವೀಕರಿಸಿ ಮುನಿಗಳು ಹೇಳುವುದರಿಂದ ಆ ಮತಗಳಿಗೆ ಪರಸ್ಪರ ವಿರೋಧವಿಲ್ಲ ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

ಭಾ.ದೀ. – 'ತು'ಶಬ್ದೋ ವಿಶೇಷಾರ್ಥಃ । 'ಏವ'ಕಾರೋ ಭಿನ್ನಕ್ರಮಃ । ತಥಾ ಚ – ಯಸ್ಮಾತ್ 'ಮುನಯಃ' ಜೈಮಿನ್ಯಾದ್ಯಾಃ ನಿರುಪಚರಿತಸರ್ವಜ್ಞಸ್ಯ 'ಕೃಷ್ಣಸ್ಯ' ದ್ವೈಪಾಯನಸ್ಯ 'ಏಕದೇಶವಿಚಿಂತಿತಂ' ವಿಚಿಂತಿತಾರ್ಥೈಕದೇಶಂ ತನ್ಮತೈಕದೇಶಮೇವ ಸ್ವೀಕೃತ್ಯ ತದೇವ ಬ್ರೂಯುಃ, ನಾನ್ಯತ್ । ತಸ್ಮಾತ್ 'ತನ್ಮತಂ' – ತೇಷಾಂ ಕೃಷ್ಣ-ಮುನೀನಾಂ ಮತಂ ಪರಸ್ಪರಂ ನ ವಿರುದ್ಧ್ಯತೇ – ಇತ್ಯರ್ಥಃ । 'ಬ್ರಾಹ್ಮೇ' ಇತ್ಯ-ನಂತರಂ 'ಉಕ್ತಮ್' ಇತಿ ಶೇಷಃ ।

ಅತಃ – ವಿಷಯವೈಲಕ್ಷಣ್ಯಮೇವ ಕಲ್ಪ್ಯಂ ನ ಮತವಿರೋಧಃ – ಇತಿ ಭಾವಃ ।

॥ ಇತಿ ಭಾಷ್ಯದೀಪಿಕಾಯಾಂ ದೇವತಾಧಿಕರಣಮ್ ॥

'ತ್ವೇಕದೇಶ ಎಂಬಲ್ಲಿರುವ ತುಶಬ್ದವು ವಿಶೇಷವನ್ನು ಹೇಳುವುದು. ಸರ್ವಜ್ಞಸ್ಯೈವ ಎಂಬಲ್ಲಿ 'ಏವ'ಶಬ್ದವು ಬೇರೆಡೆಯಲ್ಲಿ ಅನ್ವಯ ಹೊಂದುವುದು. ತಥಾ ಚ – ಯಾವ ಕಾರಣದಿಂದಾಗಿ 'ಮುನಯಃ' ಜೈಮಿನ್ಯಾದಿ ಮುನಿಗಳು ನಿರುಪಚರಿತ ಸರ್ವಜ್ಞರಾದ 'ಕೃಷ್ಣಸ್ಯ' - ದ್ವೈಪಾಯನರೆನಿಸಿದ ವೇದವ್ಯಾಸರ, 'ಏಕದೇಶವಿಚಿಂತಿತಮ್' - ಅವ-ರಿಂದ ವಿಚಾರಿತವಾದ ವಿಷಯದ 'ಏಕದೇಶಮೇವ' - ಏಕದೇಶವನ್ನು ಮಾತ್ರ ಸ್ವೀಕರಿಸಿ, ಅದನ್ನೇ ಹೇಳುವರು ಹೊರತು ಬೇರೆಯದನ್ನು ಹೇಳುವುದಿಲ್ಲವೋ ಆದ್ದ-ರಿಂದ 'ತನ್ಮತಂ' ಆ ವೇದವ್ಯಾಸರು ಮತ್ತು ಮುನಿಗಳ ಮತಗಳು ಪರಸ್ಪರವಿರೋಧ-ವನ್ನು ಪಡೆದಿಲ್ಲ ಎಂದು ಅರ್ಥ. 'ಬ್ರಾಹ್ಮೇ' ಎಂಬ ಪದದ ನಂತರ 'ಉಕ್ತಮ್' ಎಂಬುದು ಶೇಷವಾಗಿದೆ. ಆದ್ದರಿಂದ ವೇದವ್ಯಾಸರ ಮತ್ತು ಇತರ ಮುನಿಗಳ ಮತ-ಗಳಿಗೆ ವಿಷಯಭೇದವನ್ನೇ ಹೇಳಬೇಕೇ ಹೊರತು ಅವುಗಳಿಗೆ ವಿರೋಧವನ್ನು ಹೇಳ-ತಕ್ಕದ್ದಲ್ಲ - ಎಂದು ಭಾವ.

॥ ಇಲ್ಲಿಗೆ ಭಾಷ್ಯದೀಪಿಕಾದ ಕನ್ನಡಾನುವಾದದಲ್ಲಿ
ದೇವತಾಧಿಕರಣವು ಮುಗಿಯಿತು ॥

* * * * * *

## ೯. ಅಥ ಅಪಶೂದ್ರಾಧಿಕರಣಮ್

ಭಾ.ದೀ. – ಅತ್ರ ಅಧಿಕರಣೇ ತ್ರಿವರ್ಣೇತರಸ್ಯ ಶೂದ್ರಸ್ಯ ವೇದೋಕ್ತಬ್ರಹ್ಮ-ವಿದ್ಯಾಧಿಕಾರೋ ನಿರಾಕ್ರಿಯತೇ । ಪ್ರಾಸಂಗಿಕತ್ವಾತ್ ನಾಧ್ಯಾಯಾದಿಸಂಗತಿರನ್ವೇ-ಷಣೀಯಾ । ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ಸೂಚಯತಿ – ಮನುಷ್ಯೇತಿ ॥

ಈ ಅಧಿಕರಣದಲ್ಲಿ ತ್ರೈವರ್ಣಿಕರಿಗಿಂತ ಭಿನ್ನನಾದ ಶೂದ್ರನಿಗೆ ವೇದೋಕ್ತವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ನಿರಾಕರಿಸಲಾಗುವುದು. ಈ ವಿಷಯವು ಪ್ರಸಂಗ-ವಶಾತ್ ಇಲ್ಲಿ ಪ್ರಸ್ತುತವಾಗಿರುವುದರಿಂದ ಈ ಅಧಿಕರಣಕ್ಕೆ ಅಧ್ಯಾಯ, ಪಾದ ಮೊದ-ಲಾದವುಗಳ ಸಂಗತಿಯನ್ನು ಅನ್ವೇಷಿಸುವ ಆವಶ್ಯಕತೆ ಇಲ್ಲ. ಶ್ರುತಿ ಮೊದಲಾದವುಗಳ ಸಂಗತಿಯನ್ನು ಮತ್ತು ವಿಷಯಾದಿಗಳನ್ನು ''ಮನುಷ್ಯ'' ಇತ್ಯಾದಿ ವಾಕ್ಯದಿಂದ ಭಾಷ್ಯ-ದಲ್ಲಿ ಸೂಚಿಸುತ್ತಿದ್ದಾರೆ.

**ಭಾಷ್ಯಮ್ – ಮನುಷ್ಯಾಧಿಕಾರತ್ವಾದಿತ್ಯುಕ್ತೇಽವಿಶೇಷಾಚ್ಛೂದ್ರಸ್ಯಾಪಿ 'ಅಹ ಹಾರೇ ತ್ವಾ ಶೂದ್ರ' ಇತಿ ಪೌತ್ರಾಯಣೋಕ್ತೇರಧಿಕಾರ ಇತಿ,**

ವೇದವಿದ್ಯೆಯಲ್ಲಿ 'ಮನುಷ್ಯಾಧಿಕಾರತ್ವಾತ್' - ಮನುಷ್ಯರಿಗೆ ಅಧಿ-ಕಾರವಿರುವುದೆಂದು ಹೇಳಿದಾಗ ಮನುಷ್ಯತ್ವವು ಶೂದ್ರನಿಗೂ ಸಮಾನವಾಗಿರುವುದರಿಂದ ಛಾಂದೋಗ್ಯದಲ್ಲಿ 'ಅಹ ಹಾರೇತ್ವಾ ಶೂದ್ರ' ಎಂದು ಪೌತ್ರಾಯಣನನ್ನು ಕುರಿತು 'ಶೂದ್ರ' ಎಂದು ಸಂಬೋಧಿಸಿರುವುದರಿಂದ ಶೂದ್ರರಿಗೂ ಅಧಿಕಾರವಿದೆ - ಎಂದು ಶಂಕಿಸಿದಾಗ (ಸೂತ್ರಕಾರರು 'ಓಂ ಶುಗಸ್ಯ.... ' ಎಂದು ಹೇಳುತ್ತಿ-ದ್ದಾರೆ).

ಭಾ.ದೀ. – ನಿಮಿತ್ತಸಪ್ತಮೀಯಮ್ । ಅಧಿಕಾರೋಪಯೋಗಿತಯೋಕ್ತೇ ಮನುಷ್ಯತ್ವೇಽವಿಶೇಷಾದಿತಿ ವಾ । 'ನ ಕೇವಲಂ ದ್ವಿಜಾತೀನಾಂ, ಕಿಂತು ಶೂದ್ರಸ್ಯಾಪಿ' ಇತ್ಯಪೇರ್ಥಃ । ತಥಾ ಚ ಶೂದ್ರಸ್ಯಾಪಿ ವೇದವಿದ್ಯಾಧಿಕಾರಃ

ಪ್ರಾಪ್ನೋತಿ । ಕುತಃ? 'ಮನುಷ್ಯಾಧಿಕಾರತ್ವಾತ್' ಇತ್ಯನೇನ ಮನುಷ್ಯಾಣಾಮ್ ಅಧಿಕಾರಸ್ಯೋಕ್ತತ್ವಾತ್ । ಅಧಿಕಾರೋಪಯೋಗಿತಯೋಕ್ತೇ ಮನುಷ್ಯತ್ವೇ ಚ ಶೂದ್ರಸ್ಯ ದ್ವಿಜಾತಿಭ್ಯಃ 'ಅವಿಶೇಷಾತ್' ವಿಶೇಷಾಭಾವಾತ್ ।

ನನು ನ ಮನುಷ್ಯತ್ವಂ ವೇದವಿದ್ಯಾಧಿಕಾರೋಪಯೋಗಿ, ಕಿಂತು ವಿಶಿಷ್ಟ-ಬುದ್ಧ್ಯಾದಿಮತ್ತ್ವಮೇವ ಇತ್ಯತೋಽಪಿ ಆಹ – ಅವಿಶೇಷಾದಿತಿ ॥ ಶೂದ್ರಸ್ಯ ವಿಶಿಷ್ಟಬುದ್ಧ್ಯಾದಿಮತ್ತ್ವೇಽಪಿ ಅನ್ಯೇಭ್ಯಃ 'ಅವಿಶೇಷಾತ್' - ವಿಶೇಷಾಭಾವಾತ್ ಇತ್ಯರ್ಥಃ।

'ಮನುಷ್ಯಾಧಿಕಾರಿತ್ವಾದಿತ್ಯುಕ್ತೇಃ' ಎಂಬಲ್ಲಿರುವ ಸಪ್ತಮೀವಿಭಕ್ತಿಯು ನಿಮಿತ್ತವೆಂಬ ಅರ್ಥವನ್ನು ಹೇಳುವುದು. ವೇದವಿದ್ಯೆಯಲ್ಲಿ ಮನುಷ್ಯರಿಗೆ ಅಧಿಕಾರವಿರುವುದೆಂದು ಹೇಳಿದ್ದರ ನಿಮಿತ್ತವಾಗಿ ಎಂದು ಅರ್ಥ. ಅಥವಾ ವೇದವಿದ್ಯಾಧಿಕಾರಕ್ಕೆ ಪ್ರಯೋಜಕ-ವೆಂದು ಹೇಳಲಾದ ಮನುಷ್ಯತ್ವವು ಸಮಾನವಾಗಿರುವುದರಿಂದ ಎಂದು ಅರ್ಥ. 'ಶೂದ್ರಸ್ಯಾಪಿ' ಎಂಬಲ್ಲಿ ಅಪಿಶಬ್ದವು ದ್ವಿಜರಿಗೆ ಮಾತ್ರವಲ್ಲ; ಕಿಂತು ಶೂದ್ರರಿಗೂ ಎಂದು ಅರ್ಥವನ್ನು ತಿಳಿಸುವುದು. ತಥಾ ಚ – ಶೂದ್ರನಿಗೂ ವೇದವಿದ್ಯಾಧಿ ಕಾರವಿದೆಯೆಂದು ಪ್ರಾಪ್ತವಾಗುವುದು. ಏಕೆಂದರೆ? 'ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರದಿಂದ ಮನುಷ್ಯರಿಗೆ ವೇದವಿದ್ಯಾಧಿಕಾರವಿದೆಯೆಂದು ಹೇಳಲಾಗಿದೆ. ಅಧಿಕಾರಕ್ಕೆ ಪ್ರಯೋಜಕವಾದುದೆಂದು ಹೇಳಲಾದ ಮನುಷ್ಯತ್ವವಿಷಯದಲ್ಲಿ ಶೂದ್ರರಿಗೆ ದ್ವಿಜರಿಂದ 'ಅವಿಶೇಷಾತ್' - ವಿಶೇಷವಿಲ್ಲವಾಗಿದೆ.

ಮನುಷ್ಯತ್ವವು ವೇದವಿದ್ಯಾಧಿಕಾರಕ್ಕೆ ಪ್ರಯೋಜಕವಲ್ಲ, ವಿಶಿಷ್ಟಬುದ್ಧಿಮೊದ-ಲಾದವುಗಳೇ ಪ್ರಯೋಜಕವಾದದ್ದು ಎಂಬ ಶಂಕೆಗೆ ಉತ್ತರವಾಗಿಯೂ 'ಅವಿಶೇಷಾತ್' ಎಂದು ಹೇಳಲಾಗಿದೆ. ಶೂದ್ರನಿಗೆ ವಿಶಿಷ್ಟಬುದ್ಧಿ ಮೊದಲಾದವುಗಳು ಇರುವ ವಿಷಯ-ದಲ್ಲೂ ಇತರರಿಂದ 'ಅವಿಶೇಷಾತ್' - ವಿಶೇಷವಿಲ್ಲದ್ದರಿಂದ ಎಂದು ಅರ್ಥ.

ಭಾ.ದೀ.– ಏವಮ್ ಅವಿಶೇಷಾಖ್ಯಯುಕ್ತಿಮಭಿಧಾಯ ಶೂದ್ರಸ್ಯ ವೇದವಿದ್ಯಾಧಿಕಾರಾದರ್ಶನಾತ್, ಅನಧಿಕಾರಃ, ಇತ್ಯತೋ ಲಿಂಗದರ್ಶನಮಾಹ –

ಪೌತ್ರಾಯಣೋಕ್ತೇರಿತಿ ॥ 'ಛಾಂದೋಗ್ಯೇ ಪೌತ್ರಾಯಣಸ್ಯ ವೈದಿಕಸಂವರ್ಗ-ವಿದ್ಯಾಧ್ಯಯನೋಕ್ತೇಃ ದರ್ಶನಾತ್' ಇತ್ಯರ್ಥಃ।

ನನು ಪೌತ್ರಾಯಣಾಖ್ಯಪುರುಷಸ್ಯ ಶೂದ್ರತ್ವಮೇವ ಕುತ ಇತ್ಯತಃ ತಜ್ಜ್ಞಾಪಕಮಾಹ – ಅಹ ಹಾರೇತ್ವಾ ಶೂದ್ರೇತಿ ॥ ಪೌತ್ರಾಯಣಂ ಪ್ರತಿ ರೈಕ್ವೋಕ್ತೇಃ ತತ್ಕರ್ತೃಕಸಂಬೋಧನಾದೇವ ಇತ್ಯರ್ಥಃ । ನನ್ವಧಿಕಾರಾಭಾವೇಽಪಿ ಪೌತ್ರಾಯಣೋ ವೇದವಿದ್ಯಾಂ ವಿಚಾರಯಾಮಾಸ ಇತಿ ಕಿಂ ನ ಸ್ಯಾತ್? ಇತ್ಯತೋಽಪಿ ಆಹ – ಪೌತ್ರಾಯಣೋಕ್ತೇರಿತಿ ॥ 'ಪೌತ್ರಾಯಣಂ ಪ್ರತಿ ರೈಕ್ವೇಣ ನಿಸ್ಪೃಹೇಣ ಮುನಿನಾ ಸಂವರ್ಗವಿದ್ಯೋಪದೇಶಾತ್' ಇತ್ಯರ್ಥಃ। ಅನಧಿಕಾರಿಣಂ ಪ್ರತಿ ಮುನೇರುಪದೇಶಾಸಂಭವಾತ್ । ಪೌತ್ರಾಯಣಸ್ಯ ಅರ್ಥಾತ್ ಶ್ರುತೌ ಅಧಿ ಕಾರೋಕ್ತೇಶ್ಚ ಇತಿ ವಾ ಯೋಜನಾ । 'ಅಧಿಕಾರಃ' ಇತ್ಯನಂತರಮ್ 'ಅತೋ ವಿರೋಧಃ' ಇತ್ಯನುಕೃಷ್ಯತೇ। ತಸ್ಯ 'ಉಕ್ತಃ' ಇತ್ಯನೇನಾನ್ವಯಃ।

ಅನೇನ ಉಕ್ತನ್ಯಾಯೇನ ಉಕ್ತಾರ್ಥೇ ಶ್ರುತ್ಯಾದಿಪ್ರಮಾಣವಿರೋಧಾಕ್ಷೇಪಾತ್ ಪೂರ್ವೇಣ ಅಸ್ಯ ಆಕ್ಷೇಪಿಕೀ ಸಂಗತಿಃ, ವೇದವಿದ್ಯಾಧಿಕಾರಾಖ್ಯೋ ವಿಷಯಃ, ಸಯುಕ್ತಿಕಪೂರ್ವಪಕ್ಷಶ್ಚ ದರ್ಶಿತೋ ಭವತಿ।

ಹೀಗೆ ಅವಿಶೇಷವೆಂಬ ಯುಕ್ತಿಯನ್ನು ಹೇಳಿ ಶೂದ್ರರಿಗೆ ವೇದವಿದ್ಯಾಧಿಕಾರ-ವಿರುವುದು ಎಲ್ಲೂ ಕಂಡಿಲ್ಲವಾದ್ದರಿಂದ ಅವನಿಗೆ ಅಧಿಕಾರವಿಲ್ಲ ಎಂಬ ಶಂಕೆಯನ್ನು ನಿವಾರಿಸಲು ಶೂದ್ರರಿಗೆ ವೇದವಿದ್ಯಾಧಿಕಾರವನ್ನು ಸಾಧಿಸುವ ಹೇತು ದೃಷ್ಟವಾಗಿದೆ ಎಂದು ''ಪೌತ್ರಾಯಣೋಕ್ತೇಃ'' ಎಂಬ ಪದದಿಂದ ಹೇಳುತ್ತಿದ್ದಾರೆ. ಛಾಂದೋಗ್ಯದಲ್ಲಿ ಪೌತ್ರಾಯಣನಿಗೆ ವೇದೋಕ್ತವಾದ 'ಸಂವರ್ಗ'ವಿದ್ಯೆಯ ಅಧ್ಯಯನವನ್ನು ಹೇಳಿರು-ವುದು ದೃಷ್ಟವಾಗಿರುವುದರಿಂದ ಎಂದು ಅರ್ಥ. ಪೌತ್ರಾಯಣನೆಂಬ ಪುರುಷನು ಶೂದ್ರ-ನೆಂಬ ವಿಷಯದಲ್ಲಿ ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ ಅವನು ಶೂದ್ರ-ನೆಂದು ತಿಳಿಸುವ 'ಅಹ ಹಾರೇತ್ವಾ ಶೂದ್ರ' ಎಂಬ (ಶ್ರುತಿ)ವಾಕ್ಯವನ್ನು ಉಲ್ಲೇಖಿಸು-ತ್ತಿದ್ದಾರೆ. 'ಪೌತ್ರಾಯಣೋಕ್ತೇಃ' ಅಂದರೆ ಪೌತ್ರಾಯಣನನ್ನು ಕುರಿತು ರೈಕ್ವನ

ಮಾತಿನಿಂದ ಅಂದರೆ ರೈಕ್ವನು ಮಾಡಿದ ಸಂಬೋಧನದಿಂದಲೇ ಎಂದು ಅರ್ಥ. ಅಧಿಕಾರವಿಲ್ಲದಿದ್ದರೂ ಪೌತ್ರಾಯಣನು ವೇದವಿದ್ಯೆಯನ್ನು ವಿಚಾರಮಾಡಿದನೆಂದು ಆಗಬಾರದೇಕೆ? ಎಂಬ ಶಂಕೆಗೆ ಉತ್ತರವಾಗಿಯೂ ''ಪೌತ್ರಾಯಣೋಕ್ತೇಃ'' ಎಂದು ಹೇಳಲಾಗಿದೆ. ಪೌತ್ರಾಯಣನನ್ನು ಕುರಿತು ನಿಸ್ಪೃಹನಾದ ರೈಕ್ವಮುನಿಯು ಸಂವರ್ಗ-ವಿದ್ಯೆಯನ್ನು ಉಪದೇಶಿಸಿರುವುದರಿಂದ ಎಂದು ಅರ್ಥ. ಅನಧಿಕಾರಿಯನ್ನು ಕುರಿತು ಮುನಿಯು ಉಪದೇಶ ಮಾಡುವ ಸಂಭವವಿಲ್ಲದಿರುವುದರಿಂದ ಅಥವಾ ಪೌತ್ರಾಯಣನಿಗೆ ಅಧಿಕಾರವಿರುವುದೆಂದು ಶ್ರುತಿಯಲ್ಲಿ ಅರ್ಥಾತ್ ಹೇಳಿರುವುದರಿಂದಲೂ ಎಂದು ಯೋಜನೆ. 'ಅಧಿಕಾರಃ' ಎಂಬ ಪದದ ನಂತರ 'ಅತೋ ವಿರೋಧಃ' ಎಂಬ ಪದಗಳು ಅನುವೃತ್ತಿಯನ್ನು ಹೊಂದುತ್ತವೆ. ಈ ಪದಗಳು 'ಉಕ್ತೇಃ' ಎಂಬ ಪದದೊಂದಿಗೆ ಅನ್ವಯವನ್ನು ಹೊಂದುತ್ತವೆ.

ಇದರಿಂದ – ಇಲ್ಲಿ ಹೇಳಿದ ಯುಕ್ತಿಯಿಂದ ಹಿಂದೆ ಹೇಳಿದ ವಿಷಯದಲ್ಲಿ ಶ್ರುತ್ಯಾದಿಪ್ರಮಾಣಗಳ ವಿರೋಧವಿರುವುದೆಂದು ಆಕ್ಷೇಪ ಮಾಡುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುವುದೆಂದು ಹಾಗೆಯೇ ವೇದವಿದ್ಯಾಧಿಕಾರವೆಂಬ ವಿಷಯವೂ, ಮತ್ತು ಸಯುಕ್ತಿಪೂರ್ವಪಕ್ಷವೂ ದರ್ಶಿತವಾಗುವುದು.

ಭಾ.ದೀ. – ಛಾಂದೋಗ್ಯೇ ಚತುರ್ಥಾಧ್ಯಾಯೇ ಸಂವರ್ಗಪ್ರಕರಣೇ ಹಿ ಇತ್ಥಮಾಖ್ಯಾಯಿಕಾ – ಪೌತ್ರಾಯಣೋ ನಾಮ ರಾಜಾ ಪ್ರಾಸಾದಾಗ್ರೇ ನಿಶಾಯಾಂ ಶಯಾನೋಽಭೂತ್ । ತದಾ ಪ್ರಾಸಾದೋಪರಿ ಹಂಸಪಕ್ಷಿಣೋಽಗಮನ್ । ಉಪರಿಪತತಾಂ ಪರಸ್ಪರಂ ವಾರ್ತಾಂ ಕುರ್ವತಾಂ ತೇಷಾಂ ಮಧ್ಯೇ ದ್ವಾವಗ್ರಗಾಮಿನೌ ಆಸ್ತಾಮ್ । ತತ್ರೈಕ ಏಕಮುವಾಚ । ಕಿಮಿತಿ? 'ಅರೇ ಪೌತ್ರಾಯಣೇಯಂ ತೇಜಸ್ತ್ವಂ ಮಾ ಗಮಃ । ತತ್ಸಂಬಂಧೇ ತದೀಯಂ ತೇಜಃ ತ್ವಾಂ ದಹೇತ್' ಇತಿ ॥ ಏವಮುಕ್ತಃ ಪರೋ ಹಂಸಃ 'ಕಮ್' ಇತ್ಯಾಕ್ಷೇಪವಚನೇನ ರಾಜಾನಮನಾದೃತ್ಯ ರೈಕ್ವಮುನಿಮೇವ ಪ್ರಶಶಂಸ । ತಚ್ಛ್ರುತ್ವಾ ಪರಿತಪ್ತಮನಾ ರಾಜಾ ತಲ್ಪಾದುತ್ಥಿತಸ್ತ್ವರಯಾ ಸ್ವಸಾರಥಿಮಾಹೂಯ ರೈಕ್ವಗವೇಷಣಾಯಾ

ಆದಿದೇಶ । ಸ ತತ್ರ ತತ್ರ ರೈಕ್ವಮನ್ವಿಷ್ಯನ್ ನಾವಿದಮ್ ಇತಿ ಪ್ರಥಮಾಗತಃ । ಪುನಃ ತಲ್ಲಕ್ಷಣೋಕ್ತಿಪೂರ್ವಕಂ ರಾಜ್ಞಾ ತನ್ಮಾರ್ಗಣಾಯಾಽದಿಷ್ಟಃ ಪುನರನ್ವಿಷ್ಯ, ಕ್ವಚಿತ್ ಪ್ರದೇಶೇ ರೈಕ್ವಮವಲೋಕ್ಯ ಪುನಾ ರಾಜಾನಂ ಪ್ರತ್ಯೇತ್ಯ, ಆಹ – ರೈಕ್ವಮ್ ಅವಿದಮ್ ಇತಿ ಯಥಾವೃತ್ತಮವದತ್ । ತದಾ ರಾಜಾ ಸ್ವಸಾರಥಿವಚನೇನ ರೈಕ್ವ-ಮುನಿಸ್ಥಾನಂ ನಿಶ್ಚಿತ್ಯ, ತಸ್ಮಾತ್ ತತ್ತ್ವಂ ವಿವಿದಿಷುಃ ಗುರುದಕ್ಷಿಣಾಂ ಗೃಹೀತ್ವಾ, ತತ್ಸಮೀಪಂ ಜಗಾಮ । ಅಥ ದ್ವಾರಿ ಶಕಟಸ್ಥಾಧಸ್ತಾತ್ ಸ್ಥಿತಂ ರೈಕ್ವಂ ದೃಷ್ಟ್ವಾ, ಸಂಬೋಧ್ಯ, ದಕ್ಷಿಣಾಂ ನಿವೇದ್ಯ, 'ವಿದ್ಯಾಂ ಬ್ರೂಹಿ' ಇತ್ಯುವಾಚ । ತದಾ ತಂ ಪೌತ್ರಾಯಣಂ ಪರೋ ಲೋಕವಿಲಕ್ಷಣೋ ರೈಕ್ವಃ ಪ್ರತ್ಯಾಚಖ್ಯೌ । ಕಿಮಿತಿ? 'ಅಹ ಹಾರೇತ್ವಾ ಶೂದ್ರ' ಇತ್ಯಾದಿ । ಅತ್ರ 'ಅಹ' ಇತಿ ಸಂಬೋಧನಂ, ಹಾರ ಇತ್ವೇತಿ ಭಿನ್ನಪದತ್ವೇ ವಿಸರ್ಗಲೋಪೇ ಗುಣೇ 'ಹಾರೇತ್ವಾ' ಇತಿ ಭವತಿ । ತಥಾಚ – ಹೇ ಶೂದ್ರ! ಹಾರಃ ಕಂಠಮಾಲಾಖ್ಯಂ ಭೂಷಣಂ ಇತ್ವಾ ರಥಃ । ತತ್ಸಪ್ರದೀಪರೀತ್ಯಾ – ಶಕಟೋ ವಾ । ಗೋಭಿಃ ಸಹ ತವಾಸ್ತು - ಇತ್ಯರ್ಥಃ । ಹಾರೇತ್ವಾನಾವಿತ್ಯೇಕ-ಪದತ್ವಪಕ್ಷೇ ದ್ವಿವಚನಸ್ಯ ಏಕವಚನಾದೇಶೋ ವಾ ಆಕಾರಾದೇಶೋ ವಾ ಕರ್ತವ್ಯಃ। ಪ್ರತ್ಯೇಕಂ ಚ 'ಅಸ್ತು' ಇತಿ ಕ್ರಿಯಾಸಂಬಂಧಃ।

ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿ ಸಂವರ್ಗಪ್ರಕರಣದಲ್ಲಿ ಹೀಗೆ ಆಖ್ಯಾಯಿಕೆ ಇರುವುದು – ಪೌತ್ರಾಯಣನೆಂಬ ರಾಜನು ತನ್ನ ಅರಮನೆಯ ಮೇಲ್ಭಾಗದಲ್ಲಿ ರಾತ್ರಿಯ ಕಾಲದಲ್ಲಿ ಮಲಗಿದ್ದನು. ಆಗ ಆ ಅರಮನೆಯ ಮೇಲ್ಭಾಗ-ದಲ್ಲಿ ಹಂಸಪಕ್ಷಿಗಳು ಹೋಗುತ್ತಿದ್ದವು. ಮೇಲ್ಭಾಗದಲ್ಲಿ ಹಾರುತ್ತಿದ್ದ ಹಾಗೂ ಪರಸ್ಪರ ಸಂಭಾಷಣೆಯನ್ನು ಮಾಡುತ್ತಿದ್ದ ಅವುಗಳ ಮಧ್ಯೆ ಎರಡು ಪಕ್ಷಿಗಳು ಮುಂಭಾಗದಲ್ಲಿ ಹೋಗುತ್ತಿದ್ದವು. ಅವುಗಳಲ್ಲಿ ಒಂದು ಇನ್ನೊಂದನ್ನು ಕುರಿತು ಹೇಳಿತು. ಏನೆಂದರೆ - 'ಅರೇ! ಪೌತ್ರಾಯಣನ ತೇಜಸ್ಸನ್ನು ನೀನು ದಾಟಬೇಡ. ಅದರ ಸಂಬಂಧವಾದರೆ ಅವನ ಆ ತೇಜಸ್ಸು ನಿನ್ನನ್ನು ಸುಟ್ಟೀತು' - ಎಂದು. ಹೀಗೆ ಹೇಳಲ್ಪಟ್ಟ ಇನ್ನೊಂದು ಹಂಸವು 'ಕಮ್' ಎಂಬ ಆಕ್ಷೇಪ ಮಾಡುವ ವಾಕ್ಯದಿಂದ ರಾಜನನ್ನು ಅನಾದರಿಸಿ ರೈಕ್ವಮುನಿಯನ್ನೇ ಪ್ರಶಂಸೆ ಮಾಡಿತು. ಅದನ್ನು ಕೇಳಿ ಪರಿತಾಪಗೊಂಡ ರಾಜನು ತನ್ನ

ಶಯ್ಯೆಯಿಂದ ಎದ್ದು ತ್ವರೆಯಿಂದ ತನ್ನ ಸಾರಥಿಯನ್ನು ಕರೆದು ರೈಕ್ವನನ್ನು ಹುಡುಕುವಂತೆ ಆದೇಶಿಸಿದನು. ಆ ಸಾರಥಿಯು ಅಲ್ಲಲ್ಲಿ ರೈಕ್ವನನ್ನು ಅನ್ವೇಷಿಸುತ್ತಾ, ಮೊದಲು ಎಲ್ಲಿರುವನೆಂದು ತಿಳಿಯಲಿಲ್ಲ ಎಂದು ಹೇಳಿದನು. ಪುನಃ ಅವನ ಲಕ್ಷಣವನ್ನು ಹೇಳಿ ರಾಜನು ಅವನನ್ನು ಹುಡುಕಲು ಆದೇಶಿಸಿದಾಗ ಪುನಃ ಹುಡುಕಿ, ಒಂದು ಪ್ರದೇಶದಲ್ಲಿ ರೈಕ್ವನನ್ನು ನೋಡಿ, ಪುನಃ ರಾಜನ ಬಳಿಗೆ ಬಂದು ರೈಕ್ವಂ ಅವಿದಮ್' - ರೈಕ್ವನನ್ನು ನೋಡಿದೆ ಎಂದು ನಡೆದದ್ದನ್ನು ಹೇಳಿದನು. ಆಗ ರಾಜನು ತನ್ನ ಸಾರಥಿಯ ಮಾತಿ-ನಿಂದ ರೈಕ್ವಮುನಿಯು ಇರುವ ಸ್ಥಳವನ್ನು ನಿಶ್ಚಯಿಸಿ, ಅವನಿಂದ ತತ್ವವನ್ನು ತಿಳಿಯಲು ಇಚ್ಛೆಯುಳ್ಳವನಾಗಿ, ಗುರುದಕ್ಷಿಣೆಯನ್ನು ತೆಗೆದುಕೊಂಡು, ಆ ಮುನಿಯ ಬಳಿಗೆ ಹೋದನು. ಅನಂತರ ಬಾಗಿಲಲ್ಲಿ ಒಂದು ಗಾಡಿಯ ಕೆಳಗೆ ಕುಳಿತಿದ್ದ ರೈಕ್ವನನ್ನು ನೋಡಿ, ಅವನನ್ನು ಸಂಬೋಧಿಸಿ, ತಾನು ತಂದಿದ್ದ ದಕ್ಷಿಣೆಯನ್ನು ನಿವೇದಿಸಿ, 'ನನಗೆ ವಿದ್ಯೆಯನ್ನು ಉಪದೇಶಿಸು' ಎಂದನು. ಆಗ ಆ ಪೌತ್ರಾಯಣನನ್ನು ಕುರಿತು ಪರಃ ಅಂದರೆ ಲೋಕವಿಲಕ್ಷಣನಾದ ರೈಕ್ವನು ಹೇಳಿದ. ಏನೆಂದು? 'ಅಹ ಹಾರೇ ತ್ವಾ ಶೂದ್ರ' ಇತ್ಯಾದಿಯಾಗಿ. ಈ ವಾಕ್ಯದಲ್ಲಿ ಅಹ ಎಂಬ ಪದವು ಸಂಬೋಧನೆಯಾಗಿದೆ, 'ಹಾರ ಇತ್ವಾ' ಎಂಬ ಪದಗಳು ಭಿನ್ನಪದವಾಗಿದ್ದ ಪಕ್ಷದಲ್ಲಿ ಹಾರಃ ಎಂಬಲ್ಲಿರುವ ವಿಸರ್ಗವು ಲೋಪವಾದಾಗ ಹಾರ ಇತ್ವಾ ಎಂಬಲ್ಲಿ ಗುಣಸಂಧಿಯಾಗಿ ಹಾರೇತ್ವಾ ಎಂದಾಗುವುದು. ತಥಾ ಚ – ಹೇ ಶೂದ್ರ! ಹಾರಃ ಕಂಠಮಾಲೆಯೆಂಬ ಭೂಷಣ ಮತ್ತು ಇತ್ವಾ ರಥವು । ಅಥವಾ ತತ್ವಪ್ರದೀಪದ ರೀತ್ಯಾ ಬಂಡಿಯು । ಗೋವು-ಗಳೊಂದಿಗೆ ನಿನಗೇ ಇರಲಿ ಎಂದು ಅರ್ಥ. 'ಹಾರೇತ್ವಾನೌ' ಎಂಬ ಒಂದು ಪದ-ವಿರುವ ಪಕ್ಷದಲ್ಲಿ ದ್ವಿವಚನಕ್ಕೆ ಏಕವಚನವು ಆದೇಶವಾಗಿ ಬಂದಿರುವುದು ಎಂದಾಗಲೀ ಅಥವಾ ದ್ವಿವಚನಸ್ಥಾನದಲ್ಲಿ ಆಕಾರವನ್ನು ಆದೇಶಮಾಡಬೇಕು. ಮತ್ತು ಪ್ರತ್ಯೇಕವಾಗಿ ಅವುಗಳಿಗೆ 'ಅಸ್ತು' ಎಂಬ ಕ್ರಿಯಾಪದದ ಸಂಬಂಧವನ್ನು ಹೇಳಬೇಕು.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರಯತಿ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ''ಅತಃ'' ಎಂಬ ವಾಕ್ಯದಿಂದ ಅವತಾರಿಕೆ ಕೊಡುತ್ತಿದ್ದಾರೆ.

**ಭಾಷ್ಯಮ್ – ಅತ ಆಹ –**

**ಓಂ ॥ ಶುಗಸ್ಯ ತದನಾದರಶ್ರವಣಾತ್ ತದಾಽಽದ್ರವಣಾತ್ ಸೂಚ್ಯತೇ ಹಿ॥ ಓಂ ॥ ೩೪ ॥**

ಪೌತ್ರಾಯಣನ ವಿಷಯದಲ್ಲಿ ರೈಕ್ವನು ಅನಾದರವನ್ನು ತೋರಿಸು-ವುದು ಇಲ್ಲಿ ಶ್ರುತವಾಗಿರುವುದರಿಂದ 'ಶುಚಾ ಆದ್ರವಣಾತ್ ಶೂದ್ರಃ' ಶೋಕದಿಂದ ರೈಕ್ವನ ಬಳಿ ಶೀಘ್ರವಾಗಿ ಹೋದ ಕಾರಣ-ದಿಂದ ಪೌತ್ರಾಯಣನನ್ನು ಶೂದ್ರನೆಂದು ಸಂಬೋಧಿಸಲಾಗಿದೆ, ಹೊರತು ವಸ್ತುತಃ ಶೂದ್ರನಾದ ಕಾರಣದಿಂದಲ್ಲ. ಪೌತ್ರಾ-ಯಣನಿಗೆ ಶೋಕ ಉಂಟಾದದ್ದಾದರೂ ಅವನು ಹಂಸಗಳ ಮಾತನ್ನು ಕೇಳಿ ವ್ಯಗ್ರ ಮನಸ್ಕನಾದುದರಿಂದ ಸೂಚಿತವಾಗುವುದು.

**ನಾಸೌ ಪೌತ್ರಾಯಣಃ ಶೂದ್ರಃ, ಶುಚಾಽಽದ್ರವಣಮೇವ ಶೂದ್ರತ್ವಮ್। 'ಕಮ್ವರ ಏನಮೇತತ್ ಸಂತಮ್'** (ಛಾಂ.ಉ.೪.೧.೩) **ಇತ್ಯನಾದರಶ್ರವಣಾತ್ । 'ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ' ಇತಿ ಸೂಚ್ಯತೇ ಹಿ ॥ ೩೪ ॥**

ಈ ಪೌತ್ರಾಯಣನು ಶೂದ್ರನಲ್ಲ. 'ಕಂವರೇ ಏನಮೇತತ್ಸಂತಮ್' ಎಂದು ಹಂಸಗಳು ತೋರಿಸಿದ ಅನಾದರವನ್ನು ಕೇಳಿ ಶೋಕದಿಂದ ಅವನು ರೈಕ್ವಮುನಿಯ ಬಳಿಗೆ ಆದ್ರವಣ ಅಂದರೆ ಶೀಘ್ರ-ಗಮನವನ್ನು ಮಾಡಿದ ಕಾರಣದಿಂದಲೇ ಶೂದ್ರನೆಂದೆನಿಸಿದ್ದಾನೆ. ಪೌತ್ರಾಯಣನಿಗೆ ಶೋಕವುಂಟಾದದ್ದು 'ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ' ಎಂಬ ವಾಕ್ಯದಿಂದ ಸೂಚಿತವಾಗುವುದು.

ಭಾ.ದೀ. – ಅವಿಶೇಷಾಖ್ಯಯುಕ್ತೇಃ ಶ್ರವಣಸೂತ್ರೇ ನಿರಾಕರಿಷ್ಯಮಾಣತ್ವಾತ್,

ಪೂರ್ವಪಕ್ಷ್ಯುಕ್ತಲಿಂಗದರ್ಶನಸ್ಯ ಅನ್ಯಥೋಪಪತ್ತಿಪ್ರದರ್ಶನಾಯ ಪ್ರವೃತ್ತಸ್ಯ 'ತದಾಽಽದ್ರವಣಾತ್' ಇತ್ಯಸ್ಯ ಅನ್ವಯಯೋಗ್ಯಾರ್ಥಾಕಾಂಕ್ಷೋತ್ಥಾಪಕಂ ಸೂತ್ರಸ್ಯ ಫಲಿತಾರ್ಥಂ ದರ್ಶಯತಿ – ನೇತಿ ॥

'ಅಸೌ' - ರೈಕ್ವೇಣ ಸಂಬೋಧಿತಃ ಪೌತ್ರಾಯಣಃ, 'ನ ಶೂದ್ರಃ' - 'ಜಾತ್ಯಾ ಶೂದ್ರೋ ನ, ಕಿಂತು ಕ್ಷತ್ರಿಯಃ' ಇತ್ಯರ್ಥಃ। ತರ್ಹಿ 'ಕಥಮಸ್ಯ ಶೂದ್ರ ಇತಿ ಸಂಬೋಧಿತತ್ವಂ ಯುಜ್ಯತೇ? ರೂಢ್ಯಭಾವಾತ್' ಇತ್ಯತಃ, 'ಯೋಗಾದೇವ' ಇತ್ಯಾಶಯೇನ ತಚ್ಛಬ್ದಪ್ರವೃತ್ತಿನಿಮಿತ್ತಪ್ರದರ್ಶಕಂ 'ತದಾಽಽದ್ರವಣಾತ್' ಇತಿ ಸೂತ್ರಾಂಶಂ ಸಾವಧಾರಣಂ ವ್ಯಾಚಷ್ಟೇ – ಶುಚೇತಿ ॥ 'ಶುಚಾ' ಶೋಕೇನ ರೈಕ್ವಂ ಕ್ಷತ್ತಾರಂ ವಾ ಪ್ರತ್ಯಾಶುಗಮನಮೇವ 'ಶೂದ್ರತ್ವಮ್' 'ಶೂದ್ರ' ಇತಿ ಸಂಬೋಧನೇ ನಿಮಿತ್ತಂ, ನ ತು ಜಾತಿರಿತ್ಯರ್ಥಃ। ಅನೇನ 'ತದಾಽಽದ್ರವಣಾತ್' ಇತ್ಯಸ್ಯ ಸೂತ್ರೇ 'ಶೂದ್ರತ್ವಮ್' ಇತ್ಯಧ್ಯಾಹೃತೇನ 'ಶೂದ್ರ' ಇತಿ ಸಂಬೋಧಿತತ್ವರೂಪಾರ್ಥ-ಬೋಧಕೇನ ಪದೇನಾನ್ವಯಃ ಸೂಚಿತಃ। ತಥಾ ಚ 'ನ ಸಂಬೋಧನಾನುಪಪತ್ತಿಃ' ಇತಿ, 'ನೇದಂ ಶೂದ್ರಸ್ಯ ವೇದವಿದ್ಯಾಧಿಕಾರೇ ಲಿಂಗಮ್' ಇತ್ಯತಃ 'ನ ಶೂದ್ರಸ್ಯ ವೇದವಿದ್ಯಾಧಿಕಾರಃ' ಇತಿ ನಞಾವೃತ್ತ್ಯಾ ಅನ್ವಯಃ। ''ಏವ'' ಇತ್ಯನೇನ 'ಅಯಂ ಶೂದ್ರಶಬ್ದಃ ಶುಚಾ ದ್ರವಣಾತ್ ಶೂದ್ರ ಇತಿ ನೈರುಕ್ತ ಏವ, ನ ತು 'ಶುಚೇರ್ದಶ್ಚ' ಇತ್ಯುಣಾದಿಸೂತ್ರೇಣ ರಪ್ರತ್ಯಯೇ ಧಾತೋಶ್ಚ ದೀರ್ಘೇ ಚಕಾರಸ್ಯ ದಕಾರಾದೇಶೇ ಚ ನಿಷ್ಪನ್ನೋ ರೂಢಃ' ಇತ್ಯುಕ್ತಂ ಭವತಿ।

'ಪೌತ್ರಾಯಣಃ' ಇತ್ಯನೇನ ಬುದ್ಧಿಸ್ಥಪರಾಮರ್ಶಕೇದಂಶಬ್ದಾರ್ಥಃ, 'ಶುಚೇ' - ತ್ಯನೇನ ಪ್ರಾಗುಕ್ತವಾಚಿಪೌತ್ರದ್ವಿತೀಯತಚ್ಛಬ್ದಾರ್ಥಃ, ತ್ವಪ್ರತ್ಯಯೇನ ನಿಮಿತ್ತಾರ್ಥಕ -ಪಂಚಮ್ಯರ್ಥಶ್ಚ ದರ್ಶಿತಃ । ಸೂತ್ರಕಾರಸ್ಯ ಸದಾ ಸರ್ವಜ್ಞತ್ವೇನ 'ಶುಗಸ್ಯ' ಇತ್ಯುಕ್ತಿಃ। ಭಾಷ್ಯೇ 'ಸಃ' ಇತಿ ಶ್ರುತ್ಯನುಸಾರೇಣ 'ಅಸೌ' ಇತಿ ಪರೋಕ್ಷೇಣೋಕ್ತಿಶ್ಚ ಯುಕ್ತಾ॥

'ಅವಿಶೇಷ'ವೆಂಬ ಯುಕ್ತಿಯನ್ನು ಶ್ರವಣ ಎಂದು ಆರಂಭವಾಗುವ ಸೂತ್ರದಲ್ಲಿ ನಿರಾಕರಿಸುವುದರಿಂದ ಪೂರ್ವಪಕ್ಷಿ ಹೇಳಿದ ಅನಧಿಕಾರವಿಷಯದಲ್ಲಿ ಹೇತುವು ದುಷ್ಟವಾಗಿರುವುದಕ್ಕೆ ಪ್ರಕಾರಾಂತರದಿಂದ ಉಪಪತ್ತಿಯನ್ನು ತೋರಿಸಲು ಹೊರಟ ಸೂತ್ರದಲ್ಲಿರುವ 'ತದಾऽऽದ್ರವಣಾತ್' ಎಂಬ ಅಂಶಕ್ಕೆ ಅನ್ವಯಯೋಗ್ಯವಾದ ವಿಷಯದಲ್ಲಿ ಜಿಜ್ಞಾಸೆ ಉಂಟಾಗಲು ಕಾರಣವಾದ ಸೂತ್ರದ ಫಲಿತಾರ್ಥವನ್ನು ''ನಾಸೌ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಅಸೌ' - ರೈಕ್ವನಿಂದ ಸಂಬೋಧಿತನಾದ ಪೌತ್ರಾಯಣನು 'ನ ಶೂದ್ರಃ' ಜಾತಿಯಿಂದ ಶೂದ್ರನಲ್ಲ; ಕಿಂತು ಕ್ಷತ್ರಿಯನೇ ಆಗಿದ್ದಾನೆ - ಎಂದು ಅರ್ಥ. ಹಾಗಿದ್ದ ಪಕ್ಷದಲ್ಲಿ ಅವನನ್ನು ಶೂದ್ರ ಎಂದು ಸಂಬೋಧನೆ ಮಾಡಿರುವುದು ಹೇಗೆ ಯುಕ್ತವಾಗುವುದು? ಶೂದ್ರಪದಕ್ಕೆ ರೂಢಿಯಲ್ಲಿರುವ ಅರ್ಥವು ಪೌತ್ರಾಯಣನ ವಿಷಯದಲ್ಲಿ ಇಲ್ಲವಷ್ಟೇ? ಎಂಬ ಶಂಕೆಗೆ ಉತ್ತರವಾಗಿ ಶೂದ್ರಪದವನ್ನು ಯೋಗದಿಂದಲೇ ಪೌತ್ರಾಯಣನನ್ನು ಕುರಿತು ಪ್ರಯೋಗಿಸಲಾಗಿದೆ ಎಂಬ ಆಶಯದಿಂದ ಶೂದ್ರಶಬ್ದದ ಪ್ರವೃತ್ತಿನಿಮಿತ್ತವನ್ನು ತೋರಿಸುವ 'ತದಾऽऽದ್ರವಣಾತ್' ಎಂಬ ಸೂತ್ರಾಂಶವು ಏವಕಾರ ಸಹಿತವಾಗಿದೆ ಎಂದು ಭಾವಿಸಿ ''ಶುಚಾ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಶುಚಾ' - ಅಂದರೆ ಶೋಕದಿಂದ ರೈಕ್ವನನ್ನು ಕುರಿತು ಅಥವಾ ಸಾರಥಿಯನ್ನು ಕುರಿತು ಶೀಘ್ರಗಮನ ರೂಪವಾದ ಶೂದ್ರತ್ವವೇ 'ಶೂದ್ರ' ಎಂದು ಸಂಬೋಧಿಸಲು ನಿಮಿತ್ತವಾಗಿದೆ ಹೊರತು ಜಾತಿಯಲ್ಲ - ಎಂದು ಅರ್ಥ. ಇದರಿಂದ – ತದಾऽऽದ್ರವಣಾತ್ - ಎಂಬ ಪದಕ್ಕೆ 'ಶೂದ್ರ' ಎಂದು ಸಂಬೋಧಿತನೆಂಬ ಅರ್ಥವನ್ನು ತಿಳಿಸುವ ಶೂದ್ರತ್ವಮ್ ಎಂಬ ಅಧ್ಯಾಹಾರ ಮಾಡಿಕೊಳ್ಳುವ ಪದಗಳೊಂದಿಗೆ ಅನ್ವಯವಿರುವುದೆಂದು ಸೂಚಿತವಾಗುವುದು. ತಥಾ ಚ – ಶೂದ್ರ ಎಂದು ಸಂಬೋಧನೆ ಮಾಡಿದ್ದು ಅನುಪಪನ್ನವಲ್ಲವಾದ ಕಾರಣ ಹೀಗೆ ಸಂಬೋಧಿಸಿರುವುದು ಶೂದ್ರರಿಗೆ ವೇದವಿದ್ಯಾಧಿಕಾರವಿದೆ ಎಂಬ ವಿಷಯದಲ್ಲಿ ಹೇತುವಾಗಲಾರದು. ಆ ಕಾರಣ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲ ಎಂದು ಭಾಷ್ಯದಲ್ಲಿ ನಞ್ ಪದವು ಆವೃತ್ತಿಯನ್ನು ಹೊಂದಿ ಸಂಬಂಧವನ್ನು ಪಡೆಯುವುದು. ''ಏವ'' ಎಂಬ ಪದದಿಂದ ಈ ಶೂದ್ರಶಬ್ದವು 'ಶುಚಾऽऽದ್ರವಣಾತ್ ಶೂದ್ರಃ' ಎಂಬ ನಿರ್ವಚನದಿಂದ ಪ್ರಯೋಗಿಸಲ್ಪಟ್ಟಿದೆ ಹೊರತು 'ಶುಚೇರ್ದಶ್ಚ' ಎಂಬ

ಉಣಾದಿಸೂತ್ರದಿಂದ ರಪ್ರತ್ಯಯವು ಬಂದಾಗ ಧಾತುವಿನ ಉಕಾರಕ್ಕೆ ದೀರ್ಘ ಬಂದಾಗ ಮತ್ತು ಶುಚ್ ಧಾತುವಿನ ಚಕಾರಕ್ಕೆ ದಕಾರವು ಆದೇಶವಾಗಿ ಬಂದಾಗ ಶೂದ್ರ ಎಂಬ ಶಬ್ದವು ನಿಷ್ಪನ್ನವಾಗಿ ರೂಢಶಬ್ದವಾಗುವುದಿಲ್ಲ ಎಂದು ಹೇಳಿದಂತಾಗುವುದು.

'ಪೌತ್ರಾಯಣ' ಎಂಬ ಪದದಿಂದ ಬುದ್ಧಿಸ್ಥವಾದುದನ್ನು ಪರಾಮರ್ಶಿಸುವ 'ಇದಂ'ಶಬ್ದದ ಅರ್ಥ, 'ಶುಚಾ' ಎಂಬ ಪದದಿಂದ ಹಿಂದೆ ಶ್ರುತವಾದುದನ್ನು ಹೇಳುವ ಸೂತ್ರಗತ ಎರಡನೆಯ ತಚ್ಛಬ್ದದ ಅರ್ಥ ಹಾಗೂ ತ್ವಪ್ರತ್ಯಯದಿಂದ 'ತದಾऽऽ-ದ್ರವಣಾತ್' ಎಂಬಲ್ಲಿರುವ ನಿಮಿತ್ತವೆಂಬ ಅರ್ಥವನ್ನು ಹೊಂದಿರುವ ಪಂಚಮ್ಯರ್ಥವು ದರ್ಶಿತವಾಗುವುದು. ಸೂತ್ರಕಾರರು ಸರ್ವದಾ ಸರ್ವಜ್ಞರಾದುದರಿಂದ 'ಶುಗಸ್ಯ' ಎಂದು ಹೇಳಿರುವುದು, ಹಾಗೂ ಭಾಷ್ಯದಲ್ಲಿ 'ಸಃ' ಎಂಬ ಶ್ರುತಿಯನ್ನು ಅನುಸರಿಸಿ 'ಅಸೌ' ಎಂದು ಪರೋಕ್ಷವನ್ನು ಹೇಳುವ ಶಬ್ದವೂ ಕೂಡ ಯುಕ್ತವಾಗಿದೆ.

ಭಾ.ದೀ. – ಕಸ್ಮಾನ್ನಿಮಿತ್ತಾದಸ್ಯ ಶೋಕಃ? ಇತ್ಯಸ್ಯ ಉತ್ತರತಯಾ ಪ್ರವೃತ್ತಂ 'ಶುಗಸ್ಯ ತದನಾದರಶ್ರವಣಾತ್' ಇತಿ ಸೂತ್ರಖಂಡಂ ವ್ಯಾಚಷ್ಟೇ – ಕಂವರ ಇತಿ ॥

'ಕಮ್ ಉ ಅರೇ' ಇತಿ ಪದಚ್ಛೇದಃ। 'ಅರೇ' – ಹಂಸ! ಏತದ್ ವಚನಂ ಕಮ್ ಏನಮುದ್ದಿಶ್ಯ ಆತ್ಥ 'ಸಂತಂ'– ನಿರ್ದುಷ್ಟಂ 'ಸಯುಗ್ವಾನಂ' – 'ಸಶಕಟಂ ರೈಕ್ವಮ್ ಇತ್ಯೇವ' ಇತ್ಯರ್ಥಃ । 'ಉ' ಇತಿ ನಿಪಾತಃ, ಅಸ್ಯ ನಿಂದಾರ್ಥಃ । ಅಸ್ಮಿನ್ ರಾಜ್ಞಿ ವಕ್ತುಮನನುರೂಪಮಿದಮ್, ಏವಂ ವಕ್ತುಂ ರೈಕ್ವ ಏವ ಯೋಗ್ಯ ಇತ್ಯರ್ಥಃ । 'ಏತತ್ಸಂತಂ' ನಿಂದ್ಯಂ ಸಂತಮ್ ಆತ್ಥ ಇತ್ಯರ್ಥಃ – ತತ್ತ್ವಪ್ರದೀಪೇ ಅಭಿಹಿತಃ । 'ಏತತ್ಸಂತಮ್' ಅತ್ರ ಸಂತಮಿತಿ ವಾ । ಇತ್ಯನಾದರಶ್ರವಣಾತ್ ಇತಿ ॥ ಅನಾದರೋ ನಿಂದಾ । ತಥಾ ಚ – ಇತ್ಯೇವಂರೂಪಸ್ಯ ಹಂಸಕೃತಾನಾದರ-ಬೋಧಕವಾಕ್ಯಸ್ಯ ಹಂಸಾತ್ ಸ್ವಾನಾದರವಾಕ್ಯಸ್ಯ ವಾ ಶ್ರವಣಾತ್ ಇತ್ಯರ್ಥಃ । 'ಶ್ರವಣಾತ್' ಇತ್ಯನಂತರಂ 'ಪ್ರಾಪ್ತಯಾ' ಇತಿ ಶೇಷಃ । ಅಸ್ಯ 'ಶುಚಾ' ಇತ್ಯನೇನಾನ್ವಯಃ।

ಯಾವ ಕಾರಣದಿಂದ ಪೌತ್ರಾಯಣನಿಗೆ ಶೋಕವುಂಟಾಯಿತು ಎಂಬ ಪ್ರಶ್ನೆಗೆ ಉತ್ತರವಾಗಿ ಹೊರಟಿರುವ 'ಶುಗಸ್ಯ ತದನಾದರಶ್ರವಣಾತ್' ಎಂಬ ಸೂತ್ರದ ಭಾಗವನ್ನು "ಕಂವರ" ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಕಂ ಉ ಅರೇ' ಎಂಬುದಾಗಿ ಕಂವರ ಎಂಬ ಶಬ್ದದ ಪದಚ್ಛೇದ. 'ಅರೇ' - ಎಲೈ ಹಂಸವೇ! ಈ ಮಾತನ್ನು 'ಕಮ್ ಏನಮ್ ಉದ್ದಿಶ್ಯ' - ಯಾವ ಇವನನ್ನು ಉದ್ದೇಶಿಸಿ 'ಆತ್ಥ' - ಹೇಳುತ್ತದ್ದೀಯೆ. 'ಸಂತಂ' - ನಿರ್ದೋಷನಾದ, 'ಸಯುಗ್ವಾನಂ' -ಶಕಟದ ಜೊತೆಗಿರುವ 'ರೈಕ್ವಮ್' - ರೈಕ್ವನನ್ನು ಕುರಿತು ಎಂದು ಈ ವಾಕ್ಯದ ಅರ್ಥ. ಈ ವಾಕ್ಯದಲ್ಲಿ 'ಉ' ಎಂಬ ಶಬ್ದವು ನಿಪಾತವಾಗಿದ್ದು, ಅವನ ನಿಂದೆಯನ್ನು ಹೇಳುವುದು. ಈ ರಾಜನನ್ನು ಕುರಿತು ಈ ಮಾತನ್ನಾಡುವುದು ಉಚಿತವಲ್ಲ - ಹೀಗೆ ಹೇಳಲು ರೈಕ್ವನೇ ಯೋಗ್ಯ ಎಂದು ಅರ್ಥ. ತತ್ತ್ವಪ್ರದೀಪದಲ್ಲಿ 'ಏತತ್ ಸಂತಂ' ಹೀಗೆ ನಿಂದ್ಯನಾಗಿರುವವನನ್ನು ಕುರಿತು ಹೇಳುತ್ತಿದ್ದೀಯೆ ಎಂಬ ಅರ್ಥ ಹೇಳಲ್ಪಟ್ಟಿದೆ. ಅಥವಾ 'ಏತತ್ಸಂತಮ್' ಅಂದರೆ ಇಲ್ಲಿರುವ ಎಂದು ಅರ್ಥ. 'ಇತ್ಯನಾದರಶ್ರವಣಾತ್' ಎಂಬ ಭಾಷ್ಯದಲ್ಲಿ 'ಅನಾದರ' ಎಂದರೆ ನಿಂದ್ಯೆ . ತಥಾ ಚ – ಈ ರೀತಿಯ ಹಂಸವು ಹೇಳಿದ ಅನಾದರವನ್ನು ತಿಳಿಸುವ ವಾಕ್ಯವು ಅಥವಾ ಹಂಸದಿಂದ ತನ್ನ ಅನಾದರವಾಕ್ಯವು ಶ್ರುತವಾಗಿರುವುದರಿಂದ ಎಂದು ಅರ್ಥ. ಶ್ರವಣಾತ್ ಎಂಬ ಪದದನಂತರ ಪ್ರಾಪ್ತಯಾ ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ಶುಚಾ' ಎಂಬ ಪದದಿಂದ ಅನ್ವಯ.

ಭಾ.ದೀ. – ನನು ಶ್ರುತಾನಾದರಸ್ಯಾಪಿ ರಾಜ್ಞಃ ಕುತಃ ಶೋಕೋತ್ಪತ್ತಿರ್ಜ್ಞಾಯತೇ? ನ ಚ ಪ್ರತ್ಯಕ್ಷಾತ್ ತನ್ನಿಶ್ಚಯಃ । ಅನಾದರಶ್ರವಣರೂಪಪರಬುದ್ಧೇರಪ್ರತ್ಯಕ್ಷತ್ವೇನ ತತಃ ಶೋಕೋತ್ಪತ್ತೇರಪ್ರತ್ಯಕ್ಷತ್ವಾತ್ । ನ ಚ ಕಾರಣಾನುಮಾನಾತ್ ಕಾರ್ಯಾನುಮಿತಿಃ । ಕಾರಣಸ್ಯ ಕಾರ್ಯಾವಿನಾಭಾವಾಭಾವಾತ್ ಇತ್ಯತಃ ಪ್ರವೃತ್ತಂ 'ಸೂಚ್ಯತೇ ಹಿ' ಇತಿ ಸೂತ್ರಶೇಷಂ ವ್ಯಾಚಷ್ಟೇ – ಸ ಹೇತಿ ॥

'ಹ' ಇತ್ಯಾಶ್ಚರ್ಯೇ । 'ಸಃ' ಶ್ರುತಾನಾದರಃ ಪೌತ್ರಾಯಣಃ 'ಸಂಜಿಹಾನ ಏವ' ಶಯನೀಯಾದುತ್ತಿಷ್ಠನ್ನೇವ 'ಕ್ಷತ್ತಾರಂ' ಸಾರಥಿಂ ಪ್ರತಿ ರೈಕ್ವಗವೇಷಣಾಯ ಉವಾಚ

– ಇತಿ ಶ್ರುತ್ಯರ್ಥಃ । ಇತಿ ಸೂಚ್ಯತೇ ಹೀತಿ ॥ 'ಇತ್ಯೇತದ್ ವಾಕ್ಯಾ-ರ್ಥಾನ್ಯಥಾನುಪಪತ್ತ್ಯಾ ಜ್ಞಾತೇನ ರೈಕ್ವೇ ವ್ಯಾಸಕ್ತಮನಸ್ಕೇನ ಕಾರ್ಯೇಣ ತತ್ಕಾರಣಂ ಶುಗಸ್ಯ 'ಸೂಚ್ಯತೇ' ಜ್ಞಾಯತೇ – ಇತ್ಯರ್ಥಃ।

ಶಂಕೆ - ತನ್ನ ನಿಂದೆಯನ್ನು ಕೇಳಿರುವುದಾದರೂ ರಾಜನಿಗೆ ದುಃಖವುಂಟಾಯಿ-ತೆಂದು ಹೇಗೆ ತಿಳಿದು ಬರುವುದು? ಪ್ರತ್ಯಕ್ಷದಿಂದ ಆದರ ನಿಶ್ಚಯವನ್ನಂತೂ ಹೇಳಲು ಸಾಧ್ಯವಿಲ್ಲ. ಏಕೆಂದರೆ, 'ಅನಾದರಶ್ರವಣಾತ್' ಎನ್ನುವುದು ಮತ್ತೊಬ್ಬ ವ್ಯಕ್ತಿಯ ಜ್ಞಾನವಾಗಿದ್ದು ನಮ್ಮ ಪ್ರತ್ಯಕ್ಷವಿಷಯವಲ್ಲವಾದದ್ದರಿಂದ ಆದರಿಂದ ದುಃಖ ಉತ್ಪನ್ನ-ವಾಗಿರುವುದು ಪ್ರತ್ಯಕ್ಷವಲ್ಲ. ಶೋಕಕಾರಣವೆಂಬ ಹೇತುವಿನಿಂದ ಕಾರ್ಯವಾದ ಶೋಕವನ್ನು ಅನುಮಾನ ಮಾಡುತ್ತೇವೆಂದೂ ಹೇಳಲು ಸಾಧ್ಯವಿಲ್ಲ. ಕಾರಣವಿದ್ದ ಪಕ್ಷದಲ್ಲಿ ಕಾರ್ಯ ನಿಯಮೇನ ಇರುವುದು ಎಂದೇನಿಲ್ಲ.

ಸಮಾಧಾನ – ಈ ಶಂಕೆಯ ಪರಿಹಾರಕ್ಕಾಗಿ ಹೊರಟಿರುವ 'ಸೂಚ್ಯತೇ ಹಿ' ಎಂಬ ಸೂತ್ರದ ಶೇಷಭಾಗವನ್ನು – ''ಸ ಹ'' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಹ' ಎಂಬ ಶಬ್ದವು ಆಶ್ಚರ್ಯವನ್ನು ಸೂಚಿಸುವುದು. 'ಸಃ' ತನ್ನ ನಿಂದೆಯನ್ನು ಕೇಳಿದ ಆ ಪೌತ್ರಾಯಣನು 'ಸಂಜಿಹಾನ ಏವ' - ತನ್ನ ಶಯನದಿಂದ ಎದ್ದವನೇ 'ಕ್ಷತ್ತಾರಂ' - ಸಾರಥಿಯನ್ನು ಕುರಿತು, ರೈಕ್ವನನ್ನು ಹುಡುಕಲು ಹೇಳಿದನೆಂದು ಶ್ರುತಿಯ ಅರ್ಥ. ''ಇತಿ ಸೂಚ್ಯತೇ ಹಿ'' – ಅಂದರೆ ಈ ವಾಕ್ಯದ ಅರ್ಥವು ಅನ್ಯಥಾ ಅನುಪಪನ್ನವಾಗುವು- ದರಿಂದ 'ಪೌತ್ರಾಯಣನು ರೈಕ್ವನಲ್ಲೇ ವಿಶೇಷವಾಗಿ ಆಸಕ್ತವಾದ ಮನಸ್ಸುಳ್ಳವನಾದನು' ಎಂಬ ಕಾರ್ಯವು ತಿಳಿದುಬಂದದ್ದರಿಂದ ಆದಕ್ಕೆ ಕಾರಣವಾದ ಶೋಕವು ಪೌತ್ರಾ- ಯಣನಿಗೆ ಉಂಟಾಯಿತು ಎಂದು ''ಸೂಚ್ಯತೇ'' - ಅಂದರೆ ತಿಳಿದುಬರುವುದು ಎಂದರ್ಥ.

ಭಾ.ದೀ. – ಕಾರಣಸ್ಯ ಕಾರ್ಯಾವಿನಾಭಾವಾಭಾವೇಽಪಿ ಕಾರ್ಯಸ್ಯ ಕಾರಣಾವಿನಾ- ಭಾವಸ್ಯಾವಶ್ಯಂಭಾವಾದಿತಿ ಭಾವಃ । ಅಸ್ಯ ತದನಾದರಸ್ಯ ಶ್ರವಣಾತ್ ಪ್ರಾಪ್ತಯಾ ಶುಚಾಽಽದ್ರವಣಮೇವ ಇತಿ ಪೂರ್ವೇಣಾನ್ವಯಃ ।

ಶೋಕೇನ ಆದ್ರವಣಾಖ್ಯನಿಮಿತ್ತಪರಿಜ್ಞಾನಂ ಚ ರೈಕ್ವಮುನೇಃ ಸಾರ್ವಜ್ಞ್ಯಾದ್ ಉಪಪದ್ಯತೇ। ತದುಕ್ತಂ ಛಾಂದೋಗ್ಯಭಾಷ್ಯೇ –

ರಾಜಾ ಪೌತ್ರಾಯಣಃ ಶೋಕಾಚ್ಛೂದ್ರೇತಿ ಮುನಿನೋದಿತಃ।
ಪ್ರಾಣವಿದ್ಯಾಮವಾಪ್ಯಾಸ್ಮಾತ್ ಪರಂ ಧರ್ಮಮವಾಪ್ತವಾನ್ ॥ - ಇತಿ ॥

'ಶೋಕಾತ್' ಶೋಕೇನಾಽದ್ರವಣಾತ್ ಇತ್ಯರ್ಥಃ । ಅಥವಾ – ಶೋಕಶಬ್ದೋಪಪದಾತ್ ಆಙ್‌ಪೂರ್ವಕಾದ್ 'ಅತ ಸಾತತ್ಯಗಮನೇ' ಇತ್ಯಸ್ಮಾತ್ ಕ್ವಿಪಿ ರೂಪಮೇತತ್ । ತಥಾತ್ವೇ ಯತ ಇತಿ ಶೇಷಃ । ನನು ಸೂತ್ರೇ ತದ್ ದ್ರವಣಾತ್ ಇತ್ಯೇತಾವತಾ ಪೂರ್ತೌ ಆಙ್‌ಪ್ರಶ್ಲೇಷಃ ಕಿಮರ್ಥ ಇತಿ ಚೇತ್, ನ । ಶ್ರುತೌ ಶುದ್ರೇತಿ ವಕ್ತವ್ಯತ್ವೇಽಪಿ ಶೋಕಾಧಿಕ್ಯಜ್ಞಾಪನಾರ್ಥಂ ಶೂದ್ರೇತಿ ಊಕಾರರೂಪೋ ಯೋ ದೀರ್ಘಸ್ವರಃ ಶ್ರುತಃ ತದರ್ಥವ್ಯಕ್ತವ್ಯರ್ಥತ್ವಾತ್ । ನ ಚ ಶೂಗ್ದ್ರೇತಿ ವಕ್ತವ್ಯ ಶ್ರುತೌ ಶೂದ್ರೇತ್ಯುಕ್ತಿಃ ಕಥಮಿತಿ ವಾಚ್ಯಮ್? 'ತಸ್ಮಾದ್ ರುಗ್ದ್ರಾವಣಾತ್ ರುದ್ರಃ' ಇತಿ ಶ್ರುತೌ ಗಕಾರಸ್ಯ ದಕಾರಾದೇಶೇನ ಯಥಾಪ್ರಯೋಗಃ ತಥೋಪಪತ್ತೇಃ। ಅತ ಏವ ತತ್ತ್ವಪ್ರದೀಪೇ ತೃತೀಯಸ್ಯ ತೃತೀಯೋಽತಿಶಯಾರ್ಥತ್ವಾತ್ ಇತ್ಯುಕ್ತಮ್ । 'ರುಜಂ ದ್ರಾವಯತೇ' ಇತಿ ಸ್ಮೃತಾವಿವೋಪಪತ್ತೇಶ್ಚ।

ಅನೇನ – ಶುಚಾ 'ಆದ್ರವಣಾತ್' ರೈಕ್ವಂ ಪ್ರತಿ ಶೀಘ್ರಗಮನಾದೇವ ನಿಮಿತ್ತಾದ್ ಅಸ್ಯ ಪೌತ್ರಾಯಣಸ್ಯ ಶೂದ್ರತ್ವಂ, ಶೂದ್ರೇತಿ ಸಂಬೋಧಿತತ್ವಮ್, ನ ತು ವರ್ಣಾವರತ್ವಾತ್ । ಶುಕ್ ಚ ಶೋಕಶ್ಚಾಸ್ಯ ತದನಾದರಶ್ರವಣಾದ್ ಆಸೀತ್ । ತದಿತಿ ಶ್ರುತ್ಯುಕ್ತಪರಾಮರ್ಶಃ । ಕ್ರಿಯಾಕರ್ತೃಭಾವಃ ಷಷ್ಠ್ಯರ್ಥಃ । ತಥಾ ಚ 'ತಸ್ಯ ಅನಾದರಶ್ರವಣಾತ್' ಹಂಸಕೃತಾನಾದರಶ್ರವಣಾದ್ ಇತ್ಯರ್ಥಃ । ತತ್ತ್ವಪ್ರದೀಪರೀತ್ಯಾ ತಸ್ಮಾದ್ಧಂಸಾತ್ ಸ್ವಾನಾದರಶ್ರವಣಾದಿತ್ಯರ್ಥಃ। ಮಧ್ಯಮಲೋಪೀಸಮಾಸ ಇತಿ ಕೇಚಿತ್ ।

ಕಾರಣವಿದ್ದಾಗ ಕಾರ್ಯವಿದ್ದೇ ಇರುವುದೆಂಬ ನಿಯಮವಿಲ್ಲದಿದ್ದರೂ ಕಾರ್ಯ ಉಂಟಾದಾಗ ಅದಕ್ಕೆ ಕಾರಣವು ಇದ್ದೇ ಇರಬೇಕೆಂಬ ನಿಯಮವಿದ್ದದ್ದರಿಂದ ಎಂದು

ಭಾವ. ಈ ವಾಕ್ಯಕ್ಕೆ ಅವನ ಅನಾದರವು ಶ್ರುತವಾದದ್ದರಿಂದ ಪ್ರಾಪ್ತವಾದ ದುಃಖದಿಂದಲೇ ರೈಕ್ವನ ಬಳಿಗೆ ಪೌತ್ರಾಯಣನನು ಆದ್ರವಣ - ಅಂದರೆ ತ್ವರೆಯಿಂದ ಹೋದನೆಂದು ಹಿಂದಿನ ವಾಕ್ಯದಿಂದ ಅನ್ವಯ. ಶೋಕದಿಂದ ಅವನು ಆಗಮಿಸಿದ್ದು ಎಂಬ ನಿಮಿತ್ತದ ಜ್ಞಾನವಾದರೂ ರೈಕ್ವಮುನಿ ಸರ್ವಜ್ಞನಾದ್ದರಿಂದ ಯುಕ್ತವೇ ಆಗಿದೆ. ಛಾಂದೋಗ್ಯಭಾಷ್ಯದಲ್ಲಿ ಹೀಗೆ ಹೇಳಲಾಗಿದೆ –

ರಾಜಾ ಪೌತ್ರಾಯಣಃ ಶೋಕಾಚ್ಛೂದ್ರೇತಿ ಮುನಿನೋದಿತಃ ।
ಪ್ರಾಣವಿದ್ಯಾಮವಾಪ್ಯಾಸ್ಮಾತ್ ಪರಂ ಧರ್ಮಮವಾಪ್ತವಾನ್ ॥

ರಾಜಾ ಪೌತ್ರಾಯಣನು 'ಶೋಕಾತ್ ಆದ್ರವಣದಿಂದ' ಅಂದರೆ ಶೋಕದಿಂದಾಗಿ ಆಗಮಿಸಿದ ಕಾರಣ ಶೂದ್ರ ಎಂಬುದಾಗಿ ಮುನಿಯಿಂದ ಸಂಬೋಧಿಸಲ್ಪಟ್ಟು, ಆ ಮುನಿಯಿಂದ ಪ್ರಾಣವಿದ್ಯೆಯನ್ನು ಪಡೆದು ಶ್ರೇಷ್ಠವಾದ ಧರ್ಮವನ್ನು ಹೊಂದಿದನು -ಎಂದು.

ಈ ಶ್ಲೋಕದಲ್ಲಿ'ಶೋಕಾತ್' ಎಂದರೆ ಶೋಕೇನ ಆದ್ರವಣಾತ್ - ಶೋಕದಿಂದ ಆಗಮಿಸಿದ ಕಾರಣ ಎಂದು ಅರ್ಥ. ಅಥವಾ - ಶೋಕಶಬ್ದವು ಉಪಪದವಾಗಿರುವ ಆಙ್ ಎಂಬ ಉಪಸರ್ಗದ ಮುಂದಿರುವ 'ಅತ ಸಾತತ್ಯಗಮನೇ' ಎಂಬ ಧಾತುವಿಗೆ ಕ್ವಿಪ್ ಪ್ರತ್ಯಯವನ್ನು ಸೇರಿಸಿದಾಗ 'ಶೋಕಾತ್' ಎಂದು ರೂಪವಾಗುವುದು. ಹೀಗೆ ವ್ಯಾಖ್ಯಾನ ಮಾಡಿದಾಗ ''ಯತಃ'' ಎಂಬ ಪದವು ಶೇಷವಾಗುವುದು. 'ಯಾವ ಕಾರಣದಿಂದಾಗಿ ಶೋಕದಿಂದ ಧಾವಿಸಿಬಂದನೋ ಆ ಕಾರಣದಿಂದ' ಎಂದು ಅರ್ಥ.

ಶಂಕೆ – ಸೂತ್ರದಲ್ಲಿ ತದ್ ದ್ರವಣಾತ್ ಎಂದಿಷ್ಟೇ ಹೇಳಿದ್ದರೂ ಪೂರ್ಣ ಅರ್ಥವು ಲಭಿಸುತ್ತಿರುವಾಗ ಆಙ್ ಎಂಬ ಉಪಸರ್ಗವನ್ನು ಸೇರಿಸಿರುವುದು ಏಕೆ?

ಸಮಾಧಾನ – ಈ ಶಂಕೆ ಸರಿಯಲ್ಲ; ಶ್ರುತಿಯಲ್ಲಿ 'ಶುದ್ರ' ಎಂದೇ ಹೇಳ-ಬೇಕಾಗಿದ್ದರೂ ಪೌತ್ರಾಯಣನ ಶೋಕದ ಆಧಿಕ್ಯವನ್ನು ಸೂಚಿಸುವುದಕ್ಕೋಸ್ಕರ 'ಶೂದ್ರ' ಎಂದು ಯಾವ 'ಊ'ಕಾರವೆಂಬ ದೀರ್ಘಸ್ವರವು ಶ್ರುತವಾಗಿದೆಯೋ ಅದರ ಅರ್ಥದ ಅಭಿವ್ಯಕ್ತಿಗೋಸ್ಕರವಾಗಿ ಆಙ್ ಉಪಸರ್ಗವನ್ನು ಸೇರಿಸಲಾಗಿದೆ. ಆದರೂ

ಶ್ರುತಿಯಲ್ಲಿ 'ಶೂಗ್ದ್ರ' ಎಂದು ಹೇಳಬೇಕಾಗಿದ್ದಾಗ ಶೂದ್ರ ಎಂದು ಹೇಳಿರುವುದು ಹೇಗೆ? ಎಂಬ ಶಂಕೆಯೂ ಸರಿಯಲ್ಲ. 'ತಸ್ಮಾದ್ ರುಗ್ದ್ರಾವಣಾತ್ ರುದ್ರಃ' ಎಂಬ ಶ್ರುತಿಯಲ್ಲಿ 'ಗಕಾರಸ್ಯ ದಕಾರಾದೇಶೇನ' ಗಕಾರಕ್ಕೆ ದಕಾರವನ್ನು ಆದೇಶ ಮಾಡಿ ಹೇಗೆ ಪ್ರಯೋಗ ಮಾಡಲಾಗಿದೆಯೋ ಅದರಂತೆಯೇ ಇಲ್ಲೂ ಎಂದು ಹೇಳಲು ಸಾಧ್ಯವಿದೆ. ಆದ್ದರಿಂದಲೇ ತತ್ತ್ವಪ್ರದೀಪದಲ್ಲಿ ಶುಗ್ ಎಂಬಲ್ಲಿರುವ ವರ್ಗದ ತೃತೀಯಾಕ್ಷರವಾದ ಗಕಾರಕ್ಕೆ ಆದೇಶವಾಗಿ ಬಂದಿರುವ ವರ್ಗದ ತೃತೀಯಾಕ್ಷರವಾದ ದಕಾರವು ಅತಿಶಯವನ್ನು ಹೇಳುವುದು ಎಂದು ಹೇಳಲಾಗಿದೆ. ಮತ್ತು 'ರುಜಂ ದ್ರಾವಯತೇ ಯಸ್ಮಾತ್ ರುದ್ರಃ ತಸ್ಮಾತ್ ಹೃದಯೇ ಸ್ಥಿತಃ' ಎಂಬ ಶ್ರುತಿಯಲ್ಲಿ ಹೇಗೋ ಹಾಗೆ ಇಲ್ಲಿ ಶೂದ್ರಶಬ್ದವು ಯುಕ್ತವಾಗಿದೆ.

ಇದರಿಂದ – 'ಶುಚಾ ಆದ್ರವಣಾತ್' - ದುಃಖನಿಮಿತ್ತದಿಂದ ರೈಕ್ವನ ಬಳಿಗೆ ಶೀಘ್ರವಾಗಿ ಹೋದ ಕಾರಣವೇ ಪೌತ್ರಾಯಣನಿಗೆ ಶೂದ್ರತ್ವ ಅಂದರೆ ಶೂದ್ರನೆಂದು ಸಂಬೋಧನೆ ಇರುವುದು ಹೊರತು ವರ್ಣಗಳಲ್ಲಿ ಅವರನಾದ ಕಾರಣದಿಂದಲ್ಲ. 'ಶುಕ್ ಚ ಅಸ್ಯ' - ಅವನಿಗೆ ಶೋಕವಾದರೂ ಕೂಡ 'ತದಾऽऽನದರಶ್ರವಣಾತ್' ಆ ಅನಾದರವನ್ನು ಹೇಳಿದ್ದರಿಂದ ಉಂಟಾಯಿತು. ಇಲ್ಲಿ ತಚ್ಛಬ್ದವು 'ಕಂವರೇ' ಎಂಬುದಾಗಿ ಶ್ರುತಿಯಲ್ಲಿ ಉಕ್ತವಾಗಿರುವುದನ್ನು ಪರಾಮರ್ಶಿಸುವುದು. 'ತದಾऽऽನಾದರಶ್ರವಣಾತ್' ಎಂಬ ಪದಕ್ಕೆ ತಸ್ಯ ಅನಾದರಶ್ರವಣಾತ್ ಎಂದು ವಿಗ್ರಹವಿದ್ದು ತಸ್ಯ ಎಂಬಲ್ಲಿರುವ ಷಷ್ಠೀವಿಭಕ್ತಿಯು ಕ್ರಿಯಾಕರ್ತೃಭಾವರೂಪವಾದ ಸಂಬಂಧವನ್ನು ಹೇಳುವುದು. ತಥಾ ಚ – ಹಂಸದಿಂದ ಕೃತವಾದ ಅನಾದರದ ಶ್ರವಣದಿಂದ ಎಂದು ಆ ವಾಕ್ಯದ ಅರ್ಥ. ತತ್ತ್ವಪ್ರದೀಪದ ಪ್ರಕಾರ 'ತಸ್ಮಾತ್' ಆ ಹಂಸದಿಂದ 'ಅನಾದರಶ್ರವಣಾತ್' ಅಂದರೆ ತನ್ನ ಅನಾದರವನ್ನು ಹೇಳಿದ್ದರಿಂದ ಎಂದು ಅರ್ಥ. ಕೆಲವರು ಈ ಪದವು ಮಧ್ಯಮ-ಪದಲೋಪೀ ಸಮಾಸವೆಂದು ಹೇಳುವರು.

ಭಾ.ದೀ. – ನನು ಶ್ರುತಾನಾದರಸ್ಯಾಪಿ ಕುತಃ ಶೋಕೋತ್ಪತ್ತಿರ್ಜ್ಞಾಯತೇ, ಪರಬುದ್ಧೇಃ ಶೋಕಪದೋಕ್ತದುಃಖಾನುಭವಸ್ಯಾಪ್ರತ್ಯಕ್ಷತ್ವಾತ್ ಇತ್ಯತ ಉಕ್ತಮ್ – ಸೂಚ್ಯತೇ ಹೀತಿ ॥ 'ಹಿ' ಯಸ್ಮಾತ್ 'ಸಹ' ಇತಿ ವಾಕ್ಯಾರ್ಥಾನುಪಪತ್ತ್ಯಾ ಜ್ಞಾತೇನ

ತದ್ವ್ಯಗ್ರಮನಸ್ಕತ್ವಾಖ್ಯಕಾರ್ಯೇಣ ತತ್ಕಾರಣಂ ಶುಗಸ್ಯ 'ಸೂಚ್ಯತೇ' ಜ್ಞಾಯತೇ। ತಸ್ಮಾದ್ ಅತೋ ನ ಶೂದ್ರೇತಿ ಸಂಬೋಧನಂ ಶೂದ್ರಸ್ಯ ವೇದಾಧಿಕಾರೇ ಲಿಂಗಮ್ ಇತಿ ನೈತದ್ ಬಲಾದ್ ಶೂದ್ರಸ್ಯ ವೇದವಿದ್ಯಾಧಿಕಾರ ಇತಿ ಭಾವ ಇತಿ ಸೂತ್ರಾರ್ಥ ಉಕ್ತೋ ಭವತಿ।

ಪೌತ್ರಾಯಣನಿಗೆ ತನ್ನ ಹಂಸಕೃತವಾದ ಅನಾದರವು ಶ್ರುತವಾದರೂ ಅವನಿಗೆ ದುಃಖದ ಉತ್ಪತ್ತಿಯಾಗಿದೆ ಎಂಬುದು ಹೇಗೆ ತಿಳಿದುಬಂದೀತು? 'ಪರಬುದ್ಧೇಃ' ಅಂದರೆ ಶೋಕಪದದಿಂದ ಉಕ್ತವಾಗುವ ಪೌತ್ರಾಯಣನ ದುಃಖಾನುಭವವು ನಮಗೆ ಅಪ್ರತ್ಯಕ್ಷವಷ್ಟೇ ? ಎಂಬ ಶಂಕೆಗೆ ಉತ್ತರವಾಗಿ ''ಸೂಚ್ಯತೇ ಹಿ'' ಎಂದು ಸೂತ್ರದಲ್ಲಿ ಹೇಳಿದೆ. ಈ ಯಾವ ಕಾರಣದಿಂದ 'ಸ ಹ' ಎಂದು ವಾಕ್ಯದ ಅರ್ಥವು ಅನ್ಯಥಾ ಅನುಪಪನ್ನವಾಗದ ಕಾರಣ ನಮಗೆ ತಿಳಿದು ಬರುವ ಪೌತ್ರಾಯಣನು ವ್ಯಗ್ರಮನಸ್ಸು-ಳ್ಳವನಾದನು ಎಂಬ ಕಾರಣದಿಂದ ಅದರ ಕಾರಣವಾದ ಶೋಕವು ಪೌತ್ರಾಯಣನಿಗೆ ಉಂಟಾಯಿತು ಎಂದು ಸೂಚಿತವಾಗುವುದು ಅಂದರೆ ತಿಳಿದು ಬರುವುದು. ಆದ್ದರಿಂದ ಶೂದ್ರನೆಂದು ಸಂಬೋಧಿಸಿರುವುದು ಶೂದ್ರರಿಗೆ ವೇದಾಧಿಕಾರವಿರಲು ಲಿಂಗವಾಗು-ವುದಿಲ್ಲ ಎಂದು ಭಾವ - ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನನು ಶೂದ್ರಶಬ್ದೋಽಯಂ ಕುತೋ ಯೌಗಿಕೋಽಂಗೀಕ್ರಿಯತೇ ರೂಢಾರ್ಥ ಏವ ಕಿಂ ನ ಸ್ಯಾತ್ । ಯೋಗರೂಢ್ಯೋರ್ಮಧ್ಯೇ ರೂಢೇರೇವ ಪ್ರಾಬಲ್ಯಾತ್ । ತಥಾ ಚ – ಪೌತ್ರಾಯಣನಿದರ್ಶನೇನೈವ ಶೂದ್ರಸ್ಯ ವೇದವಿದ್ಯಾ-ಧಿಕಾರಸಿದ್ಧಿರಿತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯ ವ್ಯಾಚಷ್ಟೇ – ಕ್ಷತ್ರಿಯ-ತ್ವೇತಿ ॥

ಈ ಶೂದ್ರಶಬ್ದವು ಯೌಗಿಕವೆಂದು ಏಕೆ ಅಂಗೀಕರಿಸಬೇಕು? ರೂಢಿಯಿಂದಲೇ ತನ್ನ ಅರ್ಥವನ್ನು ಹೇಳುವುದೆಂದೇಕಾಗಬಾರದು? ಯೋಗರೂಢಿಗಳ ಮಧ್ಯೆ ರೂಢಿಯೇ ಪ್ರಬಲವಾದದ್ದು. ತಥಾ ಚ – ಪೌತ್ರಾಯಣನ ದೃಷ್ಟಾಂತದಿಂದಲೇ ಶೂದ್ರನಿಗೆ ವೇದವಿದ್ಯಾಧಿಕಾರವು ಸಿದ್ಧವಾಗುವುದು ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು 'ಕ್ಷತ್ರಿಯತ್ವ'' ಎಂದು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ ॥೩೫॥**

**'ಅಯಮಶ್ವತರೀರಥಃ' ಇತಿ ಚಿತ್ರರಥಸಂಬಂಧಿತ್ವೇನ ಲಿಂಗೇನ ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಶ್ಚ ।**

ಉಪನಿಷತ್ತಿನಲ್ಲಿ ಪೌತ್ರಾಯಣನು ರೈಕ್ವನಿಗೆ ತಾನು ಕೊಡುವ ರಥವನ್ನು 'ಅಯಮಶ್ವತರೀರಥಃ' ಎಂದು ಹೇಳುವುದರಿಂದ ಆ ಚಿತ್ರರಥಕ್ಕೆ ಸಂಬಂಧಿಸಿದ ಪೌತ್ರಾಯಣನು ಕ್ಷತ್ರಿಯನೆಂದು ತಿಳಿದು ಬರುವುದು.

ಭಾ.ದೀ. – ಅತ್ರ 'ಅಯಮ್' ಇತ್ಯತಃ ಪ್ರಾಕ್ 'ಉತ್ತರತ್ರ' ಇತಿ ಸೌತ್ರಪದಂ ಸಂಬಂಧನೀಯಮ್ । 'ಶ್ರುತೇನ' ಇತಿ ಶೇಷಃ । ತಥಾ ಚ – ಉತ್ತರತ್ರ ರೈಕ್ವಂ ಪ್ರತಿ ಪೌತ್ರಾಯಣಸ್ಯ ಆದ್ರವಣಾತ್, ಉತ್ತರತ್ರ ತತ್ಪ್ರತಿಪಾದನಾಂತರಮ್ ।

ಯದ್ವಾ, ಶೂದ್ರಶಬ್ದೇನ ಸಂಬೋಧನಾದ್ ಉತ್ತರತ್ರ 'ಅಯಮಶ್ವತರೀ ರಥಃ' ಇತಿ ಶ್ರುತೇನ ಇತ್ಯರ್ಥಃ । ಪೌತ್ರಾಯಣೇನ ದೀಯಮಾನಸ್ಯ ರಥಸ್ಯ ಅನ್ಯದೀಯತ್ವಶಂಕಾನಿರಾಸಾಯ ಸೂತ್ರೇ 'ಚೈತ್ರರಥೇನ' ಇತಿ ಭಾವಪ್ರಧಾನಪದಂ ಪ್ರಯುಕ್ತಮ್ । ಅನ್ಯಥಾ 'ಚಿತ್ರರಥೇನ' ಇತ್ಯೇವಾವಕ್ಷ್ಯತ್ । ತತ್ರ ಚಿತ್ರಶ್ಚಾಸೌ ರಥಶ್ಚ ಚಿತ್ರರಥಃ ತಸ್ಯಾಯಂ ಚೈತ್ರರಥ ಇತಿ ವಿಗ್ರಹಮಭಿಪ್ರೇತ್ಯ ಪ್ರತ್ಯಯಾರ್ಥಂ ಪ್ರದರ್ಶಯನ್ ತದ್ವ್ಯಾಚಷ್ಟೇ – ಚಿತ್ರರಥಸಂಬಂಧಿತ್ವೇನ ಇತಿ ॥ ಸ್ವಾಭಾವಿಕಚಿತ್ರರಥಸಂಬಂಧಿತ್ವೇನ ಇತ್ಯರ್ಥಃ । ಅತ್ರ ರಥಮಾತ್ರಮೇವ ಲಿಂಗಮ್, ಚಿತ್ರಪದಂ ತು ಸ್ವರೂಪಕಥನಾರ್ಥಮ್ । ಯದ್ವಾ – ಅಪೂರ್ವರಥಯೋಗೇನ ಕ್ಷತ್ರಿಯತ್ವಸಂಭಾವನಾರ್ಥಂ ತತ್ಪದಮ್ । ಅಥವಾ ಯದಾ ರಥಿತ್ವೇನೈವ ಕ್ಷತ್ರಿಯತ್ವಸ್ಯ ನಿಶ್ಚಯಃ, ತದಾ ಸುತರಾಂ ಚಿತ್ರರಥಿತ್ವೇನ ಇತಿ ಸೂಚನಾರ್ಥಂ ತತ್ಪದಮ್ ॥

ಯದ್ಯಪಿ 'ಅಯಮಶ್ವತರೀರಥಃ' ಇತ್ಯತ್ರ ಚಿತ್ರರಥಮಾತ್ರಶ್ರವಣೇಽಪಿ ನ ತತ್ಸಂಬಂಧೋಽಸ್ಯ ಶ್ರೂಯತೇ । ತಥಾಽಪಿ ಪೂರ್ವವಾಕ್ಯೇ 'ಹಾರೇತ್ವಾ ತವೈವ' ಇತಿ ಷಷ್ಠ್ಯಾ ಇತ್ಯಾಶ್ವಬ್ದಾರ್ಥರಥಸಂಬಂಧೋ ಗಮ್ಯತ ಇತಿ ತಸ್ಯಾಶ್ಚ ರಥಸಂಬಂಧೇ ಶ್ರುತಿರೂಪತ್ವಾದ್ ಯುಕ್ತಮುಕ್ತಮ್ । 'ಚಿತ್ರೋ ರಥೋ ಯಸ್ಯ ಇತಿ ಚಿತ್ರರಥಃ, ತಸ್ಯ ಭಾವಃ ಚೈತ್ರರಥಃ, ತೇನ' ಇತಿ ವ್ಯಾಖ್ಯಾನಂ ತು ಭಾವೇಽಣ್ಪ್ರತ್ಯಯಸ್ಯ ಕಲ್ಪ್ಯತ್ವಾತ್ ಶ್ರುತಿಭಾಷ್ಯವಿರುದ್ಧತ್ವಾಚ್ಚ ಅಯುಕ್ತಮ್ ।

ನ ಚ 'ಚೈತ್ರರಥೇನ' ಇತಿ ಸಂಬಂಧೋಕ್ತಿಮಾತ್ರೇಣ ಕಥಮನ್ಯದೀಯತ್ವಶಂಕಾ-ನಿರಾಸಃ? ಇತಿ ವಾಚ್ಯಮ್ । ಸ್ವತಃ ಪ್ರಾಪ್ತತದೀಯತ್ವೇ ಬಾಧಕಾಭಾವೇ ತದೀಯ-ತ್ವಸ್ಯೈವ ಸ್ವಾಭಾವಿಕತ್ವಸಂಭವೇ ನಿಮಿತ್ತಕಗ್ರಹಣಾಯೋಗಾತ್ । 'ಸ್ವತ್ವಾಭಾವೇ ಧನಾಯೋಗಾತ್' ಇತ್ಯಾದಿನ್ಯಾಯಪ್ರಾಪ್ತತ್ವಾತ್ ।

ಇಲ್ಲಿ 'ಅಯಮ್' ಎಂಬ ಪದದ ಮುಂಚೆ 'ಉತ್ತರತ್ರ' ಎಂಬ ಸೂತ್ರದ ಪದ-ವನ್ನು ಸೇರಿಸಬೇಕು. 'ಶ್ರುತೇನ' ಎಂಬ ಪದವು ಶೇಷವಾಗಿದೆ. ತಥಾ ಚ – 'ಉತ್ತರತ್ರ' - ರೈಕ್ವನನ್ನು ಕುರಿತು ಪೌತ್ರಾಯಣನನು ಶೀಘ್ರವಾಗಿ ಬಂದದ್ದರಿಂದ ಉತ್ತರತ್ರ - ಅದನ್ನು ಪ್ರತಿಪಾದನೆ ಮಾಡಿದ ನಂತರ.

ಅಥವಾ 'ಶೂದ್ರಶಬ್ದೇನ ಸಂಬೋಧನಾತ್ ಉತ್ತರತ್ರ' ಶೂದ್ರಶಬ್ದದಿಂದ ಮಾಡಿದ ನಂತರ 'ಅಯಮಶ್ವತರೀರಥಃ' ಎಂದು ಶ್ರುತವಾಗಿರುವ ಎಂದು ಅರ್ಥ. ಪೌತ್ರಾಯಣನಿಂದ ಕೊಡಲ್ಪಡುವ ರಥವು ಮತ್ತೊಬ್ಬನದು ಎಂಬ ಶಂಕೆಯನ್ನು ನಿವಾರಿಸಲು ಸೂತ್ರದಲ್ಲಿ 'ಚೈತ್ರರಥೇನ' ಎಂಬ ಧರ್ಮವನ್ನೇ ಪ್ರಧಾನವಾಗಿ ಹೇಳುವ ಪದವು ಪ್ರಯೋಗಿಸಲ್ಪಟ್ಟಿದೆ. ಆ ಅಭಿಪ್ರಾಯವಿಲ್ಲದಿದ್ದಲ್ಲಿ 'ಚಿತ್ರರಥೇನ' ಎಂದೇ ಹೇಳಬೇಕಾಗಿತ್ತು. ಅಲ್ಲಿ 'ಚಿತ್ರಶ್ಚಾಸೌ ರಥಶ್ಚ ಚಿತ್ರರಥಃ ತಸ್ಯಾಯಂ ಚೈತ್ರರಥಃ' ಚಿತ್ರವಾಗಿರುವ ರಥವು ಚಿತ್ರರಥ, ಅದಕ್ಕೆ ಸಂಬಂಧಿಸಿದವನು ಚೈತ್ರರಥ ಎಂಬ ವಿಗ್ರಹವನ್ನು ಅಭಿಪ್ರಾಯಪಟ್ಟು ಆ ಪದದಲ್ಲಿರುವ ಪ್ರತ್ಯಯದ ಅರ್ಥವನ್ನು ತೋರಿ-ಸುತ್ತಾ ಚೈತ್ರರಥೇನ ಎಂಬ ಪದವನ್ನು ''ಚಿತ್ರರಥಸಂಬಂಧಿತ್ವೇನ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಚಿತ್ರರಥದ ಸ್ವಾಭಾವಿಕವಾದ ಸಂಬಂಧವುಳ್ಳವನಾದದ್ದರಿಂದ ಎಂದು

ಅರ್ಥ. ಇಲ್ಲಿ ಕೇವಲ ರಥವು ಹೇತುವಾಗಿದೆ, ಚಿತ್ರಪದವಾದರೋ ಆ ರಥದ ಸ್ವರೂಪವನ್ನು ಹೇಳುವ ಉದ್ದೇಶವುಳ್ಳದ್ದು. ಅಥವಾ ಅಪೂರ್ವವಾದ ರಥದ ಸಂಬಂಧ -ದಿಂದ ಪೌತ್ರಾಯಣನು ಕ್ಷತ್ರಿಯನಾಗಿರಬಹುದು ಎಂಬುದನ್ನು ತಿಳಿಸಲು ಚಿತ್ರಪದವನ್ನು ಪ್ರಯೋಗಿಸಲಾಗಿದೆ. ಅಥವಾ ಕೇವಲ ರಥದ ಸಂಬಂಧದಿಂದಲೇ ಪೌತ್ರಾಯಣನು ಕ್ಷತ್ರಿಯನೆಂದು ನಿಶ್ಚಯವಾಗುವಾಗ ಸುತರಾಂ ಚಿತ್ರರಥಸಂಬಂಧದಿಂದ ಅವನು ಕ್ಷತ್ರಿಯನೆಂದು ಸಿದ್ಧವಾಗುವುದು ಎಂದು ಸೂಚಿಸಲು ಆ ಪದವನ್ನು ಪ್ರಯೋಗಿಸ-ಲಾಗಿದೆ.

ಯದ್ಯಪಿ 'ಅಯಮಶ್ವತರೀರಥಃ' ಎಂಬ ಉಪನಿಷದ್ವಾಕ್ಯದಲ್ಲಿ ಕೇವಲ ಚಿತ್ರರಥದ ಶ್ರವಣವಿದ್ದರೂ ಪೌತ್ರಾಯಣನಿಗೆ ಅದರ ಸಂಬಂಧವು ಶ್ರುತವಾಗಿಲ್ಲ. ಆದರೂ ಅದರ ಹಿಂದಿನ ವಾಕ್ಯದಲ್ಲಿ 'ಹಾರೇತ್ವಾ ತವೈವ' ಎಂಬಲ್ಲಿ ಷಷ್ಠೀವಿಭಕ್ತಿಯಿಂದ ಇತ್ವಾಶಬ್ದದ ಅರ್ಥವಾದ ರಥದ ಸಂಬಂಧವು ತಿಳಿದುಬರುವುದರಿಂದ ಆ ಷಷ್ಠೀವಿಭಕ್ತಿಯಾದರೋ ರಥಸಂಬಂಧವನ್ನು ತಿಳಿಸುವ ವಿಷಯದಲ್ಲಿ ಶ್ರುತಿರೂಪಪ್ರಮಾಣವಾಗುವುದರಿಂದ ಹೇಳಿದ್ದು ಯುಕ್ತವಾಗಿದೆ. 'ಚಿತ್ರೋ ರಥೋ ಯಸ್ಯ ಇತಿ ಚಿತ್ರರಥಃ, ತಸ್ಯಭಾವಃ ಚೈತ್ರರಥಃ ತೇನ - ಚಿತ್ರವಾದ ರಥವು ಯಾರಿಗಿರುವುದೋ ಅವನು ಚಿತ್ರರಥನು, ಅವನ ಧರ್ಮವು ಚೈತ್ರರಥ. ಆದರಿಂದ - ಎಂಬ ವ್ಯಾಖ್ಯಾನವಾದರೋ ಭಾವಾರ್ಥ-ದಲ್ಲಿ ಅಣ್‌ಪ್ರತ್ಯಯವನ್ನು ಕಲ್ಪಿಸಬೇಕಾಗಿರುವುದರಿಂದ ಮತ್ತು ಶ್ರುತಿಭಾಷ್ಯಗಳಿಗೆ ವಿರುದ್ಧವಾಗಿರುವುದರಿಂದ ಅಯುಕ್ತವಾಗಿದೆ.

ಇಲ್ಲಿ ಚೈತ್ರರಥೇನ ಎಂಬುದಾಗಿ ರಥದ ಸಂಬಂಧವನ್ನು ಹೇಳಿದ ಮಾತ್ರದಿಂದ ಆ ರಥವು ಮತ್ತೊಬ್ಬನದ್ದು ಎಂಬ ಶಂಕೆಯ ನಿವಾರಣೆಯಾಗುವುದು ಹೇಗೆ? ಎಂದು ಹೇಳತಕ್ಕದ್ದಲ್ಲ. ಏಕೆಂದರೆ, ಸಹಜವಾಗಿ ಪ್ರಾಪ್ತವಾಗುವ ತದೀಯತ್ವವಿಷಯದಲ್ಲಿ ಬಾಧಕವಿಲ್ಲದಿದ್ದಾಗ ಆ ತದೀಯತ್ವವೇ ಸ್ವಾಭಾವಿಕವೆಂದು ಸಿದ್ಧವಾಗುವಾಗ ತದೀ-ಯತ್ವವು ನೈಮಿತ್ತಿಕವಾದುದೆಂದು ಗ್ರಹಿಸುವುದು ಯುಕ್ತವಲ್ಲ. 'ಸ್ವತ್ವಾಭಾವೇ ಧನಾ-ಯೋಗಾತ್' - 'ಅವನ ಸ್ವತ್ವವಿಲ್ಲದ ಪಕ್ಷದಲ್ಲಿ ಅವನಲ್ಲಿ ಧನವಿರಲಾರದು' ಇತ್ಯಾದಿ ನ್ಯಾಯದಿಂದ ಚೈತ್ರರಥಸಂಬಂಧವು ಸ್ವಾಭಾವಿಕವೆಂದೇ ಸಿದ್ಧವಾಗುವುದು.

ಭಾ.ದೀ. – ರಥೇನ ಲಿಂಗಾತ್ ಇತ್ಯನಯೋಃ ಸಾಮಾನಾಧಿಕರಣ್ಯಾಯ 'ಲಿಂಗಾತ್' ಇತಿ ಪಂಚಮೀಂ ವ್ಯತ್ಯಯೇನ ವ್ಯಾಚಷ್ಟೇ – ಲಿಂಗೇನೇತಿ ॥ ''ಪೌತ್ರಾಯಣಸ್ಯ'' ಇತ್ಯೇತದ್ 'ಅಸ್ಯ' ಇತ್ಯನುವೃತ್ತಪದಸ್ಯ ಅರ್ಥಕಥನಮ್ । ''ಕ್ಷತ್ರಿಯತ್ವಾವಗತೇಃ'' ಇತ್ಯಸ್ಯ 'ಶುಚಾऽऽದ್ರವಣಾದೇವಾಸ್ಯ ಶೂದ್ರತ್ವಂ ನ ತು ರೂಢ್ಯಾ' ಇತಿ ಪೂರ್ವೇಣ ಅನ್ವಯಃ । 'ಚ'ಶಬ್ದೋ 'ಲಿಂಗೇನ ಚ' ಇತಿ ಸಂಬಧ್ಯತೇ । ತೇನ 'ಬಹುದಾಯೀ' ಇತ್ಯಾದಿವಾಕ್ಯಶೇಷೋಕ್ತಂ ಲಿಂಗಂ ಸಮುಚ್ಚೀಯತೇ । ಲಿಂಗಸ್ಯ ಶ್ರುತಿತಃ ಚರಮತ್ವೇನ ಅನೇಕತ್ವೇನ ಚ ಪ್ರಾಬಲ್ಯಸೂಚನಾಯ ವಾ 'ಚ'ಶಬ್ದಃ। ಏವಂ ಸೂತ್ರೇऽಪಿ 'ಚ'ಶಬ್ದೋ ಭಿನ್ನಕ್ರಮಃ, ಉಕ್ತಪ್ರಯೋಜನಕಶ್ಚ। ಏವಂ ಚ ರೂಢೇರೇವ ಪ್ರಾಬಲ್ಯೇऽಪಿ ಅತ್ರ ಶ್ರುತಾನೇಕಲಿಂಗರೂಪಬಾಧಕಾತ್ ಶೂದ್ರಶಬ್ದಸ್ಯ ಯೋಗವೃತ್ತ್ಯಂಗೀಕಾರ ಏವ ಯುಕ್ತ ಇತಿ ಭಾವಃ।

'ಗರ್ಧಭಾದಶ್ವಾಯಾಂ ಜಾತಾ ಅಶ್ವತರ್ಯಃ' – ಇತಿ ತತ್ತ್ವಪ್ರದೀಪೇ । 'ಗರ್ದಭೀಷು ಅಶ್ವೈರ್ಜಾತಾ ಅಶ್ವತರ್ಯಃ' ಇತಿ ವ್ಯಾಸತೀರ್ಥೀಯೇ । ತದ್ ಯುಕ್ತೋ ರಥಃ ಅಶ್ವತರೀರಥಃ ತವ ದಕ್ಷಿಣಾತ್ವೇನ ವರ್ತತ – ಇತ್ಯರ್ಥಃ। ರೈಕ್ವಂ ಪ್ರತಿ ಪೌತ್ರಾಯಣವಾಕ್ಯಮೇತತ್ ।

'ರಥೇನ' 'ಲಿಂಗಾತ್' ಎಂಬ ಪದಗಳಿಗೆ ಸಾಮಾನಾಧಿಕರಣ್ಯ ಅಂದರೆ ಏಕ-ವಿಷಯಕತ್ವದ ಲಾಭಕ್ಕಾಗಿ 'ಲಿಂಗಾತ್' ಎಂಬಲ್ಲಿರುವ ಪಂಚಮಿಯನ್ನು ''ಲಿಂಗೇನ'' ವ್ಯತ್ಯಾಸಮಾಡಿಕೊಂಡು ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ 'ಪೌತ್ರಾಯಣಸ್ಯ' ಎಂಬ ಪದವು ಶುಗಸ್ಯ ಎಂಬ ಸೂತ್ರದಿಂದ ಅನುವೃತ್ತಿಯನ್ನು ಪಡೆದ 'ಅಸ್ಯ' ಎಂಬ ಪದದ ಅರ್ಥವನ್ನು ಹೇಳುವುದು. 'ಕ್ಷತ್ರಿಯತ್ವಾವಗತೇಃ' ಎಂಬ ಪದಕ್ಕೆ ಶೋಕದಿಂದ ಆದ್ರವಣ ಅಂದರೆ ಶೀಘ್ರಗಮನವಿದ್ದಕಾರಣದಿಂದಲೇ ಅವನಿಗೆ ಶೂದ್ರತ್ವ ಹೊರತು ರೂಢಿಯಿಂದಲ್ಲ ಎಂದು ಹಿಂದಿನ ವಾಕ್ಯದಿಂದ ಅನ್ವಯವಾಗುವುದು. 'ಚ'ಶಬ್ದವು 'ಲಿಂಗೇನ ಚ' ಎಂದು ಸಂಬಂಧವನ್ನು ಪಡೆಯುವುದು. ಇದರಿಂದ 'ಬಹುದಾಯೀ' ಇತ್ಯಾದಿ ವಾಕ್ಯಶೇಷದಲ್ಲಿ ಹೇಳಿದ ಲಿಂಗದ ಸಮುಚ್ಚಯವು ಹೇಳಲ್ಪಡುವುದು. ಅಥವಾ

ಲಿಂಗವು ಶ್ರುತಿಗಿಂತಲೂ ಮುಂದಿರುವುದರಿಂದ ಮತ್ತು ಅನೇಕವಾಗಿರುವುದರಿಂದ ಪ್ರಬಲವಾದದ್ದು ಎಂದು ಸೂಚಿಸಲು 'ಚ'ಶಬ್ದವಿದೆ. ಹೀಗೆ ಸೂತ್ರದಲ್ಲೂ ಚಶಬ್ದವು ಬೇರೆ ಕಡೆಯಲ್ಲಿ ಅನ್ವಯವನ್ನು ಹೊಂದುವುದು ಮತ್ತು ಈಗ ಹೇಳಿದ ಪ್ರಯೋಜನ-ವುಳ್ಳದ್ದು. ಏವಂ ಚ ರೂಢಿಗೇ ಪ್ರಾಬಲ್ಯವಿದ್ದರೂ ಈ ಶ್ರುತಿಯಲ್ಲಿ ಅನೇಕ ಲಿಂಗಗಳೆಂಬ ಬಾಧಕವಿರುವುದರಿಂದ ಸೂತ್ರಶಬ್ದಕ್ಕೆ ಯೋಗವೃತ್ತಿಯನ್ನು ಅಂಗೀಕರಿಸು-ವುದೇ ಯುಕ್ತವೆಂದು ಭಾವ.

ಗರ್ದಭದಿಂದ ಹೆಣ್ಣು ಕುದುರೆಯಲ್ಲಿ ಜನಿಸಿರುವವು ಅಶ್ವತರಿಗಳು ಎಂದು ತತ್ವಪ್ರದೀಪದಲ್ಲಿ ಹೇಳಿದೆ; ಅಶ್ವಗಳಿಂದ ಗರ್ದಭಿಗಳಲ್ಲಿ ಜನಿಸಿರುವವು ಅಶ್ವತರಿ ಎಂದೆನಿಸುವವು ಎಂದು ವ್ಯಾಸತೀರ್ಥರ ವ್ಯಾಖ್ಯಾನದಲ್ಲಿ ಹೇಳಿದೆ. ಆ ಅಶ್ವತರಿ-ಯುಕ್ತವಾದ ರಥವು ಅಂದರೆ ಅಶ್ವತರೀರಥವು ನಿನಗೆ ದಕ್ಷಿಣೆಯಾಗಿರುವುದು ಎಂದು ಅರ್ಥ. ಈ ವಾಕ್ಯವು ರೈಕ್ವನನ್ನು ಕುರಿತು ಪೌತ್ರಾಯಣನು ಹೇಳುವ ವಾಕ್ಯವಾಗಿದೆ.

ಭಾ.ದೀ. – ನನು ಶ್ರುತಾವಶ್ವತರೀರಥಶಬ್ದಪ್ರಯೋಗಾತ್ ಸೂತ್ರೇಽಪಿ ತಥೈವ ಪ್ರಯೋಕ್ತವ್ಯೇ ಕಥಂ ಸೂತ್ರಕೃತ್ ಚಿತ್ರರಥಶಬ್ದಂ ಪ್ರಾಯುಂಕ್ತ? ಇತ್ಯಾಶಂಕ್ಯ ಉಭಯೋರರ್ಥೈಕ್ಯಾನ್ನ ವಿಸಂವಾದ ಇತ್ಯಾಶಯೇನ ತತ್ರ ಅಭಿಧಾನಮಾಹ – ರಥ ಇತಿ ॥

ಶ್ರುತಿಯಲ್ಲಿ ಅಶ್ವತರೀರಥ ಎಂಬ ಶಬ್ದಪ್ರಯೋಗವಿರುವುದರಿಂದ ಸೂತ್ರದಲ್ಲೂ ಹಾಗೆಯೇ ಪ್ರಯೋಗವಿರಬೇಕಾಗಿದ್ದಾಗ ಸೂತ್ರಕಾರರು ಚಿತ್ರರಥಪದಪ್ರಯೋಗವನ್ನು ಹೇಗೆ ಪ್ರಯೋಗಿಸಿದರು? ಎಂದು ಆಶಂಕಿಸಿ ಎರಡೂ ಶಬ್ದಗಳಿಗೆ ಒಂದೇ ಅರ್ಥ-ವಿರುವುದರಿಂದ ವಿಸಂವಾದವಿಲ್ಲ ಎಂಬ ಆಶಯದಿಂದ ಚಿತ್ರರಥಶಬ್ದದ ವಿಷಯದಲ್ಲಿ ಭಾಷ್ಯಕಾರರು ಕೋಷವನ್ನು ''ರಥ'' ಎಂಬ ವಾಕ್ಯದಿಂದ ಉಲ್ಲೇಖಿಸುತ್ತಿದ್ದಾರೆ.

**ಭಾಷ್ಯಮ್ – 'ರಥಸ್ತ್ವಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತೇ'।**

**ಇತಿ ಬ್ರಾಹ್ಮೇ।**

'ರಥಸ್ತ್ವಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತೇ' – ಅಶ್ವತರೀ ಅಂದರೆ ಗರ್ದಭದಿಂದ ಅಶ್ವದಲ್ಲಿ ಹುಟ್ಟಿದ 'ಅಶ್ವತರಿ' ಎಂಬ ಪ್ರಾಣಿಗಳಿಂದ ಯುಕ್ತವಾದ ರಥವನ್ನು ಚಿತ್ರರಥ ಎಂದು ಕರೆಯುವರು – ಎಂದು ಬ್ರಾಹ್ಮಪುರಾಣದಲ್ಲಿ ಹೇಳಿರುವುದರಿಂದ ಆ ಚಿತ್ರರಥವು ಪೌತ್ರಾ-ಯಣನದ್ದೇ ಎಂದು ತಿಳಿದು ಬರುವುದು.

ಭಾ.ದೀ. – 'ತು'ಶಬ್ದೋ ವಿಶೇಷಾರ್ಥೋಽವಧಾರಣೇ ವಾ । 'ಅಶ್ವತರೀ-ಯುಕ್ತ ಏವ' ಇತಿ ಸಂಬಧ್ಯತೇ। ಅತ್ರ 'ರಥಃ' ಇತಿ ವಾಸ್ತವವಿಶೇಷೋಕ್ತಿರೇವ, ನ ತು ರಥತ್ವಸ್ಯಾಪಿ ಶಕ್ಯಕೋಟಿಪ್ರವೇಶಃ । ತಥಾ ಚ – ಸೂತ್ರೇ ರಥತ್ವಪ್ರಕಾರಕ-ಬೋಧಾಯ ರಥಶಬ್ದಪ್ರಯೋಗಃ ಇತಿ ನ ತದ್ವೈಯರ್ಥ್ಯಮಿತಿ ಧ್ಯೇಯಮ್ । 'ಇತಿ ಬ್ರಾಹ್ಮೇ ಉಕ್ತತ್ವಾತ್ ನ ಶ್ರುತಿಸೂತ್ರಯೋರ್ವೈರೂಪ್ಯಮ್' ಇತ್ಯುಪಸ್ಕಾರೇಣಾ-ನ್ವಯಃ।

ರಥಸ್ತು ಎಂದು ಕೋಷದಲ್ಲಿರುವ 'ತು'ಶಬ್ದವು ವಿಶೇಷ ಅಥವಾ ಅವಧಾರಣ ಅಭಿಪ್ರಾಯದ ಅರ್ಥವನ್ನು ಹೇಳುವುದು. ಆ 'ಏವ'ಕಾರವು ಅಶ್ವತರೀಯುಕ್ತ ಏವ ಎಂದು ಸಂಬಂಧವನ್ನು ಪಡೆಯುವುದು. ಇಲ್ಲಿ ರಥ ಎಂಬ ಪದವು ವಸ್ತುತಃ ಇರುವ ರಥವಿಶೇಷವನ್ನು ಹೇಳುವ ಶಬ್ದವಾಗಿದೆ ಹೊರತು ರಥತ್ವಕ್ಕಾದರೂ ವಾಚ್ಯಾರ್ಥದಲ್ಲಿ ಪ್ರವೇಶವಿಲ್ಲ. ತಥಾ ಚ – ಸೂತ್ರದಲ್ಲಿ ರಥತ್ವಪ್ರಕಾರಕಜ್ಞಾನವನ್ನು ಹುಟ್ಟಿಸುವ ಸಲುವಾಗಿ ರಥಶಬ್ದವನ್ನು ಪ್ರಯೋಗಿಸಿರುವುದರಿಂದ ರಥಶಬ್ದವು ವ್ಯರ್ಥವಲ್ಲವೆಂದು ತಿಳಿಯಬೇಕು. 'ಇತಿ ಬ್ರಾಹ್ಮೇ ಉಕ್ತತ್ವಾತ್ ನ ಶ್ರುತಿಸೂತ್ರಯೋಃ ವೈರೂಪ್ಯಮ್' - ಹೀಗೆ ಬ್ರಾಹ್ಮಪುರಾಣದಲ್ಲಿ ಹೇಳಿರುವುದರಿಂದ ಶ್ರುತಿಸೂತ್ರಗಳಿಗೆ ವೈಲಕ್ಷಣ್ಯವಿರು-ವುದೆಂದು ಹೇಳಬಾರದು' ಎಂದು ಅಧ್ಯಾಹಾರ ಮಾಡಿದ ವಾಕ್ಯದೊಂದಿಗೆ 'ಇತಿ ಬ್ರಾಹ್ಮೇ' ಎಂಬ ಪದಕ್ಕೆ ಅನ್ವಯವಾಗುವುದು.

ಭಾ.ದೀ. – ಏವಂ ಸಾಕ್ಷಾದೇವ ಸ್ವಾಭಾವಿಕರಥೇನ ಪೌತ್ರಾಯಣಸ್ಯ ಕ್ಷತ್ರಿಯತ್ವಂ ಪ್ರಸಾಧಿತಮ್ । ಸ್ವಾಭಾವಿಕರಥಿತ್ವೇಽಪಿ ಅಸ್ಯ ವರ್ಣಾವರತ್ವಂ ಕಿಂ ನ

**ಸ್ಯಾದಿತಿ ಅಪ್ರಯೋಜಕತ್ವಮಾಶಂಕ್ಯ , ಮೈವಮ್ – ಆಗಂತುಕಸ್ಯಾಪಿ ರಥಸ್ಯ ವೇದಂ ವಿನಾಽಯೋಗಾತ್ 'ವೇದಸ್ಯ ಚ ಸಂಸ್ಕಾರೇತಿ ವಕ್ಷ್ಯಮಾಣನ್ಯಾಯೇನ ಶೂದ್ರೇ ಅಯೋಗಾತ್' ರಥಮಾತ್ರೇಣ ವೇದಾನುಮಾನದ್ವಾರಾ ಪೌತ್ರಾಯಣಸ್ಯ ಶೂದ್ರತ್ವಾಭಾವಸಿದ್ಧೇರಿತ್ಯಾಶಯೇನ ರಥೇನ ವೇದಾನುಮಾನೇ ವ್ಯಭಿಚಾರಶಂಕಾ-ಪರಿಹಾರಾಯ ಆಗಮೇನೋಭಯವ್ಯಾಪ್ತಿಂ ದರ್ಶಯತಿ – ಯತ್ರೇತಿ ॥**

ಹೀಗೆ ಸ್ವಾಭಾವಿಕವಾದ ರಥಸಂಬಂಧವಿರುವುದರಿಂದ ಪೌತ್ರಾಯಣನು ಕ್ಷತ್ರಿಯ-ನೆಂದು ಸಾಕ್ಷಾತ್ತಾಗಿಯೇ ಸಾಧಿಸಲ್ಪಟ್ಟಿತು. ಸ್ವಾಭಾವಿಕರಥಸಂಬಂಧವಿದ್ದರೂ ಪೌತ್ರಾ-ಯಣನು ಅವರವರ್ಣದವನು ಏಕಾಗಬಾರದು? ಎಂದು ಸ್ವಾಭಾವಿಕರಥಸಂಬಂಧ ಎಂಬ ಹೇತುವು ಅಪ್ರಯೋಜಕವೆಂದು ಆಶಂಕಿಸಿ, ಹಾಗೆ ಹೇಳತಕ್ಕದ್ದಲ್ಲ. ಏಕೆಂದರೆ, ರಥವು ಸ್ವಾಭಾವಿಕವಲ್ಲದೇ ಆಗಂತುಕವಾಗಿದ್ದರೂ ವೇದವಿಲ್ಲದೇ ಅಂತಹ ರಥದ ಸಂಬಂಧವಿರಲು ಸಾಧ್ಯವಿಲ್ಲದಿರುವುದರಿಂದ - ವೇದವಾದರೂ ಸಂಸ್ಕಾರ ಎಂದು ಮುಂದಿನ ಸೂತ್ರದಲ್ಲಿ ಹೇಳುವ ಯುಕ್ತಿಯಿಂದ ಶೂದ್ರನಿಗೆ ಇರುವುದು ಸಾಧ್ಯವಿಲ್ಲ. ಹೀಗೆ ಕೇವಲ ರಥದಿಂದ ಪೌತ್ರಾಯಣನಿಗೆ ವೇದವಿರುವುದು ಎಂದು ಅನುಮಾನ-ಮಾಡುವ ಮೂಲಕ ಪೌತ್ರಾಯಣನು ಶೂದ್ರನಲ್ಲವೆಂದು ಸಿದ್ಧವಾಗುವುದು ಎಂಬ ಆಶಯದಿಂದ ರಥವೆಂಬ ಹೇತುವಿನಿಂದ ವೇದವನ್ನು ಅನುಮಾನ ಮಾಡಿದ ಪಕ್ಷದಲ್ಲಿ ವ್ಯಭಿಚಾರಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ಆಗಮವಾಕ್ಯದಿಂದ ರಥ ಮತ್ತು ವೇದಗಳಿಗೆ ಇರುವ ಎರಡುವಿಧವಾದ ವ್ಯಾಪ್ತಿಯನ್ನು "ಯತ್ರ" ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ' ಇತಿ ಬ್ರಹ್ಮವೈವರ್ತೇ ॥೩೫॥**

'ಎಲ್ಲಿ ವೇದವಿರುವುದೋ ಅಲ್ಲಿ ರಥ; ಎಲ್ಲಿ ರಥವಿಲ್ಲವೋ ಅಲ್ಲಿ ವೇದವು ಇಲ್ಲ' ಎಂದು ಬ್ರಹ್ಮವೈವರ್ತದಲ್ಲಿ ಹೇಳಿರುವುದರಿಂದ ಪೌತ್ರಾಯಣನು ಕ್ಷತ್ರಿಯನೇ ಅವನು ಶೂದ್ರನಲ್ಲ ಎಂದು ತಿಳಿದು ಬರುವುದು.

ಭಾ.ದೀ. – 'ತತ್ರ' - ತತ್ರೈವ ಇತ್ಯರ್ಥಃ। ತೇನ 'ಯತ್ರ ವಹ್ನಿಃ ತತ್ರೈವ ಧೂಮಃ' ಇತ್ಯಾದಾವಿವ ವೇದಸ್ಯ ವ್ಯಾಪಕತಾಲಾಭಃ। ಅತ ಏವ ವ್ಯತಿರೇಕಪ್ರದರ್ಶಕಾಂಶೇ ನ ವೇದ ಇತಿ ವೇದಾಭಾವಸ್ಯ ಪ್ರಥಮಮುಕ್ತಿಃ।

ಸ್ಮೃತೌ ರಥಶಬ್ದೇನ ಆಗಂತುಕಸ್ವಾಭಾವಿಕಸಾಧಾರಣರಥಮಾತ್ರಸ್ಯ ವಿವಕ್ಷಿತತ್ವಾತ್, ಸಮವ್ಯಾಪ್ತ್ಯಭಿಪ್ರಾಯೇಣ ವಾ 'ಯತ್ರ ವೇದಃ' ಇತ್ಯುಕ್ತಿಃ। ಅತ ಏವ ಟೀಕಾಯಾಂ 'ರಥಸ್ಯ ವೇದಾವಿನಾಭಾವಾತ್' ಇತಿ ರಥಸ್ಯ ವ್ಯಾಪ್ಯತ್ವಮುಕ್ತ್ವಾ 'ವೈದಿಕತ್ವಮಾತ್ರೇ ವಿದ್ಯಮಾನಂ ರಥಿತ್ವಮ್' ಇತ್ಯನೇನ ತಸ್ಯ ವ್ಯಾಪಕತ್ವಮುಕ್ತಮ್। ವಸ್ತುತಸ್ತು – 'ಯತ್ರ ರಥಸ್ತತ್ರ ವೇದಃ' ಇತಿ ಯೋಜನಾಯಾಂ ನಾನುಪಪತ್ತಿಃ। ತಥಾ ಚ ಅನೇನ ವ್ಯಾಪ್ತಿನಿಶ್ಚಯಾನ್ನ ವ್ಯಭಿಚಾರಶಂಕಾ ಇತಿ ಯಾದೃಶತಾದೃಶರಥ-ಮಾತ್ರೇಣ ವೇದಾನುಮಾನದ್ವಾರಾ ಶೂದ್ರತ್ವಾಭಾವನಿಶ್ಚಯಾನ್ನ ಪೌತ್ರಾಯಣಸ್ಯ ವೇದಬಾಹ್ಯವರ್ಣಾವರತ್ವಂ ಶಂಕ್ಯಮಿತಿ ಭಾವಃ।

ಆ ವಾಕ್ಯದಲ್ಲಿ ''ತತ್ರ'' ಎಂದರೆ ತತ್ರೈವ ಎಂದು ಅರ್ಥ. ಇದರಿಂದ 'ಎಲ್ಲಿ ವಹ್ನಿ ಇರುವುದೋ ಅಲ್ಲಿಯೇ ಧೂಮವಿರುವುದು' ಇತ್ಯಾದಿ ಸ್ಥಳದಲ್ಲಿ ವಹ್ನಿಯು ವ್ಯಾಪಕವೆಂದು ಸಿದ್ಧವಾಗುವಂತೆ 'ಯತ್ರ ವೇದಃ ತತ್ರೈವ ರಥಃ' ಎಂದು ಹೇಳಿದಾಗ ವೇದವು ರಥಕ್ಕೆ ವ್ಯಾಪಕವೆಂದು ತಿಳಿದು ಬರುವುದು. ಆದ್ದರಿಂದಲೇ ವ್ಯತಿರೇಕವ್ಯಾಪ್ತಿ-ಯನ್ನು ತೋರಿಸುವ ಅಂಶದಲ್ಲಿ 'ನ ವೇದಃ ಯತ್ರ' ಎಂದು ವೇದಾಭಾವವನ್ನು ಮೊದಲು ಹೇಳಲಾಗಿದೆ.

ಭಾಷ್ಯದಲ್ಲಿ ಉದಾಹರಿಸಿರುವ ಸ್ಮೃತಿಯಲ್ಲಿ ರಥಶಬ್ದದಿಂದ ಆಗಂತುಕರಥ ಮತ್ತು ಸ್ವಾಭಾವಿಕರಥ ಎರಡಕ್ಕೂ ಅನ್ವಯಿಸುವ ಕೇವಲ ರಥವು ವಿವಕ್ಷಿತವಾದುದರಿಂದ ರಥ ಮತ್ತು ವೇದಗಳಿಗೆ ಸಮವ್ಯಾಪ್ತಿ ಇರುವುದೆಂಬ ಅಭಿಪ್ರಾಯದಿಂದ 'ಯತ್ರ ವೇದಃ' ಎಂದು ಹೇಳಿದೆ. ಆದ್ದರಿಂದಲೇ ಟೀಕೆಯಲ್ಲಿ 'ರಥಸ್ಯ ವೇದಾವಿನಾಭಾವಾತ್' - ರಥಕ್ಕೆ ವೇದದಿಂದ ಅವಿನಾಭಾವವಿರುವುದರಿಂದ ಎಂಬುದಾಗಿ ರಥವು ವ್ಯಾಪ್ತವೆಂದು ಹೇಳಿ 'ವೈದಿಕತ್ವಮಾತ್ರೇ ವಿದ್ಯಮಾನಂ ರಥಿತ್ವಮ್' - ಎಂಬ ವಾಕ್ಯದಿಂದ ರಥಕ್ಕೆ ವ್ಯಾಪಕತ್ವವನ್ನು ಹೇಳಲಾಗಿದೆ. ವಸ್ತುತಸ್ತು – 'ಯತ್ರ ರಥಃ ತತ್ರ ವೇದಃ' - ಯಾರಿಗೆ

ರಥವಿರುವುದೋ ಅವರಿಗೆ ವೇದವಿದೆ - ಎಂಬ ಯೋಜನೆಯಲ್ಲಿ ಯಾವ ಅನುಪ-ಪತ್ತಿಯೂ ಇಲ್ಲ. ತಥಾ ಚ – ಈ ಸ್ಮೃತಿವಾಕ್ಯದಿಂದ ರಥವೇದಗಳಿಗೆ ವ್ಯಾಪ್ತಿನಿಶ್ಚಯ-ವಾಗುವುದರಿಂದ ವ್ಯಭಿಚಾರಶಂಕೆಗೆ ಅವಕಾಶವಿಲ್ಲ. ಆದುದರಿಂದ ಯಾವುದೇ ರೀತಿಯ ರಥಸಂಬಂಧದಿಂದ ವೇದವಿರುವುದೆಂದು ಅನುಮಾನ ಮಾಡಿ, ಶೂದ್ರತ್ವ-ವಿಲ್ಲವೆಂದು ನಿಶ್ಚಯಿಸಲು ಸಾಧ್ಯವಿರುವುದರಿಂದ ಪೌತ್ರಾಯಣನು ವೇದಬಾಹ್ಯನಾದ ಅವರವರ್ಣದವನೆಂದು ಶಂಕಿಸಬಾರದೆಂದು ಭಾವ.

ಭಾ.ದೀ. – ಏತೇನ ಪೂರ್ವಪಕ್ಷಿಣಾ ಶೂದ್ರೇಽಪಿ ವೇದಾಂಗೀಕಾರಾನ್ನ ತೇನ ಶೂದ್ರತ್ವಾಭಾವಸಾಧನಂ ಯುಕ್ತಮಿತಿ ನಿರಸ್ತಮ್, ತಸ್ಯೋತ್ತರಸೂತ್ರೇ ನಿರಾಕರಿಷ್ಯ-ಮಾಣತ್ವಾತ್ । ನ ಚ ಬ್ರಾಹ್ಮಣಾದಿಸಾಧಾರಣರಥಿತ್ವೇನಾಸ್ಯ ವೈದಿಕತ್ವನಿಶ್ಚಯೇಽಪಿ ತದ್ದ್ವಾರಾಽಶೂದ್ರತ್ವಸಿದ್ಧಾವಪಿ ಕಥಂ ಕ್ಷತ್ರಿಯತ್ವನಿಶ್ಚಯ ಇತಿ ವಾಚ್ಯಮ್ । ರಥಿತ್ವಮಾತ್ರಸ್ಯ ವೈದಿಕತ್ವವ್ಯಾಪ್ತತ್ವೋಕ್ತ್ಯಾ ಸ್ವಾಭಾವಿಕರಥಿತ್ವಸ್ಯ ವೈದಿಕವಿಶೇಷ-ಕ್ಷತ್ರಿಯತ್ವವ್ಯಾಪ್ತತ್ವೇನಾಪಿ ಸ್ಮೃತ್ಯಭಿಪ್ರೇತತ್ವಾತ್ । ತಥಾ ಚ ಕಾದಾಚಿತ್ಕರಥವತಿ ಬ್ರಾಹ್ಮಣಾದಾವಭಾವಾತ್.ತೇನ ಸಾಕ್ಷಾದೇವ ಕ್ಷತ್ರಿಯತ್ವನಿಶ್ಚಯೋಪಪತ್ತಿಃ । ನ ಚ 'ಅಪಲಾಯನಂ ಚ ಶೂದ್ರಸ್ಯ' ಇತ್ಯಸ್ಯ ಪ್ರಾಪ್ತಯೋದ್ಧೃತ್ವಾನ್ಯಥಾನುಪಪತ್ತ್ಯಾ ಶೂದ್ರಸ್ಯ ರಥಿತ್ವಪ್ರತೀತೇಸ್ತತ್ರ ವ್ಯಭಿಚಾರ ಇತಿ ವಾಚ್ಯಮ್ । ಅಪಲಾಯನೇನ ಯೋದ್ಧೃತ್ವಸ್ಯ ಪದಾತಿಯೋಪಪತ್ತ್ಯಾ ರಥಿತ್ವಾನಾಕ್ಷೇಪಕತ್ವಾತ್ ।

'ಬ್ರಹ್ಮವೈವರ್ತೇ' ಇತ್ಯಸ್ಯ 'ಉಕ್ತತ್ವಾತ್' ಇತ್ಯಧ್ಯಾಹಾರೇಣ 'ನಾಸೌ ಶೂದ್ರಃ' ಇತ್ಯನೇನಾನ್ವಯಃ । 'ಇತಿ ಜ್ಞಾಯತೇ' ಇತಿ ಶೇಷಃ ।

ಇದರಿಂದ – ಪೂರ್ವಪಕ್ಷಿಯು ಶೂದ್ರನಲ್ಲೂ ವೇದವನ್ನು ಅಂಗೀಕರಿಸುವುದರಿಂದ ವೇದದಿಂದ ಶೂದ್ರನಲ್ಲವೆಂದು ಸಾಧಿಸುವುದು ಯುಕ್ತವಲ್ಲ ಎಂಬ ವಾದವು ನಿರಸ್ತವಾ-ಗುವುದು. ಏಕೆಂದರೆ, ಮುಂದಿನ ಸೂತ್ರದಲ್ಲಿ ಅದನ್ನು ನಿರಾಕರಿಸಲಾಗುವುದು.

ಶಂಕೆ – ಬ್ರಾಹ್ಮಣನೇ ಮೊದಲಾದವರಲ್ಲಿ ಇರುವ ರಥಸಂಬಂಧದಿಂದ ಪೌತ್ರಾಯಣನನು ವೈದಿಕನೆಂದು ನಿಶ್ಚಯವಾಗಬಹುದಾದರೂ ಅದರ ಮೂಲಕ ಅವನು ಶೂದ್ರನಲ್ಲವೆಂದು ಸಿದ್ಧವಾದರೂ ಕ್ಷತ್ರಿಯನೆಂದು ಸಿದ್ಧವಾಗಲು ಹೇಗೆ ಸಾಧ್ಯ?

ಸಮಾಧಾನ – ಕೇವಲ ರಥಸಂಬಂಧವು ವೈದಿಕತ್ವದ ವ್ಯಾಪ್ತಿಯನ್ನು ಪಡೆದಿದೆ ಎಂದು ಹೇಳಿದಾಗ ಸ್ವಾಭಾವಿಕರಥಸಂಬಂಧವು ವೈದಿಕವಿಶೇಷದಲ್ಲಿರುವ ಕ್ಷತ್ರಿಯತ್ವ-ದಿಂದ ವ್ಯಾಪ್ತವಾಗಿದೆ ಎಂದೂ ಸ್ಮೃತಿಗೆ ಅಭಿಪ್ರೇತವಾಗಿದೆ. ಸ್ವಾಭಾವಿಕರಥಸಂಬಂಧ-ವಾದರೋ ಯಾವುದೋ ಒಂದು ಕಾಲದಲ್ಲಿ ರಥಸಂಬಂಧವನ್ನು ಪಡೆದಿರುವ ಬ್ರಾಹ್ಮಣಮೊದಲಾದವರಲ್ಲಿ ಇಲ್ಲದ ಕಾರಣ ಸ್ವಾಭಾವಿಕರಥಸಂಬಂಧದಿಂದ ಪೌತ್ರಾ-ಯಣನು ಕ್ಷತ್ರಿಯನೆಂದು ಸಾಕ್ಷಾತ್ತಾಗಿಯೇ ನಿಶ್ಚಯವಾಗುವುದು.

ಶಂಕೆ – 'ಅಪಲಾಯನಂ ಚ ಶೂದ್ರಸ್ಯ' - ಶೂದ್ರನಿಗೆ ಯುದ್ಧದಲ್ಲಿ ಪಲಾ-ಯನವಿಲ್ಲ ಎಂದು ಹೇಳುವ ವಾಕ್ಯದಿಂದ ಶೂದ್ರನೂ ಯೋಧನಾಗಿರುವನೆಂದು ತಿಳಿದು ಬರುವುದರಿಂದ ಆದರಿಂದಲೇ 'ಅನ್ಯಥಾನುಪಪತ್ತ್ಯಾ' - ಶೂದ್ರನು ರಥಿ-ಯೆಂದು ತಿಳಿದು ಬರುವುದರಿಂದ ರಥಸಂಬಂಧದಿಂದ ಕ್ಷತ್ರಿಯತ್ವವನ್ನು ಅನುಮಾನ ಮಾಡಿದಾಗ ಅಂತಹ ಶೂದ್ರಯೋಧನಲ್ಲಿ ವ್ಯಭಿಚಾರ ಬರುವುದು.

ಸಮಾಧಾನ – ಆ ಶೂದ್ರನು ಪಲಾಯನ ಮಾಡದಿದ್ದುದರಿಂದ ಅವನು ಯೋಧ-ನಾಗಿರುವುದು ಪದಾತಿಯಾಗಿದ್ದರೂ ಉತ್ಪನ್ನವಾಗುವುದರಿಂದ ರಥಸಂಬಂಧವಿರುವುದು ಅರ್ಥಾಪತ್ತಿಯಿಂದ ಸಿದ್ಧವಾಗಲಾರದು.

'ಬ್ರಹ್ಮವೈವರ್ತೇ' - ಎಂಬ ಪದಕ್ಕೆ 'ಉಕ್ತತ್ವಾತ್' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು, 'ನಾಸೌ ಶೂದ್ರಃ' ಎಂಬ ವಾಕ್ಯದೊಂದಿಗೆ ಅನ್ವಯವಿರುವುದು. 'ಇತಿ ಜ್ಞಾಯತೇ' ಎಂಬ ಪದಗಳು ಇಲ್ಲಿ ಶೇಷವಾಗಿವೆ.

ಭಾ.ದೀ. ಅನೇನ – 'ಆದ್ರವಣಾತ್' ಸಂಬೋಧನಾದ್ವಾ 'ಉತ್ತರತ್ರ' 'ಅಯಮಶ್ವತರೀರಥಃ' (ಛಾಂ.೪.೨.೨) ಇತಿ ಶ್ರುತೇನ 'ಚೈತ್ರರಥೇನ ಲಿಂಗಾತ್' ಲಿಂಗೇನ ಸ್ವಾಭಾವಿಕರಥೇನ ಲಿಂಗೇನ ಬಹುದಾಯಿತ್ವಾದಿಲಿಂಗೇನ ಚ ಅಸ್ಯ ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಃ । ಅಸ್ಮಾದ್ ಬಾಧಕಾದ್ ತದಾऽऽದ್ರವಣಾ-ನ್ನಿಮಿತ್ತಾದೇವ ಅಸ್ಯ ಶೂದ್ರತ್ವಮ್, ನ ತು ಜಾತ್ಯಾऽಸೌ ಶೂದ್ರಃ । ತಥಾ ರಥೇನ ವೇದನಿಶ್ಚಯಾಚ್ಚ ನಾಸೌ ಶೂದ್ರ ಇತಿ ಸೂತ್ರಾರ್ಥ ಉಕ್ತೋ ಭವತಿ ॥

ಇದರಿಂದ – 'ಆದ್ರವಣಾತ್' ಶೀಘ್ರಗಮನದಿಂದ ಅಥವಾ 'ಉತ್ತರತ್ರ' - ಮುಂದೆ ಶೂದ್ರನೆಂದು ಸಂಬೋಧನೆ ಮಾಡಿದ ನಂತರ 'ಅಯಮಶ್ವತರೀರಥಃ' ಎಂಬ ವಾಕ್ಯದಲ್ಲಿ ಶ್ರುತವಾಗಿರುವ 'ಚೈತ್ರರಥೇನ ಲಿಂಗಾತ್' ಲಿಂಗೇನ - ಸ್ವಾಭಾವಿಕರಥ-ರೂಪವಾದ ಲಿಂಗದಿಂದ ಮತ್ತು ಬಹುದಾಯಿತ್ವ- ಅನೇಕ ವಸ್ತುಗಳನ್ನು ದಾನಮಾಡು-ವುದೇ ಮೊದಲಾದ ಲಿಂಗದಿಂದಲೂ 'ಅಸ್ಯ' ಈ ಪೌತ್ರಾಯಣನಿಗೆ 'ಕ್ಷತ್ರಿಯತ್ವಾ-ವಗತೇಃ'- ಕ್ಷತ್ರಿಯತ್ವವು ಇರುವುದೆಂದು ತಿಳಿದುಬರುವುದರಿಂದ ಈ ಬಾಧಕದಿಂದಾಗಿ ಅವನು ಶೀಘ್ರವಾಗಿ ಧಾವಿಸಿ ಬಂದಿದ್ದರಿಂದಲೇ ಅವನಿಗೆ ಶೂದ್ರತ್ವವೇ ಹೊರತು ಜಾತಿಯಿಂದ ಅವನು ಶೂದ್ರನಲ್ಲ. ಹಾಗೆಯೇ ರಥದಿಂದ ಅವನಿಗೆ ವೇದವಿರುವು-ದೆಂದು ನಿಶ್ಚಯವಾಗುವುದರಿಂದಲೂ ಅವನು ಶೂದ್ರನಲ್ಲ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

**ಭಾ.ದೀ. – ಯದುಕ್ತಂ ರಥಿತ್ವಲಿಂಗೇನ ಪೌತ್ರಾಯಣಸ್ಯ ಕ್ಷತ್ರಿಯತ್ವಾವ-ಗಮಾತ್ ನ ತಲ್ಲಿಂಗೇನ ಶೂದ್ರಸ್ಯ ವೇದಾಧಿಕಾರಸಿದ್ಧಿರಿತಿ, ನ ತದ್ಯುಕ್ತಮ್ – ಶೂದ್ರಸ್ಯಾಪಿ ರಥಿತ್ವಸಂಭವಾತ್ । ನ ಚ ರಥಸ್ಯ ವೇದವ್ಯಾಪ್ಯತ್ವಾತ್ ಶೂದ್ರೇ ಚ ತದಭಾವಾತ್ ರಥಸ್ಯಾಪ್ಯಭಾವ ಇತಿ ವಾಚ್ಯಮ್ । ಶೂದ್ರೇಽಪಿ ವೇದಾಧಿ-ಕಾರಾಂಗೀಕಾರಾತ್ ಇತ್ಯಾಶಂಕಾಂ ಪರಿಹರತ್ಸೂತ್ರಮುಪನ್ಯಸ್ಯತಿ – ಸಂಸ್ಕಾರೇತಿ ॥**

ರಥಸಂಬಂಧರೂಪವಾದ ಲಿಂಗದಿಂದ ಪೌತ್ರಾಯಣನು ಕ್ಷತ್ರಿಯನೆಂದು ತಿಳಿದು ಬರುವುದರಿಂದ, ಪೌತ್ರಾಯಣನ ನಿದರ್ಶನದಿಂದ ಶೂದ್ರನಿಗೆ ವೇದಾಧಿಕಾರ ಸಿದ್ಧ-ವಾಗುವುದಿಲ್ಲವೆಂದು ಹೇಳಿದ್ದು ಯುಕ್ತವಲ್ಲ.

ಏಕೆಂದರೆ ಶೂದ್ರನಿಗೂ ರಥವಿರಲು ಸಾಧ್ಯವಿದೆ. ರಥಸಂಬಂಧವಿದ್ದಲ್ಲಿ ವೇದವಿರ-ಬೇಕೆಂಬ ವ್ಯಾಪ್ತಿಯಿರುವುದರಿಂದ ಶೂದ್ರನಿಗೆ ವೇದವಿಲ್ಲದಿರುವುದರಿಂದ ರಥವೂ ಇರುವುದಿಲ್ಲ ಎಂದು ಹೇಳತಕ್ಕದ್ದಲ್ಲ.

ಏಕೆಂದರೆ ಶೂದ್ರನಿಗೂ ವೇದಾಧಿಕಾರವನ್ನು ಒಪ್ಪುತ್ತೇವೆ ಎಂಬ ಆಶಂಕೆಯನ್ನು ಪರಿಹರಿಸುವ ''ಸಂಸ್ಕಾರ'' ಎಂಬ ಸೂತ್ರವನ್ನು ಭಾಷ್ಯಕಾರರು ಉಪನ್ಯಾಸಮಾಡು-ತ್ತಿದ್ದಾರೆ.

**ಸೂತ್ರಮ್ – ।। ಓಂ ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ ಓಂ ।।೩೬।।**

**ಭಾಷ್ಯಮ್ – 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೀತ' ಇತ್ಯಧ್ಯಯನಾರ್ಥಂ ಸಂಸ್ಕಾರಪರಾಮರ್ಶಾತ್ । 'ನಾಗ್ನಿರ್ನ ಯಜ್ಞೋ ನ ಕ್ರಿಯಾ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ' ಇತಿ ಪೈಂಗಿಶ್ರುತೌ ಸಂಸ್ಕಾರಾಭಾವಾಭಿಲಾಪಾಚ್ಚ ।**

'ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೀತ' ಎಂಬ ವಾಕ್ಯದಿಂದ ಉಪನಯನವು ಅಧ್ಯಯನಕ್ಕೆ ಅಂಗವೆಂದು ತೋರುವುದು. ವೇದದ ಅಧ್ಯಾಪನಕ್ಕೋಸ್ಕರವಾಗಿ ಉಪನಯನಾಖ್ಯಸಂಸ್ಕಾರವನ್ನು ಪರಾಮರ್ಶಿಸಲಾಗಿದೆ. ಆದರೆ 'ನಾಗ್ನಿರ್ನ ಯಜ್ಞೋ' ಎಂಬ ಪೈಂಗಿಶ್ರುತಿಯಲ್ಲಿ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳಲಾಗಿದೆ.

ಭಾ.ದೀ. – ಅತ್ರ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೀತ' ಇತಿ ಶ್ರುತೌ ಬ್ರಾಹ್ಮಣಸ್ಯೈವಾಧ್ಯಯನೇ ಉಪನಯನಾಪೇಕ್ಷಾ, ನಾನ್ಯೇಷಾಮ್ ಇತಿ ಶಂಕಾಪರಿಹಾರಾಯ ಪ್ರವೃತ್ತಂ 'ಸಂಸ್ಕಾರಪರಾಮರ್ಶಾತ್' ಇತ್ಯಂಶಂ ವ್ಯಾಚಷ್ಟೇ – ಅಷ್ಟವರ್ಷಮಿತಿ ।। 'ಉಪನಯೀತ' ಇತ್ಯನಂತರಂ 'ಇತ್ಯುಪನಯನಮುಕ್ತ್ವಾ' ಇತಿ ಶೇಷಃ । 'ತಮ್' ಉಪನೀತಂ ಮಾಣವಕಮಾತ್ಮನ ಆಚಾರ್ಯಕರಣಕಾಮೋಽಧ್ಯಾಪಯೀತ ಇತ್ಯರ್ಥಃ । 'ಇತಿ'ಶಬ್ದಾನಂತರಂ 'ಶ್ರುತೌ' ಇತಿ ಶೇಷಃ ।

'ಅನ್ವಾರ್ಥವಚನಂ ಪರಾಮರ್ಶಃ' ಇತ್ಯಾಶಯೇನ ಪರಾಮರ್ಶಪದಂ ವ್ಯಾಚಷ್ಟೇ – ಅಧ್ಯಯನಾರ್ಥಮಿತಿ ।। 'ಅಧ್ಯಯನಾಂಗತಯಾ' ಇತ್ಯರ್ಥಃ ।

ಅಧ್ಯಾಪನವಾಕ್ಯಸ್ಯಾಪಿ 'ಸ್ವಾಧ್ಯಾಯೋऽಧ್ಯೇತವ್ಯಃ' (ತೈ.ಆ.೨.೧೫.೧) ಇತಿ ಶ್ರುತ್ಯನುರೋಧೇನ ಜೀವಿಕಾರ್ಥಾಧ್ಯಯನವಿಧಿಪರತ್ವಾದಿತಿ ಭಾವಃ । 'ಸಂಸ್ಕಾರ-ಪರಾಮರ್ಶಾತ್' ಉಪನಯನಾಖ್ಯಸಂಸ್ಕಾರಮಾತ್ರವಚನಾತ್ ಇತ್ಯರ್ಥಃ । 'ತಚ್ಛಬ್ದೇನ' ಇತಿ ಶೇಷಃ । ನ ತು ಬ್ರಾಹ್ಮಣಪರಾಮರ್ಶ ಇತಿ ಮಾತ್ರಶಬ್ದಾರ್ಥಃ । ತಥಾ ಚ – ನೋಕ್ತಶಂಕಾವಕಾಶ ಇತಿ ಭಾವಃ।

ಕೇಚಿತ್ತು – ಶ್ರುತಿಗತಬ್ರಾಹ್ಮಣಶಬ್ದೋऽತ್ರ ಬ್ರಹ್ಮಾಣನಯೋಗ್ಯತ್ರೈವರ್ಣಿಕಪರ ಇತ್ಯಾಹುಃ । ತಚ್ಚಿಂತ್ಯಮ್, ಶಂಕಾಸಮಾಧಾನಾನುಗುಣತ್ವಾತ್ । ಕುತ ಏವಂ ಕಲ್ಪ್ಯತೇ? ಇತ್ಯತಃ ಸ್ಮೃತಾವಪಿ ಉಪನಯನಾಖ್ಯದ್ವಿತೀಯಜನ್ಮವತ ಏವ ಸಾರಣ್ಯಕ -ವೇದಾಧ್ಯಯನವಿಧಾನಾತ್ ಇತ್ಯಾಶಯೇನ ಸೂತ್ರೇ ಭಾಷ್ಯೇ ಚ 'ವೇದಃ ಕೃತ್ಸ್ನೋऽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' ಇತಿ ಸ್ಮೃತಿಸಮುಚ್ಚಯಾರ್ಥಕಃ ಚಶಬ್ದಃ ಪ್ರಾಯೋಜಿ । ಸಃ 'ಪರಾಮರ್ಶಾತ್' ಇತ್ಯನೇನಾನ್ವೇತಿ । 'ಪರಾ-ಮರ್ಶಾಚ್ಚ' ಇತ್ಯನಂತರಮ್ 'ಅಧ್ಯಯನಸ್ಯ ಸಂಸ್ಕಾರಸಾಪೇಕ್ಷತ್ವಾವಗಮಾತ್' ಇತಿ ಶೇಷಃ।

ಈ ಸೂತ್ರದಲ್ಲಿ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ । ತಮಧ್ಯಾಪಯೀತ' ಎಂಬ ಶ್ರುತಿಯಲ್ಲಿ ಬ್ರಾಹ್ಮಣನಿಗೆ ಮಾತ್ರ ಅಧ್ಯಯನಕ್ಕೋಸ್ಕರವಾಗಿ ಉಪನಯನದ ಅಪೇಕ್ಷೆಯಿರುವುದು, ಇತರರಿಗಲ್ಲ - ಎಂಬ ಶಂಕೆಯ ಪರಿಹಾರಕ್ಕೋಸ್ಕರವಾಗಿ ಬಂದಿ-ರುವ 'ಸಂಸ್ಕಾರಪರಾಮರ್ಶಾತ್' ಎಂಬ ಅಂಶವನ್ನು ಭಾಷ್ಯದಲ್ಲಿ ''ಅಷ್ಟವರ್ಷಮ್'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಉಪನಯೀತ' ಎಂಬ ಪದದ ನಂತರ 'ಇತಿ ಉಪನಯನಮ್ ಉಕ್ತ್ವಾ' ಎಂಬ ಪದಗಳು ಶೇಷವಾಗಿವೆ. 'ತಮ್' - ಅಂದರೆ ಉಪನೀತನಾದ ಬ್ರಹ್ಮಚಾರಿಯನ್ನು ತನಗೆ ಆಚಾರ್ಯತ್ವವನ್ನು ಇಚ್ಛಿಸುವವನು ಅಧ್ಯಯನ ಮಾಡಿಸಬೇಕು ಎಂದು ಅರ್ಥ. 'ಇತಿ'ಶಬ್ದದ ಅನಂತರ 'ಶ್ರುತೌ' ಎಂಬ ಪದವು ಶೇಷವಾಗಿದೆ.

'ಅನ್ಯಾರ್ಥವಚನಂ ಪರಾಮರ್ಶಃ' - ಪರಾಮರ್ಶವೆಂದರೆ ಇನ್ನೊಂದಕ್ಕೋಸ್ಕರ-

ವಾಗಿ ಹೇಳುವುದು ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ ''ಅಧ್ಯಯನಾರ್ಥಮ್'' ಎಂಬುದಾಗಿ ಪರಾಮರ್ಶಪದವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅಧ್ಯಯನಾಂಗವಾಗಿ - ಎಂದು ಅರ್ಥ. 'ತಮಧ್ಯಾಪಯೀತ' ಎಂಬ ಅಧ್ಯಾಪನವಾಕ್ಯವೂ ಕೂಡ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಶ್ರುತಿಯನ್ನು ಅನುಸರಿಸಿ ಜೀವಿಕೆಗಾಗಿ ಅಧ್ಯಯನವನ್ನು ವಿಧಾನ ಮಾಡುವ ತಾತ್ಪರ್ಯವುಳ್ಳದ್ದು ಎಂದು ಭಾವ. ''ಸಂಸ್ಕಾರಪರಾಮರ್ಶಾತ್'' ಎಂದರೆ ಉಪನಯನವೆಂಬ ಸಂಸ್ಕಾರವನ್ನು ಮಾತ್ರ ಹೇಳಿರುವುದರಿಂದ ಎಂದು ಅರ್ಥ. ''ತಚ್ಛಬ್ದೇನ'' ಎಂಬ ಪದವು ಇಲ್ಲಿ ಶೇಷವಾಗಿದೆ. 'ಸಂಸ್ಕಾರಮಾತ್ರ' ಎಂಬಲ್ಲಿ ಮಾತ್ರ-ಶಬ್ದವು ಬ್ರಾಹ್ಮಣಪರಾಮರ್ಶವಿಲ್ಲ ಎಂಬ ಅರ್ಥವುಳ್ಳದ್ದು. ತಥಾ ಚ – ಹಿಂದೆ ಮಾಡಲಾದ ಶಂಕೆಗೆ ಅವಕಾಶವಿಲ್ಲ ಎಂದು ಭಾವ.

ಕೆಲವರಾದರೋ – 'ಅಷ್ಟವರ್ಷಂ ಬ್ರಾಹ್ಮಣಂ' ಎಂಬ ಶ್ರುತಿಯಲ್ಲಿರುವ ಬ್ರಾಹ್ಮಣ -ಶಬ್ದವು ಬ್ರಹ್ಮಜ್ಞಾನಕ್ಕೆ ಯೋಗ್ಯರಾದ ತ್ರೈವರ್ಣಿಕರನ್ನು ಹೇಳುವ ತಾತ್ಪರ್ಯವುಳ್ಳದ್ದು - ಎಂದು ಹೇಳುವರು. ಅದು ವಿಚಾರಣೀಯವಾಗಿದೆ. ಏಕೆಂದರೆ, ಈ ವ್ಯಾಖ್ಯಾನವು ಮಾಡಲಾದ ಶಂಕೆ ಮತ್ತು ಅದರ ಸಮಾಧಾನಗಳಿಗೆ ಅನುಗುಣವಾಗಿಲ್ಲ.

ಉಪನಯನರೂಪವಾದ ಸಂಸ್ಕಾರವು ಅಧ್ಯಯನಾಂಗವೆಂದು ಕಲ್ಪಿಸಲು ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ 'ಸ್ಮೃತಿಯಲ್ಲೂ ಕೂಡ ಉಪನಯನರೂಪವಾದ ಎರಡನೆಯ ಜನ್ಮವನ್ನು ಪಡೆದವನಿಗೆ ಮಾತ್ರ ಆರಣ್ಯಕಸಹಿತವಾದ ವೇದಾಧ್ಯಯನವನ್ನು ಮಾಡಲಾಗಿದೆ' ಎಂಬ ಅಭಿಪ್ರಾಯದಿಂದ ಸೂತ್ರದಲ್ಲಿ ಮತ್ತು ಭಾಷ್ಯದಲ್ಲಿ 'ವೇದಃ ಕೃತ್ಸ್ನಃ ಅಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' - ಉಪನಯನಾಖ್ಯದ್ವಿತೀಯಜನ್ಮವನ್ನು ಹೊಂದಿರುವವನಿಂದ ಆರಣ್ಯಕಸಹಿತವಾದ ಸಮಸ್ತವೇದವು ಅಧ್ಯಯನ ಮಾಡಲ್ಪಡತಕ್ಕದ್ದು ಎಂಬ ಸ್ಮೃತಿಯ ಸಮುಚ್ಚಯವನ್ನು ಹೇಳುವ ಚಶಬ್ದವನ್ನು ಪ್ರಯೋಗಿಸಲಾಗಿದೆ. ಆ ಚಶಬ್ದವು 'ಪರಾಮರ್ಶಾತ್' ಎಂಬ ಪದದೊಂದಿಗೆ ಅನ್ವಯವನ್ನು ಹೊಂದುವುದು. 'ಪರಾಮರ್ಶಾಚ್ಚ' ಎಂಬ ವಾಕ್ಯದ ನಂತರ 'ಅಧ್ಯಯನಸ್ಯ ಸಂಸ್ಕಾರಸಾಪೇಕ್ಷತ್ವಾವಗಮಾತ್' - ಅಧ್ಯಯನವು ಸಂಸ್ಕಾರಸಾಪೇಕ್ಷವೆಂದು ತಿಳಿದುಬರುವುದರಿಂದ - ಎಂಬ ವಾಕ್ಯವು ಶೇಷವಾಗಿದೆ.

ಭಾ.ದೀ.– ನನು 'ಅಸ್ತು ಅಧ್ಯಯನಸ್ಯ ಉಪನಯನಸಂಸ್ಕಾರಸಾಪೇಕ್ಷತ್ವಂ, ತಥಾಽಪಿ ನ ಶೂದ್ರಸ್ಯ ವೇದಾಧ್ಯಯನಾಭಾವಸಿದ್ಧಿಃ । ಶೂದ್ರಸ್ಯಾಪಿ ಸಂಸ್ಕಾರಸಂಭವಾತ್' ಇತ್ಯತಃ ಪ್ರವೃತ್ತಂ 'ತದಭಾವಾಭಿಲಾಪಾತ್' ಇತಿ ಸೂತ್ರಖಂಡಂ ವ್ಯಾಚಷ್ಟೇ – ನಾಗ್ನಿರಿತಿ ॥

ಅಧ್ಯಯನವು ಉಪನಯನರೂಪವಾದ ಸಂಸ್ಕಾರಸಾಪೇಕ್ಷವೆಂದಿರಲಿ, ಆದರೂ ಶೂದ್ರನಿಗೆ ವೇದಾಧ್ಯಯನವಿಲ್ಲ ಎನ್ನುವುದು ಸಿದ್ಧವಾಗುವುದಿಲ್ಲ. ಏಕೆಂದರೆ, ಶೂದ್ರರಿಗೂ ಸಂಸ್ಕಾರ ಮಾಡಬಹುದು ಎಂಬ ಶಂಕೆಯ ಪರಿಹಾರಕ್ಕೋಸ್ಕರವಾಗಿ ಹೊರಟಿರುವ 'ತದಭಾವಾಭಿಲಾಪಾತ್' ಎಂಬ ಸೂತ್ರದ ಭಾಗವನ್ನು ''ನಾಗ್ನಿಃ'' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಭಾ.ದೀ. – 'ಅಭಿಲಾಪಾತ್' - ಅಭಿಧಾನಾತ್ ಇತಿ ॥ ಅಸ್ಯ ಸೂತ್ರೇ ಅಧ್ಯಾಹೃತೇನ 'ನ ಶೂದ್ರಸ್ಯ ವೇದಾಧಿಕಾರೋ, ನ ವಾ ತದವಿನಾಭೂತಂ ರಥಿತ್ವಮ್' ಇತಿ ಸಾಧ್ಯೇನಾನ್ವಯಃ । 'ಅಗ್ನಿಃ' – ಶ್ರೌತಃ ಸ್ಮಾರ್ತಶ್ಚ । 'ಯಜ್ಞಃ' ಅಗ್ನಿಹೋತ್ರಾದಿಃ, ದೇವಪಿತ್ರ್ಯಾದಿಯಜ್ಞೋ ವಾ । 'ಕ್ರಿಯಾ' ಸಂಧ್ಯಾವಂದನಾದಿರೂಪಾ, ಉತ್ತರಕ್ರಿಯಾ ವಾ । 'ಸಂಸ್ಕಾರಃ' - ಉಪನಯನಾದಿಃ । 'ವ್ರತಾನಿ' - ಕೃಚ್ಛ್ರಚಾಂದ್ರಾಯಣಾದೀನಿ ।

'ಅಭಿಲಾಪಾತ್' - ಎಂದರೆ ಹೇಳಿರುವುದರಿಂದ ಎಂದು ಅರ್ಥ. ಈ ಪದಕ್ಕೆ ಸೂತ್ರದಲ್ಲಿ ಅಧ್ಯಾಹಾರಮಾಡಿಕೊಳ್ಳಲಾಗುವ 'ಶೂದ್ರನಿಗೆ ವೇದಾಧಿಕಾರವೂ ಇಲ್ಲ' ಮತ್ತು 'ನಿಯಮೇನ ಅದರ ಸಾಹಚರ್ಯವನ್ನು ಪಡೆದಿರುವ ರಥಿತ್ವವೂ ಇಲ್ಲ' ಎಂಬ ಸಾಧ್ಯದೊಂದಿಗೆ ಅನ್ವಯವಿರುವುದು. 'ಅಗ್ನಿ' ಎಂದರೆ ಶ್ರೌತ ಮತ್ತು ಸ್ಮಾರ್ತರೂಪವಾದ ಅಗ್ನಿ, 'ಯಜ್ಞ'ವೆಂದರೆ ಅಗ್ನಿಹೋತ್ರಾದಿಗಳು ಅಥವಾ ದೈವಯಜ್ಞ, ಪಿತೃಯಜ್ಞ ಮೊದಲಾದ ಯಜ್ಞಗಳು. 'ಕ್ರಿಯಾ' ಎಂದರೆ ಸಂಧ್ಯಾವಂದನಾದಿ ರೂಪವಾದವು ಅಥವಾ ವೇದವಿಹಿತವಾದ ಮರಣೋತ್ತರಕಾಲದ ಕ್ರಿಯೆ ಎಂದು ಅರ್ಥ. 'ಸಂಸ್ಕಾರ'-ವೆಂದರೆ ಉಪನಯನಾದಿ ಸಂಸ್ಕಾರಗಳು. 'ವ್ರತಾನಿ' ಎಂದರೆ ಕೃಚ್ಛ್ರಚಾಂದ್ರಾಯಣ ಮೊದಲಾದ ವ್ರತಗಳು.

ಭಾ.ದೀ. – ನನು 'ಏವಂ ಸಂಸ್ಕಾರಾಭಾವೇನ ವೇದಾನಧಿಕಾರಶ್ಚೇತ್ ಉತ್ತಮಸ್ತ್ರೀಣಾಮಪಿ ತತ್ಪ್ರಸಂಗಃ । ಸಂಸ್ಕಾರಾಭಾವೇಽಪಿ ತಾಸಾಮಧಿಕಾರೇ ಶೂದ್ರಸ್ಯಾಪಿ ತತ್ಪ್ರಾಪ್ತಿಃ' ಇತ್ಯತ ಆಹ – ಉತ್ತಮೇತಿ ॥

ಹೀಗೆ ಸಂಸ್ಕಾರವಿಲ್ಲದ್ದರಿಂದ ವೇದಾಧಿಕಾರವಿಲ್ಲ ಎನ್ನುವ ಪಕ್ಷದಲ್ಲಿ ಉತ್ತಮ-ಸ್ತ್ರೀಯರಿಗೂ ವೇದಾಧಿಕಾರವಿಲ್ಲವೆಂದಾಗಬೇಕಾದೀತು! ಸಂಸ್ಕಾರವಿಲ್ಲದಿದ್ದರೂ ಆ ಸ್ತ್ರೀಯರಿಗೆ ವೇದಾಧಿಕಾರವಿರುವ ಪಕ್ಷದಲ್ಲಿ ಶೂದ್ರನಿಗೂ ವೇದಾಧಿಕಾರವು ಪ್ರಾಪ್ತ-ವಾಗುವುದು ಎಂಬ ಆಕ್ಷೇಪದ ಪರಿಹಾರಕ್ಕಾಗಿ ''ಉತ್ತಮ'' ಎಂಬ ಭಾಷ್ಯವಾಕ್ಯವು ಹೊರಟಿದೆ.

**ಭಾಷ್ಯಮ್ – ಉತ್ತಮಸ್ತ್ರೀಣಾಂ ತು ನ ಶೂದ್ರವತ್ । 'ಸಪತ್ನೀಂ ಮೇ ಪರಾಧಮ' ಇತ್ಯಾದಿಷು ಅಧಿಕಾರದರ್ಶನಾತ್ ।**

ಉತ್ತಮಸ್ತ್ರೀಯರಿಗಾದರೋ ಶೂದ್ರರಂತೆ ವೇದವಿದ್ಯಾಧಿಕಾರ ಇಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ ಉತ್ತಮಸ್ತ್ರೀಯರಿಗೆ ವೇದ-ವಿದ್ಯಾಧಿಕಾರವಿರುವುದು 'ಸಪತ್ನೀಂ ಮೇ ಪರಾಧಮ' ಇತ್ಯಾದಿ ಶ್ರುತಿಯಿಂದ ವಿದ್ಯೆಗಳ ವಿಷಯದಲ್ಲಿ ದೃಷ್ಟವಾಗಿದೆ.

ಭಾ.ದೀ. – 'ತು'ಶಬ್ದೋ ವೇದದ್ರಷ್ಟೃತ್ವಾಖ್ಯವಿಶೇಷದ್ಯೋತಕಃ । 'ಸಂಸ್ಕಾರಾ-ಭಾವೇನಾಭಾವಃ' ಇತ್ಯಾಕೃಷ್ಯತೇ । 'ಅಧಿಕಾರಸ್ಯ' ಇತಿ ಶೇಷಃ । 'ಉತ್ತಮಾನಾಂ ಸ್ತ್ರಿಯಃ' ಇತಿ ವಿಗ್ರಹಃ, ಕರ್ಮಧಾರಯೋ ವಾ । ತಥಾ ಚ – ಶಚೀಯಮೀ-ಊರ್ವಶ್ಯಾದ್ಯುತ್ತಮಸ್ತ್ರೀಣಾಂ ಶೂದ್ರವನ್ನ ಸಂಸ್ಕಾರಾಭಾವೇನ ವೇದವಿದ್ಯಾಧಿ-ಕಾರಸ್ಯಾಭಾವೋ ವಕ್ತವ್ಯಃ । ಕುತಃ? 'ಸಪತ್ನೀಂ ಮೇ ಪರಾಧಮ' (ಮಂತ್ರಪ್ರಶ್ನ ೧.೧೬) ಇತ್ಯಾದಿ ವಿದ್ಯಾಸು ತಾಸಾಂ ತದ್ ದೃಷ್ಟತ್ವೇನ ಅಧಿಕಾರದರ್ಶನಾತ್ - ಇತಿ ಯೋಜನಾ ।

ಅತ್ರ 'ಸಪತ್ನೀಮ್' ಇತಿ ಪ್ರತೀಕಗ್ರಹಣೇನ –

ಸಪತ್ನೀಂ ಮೇ ಪರಾಧಮ ಪತಿಂ ಮೇ ಕೇವಲಂ ಕೃಧಿ।
ಉತ್ತರಾऽಹಮುತ್ತರ ಉತ್ತರೇದುತ್ತರಾಭ್ಯಃ॥

ಇತಿ ಸಮಗ್ರವಾಕ್ಯಂ ಗೃಹ್ಯತೇ। ಶಚೀವಾಕ್ಯಮಿದಮ್। ಹೇ ಭಗವನ್! 'ಮೇ ಸಪತ್ನೀಂ' ಮದನ್ಯಾಂ ಮತ್ಪತಿಪಾಣಿಗೃಹೀತೀಂ 'ಪರಾಧಮ' ಪರಾಣುದ। ಮಮ ಪತಿಂ 'ಕೇವಲಂ' ಮಯ್ಯೇವಾऽಸಕ್ತಂ ಕುರು। 'ಅಹಮುತ್ತರಾಭ್ಯಃ' ಸೌಂದರ್ಯೇ-ಣೋತ್ಕೃಷ್ಟಾಭ್ಯಃ ಮದಂತರಾಭ್ಯೋ ವಾ ಸ್ತ್ರೀಭ್ಯಃ 'ಉತ್ತರಾ' ಉತ್ಕೃಷ್ಟಾ ಸತೀ 'ಉತ್ತರೇತ್' ಪ್ರಿಯೋತ್ತಮೈವ 'ಉತ್ತರೇ' ಸಪತ್ನೀಕ್ಲೇಶಾದುತ್ತರೇಯಮ್ – ಇತಿ ಶ್ರುತ್ಯರ್ಥಃ। 'ಆದಿ'ಪದೇನ 'ಉದತೀ ಪಶ್ಯವಃ ಸೋಮ ಏಕೇಭ್ಯಃ ಪರ್ವತೇ', 'ಉದಸೌ ಸೂರ್ಯೋ ಅಗಾತ್' (ಋ.೧೦.೧೫೯.೧) ಇತ್ಯಾದಿದೇವಮಾತೃ-ಯಮೀಪೌಲೋಮ್ಯಾದಿದೃಷ್ಟಾನಾಂ ಗ್ರಹಣಮ್।

ಇಲ್ಲಿ ''ತು''ಶಬ್ದವು ವೇದದ್ರಷ್ಟೃತ್ವ ಎಂಬ ವಿಶೇಷವನ್ನು ಸೂಚಿಸುವುದು. 'ಸಂಸ್ಕಾರಾಭಾವೇನ ಅಭಾವಃ' ಎಂಬ ಪದಗಳನ್ನು ಮುಂದಿನ ಭಾಷ್ಯವಾಕ್ಯದಿಂದ ಇಲ್ಲಿ ಸೇರಿಸಬೇಕು. 'ಅಧಿಕಾರಸ್ಯ' ಎಂಬ ಪದವು ಇಲ್ಲಿ ಶೇಷವಾಗಿದೆ. 'ಉತ್ತಮಸ್ತ್ರೀಣಾಂ' ಎಂಬ ಪದಕ್ಕೆ 'ಉತ್ತಮಾನಾಂ ಸ್ತ್ರಿಯಃ' - ಉತ್ತಮರ ಸ್ತ್ರೀಯರು ಅಥವಾ ಉತ್ತಮಾಶ್ಚ ತಾಃ ಸ್ತ್ರಿಯಶ್ಚ - ಉತ್ತಮರಾದ ಸ್ತ್ರೀಯರು ಎಂದು ಕರ್ಮಧಾರಯ ಸಮಾಸ. ತಥಾ ಚ – ಶಚೀ, ಯಮೀ, ಊರ್ವಶೀ ಮೊದಲಾದ ಉತ್ತಮಸ್ತ್ರೀಯರಿಗೆ ಶೂದ್ರರಂತೆ ಸಂಸ್ಕಾರವಿಲ್ಲದಿರುವುದರಿಂದ ವೇದವಿದ್ಯಾಧಿಕಾರವಿಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ, 'ಸಪತ್ನೀಂ ಮೇ ಪರಾಧಮ' ಇತ್ಯಾದಿ ವಿದ್ಯೆಗಳಲ್ಲಿ ಅವರು ವೇದದ್ರಷ್ಟೃ-ಗಳಾಗಿರುವುದರಿಂದ ವೇದಾಧಿಕಾರವಿರುವುದು ಕಂಡಿದೆ ಎಂದು ಯೋಜನೆ.

ಇಲ್ಲಿ 'ಸಪತ್ನೀಮ್' ಎಂದು ಭಾಷ್ಯದಲ್ಲಿ ಪ್ರತೀಕವನ್ನು ಗ್ರಹಿಸಿರುವುದರಿಂದ 'ಸಪತ್ನೀಂ ಮೇ ಪರಾಧಮ ಪತಿಂ ಮೇ ಕೇವಲಂ ಕೃಧಿ । ಉತ್ತರಾऽಹಮುತ್ತರ ಉತ್ತರೇದುತ್ತರಾಭ್ಯಃ' - ಎಂಬ ಸಮಗ್ರವಾಕ್ಯವು ಗ್ರಹಿಸಲ್ಪಡುವುದು. ಇದು ಶಚಿಯು ಹೇಳುವ ವಾಕ್ಯವಾಗಿದೆ. 'ಹೇ ಭಗವನ್' - 'ಮೇ ಸಪತ್ನೀಂ' - ನನ್ನಿಂದ ಅನ್ಯಳಾದ ನನ್ನ

ಪತಿಯ ಪಾಣಿಗ್ರಹಣವನ್ನು ಮಾಡಿರುವವಳನ್ನು 'ಪರಾಧಮ' - ನಿವಾರಿಸು. 'ಪತಿಂ ಮೇ' - ನನ್ನ ಪತಿಯನ್ನು 'ಕೇವಲಂ' ಕುರು - ನನ್ನಲ್ಲೇ ಆಸಕ್ತನಾಗಿರುವಂತೆ ಮಾಡು. 'ಅಹಂ ಉತ್ತರಾಭ್ಯಃ' ನಾನು ಸೌಂದರ್ಯದಿಂದ ಉತ್ಕೃಷ್ಟವಾಗಿರುವ ಅಥವಾ ನನಗಿಂತ ಭಿನ್ನರಾದ ಸ್ತ್ರೀಯರಿಂದ 'ಉತ್ತರಾ' ಉತ್ಕೃಷ್ಟವಾಗಿ 'ಉತ್ತರೇತ್' ಪತಿಗೆ ಅತ್ಯಂತ ಪ್ರಿಯಳಾಗಿ, 'ಉತ್ತರೇ' - ಸವತಿಯ ದ್ವೇಷದಿಂದ ಪಾರಾಗುವುದು ಎಂದು ಶ್ರುತಿಯ ಅರ್ಥ. 'ಆದಿ' ಪದದಿಂದ 'ಉದತೀ ಪಶ್ಯವಃ ಸೋಮ ಏಕೇಭ್ಯಃ ಪರ್ವತೇ', 'ಉದಸೌ ಸೂರ್ಯೋ ಅಗಾತ್''' ಇವೇ ಮೊದಲಾದ ದೇವಮಾತೆಯಾದ ಅದಿತಿ, ಯಮೀ, ಪೌಲೋಮಿ ಮೊದಲಾದವರಿಂದ ದೃಷ್ಟವಾದ ವೇದವಾಕ್ಯಗಳನ್ನು ಗ್ರಹಿಸಬೇಕು.

ಭಾ.ದೀ. – ತರ್ಹಿ ಸಂಸ್ಕಾರಾಭಾವಹೇತೋರುತ್ತಮಸ್ತ್ರೀಷು ವ್ಯಭಿಚಾರಃ ಸ್ಯಾದಿತ್ಯತ ಆಹ – ಸಂಸ್ಕಾರೇತಿ ॥

ಹಾಗಿದ್ದ ಪಕ್ಷದಲ್ಲಿ ಸಂಸ್ಕಾರಾಭಾವ ಎಂಬ ಹೇತುವಿಗೆ ವೇದಾನಧಿಕಾರ ಎಂಬ ಸಾಧ್ಯದ ವ್ಯಭಿಚಾರವು ಉತ್ತಮಸ್ತ್ರೀಯರಲ್ಲಿ ಬಂದೀತು! ಎಂಬ ಶಂಕೆಗೆ ಉತ್ತರವಾಗಿ ''ಸಂಸ್ಕಾರ'' ಎಂಬ ಭಾಷ್ಯವಾಕ್ಯವು ಹೊರಟಿದೆ.

**ಭಾಷ್ಯಮ್ – ಸಂಸ್ಕಾರಾಭಾವೇನಾಭಾವಸ್ತು ಸಾಮಾನ್ಯೇನ ।**

ಉಪನಯನಾದಿ ಸಂಸ್ಕಾರವಿಲ್ಲದ ಕಾರಣ ವೇದಾಧಿಕಾರವಿಲ್ಲ ಎಂದು ಹೇಳಿರುವುದು ಅಪವಾದಸಹಿತವಾದ ಸಾಮಾನ್ಯ-ನಿಯಮದ ಅಭಿಪ್ರಾಯದಿಂದ.

ಭಾ.ದೀ. – ಅಭಾವೋ ವೇದಾಧಿಕಾರಸ್ಯ । ತುಶಬ್ದಃ ಪೂರ್ವೋಕ್ತನ್ಯಾಯಸ್ಯ ಸಾಮಾನ್ಯತ್ವಾಖ್ಯವಿಶೇಷದ್ಯೋತಕಃ । 'ಉಕ್ತಃ' ಇತಿ ಶೇಷಃ । ತಥಾ ಚ – ಸಂಸ್ಕಾರಾಭಾವೇನ ಹೇತುನಾ ಯತ್ಸೂತ್ರೇ ವೇದಾಧಿಕಾರಸ್ಯ ಅಭಾವ ಉಕ್ತಃ ಸಃ 'ಸಾಮಾನ್ಯೇನ' ಸಾಮಾನ್ಯನ್ಯಾಯೇನ ಸಾಪವಾದನಿಯಮಾಭಿಪ್ರಾಯೇಣೈವ, ನ ತು ನಿರಪವಾದನಿಯಮೇನ । ಅತೋ ನಾಪವಾದವಿಷಯೇ ವ್ಯಭಿಚಾರ ಇತ್ಯರ್ಥಃ ।

ಸಾಮಾನ್ಯತ್ವವಚನೇನ ಶೂದ್ರಪ್ರತಿಬಂದೀ ಮೋಚಿತಾ । ತಥಾ ಚ – ಸಂಸ್ಕಾರಾಭಾವೇನ ವೇದಾಧಿಕಾರಾಭಾವ ಇತಿ ಸಾಮಾನ್ಯವ್ಯಾಪ್ತೇಃ ಶಚ್ಯಾದಿಷು ವಿದ್ಯಾಧಿಕಾರದರ್ಶನಾಖ್ಯಾಪವಾದಕೇನ ಭಂಗೇಽಪಿ ನ ಶೂದ್ರಾದಾವಪಿ ತಸ್ಯ ಭಂಗಃ ಕಲ್ಪ್ಯಃ, ತತ್ರ ವೇದವಿದ್ಯಾಧಿಕಾರೇ ವಿಶೇಷಪ್ರಮಾಣಾಖ್ಯಾಪವಾದಕಾಭಾವಾದಿತಿ ಭಾವಃ।

ಇಲ್ಲಿ ಅಭಾವವೆಂದರೆ ವೇದಾಧಿಕಾರದ ಅಭಾವ. ತುಶಬ್ದವು ಹಿಂದೆ ಹೇಳಿದ 'ಸಂಸ್ಕಾರವಿಲ್ಲದಿದ್ದರೆ ವೇದಾಧಿಕಾರವಿಲ್ಲ' ಎಂಬ ವ್ಯಾಪ್ತಿಗೆ ಸಾಮಾನ್ಯತ್ವವೆಂಬ ವಿಶೇಷವನ್ನು ಸೂಚಿಸುವುದು. ''ಉಕ್ತಃ'' ಎಂಬ ಪದವು ಶೇಷವಾಗಿದೆ. ತಥಾ ಚ – ಸಂಸ್ಕಾರಾಭಾವವೆಂಬ ಹೇತುವಿನಿಂದ ಸೂತ್ರದಲ್ಲಿ ವೇದಾಧಿಕಾರವಿಲ್ಲವೆಂದು ಏನು ಹೇಳಲಾಗಿದೆಯೋ ಅದು 'ಸಾಮಾನ್ಯೇನ' - ಅಂದರೆ ಅಪವಾದಸಹಿತವಾದ ನಿಯಮವಾಗಿದೆ ಎಂಬ ಅಭಿಪ್ರಾಯದಿಂದಲೇ ಹೊರತು ಅಪವಾದವಿಲ್ಲದ ನಿಯಮ ಎಂಬ ಅಭಿಪ್ರಾಯದಿಂದಲ್ಲ. ಆದ್ದರಿಂದ ಅಪವಾದವಿರುವ ವಿಷಯದಲ್ಲಿ ವ್ಯಭಿಚಾರವಿಲ್ಲ ಎಂದು ಅರ್ಥ. ಈ ನಿಯಮವು ಸಾಮಾನ್ಯನಿಯಮ ಎಂದು ಹೇಳಿದ್ದರಿಂದ ಉತ್ತಮಸ್ತ್ರೀಯರಿಗೆ ವೇದಾಧಿಕಾರವಿರುವುದಾದರೂ ಶೂದ್ರನಿಗೂ ವೇದಾಧಿಕಾರವಿರಲಿ ಎಂಬ ಪ್ರತಿಬಂದಿಯನ್ನು ನಿವಾರಿಸಲಾಗಿದೆ. ತಥಾ ಚ – ಸಂಸ್ಕಾರವಿಲ್ಲದಿದ್ದರೆ ವೇದಾಧಿಕಾರವಿಲ್ಲ ಎಂಬ ಸಾಮಾನ್ಯವ್ಯಾಪ್ತಿಗೆ ಶಚಿ ಮೊದಲಾದವರಲ್ಲಿ ವೇದವಿದ್ಯಾಧಿಕಾರದರ್ಶನವೆಂಬ ಅಪವಾದದಿಂದ ಭಂಗ ಬಂದರೂ ಶೂದ್ರಾದಿಗಳಲ್ಲೂ ಆ ನಿಯಮಕ್ಕೆ ಭಂಗವನ್ನು ಹೇಳತಕ್ಕದ್ದಲ್ಲ. ಏಕೆಂದರೆ, ಶೂದ್ರರಿಗೆ ವೇದಾಧಿಕಾರವಿರುವುದೆಂಬ ವಿಷಯದಲ್ಲಿ ವಿಶೇಷಪ್ರಮಾಣರೂಪವಾದ ಅಪವಾದಕವು ಇಲ್ಲವೆಂದು ಭಾವ.

ಭಾ.ದೀ. – ಏವಂ ಸ್ತ್ರೀಣಾಂ ಉಪನಯನಾಭಾವೇಽಪಿ ಪೂರ್ವೋಕ್ತವ್ಯಾಪ್ತೇಃ ಸಾಮಾನ್ಯತ್ವೇನಾಪವಾದಸಂಭವಾದಸ್ತಿ ವೇದಾಧಿಕಾರ ಇತ್ಯುಕ್ತಮ್ । ಅಥ ಉಪನಯನಾಖ್ಯವಿಧ್ಯಭಾವೇಽಪಿ ತತ್ಪ್ರತಿನಿಧಿಸದ್ಭಾವಾಚ್ಚ ಅಸ್ತ್ಯಧಿಕಾರ ಇತ್ಯಾಹ – ಅಸ್ತಿ ಚೇತಿ ॥

ಹೀಗೆ ಸ್ತ್ರೀಯರಿಗೆ ಉಪನಯನವಿಲ್ಲದಿದ್ದರೂ ಹಿಂದೆ ಹೇಳಿದ ವ್ಯಾಪ್ತಿಯು ಸಾಮಾನ್ಯವ್ಯಾಪ್ತಿಯಾಗಿರುವ ಕಾರಣ ಅಪವಾದವಿರುವುದು ಸಾಧ್ಯವಿರುವುದರಿಂದ ವೇದಾಧಿಕಾರವಿದೆ ಎಂದು ಹೇಳಲಾಯಿತು. ಈಗ ಅವರಿಗೂ ಉಪನಯನಾಖ್ಯ ಸಂಸ್ಕಾರವಿಲ್ಲದಿದ್ದರೂ ಅದರ ಪ್ರತಿನಿಧಿ ಇರುವ ಕಾರಣ ಅವರಿಗೆ ವೇದಾಧಿಕಾರವಿದೆ ಎಂದು ''ಅಸ್ತಿ ಚ'' ಎಂದು ಹೇಳುತ್ತಿದ್ದಾರೆ.

**ಭಾಷ್ಯಮ್ – ಅಸ್ತಿ ಚ ತಾಸಾಂ ಸಂಸ್ಕಾರಃ । 'ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ'** (ವ್ಯಾಸಸ್ಮೃತಿಃ) **ಇತಿ ಸ್ಮೃತೇಃ ॥ ೩೬ ॥**

ಸ್ತ್ರೀಯರಿಗೂ ಸಂಸ್ಕಾರವಿದ್ದೇ ಇರುವುದು. ಏಕೆಂದರೆ, 'ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ' - ಪುರುಷರಿಗೆ ಉಪನಯನವು ಹೇಗೆ ಸಂಸ್ಕಾರವೋ ಹಾಗೆ ಸ್ತ್ರೀಯರಿಗೆ ವಿವಾಹ-ಕ್ರಿಯೆಯೇ ಸಂಸ್ಕಾರವೆಂದು ಸ್ಮೃತಿಯಿರುವುದು.

ಭಾ.ದೀ. – ಚಃ ಅಧಿಕಾರಸಮುಚ್ಚಯೇ । 'ತಾಸಾಂ' ಸ್ತ್ರೀಣಾಂ । ಕುತ ಏತತ್? ಇತ್ಯತ ಆಹ – ಸ್ತ್ರೀಣಾಮಿತಿ ॥ 'ಪುಂಸಾಮ್' ಇತಿ ಶೇಷಃ । ತಥಾ ಚ ಪುಂಸಾಂ ಯಥೋಪನಯನಂ ಸಂಸ್ಕಾರಃ, ತಥಾ ಸ್ತ್ರೀಣಾಂ 'ಪ್ರದಾನಕರ್ಮೈವ' ವಿವಾಹ-ಕ್ರಿಯೈವ ಸಂಸ್ಕಾರ ಇತಿ ವ್ಯಾಸಸ್ಮೃತ್ಯರ್ಥಃ । 'ಸ್ಮೃತೇಃ' ಇತ್ಯಸ್ಯ 'ತಾಸಾಮ್' ಇತ್ಯನೇನಾನ್ವಯಃ । 'ಇತಿ ಜ್ಞಾಯತೇ' ಇತಿ ಶೇಷಃ ।

ತಥಾ ಚ – ಉತ್ತಮಸ್ತ್ರೀಷ್ವಿಹ ಹೇತೂಕೃತಸ್ಯ ವಿಧಿಪ್ರತಿನಿಧಿಸಾಧಾರಣ-ಸಂಸ್ಕಾರಸಾಮಾನ್ಯಾಭಾವಸ್ಯಾಭಾವಾನ್ನ ವ್ಯಭಿಚಾರ ಇತಿ ಭಾವಃ । ನ ಚ ಸಂಸ್ಕಾರಮಾತ್ರಸ್ಯ ವೇದಾಧಿಕಾರಪ್ರಯೋಜಕತ್ವೇऽಧಮಸ್ತ್ರೀಣಾಮಪಿ ತದಾಪತ್ತಿ-ರಿತಿ ವಾಚ್ಯಮ್ । ನಿಷೇಧಾಭಾವಸಹಿತಸ್ಯೈವ ತಸ್ಯ ಪ್ರಯೋಜಕತ್ವಾಭ್ಯುಪ-ಗಮಾತ್ ।

ನನ್ವೇವಮ್ ಉತ್ತಮಸ್ತ್ರೀಣಾಂ ಸಂಸ್ಕಾರಯುಕ್ತತ್ವಾದೇವ ಅಧಿಕಾರಿತ್ವಮಿತಿ

ನೋಕ್ತನ್ಯಾಯಭಂಗ ಇತಿ ವಕ್ತುಂ ಶಕ್ಯತ್ವಾತ್, ಕಿಮರ್ಥಂ ತಾಸು ಸಂಸ್ಕಾರಾಭಾವಮಂಗೀಕೃತ್ಯ ಉಕ್ತನ್ಯಾಯಸ್ಯ ಸಾಪವಾದತ್ವವಚನಮ್ ಇತಿ ಚೇತ್, ನ । ಪ್ರದಾನಾದಿಶೂನ್ಯತಿರ್ಯಗಾದೀನಾಮಪಿ ಸಂಗ್ರಹಾರ್ಥತ್ವಾತ್ । ತೇಷಾಮಪಿ 'ಅಯಮಗ್ನೇ ಜರಿತಾ' (ಋ.೧೦.೧೪೨.೧) ಇತ್ಯಾದಿವಿದ್ಯಾಧಿಕಾರದರ್ಶನೇನ ಅಪವಾದವಿಷಯತ್ವಾತ್ ।

ಅನೇನ – 'ತಮಧ್ಯಾಪಯೀತ' ಇತಿ ತಚ್ಛಬ್ದೇನ ಪೂರ್ವಪ್ರಕೃತೋಪನಯನಾಖ್ಯಸಂಸ್ಕಾರಮಾತ್ರಸ್ಯ ಪರಾಮರ್ಶಾದ್ ವೇದಃ ಕೃತ್ಸ್ನಃ ಇತಿ ಸ್ಮೃತೇಶ್ಚಾಸ್ಯ ಶೂದ್ರಸ್ಯ ತದಭಾವಾಭಿಲಾಪಾತ್ 'ನಾಗ್ನಿಃ' ಇತಿ ಶ್ರುತೌ ಸಂಸ್ಕಾರಾಭಾವಾಭಿಧಾನಾನ್ನ ತಸ್ಯ ವೇದಾಧಿಕಾರ ಇತಿ ಸೂತ್ರಾರ್ಥ ಉಕ್ತೋ ಭವತಿ ।

ಇಲ್ಲಿ ಚಶಬ್ದವು ಅಧಿಕಾರಸಮುಚ್ಚಯವನ್ನು ಹೇಳುವುದು. 'ತಾಸಾಂ' - ಎಂದರೆ ಸ್ತ್ರೀಯರಿಗೆ ಎಂದು ಅರ್ಥ. ಹೀಗೆ ಹೇಳಲು ಆಧಾರವೇನು? ಎಂಬುದಕ್ಕೆ ಉತ್ತರವಾಗಿ ''ಸ್ತ್ರೀಣಾಮ್'' ಎಂದು ಹೇಳಲಾಗಿದೆ. ಇಲ್ಲಿ 'ಪುಂಸಾಂ' ಎಂಬುದು ಶೇಷವಾಗಿದೆ. ತಥಾ ಚ – 'ಪುಂಸಾಂ ಯಥಾ ಉಪನಯನಂ' ಹೇಗೆ ಪುರುಷರಿಗೆ ಉಪನಯನವು ಸಂಸ್ಕಾರವೋ, 'ತಥಾ ಸ್ತ್ರೀಣಾಂ ಪ್ರದಾನಕರ್ಮೈವ' ಹಾಗೆ ಸ್ತ್ರೀಯರಿಗೆ ವಿವಾಹರೂಪವಾದ ಕ್ರಿಯೆಯೇ ಸಂಸ್ಕಾರರೂಪವಾಗಿದೆ ಎಂದು ವ್ಯಾಸಸ್ಮೃತಿಯ ಅರ್ಥವಾಗಿದೆ. 'ಸ್ಮೃತೇಃ ಎಂಬ ಪದಕ್ಕೆ 'ತಾಸಾಮ್' ಎಂಬ ಪದದೊಂದಿಗೆ ಅನ್ವಯ. 'ಇತಿ ಜ್ಞಾಯತೇ' ಎಂಬ ಪದಗಳು ಶೇಷವಾಗಿವೆ.

ತಥಾ ಚ – ಇಲ್ಲಿ ಶೂದ್ರರಿಗೆ ವೇದಾಧಿಕಾರವಿಲ್ಲ ಎಂಬುದನ್ನು ಸಾಧಿಸಲು ಹೇತುವಾಗಿ ಹೇಳಿದ ವಿಧಿಪ್ರತಿನಿಧಿ ಎರಡಕ್ಕೂ ಸಮಾನವಾದ ಸಂಸ್ಕಾರಸಾಮಾನ್ಯಾಭಾವವು ಉತ್ತಮಸ್ತ್ರೀಯರಲ್ಲಿ ಇಲ್ಲವಾದ ಕಾರಣ ವ್ಯಭಿಚಾರವಿಲ್ಲ ಎಂದು ಭಾವ.ಕೇವಲ ಸಂಸ್ಕಾರ ವೇದಾಧಿಕಾರಕ್ಕೆ ಪ್ರಯೋಜಕವಾಗುವುದಾದರೆ ಅಂತಹ ಸಂಸ್ಕಾರ ಅಧಮಸ್ತ್ರೀಯರಿಗೂ ಇರುವುದರಿಂದ ಅಧಮಸ್ತ್ರೀಯರಿಗೂ ವೇದಾಧಿಕಾರವು ಇರಬೇಕಾದೀತು ಎಂದರೆ ಅದು ಸರಿಯಲ್ಲ. ಏಕೆಂದರೆ ನಿಷೇಧಾಭಾವಸಹಿತವಾದ ಸಂಸ್ಕಾರವೇ ವೇದಾಧಿ-ಕಾರಕ್ಕೆ ಪ್ರಯೋಜಕವೆಂದು ಅಂಗೀಕರಿಸಲಾಗಿದೆ.

ಶಂಕೆ – ಉತ್ತಮಸ್ತ್ರೀಯರಿಗೆ ಸಂಸ್ಕಾರವಿರುವ ಕಾರಣ ವೇದಾಧಿಕಾರವಿದೆ-ಯಾದ್ದರಿಂದ 'ಸಂಸ್ಕಾರವಿಲ್ಲದಿದ್ದರೆ ವೇದಾಧಿಕಾರವಿಲ್ಲ' ಎಂಬ ನಿಯಮಕ್ಕೆ ಭಂಗವಿಲ್ಲ ಎಂದು ಹೇಳಲು ಸಾಧ್ಯವಿರುವುದರಿಂದ ಅವರಿಗೆ ಸಂಸ್ಕಾರವಿಲ್ಲವೆಂದು ಒಪ್ಪಿ, ಈ ನಿಯಮವು ಸಾಪವಾದವೆಂದು ಹೇಳುವ ಅಗತ್ಯವೇನು?

ಸಮಾಧಾನ – ಈ ಆಕ್ಷೇಪ ಯುಕ್ತವಲ್ಲ; ವಿವಾಹವೇ ಮೊದಲಾದ ಸಂಸ್ಕಾರ-ವಿಲ್ಲದ ತಿರ್ಯಕ್‌ಪ್ರಾಣಿಗಳೇ ಮೊದಲಾದವುಗಳನ್ನು ಸಂಗ್ರಹಿಸುವ ಸಲುವಾಗಿ ಆ ನಿಯಮವು ಸಾಪವಾದವೆಂದೇ ಹೇಳಬೇಕಾಗಿದೆ. ತಿರ್ಯಕ್‌ಪ್ರಾಣಿಗಳೇ ಮೊದಲಾ-ದವುಗಳಿಗೂ 'ಅಯಮಗ್ನೇ ಜರಿತಾ' ಇತ್ಯಾದಿ ವೇದವಿದ್ಯೆಯಲ್ಲಿ ಅಧಿಕಾರವಿರುವುದು ಕಂಡಿರುವುದರಿಂದ ಸಂಸ್ಕಾರವಿಲ್ಲದಿದ್ದರೆ ಅಧಿಕಾರವಿರುವುದಿಲ್ಲ ಎಂಬ ನಿಯಮಕ್ಕೆ ಅಪವಾದರೂಪರಾಗಿದ್ದಾರೆ.

ಇದರಿಂದ – 'ತಮಧ್ಯಾಪಯೀತ' ಎಂಬ ಶ್ರುತಿಯಲ್ಲಿ ತಚ್ಛಬ್ದದಿಂದ ಹಿಂದೆ ಪ್ರಸ್ತುತವಾದ ಕೇವಲ ಉಪನಯನವೆಂಬ ಸಂಸ್ಕಾರವನ್ನು ಪರಾಮರ್ಶಿಸುವುದರಿಂದ ಮತ್ತು 'ವೇದಃ ಕೃತ್ಸ್ನಃ' ಎಂಬ ಸ್ಮೃತಿಯಲ್ಲಿ ಉಪನಯನವೆಂಬ ಸಂಸ್ಕಾರವಿದ್ದವರಿಗೆ ವೇದಾಧಿಕಾರವೆಂದು ವಿಧಿಸಿರುವುದರಿಂದ, 'ನಾಗ್ನಿಃ ರ್ನ ಯಜ್ಞಃ' ಎಂಬ ಶ್ರುತಿಯಲ್ಲಿ (ಅಸ್ಯ) ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳಿರುವುದರಿಂದ ಅವನಿಗೆ ವೇದಾಧಿ-ಕಾರವಿಲ್ಲವೆಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನನು ಶೂದ್ರೇ ಸಂಸ್ಕಾರಾಭಾವೇನ ವೇದವಿದ್ಯಾಧಿಕಾರಾ-ಭಾವೋಕ್ತಿರನುಪಪನ್ನಾ । 'ಶೂದ್ರಂ ನೋಪನಯೀತ' ಇತಿ ನಿಷೇಧಾಭಾವೇನ ತಸ್ಯಾಪಿ ಸಂಸ್ಕಾರಸಂಭವಾತ್ । 'ನಾಗ್ನಿರ್ನ ಯಜ್ಞಃ' ಇತಿ ಶ್ರುತೌ ತು ಶೂದ್ರಸ್ಯ ಸಂಸ್ಕಾರಾಭಾವ ಏವೋಚ್ಯತೇ ನ ತ್ವಸೌ ನ ಕಾರ್ಯ ಇತಿ ನಿಷಿಧ್ಯತೇ । ಅತೋ ನ ತದ್‌ವಿರೋಧೋಽಪಿ ಇತ್ಯಾಶಂಕಾಂ ಪರಿಹರತ್ಸೂತ್ರಂ ಪಠಿತ್ವಾ ವ್ಯಾಚಷ್ಟೇ – ತದಭಾವೇತಿ ॥

ಶಂಕೆ – ಶೂದ್ರನಿಗೆ ಸಂಸ್ಕಾರವಿಲ್ಲದ್ದರಿಂದ ವೇದವಿದ್ಯಾಧಿಕಾರವಿಲ್ಲವೆಂದು ಹೇಳು-ವುದು ಯುಕ್ತವಲ್ಲ. 'ಶೂದ್ರಂ ನೋಪನಯೀತ' ಶೂದ್ರನಿಗೆ ಉಪನಯನವನ್ನು

ಮಾಡಬಾರದು ಎಂಬ ನಿಷೇಧವಿಲ್ಲದಿರುವುದರಿಂದ ಅವನಿಗೂ ಉಪನಯನಸಂಸ್ಕಾರ-ವನ್ನು ಮಾಡಲು ಸಾಧ್ಯವಿದೆ. 'ನಾಗ್ನಿರ್ನ ಯಜ್ಞಃ' ಎಂಬ ಶ್ರುತಿಯಲ್ಲಾದರೋ ಶೂದ್ರ-ನಿಗೆ ಸಂಸ್ಕಾರವಿಲ್ಲವೆಂದು ಮಾತ್ರ ಹೇಳಿದೆ ಹೊರತು ಅದನ್ನು ಮಾಡಬಾರದೆಂದು ನಿಷೇಧಿಸಿಲ್ಲ. ಆದ್ದರಿಂದ ಆ ಶ್ರುತಿಯ ವಿರೋಧವು ಇಲ್ಲ.

ಸಮಾಧಾನ – ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಪಠಿಸಿ ಆಚಾರ್ಯರು ''ತದಭಾವ'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಸೂತ್ರಮ್ – ॥ ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ ಓಂ ॥ ೩೭ ॥**

(ಸತ್ಯಕಾಮನಿಗೆ) ಶೂದ್ರತ್ವವಿಲ್ಲ ಎಂದು ನಿರ್ಣಯವಾದ ನಂತರವೇ ಅವನಿಗೆ ಉಪನಯನದ ಸಂಸ್ಕಾರವನ್ನು ಮಾಡಲು (ಗೌತಮರು ಪ್ರವೃತ್ತಿ ಮಾಡಿದ್ದು ಕಂಡುಬರುವುದರಿಂದ) ಶೂದ್ರನಿಗೆ ಉಪ-ನಯನ ಸಂಸ್ಕಾರವು ಇಲ್ಲ ಎಂದು ಹೇಳಲಾಗಿದೆ.

**ಭಾಷ್ಯಮ್ – 'ನಾಹಮೇತದ್ ವೇದ ಭೋ ಯದ್ಗೋತ್ರೋಽಹಮಸ್ಮಿ' (ಛಾಂ.೪.೪) ಇತಿ ಸತ್ಯವಚನೇನ ಸತ್ಯಕಾಮಸ್ಯ ಶೂದ್ರತ್ವಾಭಾವ-ನಿರ್ಧಾರಣೇ ಹಾರಿದ್ರುಮತಸ್ಯ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' (ಛಾಂ.೪.೫) ಇತಿ ತತ್ಸಂಸ್ಕಾರೇ ಪ್ರವೃತ್ತೇಶ್ಚ ॥೩೭॥**

'ನಾಹಮೇತದ್ ವೇದ ಭೋ ಯದ್ಗೋತ್ರೋಽಹಮಸ್ಮಿ' ಎಂಬ ಸತ್ಯವಚನದಿಂದ ಸತ್ಯಕಾಮನಿಗೆ ಶೂದ್ರತ್ವವಿಲ್ಲ ಎಂಬ ನಿಶ್ಚಯದ ನಂತರ ಹಾರಿದ್ರುಮತರು 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಎಂದು ಅವನಿಗೆ ಉಪನಯನಸಂಸ್ಕಾರ ಮಾಡಲು ಪ್ರವೃತ್ತಿ ಮಾಡಿ-ರುವುದರಿಂದಲೇ (ಶೂದ್ರನಿಗೆ ಸಂಸ್ಕಾರನಿಷೇಧವಿರುವುದೆಂದು ಹೇಳಿದೆ).

ಭಾ.ದೀ.– 'ಇತಿ ಸತ್ಯವಚನೇನ' ವಾಙ್ಮನಸಯೋರೇಕರೂಪಯಥಾರ್ಥ-ವಚನೇನ ತಜ್ಜ್ಞಾಪಿತೇನಾಽರ್ಜವೇನ ಇತಿ ಯಾವತ್ । 'ಸತ್ಯಕಾಮಸ್ಯ' ತದಾಖ್ಯಸ್ಯ ಋಷೇಃ ಏತಚ್ಚ ಪೂರ್ವತ್ರೋತ್ತರತ್ರ ಚ ಸಂಬಧ್ಯತೇ । 'ಸತ್ಯವಚನೇನ ಸತ್ಯಕಾಮಸ್ಯ' ಇತ್ಯಾದಿನಾ ಸೂತ್ರೇ ತಚ್ಛಬ್ದೋ ವ್ಯಸ್ತೋಽನೇಕವಿಭಕ್ತಿಕಃ ಬುದ್ಧ್ಯಾ ವಿವಿಚ್ಯ ಆವರ್ತತೇ ಇತ್ಯುಕ್ತಂ ಭವತಿ ।

ಶೂದ್ರತ್ವಾಭಾವನಿರ್ಧಾರಣೇ 'ಚ' ಇತ್ಯಸ್ಯ ನೈತದ್ 'ಅಬ್ರಾಹ್ಮಣ' ಇತ್ಯನೇನ ಸಂಬಂಧಃ । ಚೋಽವಧಾರಣೇ । ಶ್ರುತಾವಬ್ರಾಹ್ಮಣಮಾತ್ರಸ್ಯ ಅನುಪನಯನಾ-ಭಿಪ್ರಾಯಪ್ರತೀತೇಸ್ತದನುಸಾರೇಣ 'ಬ್ರಾಹ್ಮಣತ್ವಾಭಾವಃ' ಇತ್ಯನುಕ್ತ್ವಾ 'ಶೂದ್ರ-ತ್ವಾಭಾವ' ಇತಿ ತದಭಾವಪದವ್ಯಾಖ್ಯಾನೇನ ಶ್ರುತೌ ಬ್ರಾಹ್ಮಣಶಬ್ದೋ ಬ್ರಹ್ಮಾಣ-ನಯೋಗ್ಯತ್ರೈವರ್ಣಿಕಪರ ಇತ್ಯುಕ್ತಂ ಭವತಿ ।

'ಇತಿ ಸತ್ಯವಚನೇನ' - ಅಂದರೆ ವಾಕ್ ಮತ್ತು ಮನಸ್ಸುಗಳಲ್ಲಿ ಏಕರೂಪತೆ ಇರುವ ಯಥಾರ್ಥವಚನದಿಂದ - ಆ ವಚನದಿಂದ ಸೂಚಿತವಾಗುವ ಆರ್ಜವ-ಗುಣದಿಂದ ಎಂದು ಅಭಿಪ್ರಾಯ. 'ಸತ್ಯಕಾಮಸ್ಯ' - ಅಂದರೆ ಸತ್ಯಕಾಮನೆಂಬ ಋಷಿಗೆ ಎಂದು ಅರ್ಥ. ಈ ಪದವು ಹಿಂದೆ ಮತ್ತು ಮುಂದೆ ಎರಡೂ ಕಡೆಗಳಲ್ಲಿ ಸಂಬಂಧ-ವನ್ನು ಪಡೆಯುತ್ತದೆ. 'ಸತ್ಯವಚನೇನ ಸತ್ಯಕಾಮಸ್ಯ' ಇತ್ಯಾದಿ ವಾಕ್ಯದಿಂದ ಸೂತ್ರದಲ್ಲಿ ತಚ್ಛಬ್ದವು ಸಮಾಸವನ್ನು ಹೊಂದದೇ, ಅನೇಕ ವಿಭಕ್ತಿಗಳನ್ನು ಪಡೆದು, ಬುದ್ಧಿ-ಯಿಂದಲೇ ಪ್ರತ್ಯೇಕಗೊಳಿಸಲ್ಪಟ್ಟು ಆವೃತ್ತಿಯನ್ನು ಪಡೆಯುತ್ತದೆ ಎಂದು ಹೇಳಿದಂತಾ-ಗುವುದು.

ಭಾಷ್ಯದಲ್ಲಿ 'ಶೂದ್ರತ್ವಾಭಾವನಿರ್ಧಾರಣೇ ಚ' ಎಂಬ ಪದಕ್ಕೆ 'ನೈತದಬ್ರಾಹ್ಮಣ' ಎಂಬ ಪದದೊಂದಿಗೆ ಸಂಬಂಧವಿದೆ. ಚಶಬ್ದವು ಅವಧಾರಣಾರ್ಥಕವಾಗಿದೆ. ಶ್ರುತಿಯಲ್ಲಿ ಎಲ್ಲ ಅಬ್ರಾಹ್ಮಣರಿಗೂ ಉಪನಯನವಿಲ್ಲವೆಂಬ ಅಭಿಪ್ರಾಯವು ಬರುವು-ದರಿಂದ ಅದಕ್ಕನುಸಾರವಾಗಿ 'ಬ್ರಾಹ್ಮಣತ್ವಾಭಾವ' ಎಂದು ಹೇಳದೇ ಸೂತ್ರದ 'ತದಭಾವ'ಪದಕ್ಕೆ 'ಶೂದ್ರತ್ವಾಭಾವ' ಎಂದು ವ್ಯಾಖ್ಯಾನ ಮಾಡಿರುವುದರಿಂದ ಶ್ರುತಿ-

ಯಲ್ಲಿ ಬ್ರಾಹ್ಮಣಶಬ್ದವು ಬ್ರಹ್ಮಜ್ಞಾನಯೋಗ್ಯರಾದ ತ್ರೈವರ್ಣಿಕರನ್ನು ಹೇಳುವ ಅಭಿಪ್ರಾಯವುಳ್ಳದ್ದು ಎಂದು ಹೇಳಿದಂತಾಗುವುದು.

ಭಾ.ದೀ. – ಏತದ್ ವಾಕ್ಯಸ್ಯ ಯದಿ ಅಯಮಬ್ರಾಹ್ಮಣಃ ಶೂದ್ರಃ ಸ್ಯಾತ್ ತರ್ಹ್ಯೇತತ್ ಸತ್ಯವಚನಮ್ ಆರ್ಜವವಚನಂ ವಾಙ್ಮನಸಯೋರವೈರೂಪ್ಯೇಣ ವಚನಂ ವಿವಕ್ತುಂ ನಾರ್ಹೇತ್ ಇತಿ ವಿಪಕ್ಷೇ ತರ್ಕೋಕ್ತಿರೂಪತಯಾ, ಯೋಽ-ಬ್ರಾಹ್ಮಣಃ ಸ ಏವಂ ವಕ್ತುಂ ನಾರ್ಹತಿ ಸತ್ಯವಚನಹೀನ ಇತಿ ವ್ಯತಿರೇಕವ್ಯಾಪ್ತ್ಯುಕ್ತಿ-ರೂಪತಯಾ ವಾ ಶೂದ್ರತ್ವಾಭಾವನಿರ್ಣಾಯಕತ್ವಮ್ । ಹರಿದ್ರುಮತೋಽಪತ್ಯಂ ಹಾರಿದ್ರುಮತಃ ಗೌತಮಃ ತಸ್ಯ । ಪ್ರವೃತ್ತೇರಿತಿ ॥ ಅಸ್ಯ 'ನ ತದಭಾವಃ' ಇತ್ಯ-ಧ್ಯಾಹೃತಪದೇನಾನ್ವಯಃ।

ತಥಾ ಚೇತ್ಥಂ ಮಹಾವಾಕ್ಯಯೋಜನಾ – ಸತ್ಯಕಾಮಸ್ಯ ನಾಹಮೇತದ್ ವೇದೇತಿ ಸತ್ಯವಚನೇನ ನೈತದಬ್ರಾಹ್ಮಣೋ ವಿವಕ್ತುಮರ್ಹತೀತಿ ವ್ಯತಿರೇಕ-ವ್ಯಾಪ್ತಿಜ್ಞಾನೇನ ಬಾಧಕತರ್ಕೇಣ ಚ ಶೂದ್ರತ್ವಾಭಾವನಿರ್ಧಾರಣೇ ಸತ್ಯೇವ ತಮನುಮಾಯ್ಯೈವ ತಸ್ಯ ಸತ್ಯಕಾಮಸ್ಯೋಪನಯನಸಂಸ್ಕಾರೇ 'ಹಾರಿದ್ರುಮತಸ್ಯ' ಗೌತಮಸ್ಯ 'ಪ್ರವೃತ್ತೇಃ' ಪ್ರವೃತ್ತತ್ವಾತ್ ನ ಶೂದ್ರಸ್ಯ ತದಭಾವಃ ಸಂಸ್ಕಾರನಿಷೇಧಾ-ಭಾವ ಇತಿ। ಚೋ ಹೇತುಸಮುಚ್ಚಯೇ।

ಅನೇನ – ಸೂತ್ರೇ ತದಿತಿ ವ್ಯಸ್ತಂ ಲುಪ್ತವಿಭಕ್ತಿಕಂ ಪದಂ ಸಮಸ್ತಂ ಚ ತಂತ್ರೇ-ಣೋಪಾತ್ತಮ್ । ಚಶಬ್ದೋಽವಧಾರಣೇ ಭಿನ್ನಕ್ರಮೇಣ, ನ ಕೇವಲಂ ಶೂದ್ರಸ್ಯ ಸಂಸ್ಕಾರಾಭಾವಃ ಶ್ರುತಿಮಾತ್ರಾತ್, ಕಿಂತು ಸಂಸ್ಕಾರನಿಷೇಧಜ್ಞಾಪಕಲಿಂಗಾಚ್ಚ ಇತಿ ಸಮುಚ್ಚಯೇ ಚ । ನೇತ್ಯಸ್ತಿ । ತದಭಾವ ಇತ್ಯನುಷಜ್ಯತೇ । ತಥಾ ಚ 'ತಸ್ಯ' ಸತ್ಯ-ಕಾಮಸ್ಯ 'ತೇನ' ಸತ್ಯವಚನೇನ ಮನೋವಾಕ್ಕಾಯಕರ್ಮಣಾಮ್ ಅವೈಪರೀತ್ಯ-ಮಾರ್ಜವಂ ತದೇವ ಸತ್ಯತ್ವಂ ತಾದೃಶವಚನೇನ ತೇನ ಜ್ಞಾಪಿತೇನ ಋಜುತ್ವೇನೇತಿ ಯಾವತ್ । 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಇತಿ ವ್ಯತಿರೇಕವ್ಯಾಪ್ತಿಂ

ಬಾಧಕತರ್ಕಂ ಚೋಪನ್ಯಸ್ಯ 'ತದಭಾವನಿರ್ಧಾರಣೇ ಚ' ತಸ್ಯ ಶೂದ್ರತ್ವಾಭಾವನಿರ್ಣಯೇ ಸತ್ಯೇವ ತದಭಾವಮನುಮಾಯ್ಯೆವ 'ಸಮಿಧಂ ಸೋಮ್ಯಾಽಹರೋಪ ತ್ವಾನೇಷ್ಯೇ' (ಛಾಂ.೪.೪.೫) ಇತಿ ತಸ್ಮಿನ್ ಉಪನಯನಸಂಸ್ಕಾರೇ ತಸ್ಯ ಗೌತಮಸ್ಯ ಪ್ರವೃತ್ತೇರ್ದರ್ಶನಾಚ್ಚ ನ ಶೂದ್ರಸ್ಯ ತದಭಾವಃ ಸಂಸ್ಕಾರನಿಷೇಧಾಭಾವಃ। ಶೂದ್ರಸ್ಯ ಉಪನಯನನಿಷೇಧಾಭಾವೇ ಕಥಮಯಂ ತದಭಾವನಿರ್ಧಾರಣೇ ಸತ್ಯೇವ ಪ್ರವರ್ತೇತ, ತೇನ ಜ್ಞಾಯತೇ ನಿಷೇಧೋಽಸ್ತೀತಿ ಭಾವಃ – ಇತಿ ಸೂತ್ರಾರ್ಥ ಉಕ್ತೋ ಭವತಿ।

'ನೈತದಬ್ರಾಹ್ಮಣಃ' ಎಂಬ ಶ್ರುತಿವಾಕ್ಯಕ್ಕೆ – 'ಇವನು ಅಬ್ರಾಹ್ಮಣ ಅಂದರೆ ಶೂದ್ರನಾಗಿದ್ದೇ ಆದರೆ ಈ ಸತ್ಯವಚನವು - ಆರ್ಜವವಚನವು ಅಂದರೆ ವಾಕ್ ಮತ್ತು ಮನಸ್ಸುಗಳಲ್ಲಿ ವ್ಯತ್ಯಾಸವಿಲ್ಲದಿರುವ ವಚನವನ್ನು ಹೇಳಲು ಅರ್ಹನಾಗುತ್ತಿರಲಿಲ್ಲ' ಎಂಬುದಾಗಿ ವಿಪಕ್ಷದಲ್ಲಿ ಅಂದರೆ ಸತ್ಯಕಾಮನೆಂಬ ಪಕ್ಷದಲ್ಲಿ ಶೂದ್ರತ್ವಾಭಾವವೆಂಬ ಸಾಧ್ಯವಿಲ್ಲವೆಂಬ ಶಂಕೆಯನ್ನು ಮಾಡಿದಾಗ ತರ್ಕವನ್ನು ಹೇಳುವ ವಾಕ್ಯರೂಪವಾಗಿರುವುದರಿಂದ ಅಥವಾ 'ಯಾರು ಅಬ್ರಾಹ್ಮಣನೋ ಅವನು ಸತ್ಯವಚನಹೀನನಾಗಿದ್ದು, ಹೀಗೆ ಹೇಳಲು ಅರ್ಹನಾಗುವುದಿಲ್ಲ' ಎಂಬ ವ್ಯತಿರೇಕವ್ಯಾಪ್ತಿಯನ್ನು ಹೇಳುವ ವಾಕ್ಯರೂಪವಾಗುವುದರಿಂದ ಸತ್ಯಕಾಮನಿಗೆ ಶೂದ್ರತ್ವಾಭಾವದ ನಿರ್ಣಾಯಕವಾಗುವುದು. ಹಾರಿದ್ರುಮತಸ್ಯ ಎಂದರೆ 'ಹರಿದ್ರುಮತಃ ಅಪತ್ಯಂ ಹಾರಿದ್ರುಮತಃ ತಸ್ಯ' ಎಂದು ವಿಗ್ರಹ. 'ಹರಿದ್ರುಮತನ ಪುತ್ರ ಹಾರಿದ್ರುಮತ ಗೌತಮನೆಂಬ ಹೆಸರಿನವನು, ಅವನ' ಎಂದು ಅರ್ಥ. 'ಪ್ರವೃತ್ತೇಃ' ಎಂಬ ಪದಕ್ಕೆ 'ನ ತದಭಾವಃ' ಎಂಬ ಅಧ್ಯಾಹಾರಗೊಳ್ಳುವ ಪದದೊಂದಿಗೆ ಅನ್ವಯ.

ತಥಾ ಚ – ಇಲ್ಲಿ ಮಹಾವಾಕ್ಯದ ಯೋಜನೆ ಹೀಗಿರುವುದು – ಸತ್ಯಕಾಮನ 'ನಾಹಮೇತದ್ ವೇದ' ಎಂಬ ಸತ್ಯವಚನದಿಂದ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಎಂದು ವ್ಯತಿರೇಕವ್ಯಾಪ್ತಿಜ್ಞಾನದಿಂದ ಮತ್ತು ಬಾಧಕತರ್ಕದಿಂದ ಅವನಿಗೆ ಶೂದ್ರತ್ವವಿಲ್ಲ ಎಂಬ ನಿಶ್ಚಯವಾದನಂತರವೇ ಅಂದರೆ ಶೂದ್ರತ್ವಾಭಾವವನ್ನು ಅನುಮಾನದಿಂದ ತಿಳಿದು, ಆ ಸತ್ಯಕಾಮನಿಗೆ ಉಪನಯನಸಂಸ್ಕಾರವನ್ನು ಮಾಡಲು

'ಹಾರಿದ್ರುಮತಸ್ಯ' ಅಂದರೆ ಗೌತಮನ 'ಪ್ರವೃತ್ತೇಃ' ಪ್ರವೃತ್ತಿ ಇರುವುದರಿಂದ 'ನ ಶೂದ್ರಸ್ಯ ತದಭಾವಃ' ಶೂದ್ರನಿಗೆ ಸಂಸ್ಕಾರನಿಷೇಧವಿಲ್ಲ ಎಂಬುದಿಲ್ಲ – ಎಂದು. ಸೂತ್ರದಲ್ಲಿ ಚಕಾರವು ಹೇತುಸಮುಚ್ಚಯವನ್ನು ಹೇಳುವುದು.

ಇದರಿಂದ – ಸೂತ್ರದಲ್ಲಿ 'ತತ್' ಎಂಬ ಪದವು ಸಮಾಸವನ್ನು ಪಡೆಯದ ವಿಭಕ್ತಿಲೋಪವನ್ನು ಪಡೆದಿರುವ ಪದವು ಹಾಗೆಯೇ ಸಮಾಸವನ್ನು ಪಡೆದ ಪದವೂ ಆಗಿರುವುದೆಂದು ತಂತ್ರದಿಂದ ಗ್ರಹಿಸಲಾಗಿದೆ. ಚಶಬ್ದವು ಅವಧಾರಣಾರ್ಥಕವಾಗಿದೆ. ಬೇರೆಡೆ ಅನ್ವಯವನ್ನು ಹೊಂದುವುದು. ಹಾಗೂ 'ಶೂದ್ರನಿಗೆ ಸಂಸ್ಕಾರವಿಲ್ಲವೆನ್ನುವುದು ಕೇವಲ ಶ್ರುತಿಯಿಂದ ಮಾತ್ರವಲ್ಲ; ಕಿಂತು ಸಂಸ್ಕಾರನಿಷೇಧವನ್ನು ಸೂಚಿಸುವ ಲಿಂಗದಿಂದಲೂ ಕೂಡ' ಎಂದು ಸಮುಚ್ಚಯವನ್ನೂ ಹೇಳುವುದು. 'ನ' ಎಂಬ ಪದವು ಅಧ್ಯಾಹಾರವನ್ನು ಪಡೆಯುವುದು. 'ತದಭಾವಃ' ಎಂಬ ಪದವು ಇಲ್ಲಿ ಅನುವೃತ್ತಿಯನ್ನು ಪಡೆಯುತ್ತದೆ. ತಥಾ ಚ – 'ತಸ್ಯ' ಆ ಸತ್ಯಕಾಮನಿಗೆ 'ತೇನ' - ಸತ್ಯವಚನೇನ - ಆ ಸತ್ಯವಚನದಿಂದ ಅಂದರೆ ಅವನ ಮನಸ್ಸು ವಾಕ್ ಮತ್ತು ಶರೀರದ ಕ್ರಿಯೆಗಳಲ್ಲಿ ವ್ಯತ್ಯಾಸವಿಲ್ಲದಿರುವ ಆರ್ಜವ, ಅದೇ ಸತ್ಯತ್ವ. ಅಂತಹ ವಚನದಿಂದ - ಎಂದು ಅರ್ಥ. ಅಂತಹ ವಚನದಿಂದ ಸೂಚಿತವಾದ ಋಜುತ್ವದಿಂದ ಎಂದು ಭಾವ. 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಎಂಬುದಾಗಿ ವ್ಯತಿರೇಕವ್ಯಾಪ್ತಿಯನ್ನು ಮತ್ತು ಬಾಧಕತರ್ಕವನ್ನು ಹೇಳಿ, 'ತದಭಾವನಿರ್ಧಾರಣೇ ಚ' ಅಂದರೆ 'ತಸ್ಯ' - ಆ ಸತ್ಯಕಾಮನಿಗೆ ಶೂದ್ರತ್ವವಿಲ್ಲವೆಂದು ನಿರ್ಣಯವಾದ ನಂತರವೇ, ಅಂದರೆ ಶೂದ್ರತ್ವಾ-ಭಾವವನ್ನು ಅನುಮಾನದಿಂದ ತಿಳಿದು ''ಸಮಿಧಂ ಸೋಮ್ಯಾಽಹರ ಉಪ ತ್ವಾನೇಷ್ಯೇ' ಎಂದು ತಸ್ಯ ಆ ಸತ್ಯಕಾಮನ, 'ತಸ್ಮಿನ್' ಉಪನಯನದ ಸಂಸ್ಕಾರದ ವಿಷಯದಲ್ಲಿ 'ತಸ್ಯ' ಗೌತಮನ ಪ್ರವೃತ್ತಿಯು ಕಂಡಿರುವುದರಿಂದಲೂ 'ನ ಶೂದ್ರಸ್ಯ ತದಭಾವಃ' ಶೂದ್ರನಿಗೆ ಸಂಸ್ಕಾರನಿಷೇಧವಿಲ್ಲ ಎನ್ನುವುದು ಸರಿಯಲ್ಲ ಎಂದು ಭಾವ. ಶೂದ್ರನಿಗೆ ಉಪನಯನನಿಷೇಧವಿಲ್ಲದಿದ್ದ ಪಕ್ಷದಲ್ಲಿ ಹಾರಿದ್ರುಮತನು ಶೂದ್ರತ್ವಾಭಾವನಿರ್ಧಾರ-ವಾದ ನಂತರದಲ್ಲೇ ಪ್ರವೃತ್ತಿಮಾಡುವುದು ಹೇಗೆ? ಇದರಿಂದ ಶೂದ್ರನಿಗೆ ಉಪನಯನ ನಿಷೇಧವಿರುವುದೆಂದು ಭಾವ ಎಂಬುದಾಗಿ ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ಛಾಂದೋಗ್ಯೇ ಹೀತ್ಥಮಾಖ್ಯಾಯಿಕಾ – ಸತ್ಯಕಾಮೋ ನಾಮ ಋಷಿಃ ಜಬಾಲಾಖ್ಯಾಂ ಮಾತರಮುಪೇತ್ಯ ಉವಾಚ । ಕಿಮಿತಿ? ಅಹಂ ವೇದಾಧ್ಯಯನಾರ್ಥಮ್ ಆಚಾರ್ಯಮುಪಗಚ್ಛೇಯಂ ತತ್ರ ಅಧ್ಯಯನಸ್ಯೋಪನಯನಸಂಸ್ಕಾರಸಾಪೇಕ್ಷತ್ವಾದ್ ಉಪನಯನಂ ವಿನಾ ತೇ ಮಾಂ ನಾಧ್ಯಾಪಯೇಯುಃ, ಉಪನಯನಂ ಚ ಗೋತ್ರಾದ್ಯವಚನೇ ನ ಕುರ್ಯುಃ, ಅತೋಽಹಂ ಕಿಂಗೋತ್ರೋಽಸ್ಮಿ ತದ್ ವದ - ಇತಿ । ಏವಮುಕ್ತಾ ಜಬಾಲಾ ಸ್ವಪುತ್ರಂ ಸತ್ಯಕಾಮಮಬ್ರವೀತ್ - ಹೇ ತಾತ! ತ್ವಂ ಯದ್ಗೋತ್ರೋಽಸಿ ಇತ್ಯೇತನ್ನಾಹಂ ವೇದ - ಇತಿ । ಏವಮುಕ್ತಃ ಸತ್ಯಕಾಮೋ ಗೌತಮಮುಪೇತ್ಯೋವಾಚ । ಕಿಮಿತಿ? ಹೇ ಭಗವನ್! ಬ್ರಹ್ಮಚರ್ಯಾರ್ಥಂ ತ್ವಾಮುಪೇಯಮಿತಿ । ಏವಮುಕ್ತೋ ಗೌತಮಃ ಹೇ ಸೋಮ್ಯ! ತ್ವಂ ಕಿಂಗೋತ್ರೋಽಸಿ? ತದ್ ವದ- ಇತ್ಯುವಾಚ । ಏವಮುಕ್ತಃ ಸತ್ಯಕಾಮಃ ಪುನರ್ಗೌತಮಂ ಪ್ರತ್ಯಾಹ – ನಾಹಮೇತದ್ ವೇದ - ಇತಿ । ಭೋ ಭಗವನ್ ಪೂಜ್ಯ ಗೌತಮ ಯದ್ಗೋತ್ರೋಽಸ್ಮಿ ಇತ್ಯೇತದ್ ವೇದ್ಯಂ, 'ನ ವೇದ' ನ ಜಾನಾಮೀತಿ । ಅಥೈವಂ ಸತ್ಯಕಾಮಸ್ಯ ಸತ್ಯವಚನೇನ ಆರ್ಜವಂ ಜ್ಞಾತ್ವಾ ಪುನಃ ತಂ ಪ್ರತ್ಯುವಾಚ – ನೈತದಿತ್ಯಾದಿ ।

ಅತ್ರ ಬ್ರಾಹ್ಮಣಶಬ್ದೋ ಬ್ರಹ್ಮಣಯೋಗ್ಯತ್ರೈವರ್ಣಿಕಪರಃ । 'ಆರ್ಜವಂ ಬ್ರಾಹ್ಮಣೇ ಸಾಕ್ಷಾತ್ ಶೂದ್ರೋಽನಾರ್ಜವಲಕ್ಷಣಃ' ಇತಿ ಶ್ರುತಿವ್ಯಾಖ್ಯಾನರೂಪಾಯಾಂ ಸ್ಮೃತೌ ಬ್ರಾಹ್ಮಣಪ್ರತಿಯೋಗಿತ್ವೇನ ಶೂದ್ರಸ್ಯೋಪಾದಾನಮ್ । ತಥಾ ಚ 'ಏತತ್' ಆರ್ಜವಸಂಯುಕ್ತವಚನಮ್ 'ಅಬ್ರಾಹ್ಮಣಃ' ತ್ರೈವರ್ಣಿಕೇತರಃ ಶೂದ್ರೋ 'ವಿವಕ್ತುಂ' ಸರ್ವಥಾ ವಕ್ತುಂ 'ನಾರ್ಹತಿ' ನ ಯೋಗ್ಯಃ । ಅತಃ ತ್ವಮ್ ಏವಂ ವದನ್ ಬ್ರಾಹ್ಮಣ ಏವಾಸಿ, ಅತೋ ಹೇ ಸೋಮ್ಯ ಸಮಿಧಮುಪಾಹರ ತ್ವಾಮ್ ಉಪನೇಷ್ಯೇ – ಇತಿ ।

ಛಾಂದೋಗ್ಯೋಪನಿಷತ್ತಿನಲ್ಲಿ ಆಖ್ಯಾಯಿಕೆ ಹೀಗಿದೆ – ಸತ್ಯಕಾಮನೆಂಬ ಋಷಿ ಜಬಾಲಾ ಎಂಬ ತನ್ನ ತಾಯಿಯ ಬಳಿಗೆ ಬಂದು ಹೇಳಿದ. ಏನೆಂದು? ನಾನು

ವೇದಾಧ್ಯಯನಕ್ಕೋಸ್ಕರವಾಗಿ ಆಚಾರ್ಯರ ಬಳಿಗೆ ಹೋಗುವೆನು. ಅಲ್ಲಿ ಅಧ್ಯಯನಕ್ಕೆ ಉಪನಯನಸಂಸ್ಕಾರದ ಆವಶ್ಯಕತೆ ಇರುವುದರಿಂದ ಉಪನಯನವಿಲ್ಲದೇ ಅವರು ನನಗೆ ವೇದಪಾಠವನ್ನು ಮಾಡಲಾರರು! ಉಪನಯನವನ್ನೂ ಕೂಡ ಗೋತ್ರಾದಿಗಳನ್ನು ಹೇಳದಿದ್ದರೆ ಮಾಡಲಾರರು! ಆದ್ದರಿಂದ ನಾನು ಯಾವ ಗೋತ್ರದವನು? ಎಂಬುದನ್ನು ಹೇಳು – ಎಂದು. ಹೀಗೆ ಕೇಳಿದಾಗ ಜಬಾಲೆಯು ತನ್ನ ಪುತ್ರ ಸತ್ಯಕಾಮನನ್ನು ಕುರಿತು ಹೇಳಿದಳು - 'ಮಗು! ನೀನು ಯಾವ ಗೋತ್ರದವನು ಎಂಬುದನ್ನು ನಾನು ತಿಳಿದಿಲ್ಲ'. ಹೀಗೆ ಹೇಳಲ್ಪಟ್ಟ ಸತ್ಯಕಾಮನು ಗೌತಮನ ಬಳಿಗೆ ಬಂದು ಹೇಳಿದ. ಏನೆಂದರೆ 'ಹೇ ಭಗವನ್! ವೇದಾಧ್ಯಯನಕ್ಕೋಸ್ಕರವಾಗಿ ನಾನು ತಮ್ಮ ಬಳಿಗೆ ಬಂದಿದ್ದೇನೆ? ಗೌತಮರು ಕೇಳಿದರು - ಹೇ ಸೋಮ್ಯ ! ನೀನು ಯಾವ ಗೋತ್ರದವನು? - ಹೇಳು. ಹೀಗೆ ಹೇಳಿದಾಗ ಸತ್ಯಕಾಮನು ಗೌತಮರಿಗೆ ಉತ್ತರವಾಗಿ 'ನಾಹಮೇತದ್ ವೇದ ಭೋಃ' ಹೇ ಪೂಜ್ಯರಾದ ಗೌತಮರೇ! ನಾನು ಯಾವ ಗೋತ್ರದವನಾಗಿದ್ದೇನೆ ಎಂಬುದು ತಿಳಿಯಬೇಕಾದದ್ದು, ತಿಳಿದಿಲ್ಲ ಎಂದನು. ಹೀಗೆ ಸತ್ಯಕಾಮನ ಸತ್ಯ-ವಚನದಿಂದ ಅವನ ಆರ್ಜವವನ್ನು ತಿಳಿದು ಪುನಃ ಗೌತಮರು 'ನೈತದಬ್ರಾಹ್ಮಣೋ' ಇತ್ಯಾದಿಯಾಗಿ ಹೇಳಿದರು.

ಇಲ್ಲಿ ಬ್ರಾಹ್ಮಣಶಬ್ದವು ಬ್ರಹ್ಮಜ್ಞಾನಯೋಗ್ಯರಾದ ತ್ರೈವರ್ಣಿಕರನ್ನು ಹೇಳುವ ತಾತ್ಪರ್ಯವುಳ್ಳದ್ದು. 'ಆರ್ಜವಂ ಬ್ರಾಹ್ಮಣೇ ಸಾಕ್ಷಾತ್ ಶೂದ್ರೋಽನಾರ್ಜವಲಕ್ಷಣಃ' - 'ಬ್ರಾಹ್ಮಣನಲ್ಲಿ ಸಹಜವಾಗಿ ಆರ್ಜವವಿರುವುದು. ಶೂದ್ರನ ಲಕ್ಷಣ ಅನಾರ್ಜವ'- ಎಂದು ಶ್ರುತಿವ್ಯಾಖ್ಯಾನರೂಪವಾದ ಸ್ಮೃತಿಯಲ್ಲಿ ಬ್ರಾಹ್ಮಣನಿಗೆ ಪ್ರತಿದ್ವಂದ್ವಿಯಾಗಿ ಶೂದ್ರನನ್ನು ಗುರುತಿಸಲಾಗಿದೆ. ತಥಾ ಚ – ಏತತ್' - ಆರ್ಜವದಿಂದ ಕೂಡಿದ ಈ ಮಾತು 'ಅಬ್ರಾಹ್ಮಣಃ' ತ್ರೈವರ್ಣಿಕಭಿನ್ನನಾದ ಶೂದ್ರನು 'ವಿವಕ್ತುಂ ನಾರ್ಹತಿ' - ಹೇಳಲು ಸರ್ವಥಾ ಯೋಗ್ಯನಲ್ಲ. ಆದ್ದರಿಂದ ಹೀಗೆ ಹೇಳುವ ನೀನು ಹೇ ಸೋಮ್ಯ ! ಸಮಿತ್ತನ್ನು ತೆಗೆದುಕೊಂಡು ಬಾ. ನಿನಗೆ ಉಪನಯನ ಮಾಡುತ್ತೇನೆ – ಎಂದು.

ಭಾ.ದೀ. – ನನು 'ಅವಿಶೇಷಾತ್' ಇತ್ಯುಕ್ತರೀತ್ಯಾ ಶೂದ್ರಸ್ಯಾಪಿ ವಿಶಿಷ್ಟ-ಬುದ್ಧ್ಯಾದಿಮತ್ತ್ವೇನ ಅಧಿಕಾರಃ ಸಿದ್ಧ್ಯೇತ್ । ಅನ್ಯಥಾ ತೇನ ದೇವತಾದ್ಯಧಿಕಾರ-

ಸಿದ್ಧಿರಪಿ ನ ಸ್ಯಾತ್? ಇತಿ ಶಂಕಾಂ ಪರಿಹರತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ – ಶ್ರವಣೇತಿ ॥

**ಸೂತ್ರಮ್ – ॥ ಓಂ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ಓಂ ॥ ೩೮ ॥**

**ಭಾಷ್ಯಮ್ – 'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಮ್। ಅಧ್ಯಯನೇ ಜಿಹ್ವಾಚ್ಛೇದಃ। ಅರ್ಥಾವಧಾರಣೇ ಹೃದಯವಿದಾರಣಮ್' ಇತಿ ಪ್ರತಿಷೇಧಾತ್।**

ಭಾ.ದೀ. – ಸೂತ್ರೇ 'ಅರ್ಥಾವಧಾರಣೇ' ಇತಿ ಶ್ರುತ್ಯನುಸಾರಾತ್ 'ಅರ್ಥ'-ಶಬ್ದಃ ತದವಧಾರಣಪರಃ।

ತಥಾ ಚ – 'ಶ್ರವಣೇ ತ್ರಪುಜತುಭ್ಯಾಮ್' ಇತಿ ಶ್ರುತೌ ಶೂದ್ರಸ್ಯ ವೇದ-ಶ್ರವಣಾಧ್ಯಯನಾರ್ಥಾವಧಾರಣಾನಾಂ ಪ್ರತಿಷಿದ್ಧತ್ವಾದಿತ್ಯರ್ಥಃ । ಅಸ್ಯ 'ನ ತದಭಾವಃ' ಇತ್ಯನುಷಕ್ತಸಾಧ್ಯೇನಾನ್ವಯಃ । 'ಅಧ್ಯಯನನಿಷೇಧಾಭಾವಃ' ಇತಿ ತದರ್ಥಃ । ತಥಾ ಚ ಅನಿಷಿದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಮತ್ತ್ವಸ್ಯೈವ ವೇದಾಧಿ-ಕಾರಪ್ರಯೋಜಕತ್ವೇನ ಅಂಗೀಕೃತತ್ವಾತ್, ತಸ್ಯ ಚ ಶೂದ್ರೇಽಭಾವಾನ್ನ ತಸ್ಯ ದೇವಪ್ರತಿಬಂದ್ಯಾ ವೇದಾಧಿಕಾರೋ ವಾಚ್ಯಃ - ಇತಿ ಭಾವಃ । ''ಶೂದ್ರೇಣ ವೇದಶ್ರವಣೇ ಕೃತೇ ಸತಿ ದ್ರುತಾಭ್ಯಾಂ ತ್ರಪುಜತುಭ್ಯಾಂ ವಂಗಲಾಕ್ಷಾಭ್ಯಾಂ ತತ್ಕರ್ಣವಿವರಪರಿಪೂರಣಂ ರಾಜಭಟೈಃ ಕಾರ್ಯಮ್'' - ಇತಿ ಶ್ರುತ್ಯರ್ಥಃ। ಶಿಷ್ಟಂ ಸುಗಮಃ।

ಭಾ.ದೀ. – ಶ್ರುತೌ ಶೂದ್ರೇಣ ಶ್ರವಣೇ ಕೃತೇ ಇತ್ಯನುಕ್ತೇಃ ವರ್ಣಬಾಹ್ಯ-ವಿಷಯೇಯಂ ಶ್ರುತಿಃ ಕಿಂ ನ ಸ್ಯಾತ್? ಇತ್ಯಾಶಂಕಾನಿವೃತ್ತ್ಯರ್ಥಂ ಸೂತ್ರೇ 'ಸ್ಮೃತೇಶ್ಚ' ಇತ್ಯುಕ್ತಂ, ತಾಂ ಸ್ಮೃತಿಮುದಾಹರತಿ – ನೇತಿ ॥

**ಭಾಷ್ಯಮ್ – 'ನಾಗ್ನಿರ್ನ ಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ । ಕೇವಲೈವ ತು ಶುಶ್ರೂಷಾ ತ್ರಿವರ್ಣಾನಾಂ ವಿಧೀಯತೇ'**

**ಇತಿ ಸ್ಮೃತೇಶ್ಚ ।**

ಭಾ.ದೀ. – ಯಥಾ 'ಶೂದ್ರಸ್ಯ' ಶೂದ್ರೇಣ ನಾಗ್ನಿಃ ಸರ್ವಥಾಽಽಧಾತವ್ಯಃ । ಪಂಚವಿಧೋ ಯಜ್ಞೋಽಪಿ ನಾನುಷ್ಠೇಯಃ । ತಥಾಽಧ್ಯಯನಂ ಕುತಃ ಭವೇತ್? ನ ಕುತೋಽಪಿ । ತರ್ಹಿ ತೇನಾನುಷ್ಠೇಯಂ ಪರಲೋಕಸಾಧನಂ ಕಿಮ್? ಇತಿ ಪೃಚ್ಛತಿ – ತು ಕಿಂತ್ವಿತಿ ॥ ಉತ್ತರಮಾಹ – ಕೇವಲೈವ ಇತಿ ॥ 'ಭೂತರಹಿತಾ' ಇತ್ಯರ್ಥಃ । ತ್ರಯಶ್ಚ ತೇ ವರ್ಣಾಶ್ಚ ತ್ರಿವರ್ಣಾಃ, ತೇಷಾಂ ಬ್ರಹ್ಮಕ್ಷತ್ರಿಯ-ವೈಶ್ಯಾನಾಮ್ ಇತ್ಯರ್ಥಃ । 'ಶುಶ್ರೂಷಾ' ಪರಿಚರ್ಯೈವ ಇತಿ ಸಂಬಂಧಃ । ವಿಧೀಯತೇ । 'ಕಾರ್ಯತ್ವೇನ' ಇತಿ ಶೇಷಃ । 'ಇತಿ ಸ್ಮೃತೇಃ' ಇತ್ಯಸ್ಯ 'ಶೂದ್ರಸ್ಯೈವ ಅಧ್ಯಯನನಿಷೇಧಾವಗಮಾನ್ನ ತದಭಾವಃ' ಇತ್ಯಧ್ಯಾಹೃತೇನ ಅನ್ವಯಃ । ತಥಾ ಚ – ಸ್ಪಷ್ಟಸ್ಮೃತಿಬಲಾತ್ ಶ್ರುತೇರಪಿ ಶೂದ್ರವಿಷಯತ್ವಮೇವ- ಇತಿ ಭಾವಃ ।

ಭಾ.ದೀ. – ನನು ಶೂದ್ರಸ್ಯ ವೇದಾರ್ಥಾವಧಾರಣಾದೇರ್ನಿಷಿದ್ಧತ್ವೇ ಕಥಂ ವಿದುರಾದೀನಾಂ ವೈದಿಕಾರ್ಥಾವಧಾರಣಮಸ್ತಿ । ಏವಂ ಸಂಸ್ಕಾರರಹಿತಾನಾಂ ವೇದಾನಧಿಕಾರೇ ಕಥಂ ಕ್ಷತ್ರಿಯಸಂಸ್ಕಾರರಹಿತಃ ಕರ್ಣಃ ನಿಖಿಲಾಃ ಶ್ರುತೀಃ ಅಧಿಜಗೌ । ನ ಚ ವಾಚ್ಯಮ್ 'ಅಸೌ ಅಪವಾದವಿಷಯಃ' ಇತಿ । ಅವಿಹಿತೋ-ಪನಯನತ್ವೇ ಸತಿ ನಿಷಿದ್ಧಾಧ್ಯಯನಾನಾಂ ಉತ್ತಮಸ್ತ್ರೀತಿರ್ಯಗಾದೀನಾಮೇವ ಅಪವಾದವಿಷಯತ್ವೇನ ನಿಷಿದ್ಧಾಧ್ಯಯನಾನಾಂ ಶೂದ್ರಾಣಾಮ್ ಅತದ್ವಿಷಯ-ತ್ವಾತ್ ಇತ್ಯತ ಆಹ – ವಿದುರಾದೀನಾಮಿತಿ ॥

**ಭಾಷ್ಯಮ್ – ವಿದುರಾದೀನಾಂ ತೂತ್ಪನ್ನಜ್ಞಾನತ್ವಾತ್ ಕಶ್ಚಿದ್ ವಿಶೇಷಃ ॥**

॥ ಇತಿ ಅಪಶೂದ್ರಾಧಿಕರಣಮ್ ॥ ೯ ॥

ಭಾ.ದೀ. – ಆದಿಪದೇನ ಧರ್ಮವ್ಯಾಧಾದಯೋ ಗೃಹ್ಯಂತೇ । 'ತು'ಶಬ್ದೋ ವಿಶೇಷಾರ್ಥಃ । ತಮೇವಾಽಹ – ಉತ್ಪನ್ನಜ್ಞಾನತ್ವಾತ್ ಇತಿ ॥ ಜನ್ಮಾಂತರ ಏವ ವೇದಾತ್ ಪರಂಪರಯಾ ಉತ್ಪನ್ನಮಪರೋಕ್ಷಜ್ಞಾನಂ ಯೇಷಾಂ ತೇ ತಥೋಕ್ತಾಃ, ತೇಷಾಂ ಭಾವಃ ತತ್ತ್ವಮ್ । ತಸ್ಮಾತ್ - 'ಕಶ್ಚಿತ್' ಅಸಾಧಾರಣಃ ಇತರ-ಶೂದ್ರಾದಿಭ್ಯೋ ವ್ಯಾವೃತ್ತೋ ವಿಶೇಷಃ ತೇಷ್ವಸ್ತಿ - ಇತ್ಯರ್ಥಃ । 'ಯತಃ' ಇತಿ ಶೇಷಃ । ಅತೋ ನ 'ನಾಗ್ನಿಃ' ಇತ್ಯಾದಿನಿಷೇಧವಿಷಯತ್ವಂ ತೇಷಾಮ್, ಕಿಂತು ಅಪವಾದವಿಷಯತ್ವಮೇವ ಇತಿ, ನ ತತ್ಪ್ರತಿಬಂದ್ಯಾ ಇತರಶೂದ್ರಾಣಾಂ ವೇದಾಧಿ-ಕಾರಃ ಶಂಕ್ಯಃ - ಇತಿ ಭಾವಃ।

ಸೂತ್ರಾರ್ಥಸ್ತು– ಶೂದ್ರಸ್ಯ ಶ್ರವಣೇ 'ತ್ರಪುಜತುಭ್ಯಾಮ್' ಇತಿ ವೇದಶ್ರವಣಾಧ್ಯಾಯನಾರ್ಥಾವಧಾರಣಪ್ರತಿಷೇಧಕಶ್ರುತೇಃ 'ನಾಗ್ನಿರ್ನ ಯಜ್ಞಃ' ಇತಿ ಸ್ಪಷ್ಟಂ ಶೂದ್ರಸ್ಯೈವ ವೇದಾಧ್ಯಯನನಿಷೇಧಕಸ್ಮೃತೇಶ್ಚ ನ ತಸ್ಯ ತದಭಾವೋ ವೇದಾಧ್ಯಯನನಿಷೇಧಾಭಾವ ಇತಿ ॥

॥ ಇತಿ ಭಾಷ್ಯದೀಪಿಕಾಯಾಮ್ ಅಪಶೂದ್ರಾಧಿಕರಣಮ್ ॥

* * * * *

## ೧೦. ಅಥ ಕಂಪನಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ವಜ್ರನಾಮ ಸಮನ್ವೀಯತೇ । ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ಸೂಚಯತಿ – ಯದಿದಮಿತಿ ॥

ಈ ಅಧಿಕರಣದಲ್ಲಿ 'ವಜ್ರ'ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗುವುದು. ಈ ಅಧಿಕರಣಕ್ಕೆ ಇರುವ ಶ್ರುತಿಮೊದಲಾದವುಗಳ ಸಂಗತಿಯನ್ನು ಮತ್ತು ವಿಷಯ ಮೊದಲಾದವುಗಳನ್ನು ''ಯದಿದಂ'' ಎಂಬ ವಾಕ್ಯದಿಂದ ಸೂಚನೆ ಮಾಡುತ್ತಿದ್ದಾರೆ.

**ಭಾಷ್ಯಮ್– 'ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ'** (ಕಠ.೨.೩.೨) **ಇತ್ಯುದ್ಯತವಜ್ರಜ್ಞಾನಾನ್ಮೋಕ್ಷಃ ಶ್ರೂಯತ ಇತಿ, ಅತೋಽಬ್ರವೀತ್ ।–**

**॥ ಓಂ ಕಂಪನಾತ್ ಓಂ ॥ ೩೯ ॥**

**ಏಜತೀತಿ ಕಂಪನವಚನಾದುದ್ಯತವಜ್ರೋ ಭಗವಾನೇವ ।**

'ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ' ಎಂದು ಎತ್ತಲ್ಪಟ್ಟ ವಜ್ರಾಯುಧದ ಜ್ಞಾನದಿಂದ ಮೋಕ್ಷವು ಶ್ರುತವಾಗಿದೆ - ಎಂಬ ಆಕ್ಷೇಪವನ್ನು ನಿರಾಕರಿಸಲು ಓಂ ಕಂಪನಾತ್ ಓಂ ಎಂದು ಹೇಳಿದ್ದಾರೆ.

'ಯದಿದಂ ಕಿಂಚ' ಎಂಬ ಶ್ರುತಿಯಲ್ಲಿ 'ಏಜತಿ' - ಎಂದು ಕಂಪನವನ್ನು ಅಂದರೆ ಸರ್ವಜಗಚ್ಚೇಷ್ಟಕತ್ವವನ್ನು ಹೇಳಿರುವುದರಿಂದ ಉದ್ಯತವಜ್ರನು ಭಗವಾನ್‌ವಿಷ್ಣುವೇ ಆಗಿದ್ದಾನೆ.

ಭಾ.ದೀ. – ಅತ್ರ 'ತ್ರೈವರ್ಣಿಕಾನಾಂ ವೇದಾದ್ ಬ್ರಹ್ಮಜ್ಞಾನಂ ಮೋಕ್ಷದಮ್' ಇತಿ ಪೂರ್ವೋಕ್ತಮಯುಕ್ತಮ್ । ಯತಃ 'ಯದಿದಂ' ಇತಿ ಶ್ರುತೌ 'ಉದ್ಯತವಜ್ರ-ಜ್ಞಾನಾತ್ ಮೋಕ್ಷಃ ಶ್ರೂಯತೇ' ಇತಿ ವಾಕ್ಯೋಪಸ್ಕಾರೇಣ ಯೋಜನಾ ।

ಅನೇನ ಪೂರ್ವಾಧಿಕರಣೇ ತ್ರೈವರ್ಣಿಕಾನಾಂ ವೇದಾದ್ ಬ್ರಹ್ಮಜ್ಞಾನಂ ಮೋಕ್ಷದಮ್ ಇತಿ ಯದಭಿಪ್ರೇತಂ ತಸ್ಯ ಚ ಆನಂದಮಯಾಧಿಕರಣೇ 'ನೇತರಃ' ಇತ್ಯನೇನೋಕ್ತಸ್ಯ ಮೋಕ್ಷಜನಕಜ್ಞಾನವಿಷಯತ್ವಸ್ಯ ವಿಷ್ಣೋರನ್ಯತ್ರ ಆಕ್ಷೇಪಾತ್ ತೇನ ಅಸ್ಯಾಽಕ್ಷೇಪಿಕೀ ಸಂಗತಿರುಕ್ತಾ ಭವತಿ । ವಜ್ರಶಬ್ದೋ ವಿಷಯ ಇತಿ ಸೂಚಿತಮ್ । ವಜ್ರಶ್ರುತೇಃ ಕುಲಿಶೇ ರೂಢಿಬಲಾತ್ ತಥಾ 'ಉದ್ಯತಾಯುಧ-ದೋರ್ದಂಡಾಃ' ಇತ್ಯಾದಿಸ್ಮೃತೌ, 'ತೇನೇಂದ್ರೋ ವಜ್ರಮುದಯಚ್ಛತ್' ಇತಿ ಶ್ರುತೌ ಚ, ಆಯುಧೇ ಪ್ರಸಿದ್ಧೋದ್ಯತತ್ವಲಿಂಗಬಲಾಚ್ಚ 'ಇಂದ್ರಾಯುಧಮೇವೇದಂ ವಜ್ರಮ್' ಇತಿ ಸಯುಕ್ತಿಕಪೂರ್ವಪಕ್ಷಃ ಸೂಚಿತಃ ।

ಶ್ರುತೌ 'ಪ್ರಾಣಃ' ಇತಿ ಸಪ್ತಮ್ಯಂತಂ ಪದಮ್ । 'ಸ್ಥಿತಮ್' ಇತಿ ಶೇಷಃ । 'ಪ್ರಾಣಃ' ಇತ್ಯಸ್ಯ ನಿಮಿತ್ತಸಪ್ತಮೀಯಂ ವಾ ವಿಭಕ್ತಿಪರಿಣಾಮಂ ವಾ ಆಶ್ರಿತ್ಯ ಆವೃತ್ತ್ಯಾ ನಿಸ್ಸೃತಮ್ ಇತ್ಯನೇನಾಪಿ ಸಂಬಂಧಃ । 'ಯತ್' ಇತ್ಯಸ್ಯಾಽವೃತ್ತಿರ-ಧ್ಯಾಹಾರೋ ವಾ । ಯದಿತಿ ಶ್ರವಣಾತ್ ತದಿತಿ ಲಭ್ಯತೇ ।

ಇಲ್ಲಿ 'ತ್ರೈವರ್ಣಿಕರಿಗೆ ವೇದದಿಂದ ಬರುವ ಬ್ರಹ್ಮಜ್ಞಾನವು ಮೋಕ್ಷಕಾರಣ' ಎಂದು ಹಿಂದೆ ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ 'ಯದಿದಂ' ಎಂಬ ಶ್ರುತಿಯಲ್ಲಿ 'ಉದ್ಯತ' ಎತ್ತಲ್ಪಟ್ಟ ವಜ್ರಾಯುಧದ ಜ್ಞಾನದಿಂದ ಮೋಕ್ಷವು ಲಭಿಸುವುದೆಂದು ಶ್ರುತವಾಗಿದೆ - ಎಂದು ವಾಕ್ಯವನ್ನು ಅಧ್ಯಾಹಾರ ಮಾಡಿಕೊಂಡು ಯೋಜನೆ ಮಾಡ-ಬೇಕು.

ಇದರಿಂದ – ಪೂರ್ವಾಧಿಕರಣದಲ್ಲಿ ತ್ರೈವರ್ಣಿಕರಿಗೆ ವೇದದಿಂದ ಬರುವ ಬ್ರಹ್ಮಜ್ಞಾನವು ಮೋಕ್ಷಪ್ರದವೆಂದು ಯಾವುದು ಅಭಿಪ್ರೇತವಾಗಿದೆಯೋ ಅಂತಹ

ಮೋಕ್ಷಜನಕವಾದ ಜ್ಞಾನವಿಷಯತ್ವವು ವಿಷ್ಣುವಿಗೆ ಇರುವುದೆಂದು ಆನಂದಮಯಾಧಿಕರಣದಲ್ಲಿ "ನೇತರೋಽನುಪಪತ್ತೇಃ" ಎಂಬ ಸೂತ್ರದಿಂದ ಹೇಳಲ್ಪಟ್ಟಿತೋ ಅದು ವಿಷ್ಣುಭಿನ್ನರಲ್ಲಿ ಇರುವುದೆಂದು ಆಕ್ಷೇಪಿಸುವುದರಿಂದ ಆ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಇರುವುದೆಂದು ಹೇಳಿದಂತಾಗುವುದು. ಈ ಅಧಿಕರಣದಲ್ಲಿ ವಜ್ರಶಬ್ದವು ವಿಷಯವೆಂದು ಸೂಚಿತವಾಗಿದೆ. ವಜ್ರಶಬ್ದವು ಇಂದ್ರನ ವಜ್ರಾಯುಧದಲ್ಲಿ ರೂಢಿ ಇರುವುದರಿಂದ  ಹಾಗೆಯೇ 'ಉದ್ಯತಾಯುಧದೋರ್ದಂಡಾಃ'- ಮೇಲೆತ್ತಿದ ಆಯುಧಯುಕ್ತವಾದ ಬಾಹುಗಳುಳ್ಳ- ಇತ್ಯಾದಿ ಸ್ಮೃತಿವಾಕ್ಯದಲ್ಲಿ, ಹಾಗೆಯೇ 'ತೇನೇಂದ್ರೋ ವಜ್ರಮುದಯಚ್ಛತ್' - ಇಂದ್ರನು ವಜ್ರಾಯುಧವನ್ನು ಮೇಲೆತ್ತಿದನು ಎಂಬ ಶ್ರುತಿಯಲ್ಲೂ ಆಯುಧದಲ್ಲಿ ಪ್ರಸಿದ್ಧವಾಗಿರುವ ಉದ್ಯತತ್ವ ಎಂಬ ಲಿಂಗವು ಇಲ್ಲಿ ಶ್ರುತವಾಗಿರುವ ಕಾರಣದಿಂದಲೂ ಇಲ್ಲಿ ಪ್ರಸ್ತುತವಾಗಿರುವ ವಜ್ರವು ಇಂದ್ರಾಯುಧವೇ ಆಗಿದೆ ಎಂದು ಯುಕ್ತಿಸಹಿತವಾದ ಪೂರ್ವಪಕ್ಷವು ಸೂಚಿತವಾಗುವುದು.

'ಯದಿದಂ' ಎಂಬ ಶ್ರುತಿಯಲ್ಲಿ ಪ್ರಾಣ ಎಂಬ ಶಬ್ದವು ಪ್ರಾಣೇ ಎಂಬುದಾಗಿ ಸಪ್ತಮ್ಯಂತಪದವಾಗಿದೆ. 'ಸ್ಥಿತಮ್' ಎಂಬ ಪದವು ಶೇಷವಾಗಿದೆ. ಪ್ರಾಣೇ ಎಂಬಲ್ಲಿರುವ ಸಪ್ತಮೀ ವಿಭಕ್ತಿಯು ನಿಮಿತ್ತವೆಂಬ ಅರ್ಥವುಳ್ಳದ್ದು ಎಂದಾಗಲೀ ಅಥವಾ ವಿಭಕ್ತಿಯ ವ್ಯತ್ಯಾಸವನ್ನಾಗಲೀ ಆಶ್ರಯಿಸಿ ಆವೃತ್ತಿಯನ್ನು ಮಾಡಿಕೊಂಡು 'ನಿಃಸೃತಮ್' ಎಂಬ ಪದದೊಂದಿಗೆ ಸಂಬಂಧವನ್ನು ಹೊಂದುವುದು. ಶ್ರುತಿಯಲ್ಲಿರುವ 'ಯತ್' ಎಂಬ ಪದವು ಆವೃತ್ತಿಯನ್ನು ಹೊಂದುವುದು ಅಥವಾ ಇನ್ನೊಂದು ಯತ್‌ಪದವು ಅಧ್ಯಾಹಾರವನ್ನು ಹೊಂದುವುದು. ಯತ್ ಪದದ ಶ್ರವಣವಿರುವುದರಿಂದ ತತ್ ಎಂಬ ಪದವು ಲಭಿಸುವುದು.

ಭಾ.ದೀ.– ತಥಾಚ ಅಯಂ ಸಿದ್ಧಾಂತೇ ಶ್ರುತ್ಯರ್ಥಃ – 'ಯತ್ಕಿಂಚ' ಯತ್ಕಿಂಚಿತ್ ದೃಷ್ಟಂ ಶ್ರುತಂ ಯತ್ ಸರ್ವಂ ಜಗತ್ 'ಪ್ರಾಣೇ' - ಪ್ರಾಣನಾತ್ ನಿಮಿತ್ತಾತ್ ಪ್ರಾಣಶಬ್ದವಾಚ್ಯೇ ಹರೌ ಸ್ಥಿತಂ, ಪ್ರಾಣಾತ್ 'ನಿಸ್ಸೃತಮ್' - ತತೋ ಜಾತಂ ಚ, ತದಿದಂ ಸರ್ವಂ ಜಗತ್ 'ಯಸ್ಮಾದ್ ಏಜತಿ' - ಯತ್ ಪ್ರೇರಣಯಾ ಚೇಷ್ಟತೇ

ತನ್ಮಹನೀಯತ್ವಾತ್ ಪೂಜ್ಯತ್ವಾತ್ 'ಮಹತ್' ಭೀಷಯತಿ ಇತಿ ಭಯಂ ದುಷ್ಟಾನಾಂ ಭಯಂಕರಮ್, 'ಉದ್ಯತಂ' ಸರ್ವಪ್ರಯತ್ನವತ್ – 'ಉದ್ಯತತ್ವಂ ಚ ಪ್ರಯತ್ನ-ವತ್ತ್ವಮ್' ಉತ್ಪೂರ್ವಸ್ಯ ಯಮೇಸ್ತದರ್ಥತ್ವಾತ್'- ಇತಿ ಚಂದ್ರಿಕೋಕ್ತೇಃ। 'ಯತೀ ಪ್ರಯತ್ನೇ' ಇತ್ಯಸ್ಯೇದಂ ರೂಪಮ್, ಉಚ್ಛಬ್ದ ಉತ್ಕರ್ಷವಾಚೀ - ಇತ್ಯಪಿ ಕೇಚಿತ್। 'ವಜ್ರಂ' ದೋಷವರ್ಜನಾದ್ ಅಪ್ರಿಯವರ್ಜನಾದ್ ವಾ ತಚ್ಛಬ್ದವಾಚ್ಯಮ್ । ಏತದ್ ಯೇ 'ವಿದುಃ' - ಅಪರೋಕ್ಷತೋ ಜಾನಂತಿ ತೇ 'ಅಮೃತಾಃ' ಮುಕ್ತಾಃ ಭವಂತಿ – ಇತಿ।

ಯದ್ವಾ – ಪ್ರಾಣಃ ಇತಿ ಪ್ರಥಮಾಂತಂ ಪದಮ್, ತಥಾ ಚ – ಪ್ರಾಣೋ ಮುಖ್ಯಪ್ರಾಣಃ । ಇದಂ ದೃಷ್ಟಂ ಕಿಂಚಾನ್ಯತ್ ಶ್ರುತಂ ಸರ್ವಂ ಜಗಚ್ಚ ಯಸ್ಮಾತ್ ನಿಸ್ಸೃತಂ ಯಸ್ಮಾದ್ ಏಜತಿ ಚ, ತದೇತದ್ ವಜ್ರಂ ಯೇ ವಿದುಃ - ಇತ್ಯರ್ಥಃ।

ಅಥವಾ 'ಯತ್' ಇತ್ಯಸ್ಯಾವೃತ್ತಿಃ ತತ್ರ ಪ್ರಥಮಸ್ಯ ಜಗದ್‌ವಿಶೇಷಣತ್ವಂ, ದ್ವಿತೀಯಸ್ಯ ಮುಖ್ಯಪ್ರಾಣಪರತ್ವಮ್, ತೃತೀಯಸ್ಯ ವಜ್ರಪರತ್ವಮ್ । ಸ ಇತಿ ಲಭ್ಯತೇ । ತಸ್ಯ ಪ್ರಥಮಾಂತಪ್ರಾಣಪದೇನಾನ್ವಯಃ । ತಥಾ ಚ – ಯತ್ಕಿಂಚಿತ್ ಜಗತ್ಸರ್ವಂ ಯದ್ಯಸ್ಮಾತ್ ನಿಸ್ಸೃತಂ ಸ ಮುಖ್ಯಪ್ರಾಣಃ । ಯಸ್ಮಾದ್ ಏಜತಿ ತದ್ ವಜ್ರಂ ಯೇ ವಿದುಃ - ಇತ್ಯರ್ಥಃ।

ಅತ್ರ ಪ್ರಥಮವ್ಯಾಖ್ಯಾನೇ ಮುಖ್ಯಪ್ರಾಣಸ್ಯ ಜಗದಂತರ್ಗತತ್ವೇನ ಭಗವತ್ ಪ್ರೇರ್ಯತ್ವಂ, ದ್ವಿತೀಯೇ ಜಗತ್ಸಾಮ್ಯೇನ, ತೃತೀಯೇ ತು ಮುಖ್ಯಪ್ರಾಣಸ್ಯೈವ ಸಾಕ್ಷಾದ್ ಭಗವತ್ಪ್ರೇರ್ಯತ್ವಂ ಜಗತಸ್ತು ಮುಖ್ಯಪ್ರಾಣಪ್ರೇರ್ಯತ್ವಮ್ ಇತಿ ಭೇದಃ।

ಪೂರ್ವಪಕ್ಷೇ ತು ಇಂದ್ರಾಯುಧಮೇವ ವಜ್ರಪದೇನ ಉಕ್ತಮ್ । ಉದ್ಯತತ್ವ-ಮುದ್ಯಮನಕರ್ಮತ್ವಂ ತಸ್ಯೈವ ಲಿಂಗಮ್ - ಇತಿ ಮನ್ಯತೇ।

ತಥಾ ಚ - ಸಿದ್ಧಾಂತದಲ್ಲಿ ಶ್ರುತ್ಯರ್ಥವು ಹೀಗಿದೆ – 'ಯತ್ಕಿಂಚ' ಯಾವುದೆಲ್ಲವೂ ದೃಷ್ಟವಾಗಿದೆಯೋ ಶ್ರುತವಾಗಿದೆಯೋ, ಯತ್ ಸರ್ವಂ ಜಗತ್ - ಯಾವ ಎಲ್ಲ ಜಗತ್ತು, 'ಪ್ರಾಣೇ' - 'ಪ್ರಾಣನ' ಅಂದರೆ ಚೇಷ್ಟಕತ್ವವೆಂಬ ನಿಮಿತ್ತದಿಂದ ಪ್ರಾಣಶಬ್ದ-ವಾಚ್ಯನಾದ ಹರಿಯಲ್ಲಿ - ಆಶ್ರಿತವಾಗಿರುವುದೋ 'ಪ್ರಾಣಾನ್ನಿಸೃತಂ' - ಆ ಪ್ರಾಣ-ನಾಮಕ ಹರಿಯಿಂದ ಉತ್ಪನ್ನವೂ ಆಗಿರುವುದೋ, 'ತದಿದಂ ಸರ್ವಂ ಜಗತ್' - ಆ ಎಲ್ಲ ಸಮಸ್ತ ಜಗತ್ತೂ, 'ಯಸ್ಮಾದೇಜತಿ' - ಯಾರ ಪ್ರೇರಣೆಯಿಂದ ಕ್ರಿಯೆಗಳನ್ನು ಮಾಡುವುದೋ, ತತ್ - ಅದು 'ಮಹತ್' ಮಹನೀಯವಾದ್ದರಿಂದ ಅಂದರೆ ಪೂಜ್ಯವಾದದ್ದರಿಂದ ಮಹತ್ತೆಂದೆನಿಸುವುದು. 'ಭಯಂ' ಭೀಷಯತೀತಿ ಭಯಂ ಎಂಬ ವಿವರಣೆಗನುಸಾರವಾಗಿ ದುಷ್ಟರಿಗೆ ಭಯಂಕರವಾಗಿರುವುದೋ, 'ಉದ್ಯತಂ' - ಸರ್ವ-ಪ್ರಯತ್ನವನ್ನೂ ಉಳ್ಳದ್ದೋ – 'ಉದ್ಯತತ್ವಂ ಚ ಪ್ರಯತ್ನವತ್ವಮ್' ಉದ್ಯತತ್ವವಿ-ರುವುದು ಎಂದರೆ ಪ್ರಯತ್ನವುಳ್ಳದ್ದು ಎಂದರ್ಥ. ಏಕೆಂದರೆ, ಉತ್ ಎಂಬ ಉಪಸರ್ಗ-ಪೂರ್ವಕವಾದ 'ಯಮ'ಧಾತುವು ಆ ಅರ್ಥವನ್ನು ಹೊಂದಿದೆ ಎಂದು ಚಂದ್ರಿಕೆಯಲ್ಲಿ ಹೇಳಿದೆ. ಕೆಲವರು 'ಯತೀ ಪ್ರಯತ್ನೇ' ಎಂಬ ಧಾತುವಿನ ರೂಪವಿದು, ಉಚ್ಛಬ್ದವು ಉತ್ಕರ್ಷವನ್ನು ಹೇಳುವುದು ಎಂದೂ ವ್ಯಾಖ್ಯಾನ ಮಾಡುವರು. - 'ವಜ್ರಂ' ಎಂದರೆ ದೋಷವನ್ನು ವರ್ಜಿಸುವುದರಿಂದ ಅಥವಾ ಅಪ್ರಿಯವನ್ನು ವರ್ಜಿಸುವುದರಿಂದ ತಚ್ಛಬ್ದವಾಚ್ಯವಾದದ್ದು. 'ಏತದ್ ಯೇ ವಿದುಃ' - ಇಂತಹ ಬ್ರಹ್ಮನನ್ನು ಯಾರು ಅಪರೋಕ್ಷದಿಂದ ತಿಳಿಯುವರೋ 'ತೇ ಅಮೃತಾ ಭವಂತಿ' - ಅವರು ಮುಕ್ತರಾಗು-ವರು – ಎಂದು.

ಅಥವಾ – 'ಪ್ರಾಣ'ಶಬ್ದವು ಇಲ್ಲಿ ಪ್ರಥಮಾವಿಭಕ್ತ್ಯಂತವಾದ ಪದವಾಗಿದೆ. ತಥಾ ಚ – ಪ್ರಾಣಃ ಮುಖ್ಯಪ್ರಾಣನು ಮತ್ತು 'ಇದಂ' -ದೃಷ್ಟವಾಗಿರುವ, 'ಕಿಂಚ' - ಇತರ ಶ್ರುತವಾದ 'ಸರ್ವಂ ಜಗತ್' ಸಮಸ್ತ ಜಗತ್ತು 'ಉತ್' ಯಾರಿಂದ 'ಏಜತಿ' ಪ್ರೇರಿತ-ವಾಗುವುದೋ 'ತದೇತದ್ ವಜ್ರಂ' ಆ ವಜ್ರವನ್ನು ಯಾರು ಅಪರೋಕ್ಷೀಕರಿಸುವರೋ ಎಂದು ಅರ್ಥ.

ಅಥವಾ– ಯತ್ ಎಂಬ ಪದಕ್ಕೆ ಇಲ್ಲಿ ಆವೃತ್ತಿಯಿರುವುದು. ಅವುಗಳಲ್ಲಿ ಮೊದಲನೆಯ ಯತ್ ಪದವು ಜಗತ್ ಶಬ್ದಕ್ಕೆ ವಿಶೇಷಣವಾಗಿದೆ. ಎರಡನೆಯ ಯತ್

ಶಬ್ದವು ಮುಖ್ಯಪ್ರಾಣಪರವಾಗಿದೆ. ಮೂರನೆಯ ಯತ್ ಶಬ್ದವು ವಜ್ರಪರವಾಗಿದೆ. ಸಃ ಎಂಬ ಪದವು ಯಚ್ಛಬ್ದದಿಂದಾಗಿ ಲಭಿಸುವುದು. ಆ ಸಃ ಎಂಬ ಪದಕ್ಕೆ ಪ್ರಥಮಾ-ವಿಭಕ್ತ್ಯಂತವಾದ ಪ್ರಾಣಪದದೊಂದಿಗೆ ಅನ್ವಯ. ತಥಾಚ – ಯತ್ಕಿಂಚಿತ್ ಜಗತ್ಸರ್ವಂ - ಯಾವುದೆಲ್ಲ ಜಗತ್ತಿರುವುದೋ ಅದೆಲ್ಲವೂ ಯತ್ ಎಂದರೆ ಯಾರಿಂದ 'ನಿಸ್ಸೃತಂ' - ಉತ್ಪನ್ನವಾಗುವುದೋ 'ಸಃ ಪ್ರಾಣಃ' - ಅವನು ಮುಖ್ಯಪ್ರಾಣನು. ಆ ಮುಖ್ಯಪ್ರಾಣನು 'ಯತ್' ಯಾರಿಂದ 'ಏಜತಿ' - ಕ್ರಿಯಾಶೀಲನಾಗಿರುವನೋ 'ತದ್ ವಜ್ರಂ ಯೇ ವಿದುಃ' - ಆ ವಜ್ರವನ್ನು ಯಾರು ತಿಳಿಯುವರೋ ಎಂದು ಅರ್ಥ.

ಇಲ್ಲಿ ಮೊದಲನೆಯ ವ್ಯಾಖ್ಯಾನದಲ್ಲಿ ಮುಖ್ಯಪ್ರಾಣನು ಜಗತ್ತಿನಲ್ಲಿ ಅಂತರ್ಗತ-ನಾಗಿ ಭಗವಂತನಿಂದ ಪ್ರೇರಿತನಾಗಿರುವನೆಂದು, ಎರಡನೆಯ ವ್ಯಾಖ್ಯಾನದಲ್ಲಿ ಜಗತ್ತಿನಂತೆ ಪ್ರೇರಿತನಾಗಿರುವನೆಂದು, ಮೂರನೆಯ ವ್ಯಾಖ್ಯಾನದಲ್ಲಾದರೋ ಮುಖ್ಯಪ್ರಾಣನೇ ಸಾಕ್ಷಾತ್ತಾಗಿ ಭಗವಂತನಿಂದ ಪ್ರೇರಿಸಲ್ಪಡುವನೆಂದು ಜಗತ್ತಾದರೋ ಮುಖ್ಯಪ್ರಾಣನಿಂದ ಪ್ರೇರಿತವಾಗಿರುವುದು ಎಂದು ಮೂರು ವ್ಯಾಖ್ಯಾನಗಳಲ್ಲಿ ಭೇದ-ವಿದೆ.

ಪೂರ್ವಪಕ್ಷಿಯಾದರೋ ಇಂದ್ರಾಯುಧವೇ ಇಲ್ಲಿ ವಜ್ರಪದದಿಂದ ಉಕ್ತವಾಗಿರು-ವುದು. 'ಉದ್ಯತತ್ವ' ಅಂದರೆ ಉದ್ಯಮನ- ಎತ್ತುವಿಕೆ ಎಂಬ ಕ್ರಿಯೆಗೆ ವಿಷಯವಾಗಿ-ರುವುದು - ಆ ವಜ್ರಾಯುಧಕ್ಕೆ ಲಿಂಗವಾಗಿದೆ ಎಂದು ತಿಳಿಯವುದು - ಎಂದು ತಿಳಿ-ಯುತ್ತಾನೆ.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

'ಕಂಪನವಚನಾತ್' ಇತ್ಯೇತದ್ ರೂಪಾತ್ ಸರ್ವಜಗಚ್ಚೇಷ್ಟಕತ್ವವಚನಾತ್ ಇತ್ಯರ್ಥಃ। ಯದ್ವಾ– ಕಂಪನಸ್ಯ ಮುಖ್ಯಪ್ರಾಣಸ್ಯ 'ಏಜತಿ' ಇತಿ ಕಂಪನವಚನಾ-ಚ್ಚೇಷ್ಟಕತ್ವೋಕ್ತೇರಿತ್ಯರ್ಥಃ। 'ವಚನಾದ್' ಇತ್ಯನೇನ ಕಂಪನಪದಂ ತದ್ವಚನಪರಮ್ - ಇತ್ಯುಕ್ತಂ ಭವತಿ । ನ ಚ ಶ್ರುತೌ ವಾಕ್ಯಭೇದಮಂಗೀಕಾರೇ ಕಂಪಕತ್ವಂ ವಜ್ರೇ ನೋಚ್ಯತ ಇತಿ ವಾಚ್ಯಮ್ । ಕಂಪಕತ್ವನಿಮಿತ್ತಭಯಂಕರತ್ವಸ್ಯ ವಜ್ರೇಽಭಿಧಾನಾದ್

ವಾಕ್ಯಭೇದಾಯೋಗಾತ್ । 'ಉದ್ಯತವಜ್ರಃ' ಇತಿ ಸೂತ್ರೇ ಶೇಷೋಕ್ತಿಃ । ಸಮನ್ವಯಸೂತ್ರಾದನುವೃತ್ತಸ್ಯ 'ತತ್' ಇತ್ಯಸ್ಯ ಉದ್ದೇಶ್ಯವಜ್ರಪದಾನುಸಾರಾತ್ ಪ್ರಾಣಪದಾನುಸಾರಾದ್ ವಾ ಭಗವಾನ್ ಇತಿ ವ್ಯಾಖ್ಯಾನಂ ಕೃತಮ್ । ಸಾವ-ಧಾರಣಂ ಚೈತತ್ । ತೇನ ತುಶಬ್ದಾರ್ಥೋ ದರ್ಶಿತಃ।

ಯದ್ಯಪಿ 'ವಜ್ರೋ ಭಗವಾನೇವ' ಇತ್ಯೇತಾವದೇವ ವಕ್ತವ್ಯಮ್, ನ ತು 'ಉದ್ಯತೇ'ತಿ ವಜ್ರವಿಶೇಷಣಮಪಿ । ತಥಾऽಪಿ ಪೂರ್ವಪಕ್ಷ್ಯುಕ್ತೋದ್ಯತತ್ವ-ಲಿಂಗಸ್ಯ ಪ್ರಯತ್ನವತ್ತ್ವರೂಪೋದ್ಯತತ್ವಾರ್ಥತಯಾ ಸಾವಕಾಶತ್ವಜ್ಞಾಪನಾಯ 'ಉದ್ಯತ' ಇತ್ಯುಕ್ತಮ್।

ಸಿದ್ಧಾಂತವನ್ನು ಹೇಳುವ ಸೂತ್ರವನ್ನು ಅವತಾರಿಕೆ ಕೊಟ್ಟು "ಅತಃ" ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಕಂಪನವಚನಾತ್' ಅಂದರೆ ಈ ರೀತಿಯ ಸರ್ವಜಗಚ್ಚೇಷ್ಟಕತ್ವವನ್ನು ಹೇಳುವ ವಚನದಿಂದ ಎಂದು ಅರ್ಥ. ಅಥವಾ 'ಕಂಪನಸ್ಯ' - ಅಂದರೆ ಮುಖ್ಯಪ್ರಾಣನಿಗೆ 'ಏಜತಿ' ಎಂದು 'ಕಂಪನವಚನಾತ್' ಚೇಷ್ಟಕತ್ವವನ್ನು ಹೇಳಿರುವುದರಿಂದ ಎಂದು ಅರ್ಥ. 'ವಚನಾತ್' ಎಂಬ ಪದದಿಂದ ಸೂತ್ರದಲ್ಲಿ ಕಂಪನಪದವು ಕಂಪನವನ್ನು ಹೇಳುವ ವಚನವನ್ನು ಹೇಳುವ ತಾತ್ಪರ್ಯವುಳ್ಳದ್ದು ಎಂದು ಹೇಳಿದಂತಾಗುವುದು.

ಹೀಗೆ ಶ್ರುತಿಯಲ್ಲಿ ವಾಕ್ಯಭೇದವನ್ನು ಒಪ್ಪಿದರೆ ಮುಖ್ಯಪ್ರಾಣನು ಕಂಪಕನೆಂದು ಹೇಳಿದಂತಾಗುವುದೇ ಹೊರತು ವಜ್ರದಲ್ಲಿ ಕಂಪಕತ್ವವು ಹೇಳಿದಂತಾಗುವುದಿಲ್ಲ - ಎಂದು ಶಂಕಿಸಬಾರದು. ಏಕೆಂದರೆ, ಕಂಪಕನಾದ ಪ್ರಯುಕ್ತ ಭಯಂಕರತ್ವವು ವಜ್ರ-ದಲ್ಲಿರುವುದೆಂದು ಶ್ರುತಿಯಲ್ಲಿ ಹೇಳುವ ಪ್ರಯುಕ್ತ ಇಲ್ಲಿ ವಾಕ್ಯಭೇದಕ್ಕೆ ಅವಕಾಶವಿಲ್ಲ. ಭಾಷ್ಯದಲ್ಲಿ 'ಉದ್ಯತವಜ್ರಃ' ಎಂಬ ಪದವು ಸೂತ್ರದಲ್ಲಿ ಶೇಷವಾಗಿರುವ ಪದವನ್ನು ಹೇಳುವುದು. ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ ತತ್‌ಪದಕ್ಕೆ ಇಲ್ಲಿ ಉದ್ದೇಶ್ಯವಾಗಿರುವ ವಜ್ರಪದವನ್ನು ಅನುಸರಿಸಿ ಅಥವಾ ಪ್ರಾಣಪದವನ್ನು ಅನುಸರಿಸಿ 'ಭಗವಾನ್' ಎಂದು ವ್ಯಾಖ್ಯಾನ ಮಾಡಲಾಗಿದೆ. ಈ ಪದವು ಏವಕಾರ-

ಸಹಿತವೂ ಆಗಿದೆ. ಈ ಏವಕಾರದಿಂದ 'ತತ್ತು' ಎಂಬಲ್ಲಿರುವ 'ತು'ಶಬ್ದಾರ್ಥವು ಸೂಚಿತವಾಗುವುದು.

ಯದ್ಯಪಿ – ಭಾಷ್ಯದಲ್ಲಿ 'ವಜ್ರೋ ಭಗವಾನೇವ' ಎಂದಿಷ್ಟೇ ಹೇಳಬೇಕಾಗಿತ್ತು; 'ಉದ್ಯತ' ಎಂಬ ವಜ್ರವಿಶೇಷಣವನ್ನು ಹೇಳಬೇಕಾಗಿಲ್ಲ. ಆದರೂ ಪೂರ್ವಪಕ್ಷಿಯು ಹೇಳಿರುವ ಉದ್ಯತತ್ವಲಿಂಗವು 'ಪ್ರಯತ್ನವನ್ನು ಹೊಂದಿರುವಿಕೆ' ಎಂಬ ಅರ್ಥಪರ-ವಾಗಿರುವುದರಿಂದ ಸಾವಕಾಶವಾದದ್ದು ಎಂದು ತಿಳಿಸಲು 'ಉದ್ಯತ' ಎಂದು ವಜ್ರಕ್ಕೆ ವಿಶೇಷಣವನ್ನು ಹೇಳಲಾಗಿದೆ.

**ಭಾ.ದೀ. – ನನು ಶ್ರುತಿಲಿಂಗಾಭ್ಯಾಂ ಪೂರ್ವಪಕ್ಷಿತೇ ಕಥಂ ಲಿಂಗಮಾತ್ರೇಣ ನಿರ್ಣಯಃ? ಇತ್ಯತೋ ಲಿಂಗಸ್ಯ ನಿರವಕಾಶತ್ವಾದೇವ ಇತ್ಯಾಶಯೇನ ಶ್ರುತೇಃ ಪ್ರಥಮದ್ವಿತೀಯವ್ಯಾಖ್ಯಾನಾನುಸಾರೇಣ ವಜ್ರೇ ಶ್ರುತಸ್ಯ ಪ್ರಾಣತದಿತರ-ಸಾಧಾರಣ್ಯೇನ ಸಾಮಾನ್ಯತೋ ಜಗಚ್ಚೇಷ್ಟಕತ್ವಲಿಂಗಸ್ಯ ವಿಷ್ಣೋರನ್ಯತ್ರ ನಿರವ-ಕಾಶತ್ವಂ ಶ್ರುತ್ಯಾ ದರ್ಶಯತಿ – ಕೋ ಹೀತಿ ॥**

ಪೂರ್ವಪಕ್ಷಿಯು ಶ್ರುತಿ ಮತ್ತು ಲಿಂಗಗಳ ಸಹಾಯದಿಂದ ಪೂರ್ವಪಕ್ಷ ಮಾಡಿ-ದಾಗ ಕೇವಲ ಲಿಂಗದಿಂದ ನಿರ್ಣಯ ಮಾಡುವುದು ಹೇಗೆ ಯುಕ್ತ? ಎಂಬ ಶಂಕೆಗೆ 'ಲಿಂಗವು ನಿರವಕಾಶವಾದುದ್ದರಿಂದ' ಕೇವಲ ಲಿಂಗದಿಂದ ಇಲ್ಲಿ ಸಿದ್ಧಾಂತ ಮಾಡ-ಲಾಗಿದೆ - ಎಂಬ ಆಶಯದಿಂದ ಮೊದಲನೆಯ ಮತ್ತು ಎರಡನೆಯ ವ್ಯಾಖ್ಯಾನಾನು-ಸಾರವಾಗಿ ವಜ್ರಶಬ್ದವಾಚ್ಯನಲ್ಲಿ ಶ್ರುತವಾಗಿರುವ ಪ್ರಾಣ ಮತ್ತು ಇತರವೂ ಸೇರಿದಂತೆ ಸಮಸ್ತ ಜಗತ್ತಚ್ಚೇಷ್ಟಕತ್ವಲಿಂಗವು ವಿಷ್ಣುವನ್ನು ಬಿಟ್ಟು ಅನ್ಯತ್ರ ನಿರವಕಾಶವೆಂದು ಭಾಷ್ಯದಲ್ಲಿ "ಕೋ ಹಿ" ಎಂಬ ಶ್ರುತಿಯಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ ಯದೇಷ ಆಕಾಶ ಆನಂದೋ ನ ಸ್ಯಾತ್'** (ತೈ.೨.೭) **ಇತಿ ಹಿ ಶ್ರುತಿಃ । 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ' ಇತಿ ಚ ।**

**'ನಭಸ್ವತೋಽಪಿ ಸರ್ವಾಃ ಸ್ಯುಶ್ಚೇಷ್ಟಾ ಭಗವತೋ ಹರೇಃ ।
ಕಿಮುತಾನ್ಯಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ' ಇತಿ ಸ್ಕಾಂದೇ ॥**

"ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ ಯದೇಷ ಆಕಾಶ ಆನಂದೋ ನ ಸ್ಯಾತ್" ಎಂದು ಶ್ರುತಿಯು ಪ್ರಸಿದ್ಧವಾಗಿದೆ. 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ' ಎಂಬುದಾಗಿಯೂ ಸರ್ವಜಗಚ್ಚೇಷ್ಟಕತ್ವವು ವಿಷ್ಣುವಿನಲ್ಲಿ ಶ್ರುತವಾಗಿದೆ.

'ನಭಸ್ವತೋಽಪಿ ಸರ್ವಾಃ ಸ್ಯುಶ್ಚೇಷ್ಟಾ ಭಗವತೋ ಹರೇಃ ।
ಕಿಮುತಾನ್ಯಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ'

ವಾಯುವಿಗೂ ಎಲ್ಲ ಚೇಷ್ಟೆಗಳು ಭಗವಾನ್ ಶ್ರೀಹರಿಯಿಂದಲೇ ಉಂಟಾಗುವುದು. ಹೀಗಿರುವಾಗ ಯಾವ ಜಗತ್ತಿನ ಎಲ್ಲಾ ಕ್ರಿಯೆಗಳೂ ವಾಯುವಿನಿಂದ ಆಗುವುದೋ ಅಂತಹ ಇತರ ಎಲ್ಲಾ ಜಗತ್ತಿನ ಚೇಷ್ಟೆಯು ಮುಖ್ಯವಾಗಿ ಭಗವಂತನಿಗಿದೆ ಎಂಬುದಾಗಿ ಹೇಳುವುದೇನು? - ಎಂದೂ ಸ್ಕಾಂದಪುರಾಣದಲ್ಲಿದೆ.

ಭಾ.ದೀ. – ಹಿಶಬ್ದೋ ಹೇತೌ ಯತ ಇತ್ಯರ್ಥೇ ಪ್ರಸಿದ್ಧೌ ವಾ । 'ಅಸ್ತಿ' ಇತಿ ಶೇಷಃ । ಅತೋ ಲಿಂಗಸ್ಯ ನಾನ್ಯತ್ರ ಸಾವಕಾಶತ್ವಂ ಶಂಕ್ಯಮ್ ಇತಿ ವಾಕ್ಯಶೇಷಃ ।

'ಕೋ ಹಿ' ಎಂಬ ಶ್ರುತಿಯಲ್ಲಿ ಹಿಶಬ್ದವು ಹೇತುವಾಗಿರುವುದು, ಅಥವಾ ಯತಃ ಎಂಬ ಅರ್ಥವುಳ್ಳದ್ದು. ಅಥವಾ ಪ್ರಸಿದ್ಧಿಯನ್ನು ಸೂಚಿಸುವುದು. 'ಅಸ್ತಿ' ಎಂಬ ಪದವು ಇಲ್ಲಿ ಶೇಷವಾಗಿದೆ. 'ಆದ್ದರಿಂದ ಲಿಂಗವು ವಿಷ್ಣುಭಿನ್ನನಲ್ಲಿ ಸಾವಕಾಶವೆಂದು ಶಂಕಿಸಲಾಗದು' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಭಾ.ದೀ. – ಯದಾ ಸಾಮಾನ್ಯತಃ ಸರ್ವಜಗಚ್ಚೇಷ್ಟಕತ್ವಮೇವ ವಿಷ್ಣ್ವೇಕನಿಷ್ಠಂ ತದಾ ಕಿಮು ವಕ್ತವ್ಯಂ ಶ್ರುತೇಃ ತೃತೀಯವ್ಯಾಖ್ಯಾನರೀತ್ಯಾ ವಜ್ರೇ ಶ್ರುತಸ್ಯ

ಸರ್ವಜಗತ್ಪ್ರವರ್ತಕಪ್ರಾಣಚೇಷ್ಟಕತ್ವಲಿಂಗಸ್ಯ ವಿಷ್ಣ್ವೇಕನಿಷ್ಠತ್ವಂ ಜಗಚ್ಚೇಷ್ಟಕತ್ವಸ್ಯ ಸರ್ವಥಾಽನ್ಯತ್ರ ಅಯೋಗಾದಿತಿ ಭಾವೇನ ತತ್ರ ಶ್ರುತಿಂ ದರ್ಶಯತಿ – ಪ್ರಾಣಸ್ಯೇತಿ ॥ ಚೋ ಯಸ್ಮಾದಿತ್ಯರ್ಥೇ । ಪೂರ್ವಶ್ರುತಿಸಮುಚ್ಚಯೇ ವಾ । 'ಶ್ರುತಿಃ' ಇತ್ಯನುಷಜ್ಯತೇ । 'ಉಕ್ತಲಿಂಗಸ್ಯ ಅನ್ಯತ್ರ ನಿರವಕಾಶತ್ವಂ ಜ್ಞಾಪಯತಿ' ಇತಿ ವಾಕ್ಯ-ಶೇಷಃ ।

ಯಾವಾಗ ಸಾಮಾನ್ಯವಾಗಿ ಸಮಸ್ತ ಜಗತ್ತಿಗೆ ಚೇಷ್ಟಾಪ್ರದತ್ವವೆಂಬ ಧರ್ಮವು ವಿಷ್ಣುವಿನಲ್ಲಿ ಮಾತ್ರ ಇರುವುದೋ ಆಗ ಮೂರನೆಯ ವ್ಯಾಖ್ಯಾನದ ರೀತಿಯಿಂದ ವಜ್ರದಲ್ಲಿ ಶ್ರುತವಾಗಿರುವ ಸರ್ವಜಗತ್ಪ್ರವರ್ತಕನಾದ ಪ್ರಾಣನಿಗೂ ಚೇಷ್ಟಾಪ್ರದತ್ವವೆಂಬ ಲಿಂಗವು ವಿಷ್ಣುಮಾತ್ರನಲ್ಲಿ ಇರುವುದೆಂದು ಹೇಳುವುದೇನು? ಇಂಥಾ ಜಗಚ್ಚೇಷ್ಟಕತ್ವವು ಸರ್ವಥಾ ಅನ್ಯರಲ್ಲಿ ಇರುವುದು ಸಾಧ್ಯವಿಲ್ಲವಷ್ಟೇ? ಎಂಬ ಆಶಯದಿಂದ ಆ ವಿಷಯದಲ್ಲಿ ''ಪ್ರಾಣಸ್ಯ'' ಎಂಬ ಶ್ರುತಿಯನ್ನು ಪ್ರಮಾಣವಾಗಿ ತೋರಿಸುತ್ತಿದ್ದಾರೆ.

'ಇತಿ ಚ' ಎಂಬಲ್ಲಿರುವ ಚಕಾರವು ಯಸ್ಮಾತ್ ಎಂಬ ಅರ್ಥದಲ್ಲಿರುವುದು. ಅಥವಾ ಈ ಹಿಂದಿನ ಶ್ರುತಿಯ ಸಮುಚ್ಚಯವನ್ನು ಹೇಳುವುದು. 'ಶ್ರುತಿಃ' ಎಂಬ ಪದವು ಹಿಂದಿನ ವಾಕ್ಯದಿಂದ ಅನುವೃತ್ತಿಯನ್ನು ಪಡೆಯುವುದು. 'ಉಕ್ತಲಿಂಗಸ್ಯ ಅನ್ಯತ್ರ ನಿರವಕಾಶತ್ವಂ ಜ್ಞಾಪಯತಿ' - 'ಹೀಗೆ ಹೇಳಿರುವ ಸರ್ವಜಗಚ್ಚೇಷ್ಟಕತ್ವ ಎಂಬ ಲಿಂಗವು ವಿಷ್ಣುಭಿನ್ನರಲ್ಲಿ ಅವಕಾಶವನ್ನು ಪಡೆದಿಲ್ಲವೆಂದು ಸೂಚಿಸುವುದು' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಭಾ.ದೀ.– ಯದ್ವಾ, ಯದ್ ಜಗತ್ಪ್ರವರ್ತಕಪ್ರಾಣಚೇಷ್ಟಕತ್ವಾದಿಲಿಂಗಂ 'ಕಂಪನಾತ್' ಇತ್ಯನೇನಾಭಿಸಂಹಿತಂ, ತಸ್ಯ ವಿಷ್ಣುನಿಷ್ಠತ್ವಾಸಿದ್ಧಿಪರಿಹಾರಾಯ ತತ್ರ ಶ್ರುತಿಂ ಪ್ರಮಾಣಯತಿ – ಪ್ರಾಣಸ್ಯೇತಿ ॥ 'ಪ್ರಾಣಸ್ಯ' - ಸರ್ವಚೇಷ್ಟಕಮುಖ್ಯ-ಪ್ರಾಣಸ್ಯ 'ಪ್ರಾಣಂ' - ಪ್ರಕೃಷ್ಟಚೇಷ್ಟಕತ್ವರೂಪಪ್ರಾಣತ್ವಪದಮ್, 'ಉತ' ತಥಾ, 'ಚಕ್ಷುಷಶ್ಚಕ್ಷುಃ' ದರ್ಶನಕರಣತ್ವರೂಪಚಕ್ಷುಷ್ಟ್ವಪ್ರದಂ ಪರಮಾತ್ಮಾನಂ,ಯೇ ವಿದುಃ, ತೇ ಬ್ರಹ್ಮ 'ನಿಚಿಕ್ಯುಃ' - ಪ್ರಾಪ್ನುಯುರಿತಿ ವಾಜಸನೇಯಶ್ರುತ್ಯರ್ಥಃ ।

ಅಥವಾ ಯಾವ ಜಗತ್ಪ್ರವರ್ತಕನಾದ ಮುಖ್ಯಪ್ರಾಣನ ಚೇಷ್ಟಕತ್ವ ಮೊದಲಾದ ಲಿಂಗವು ಕಂಪನಾತ್ ಎಂಬ ಸೂತ್ರದಿಂದ ಹೇಳಲು ಉದ್ದೇಶಿಸಲ್ಪಟ್ಟಿದೆಯೋ ಆ ಲಿಂಗವು ವಿಷ್ಣುನಿಷ್ಠವೆಂದು ಸಿದ್ಧವಾಗಿಲ್ಲ ಎಂಬ ಶಂಕೆಯನ್ನು ಪರಿಹರಿಸಲು ಆ ವಿಷಯದಲ್ಲಿ ''ಪ್ರಾಣಸ್ಯ'' ಎಂಬ ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸುತ್ತಿದ್ದಾರೆ. ಪ್ರಾಣಸ್ಯ - ಸರ್ವಚೇಷ್ಟಕನಾದ ಮುಖ್ಯಪ್ರಾಣನಿಗೆ 'ಪ್ರಾಣಂ' - ಪ್ರಕೃಷ್ಟಚೇಷ್ಟಕತ್ವವೆಂಬ ಪ್ರಾಣತ್ವ-ವನ್ನು ಕೊಡುವ 'ಉತ' - ಹಾಗೆಯೇ 'ಚಕ್ಷುಷಶ್ಚಕ್ಷುಃ' ದರ್ಶನಕರಣತ್ವರೂಪವಾದ ಚಕ್ಷುಷ್ಟ್ವಪ್ರದನಾದ ಪರಮಾತ್ಮನನ್ನು 'ಯೇ ವಿದುಃ' - ಯಾರು ತಿಳಿದಿರುವರೋ ಅವರು ಬ್ರಹ್ಮನನ್ನು 'ನಿಚಿಕ್ಯುಃ' ಹೊಂದುವರು ಎಂದು ಬೃಹದಾರಣ್ಯಕಶ್ರುತಿಯ ಅರ್ಥ.

ಭಾ.ದೀ. – ಶ್ರುತೇಃ ಪ್ರಥಮವ್ಯಾಖ್ಯಾಯಾಮಪಿ ಕೈಮುತ್ಯವ್ಯಕ್ತಿಕರಣಾಯ ಶ್ರುತ್ಯುಕ್ತಪ್ರಾಣಚೇಷ್ಟಕತ್ವಂ ಹೇತೂಕೃತ್ಯ ಪ್ರವೃತ್ತಾಂ ಸ್ಮೃತಿಮಾಹ – ನಭಸ್ವತ ಇತಿ ॥

'ಅಪಿ' ಜಗತ್ಪ್ರೇರಕಸ್ಯಾಪಿ 'ನಭಸ್ವತೋ' ವಾಯೋರ್ಯದಾ ಸರ್ವಾಃ ಚೇಷ್ಟಾಃ 'ಭಗವತೋ' ಜ್ಞಾನಾದಿಗುಣಪೂರ್ಣಾದ್ ಹರೇರ್ಭವಂತಿ । ತದಾ 'ಕಿಮುತಾ-ನ್ಯಸ್ಯ' ಪ್ರೇರ್ಯಸ್ಯ ವಾಯುಭಿನ್ನಸ್ಯ ಜಗತಶ್ಚೇಷ್ಟಾ ಹರೇರ್ಭವಂತಿ - ಇತಿ ವಕ್ತವ್ಯಮ್ । ಕುತ ಏತತ್? ಯತೋ ಯಸ್ಯ ಜಗತಃ ಚೇಷ್ಟಾ ನಭಸ್ವತೋ ನ ಭವಂತ್ಯತ ಇತಿ ವಚನಾರ್ಥಃ। 'ಸ್ಕಾಂದೇ' ಇತ್ಯನಂತರಮ್ 'ಉಕ್ತಮ್' ಇತಿಶೇಷಃ। ಅತೋಽಪಿ ಲಿಂಗಸ್ಯ ನಾನ್ಯತ್ರಾವಕಾಶ ಇತಿ ಭಾವಃ।

'ಯದಿದಂ ಕಿಂಚ' ಎಂಬ ಶ್ರುತಿಯ ಮೊದಲನೆಯ ವ್ಯಾಖ್ಯಾನದಲ್ಲೂ ಕೈಮುತ್ಯ-ನ್ಯಾಯವನ್ನು ಸ್ಪಷ್ಟಪಡಿಸಲು ಆ ಶ್ರುತಿಯಲ್ಲಿ ಹೇಳಿರುವ ಪ್ರಾಣಚೇಷ್ಟಕತ್ವವನ್ನೇ ಹೇತು-ವನ್ನಾಗಿ ಸ್ವೀಕರಿಸಿ ಪ್ರವೃತ್ತವಾಗಿರುವ ''ನಭಸ್ವತಃ'' ಎಂಬ ಸ್ಮೃತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ.

'ಅಪಿ' ಸರ್ವಜಗತ್ತಿಗೆ ಪ್ರೇರಕನಾಗಿದ್ದರೂ 'ನಭಸ್ವತಃ' ವಾಯುವಿನ 'ಸರ್ವಾಃ ಚೇಷ್ಟಾಃ' ಅವನ ಎಲ್ಲ ಕ್ರಿಯೆಗಳೂ 'ಭಗವತಃ' ಜ್ಞಾನಾದಿ ಗುಣಪೂರ್ಣನಾದ ಶ್ರೀಹರಿಯಿಂದ ಉಂಟಾಗುವುದೋ ಆಗ 'ಕಿಮುತ ಅನ್ಯಸ್ಯ' - ಹಾಗಿರುವಾಗ ಇತರ

ವಾಯುಭಿನ್ನರಾದ ಪ್ರೇರಿಸಲ್ಪಡುವವರ ಕ್ರಿಯೆಗಳು ಶ್ರೀಹರಿಯಿಂದ ಆಗುತ್ತವೆಂದು ಹೇಳುವುದೇನು? ಇದರಲ್ಲಿ ಆಧಾರವೇನು? ಎಂದರೆ ಯಾವ ಕಾರಣದಿಂದ ಯಾವ ಜಗತ್ತಿನ ಕ್ರಿಯೆಗಳು ವಾಯುವಿನಿಂದ ಉಂಟಾಗುವುದಿಲ್ಲವೋ ಆದ್ದರಿಂದ ಎಂದು ಈ ವಾಕ್ಯದ ಅರ್ಥ. 'ಸ್ಕಾಂದೇ' ಎಂಬ ಪದದ ನಂತರ 'ಉಕ್ತಮ್' ಎಂಬ ಪದವು ಶೇಷವಾಗಿದೆ. ಆದ್ದರಿಂದಲೂ ಸರ್ವಜಗಚ್ಚೇಷ್ಟಕತ್ವ ಎಂಬ ಲಿಂಗವು ವಿಷ್ಣುಭಿನ್ನರಲ್ಲಿ ಅವಕಾಶವನ್ನು ಪಡೆದಿಲ್ಲವೆಂದು ಭಾವ.

ಭಾ.ದೀ. – ನನೂದ್ಯತತ್ವಲಿಂಗಸ್ಯ ವಿಷ್ಣೌ ಸಾವಕಾಶತ್ವೇಽಪಿ ವಜ್ರಶ್ರುತೇ-ರ್ನಿರವಕಾಶತ್ವಾತ್ ಸ್ವಭಾವತಃ ಪ್ರಬಲತ್ವಾಚ್ಚ ಕಥಂ ನಿರವಕಾಶೇನಾಪಿ ಸರ್ವ-ಚೇಷ್ಟಕತ್ವಲಿಂಗೇನ ವಜ್ರೋ ವಿಷ್ಣುರೇವೇತಿ ನಿರ್ಣಯಃ? ಇತ್ಯತಃ ಶ್ರುತೇಃ ನಿರವಕಾ-ಶತ್ವಸ್ಯೈವಾಸಿದ್ಧೇಃ ಇತ್ಯಾಶಯೇನ ಪೂರ್ವಪಕ್ಷ್ಯಭಿಮತವಜ್ರಶ್ರುತೇರಪಿ ವಿಷ್ಣ್ವ-ವಕಾಶಂ ಸ್ಮೃತ್ಯಾ ದರ್ಶಯತಿ – ಚಕ್ರಮಿತಿ ॥

ಉದ್ಯತತ್ವಲಿಂಗವು ವಿಷ್ಣುವಿನಲ್ಲಿ ಅವಕಾಶವನ್ನು ಪಡೆದಿರುವುದಾದರೂ ವಜ್ರ-ಶ್ರುತಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲದಿರುವುದರಿಂದ ಮತ್ತು ಅದು ಸ್ವಭಾವತಃ ಪ್ರಬಲ-ವಾಗಿರುವುದರಿಂದ ಸರ್ವಚೇಷ್ಟಕತ್ವವೆಂಬ ಲಿಂಗವು ನಿರವಕಾಶವಾಗಿದ್ದರೂ ಅದರಿಂದ ವಜ್ರಶಬ್ದವಾಚ್ಯನು ವಿಷ್ಣುವೇ ಎಂದು ನಿರ್ಣಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ವಜ್ರಶ್ರುತಿಯು ವಿಷ್ಣುವಿನಲ್ಲಿ ಅವಕಾಶವನ್ನು ಪಡೆದಿಲ್ಲವೆನ್ನುವುದೇ ಸಿದ್ಧ-ವಾಗಿಲ್ಲ ಎಂಬ ಆಶಯದಿಂದ ಪೂರ್ವಪಕ್ಷಿಗೆ ಅಭಿಮತವಾದ ವಜ್ರಶ್ರುತಿಗೆ ವಿಷ್ಣುವಿನಲ್ಲಿ ಅವಕಾಶವಿರುವುದೆಂದು ''ಚಕ್ರಂ'' ಎಂಬ ಸ್ಮೃತಿಯಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಚಕ್ರಂ ಚಂಕ್ರಮಣಾದೇಷ ವರ್ಜನಾದ್ವಜ್ರಮುಚ್ಯತೇ ।**
**ಖಂಡನಾದ್ ಖಡ್ಗ ಏವೈಷ ಹೇತಿನಾಮಾ ಸ್ವಯಂ ಹರಿಃ'**
**– ಇತಿ ಬ್ರಹ್ಮವೈವರ್ತೇ ॥ ೩೯ ॥**

॥ ಇತಿ ಕಂಪನಾಧಿಕರಣಮ್ ॥ ೧೦ ॥

ಭಗವಂತನು ಜೀವನನ್ನು ಸಂಸಾರದಲ್ಲಿ ಸುತ್ತಿಸುವುದರಿಂದ ಚಕ್ರ ಎಂದೆನಿಸುವನು. ದೈತ್ಯರು ಇವನನ್ನು ದೂರದಿಂದಲೇ ವರ್ಜಿಸುವುದರಿಂದ ವಜ್ರನೆಂದೆನಿಸುವನು. ದುಷ್ಟರ ಅಂಗಗಳನ್ನು ಛೇದಿಸುವುದರಿಂದ ಖಡ್ಗನೆಂದೆನಿಸುವನು. ಹೀಗೆ ಶ್ರೀಹರಿಯು ಎಲ್ಲ ಆಯುಧವಾಚಕಶಬ್ದಗಳಿಗೆ ಸಾಕ್ಷಾತ್ತಾಗಿ ಮುಖ್ಯವಾಚ್ಯನಾಗಿರುವನು – ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

ಭಾ.ದೀ. – 'ಏಷಃ' ಭಗವಾನ್ 'ಚಂಕ್ರಮಣಾತ್' ಸಂಸಾರೇ ಜೀವಪರಿಭ್ರಾಮಕತ್ವಾತ್ ಚಕ್ರಮ್ । ಯಥೋಕ್ತಂ ತತ್ತ್ವಪ್ರದೀಪೇ – ಚಂಕ್ರಾಮಯತೀತಿ ಚಕ್ರಮ್ - ಇತಿ । ಏವಂ 'ವರ್ಜನಾತ್' ದೈತ್ಯೈರ್ದೂರಾದೇವ ವರ್ಜ್ಯತೇ, ನ ಸನ್ಮುಖೀಕ್ರಿಯತ ಇತಿ, ಸತ್ತರ್ಕದೀಪಾವಲೀರೀತ್ಯಾ ದುಷ್ಟೈರ್ವರ್ಜ್ಯತ್ವಾತ್, ಸರ್ವದೋಷವರ್ಜನಾದ್ ವಾ ವಜ್ರಮ್ ಇತ್ಯುಚ್ಯತೇ । 'ಖಂಡನಾತ್' ದುಷ್ಟಾಂಗಚ್ಛೇದನಾದ್ ದಮನಾಚ್ಚ ಖಡ್ಗ ಏಷ ಇತ್ಯರ್ಥಃ । 'ಏವ'ಶಬ್ದೇನ ತದಭೇದೋ ವ್ಯಾವರ್ತ್ಯತೇ । ತತಃ ಕಿಮ್, ಏಷ ಇತಿ ಚ ಕಃ ಇತ್ಯತ ಆಹ – ಹೇತೀತಿ ॥ ಏವಂ ಹರಿಃ 'ಸ್ವಯಂ' ಸಾಕ್ಷಾದ್ ಅನ್ಯಸಂಬಂಧಮಂತರೇಣ 'ಹೇತಿನಾಮಾ' ಹೇತೀನಾಂ ಚಕ್ರಾದಿಸರ್ವಾಯುಧಾನಾಂ ಯಾನಿ ನಾಮಾನಿ ಮುಖ್ಯವಾಚ್ಯತಯಾ ತದ್ವಾನ್ - ಇತ್ಯರ್ಥಃ।

ಹೇತೀತಿ ಸಾಮಾನ್ಯಗ್ರಹಣೇನ ಭಾಷ್ಯೇ ವಜ್ರಪದಮನ್ಯಸ್ಯಾಪಿ ಉಪಲಕ್ಷಕಮ್ ಇತ್ಯುಕ್ತಂ ಭವತಿ । 'ಬ್ರಹ್ಮವೈವರ್ತೇ' ಇತ್ಯನಂತರಮ್ 'ಉಕ್ತಮ್' ಇತಿ ಶೇಷಃ । ಅತೋ ನ ಶ್ರುತಿವಿರೋಧೋಽಪೀತಿ ಭಾವಃ। 'ಉಚ್ಯತೇ ಹೇತಿನಾಮಾ' ಇತ್ಯನೇನ ವಜ್ರಾದಿಶಬ್ದಾನಾಂ ವಿಷ್ಣೌ ವಿದ್ವದ್‌ರೂಢಿರಪ್ಯಸ್ತೀತಿ ಸೂಚಿತಮ್ । ತೇನ ವರ್ಜನಾದ್ ಇತ್ಯುಕ್ತಯೋಗಸ್ಯ ರೂಢೇರ್ದೌರ್ಬಲ್ಯಾದ್ ಅಯೋಗ ಇತಿ ನಿರಸ್ತಮ್ ।

ನ ಚೈವಂ ಕಾಠಕಭಾಷ್ಯೇ – 'ವಜ್ರವದ್ ಭಯದಂ ಚ' ಇತಿ ವಜ್ರಶಬ್ದಸ್ಯ ವಿಷ್ಣೌ ಗೌಣತ್ವೋಕ್ತಿವಿರೋಧ ಇತಿ ವಾಚ್ಯಮ್ । ತತ್ರ ತದ್ವಾಕ್ಯಸ್ಯ ಯಥಾಕಥಂಚಿದ್ ಬ್ರಹ್ಮಪರತ್ವಸಿದ್ಧಿರಿತ್ಯತ್ರೈವ ತಾತ್ಪರ್ಯಾತ್ । ಬ್ರಹ್ಮಪರತ್ವಸ್ಯ ಗೌಣ್ಯಾಽಪಿ ಸಿದ್ಧೇಃ ಗೌಣತ್ವೇ ತಾತ್ಪರ್ಯಾಭಾವಾತ್ । ಅತ್ರ ತು ಸಮನ್ವಯಸೂತ್ರಪ್ರತಿಜ್ಞಾತಮುಖ್ಯಾ-ರ್ಥತ್ವಾಯ ತಾತ್ಪರ್ಯತೋ ಯೋಗರೂಢ್ಯೋರೇವ ಉಕ್ತತ್ವಾತ್ । ಸೂತ್ರಾರ್ಥಸ್ತು ಸ್ಪಷ್ಟಃ ॥

॥ ಇತಿ ಭಾಷ್ಯದೀಪಿಕಾಯಾಂ ಕಂಪನಾಧಿಕರಣಮ್ ॥

ಏಷಃ ಈ ಭಗವಂತನು 'ಚಂಕ್ರಮಣಾತ್' ಸಂಸಾರದಲ್ಲಿ ಜೀವನನ್ನು ಸುತ್ತಿಸು-ವುದರಿಂದ ಚಕ್ರ ಎಂದೆನಿಸುತ್ತಾನೆ. ತತ್ವಪ್ರದೀಪದಲ್ಲಿ ಇದೇ ಅಭಿಪ್ರಾಯದಲ್ಲಿ 'ಚಂಕ್ರಾ-ಮಯತಿ ಚಕ್ರಮ್' ಎಂದು ಹೇಳಿದೆ. ಇದೇ ರೀತಿಯಾಗಿ 'ವರ್ಜನಾತ್' - ದೈತ್ಯರಿಂದ ದೂರದಲ್ಲೇ ವರ್ಜಿಸಲ್ಪಡುತ್ತಾನೆ, ಅವನ ಸಮ್ಮುಖದಲ್ಲಿ ಇರುವಂತೆ ಮಾಡುವುದಿಲ್ಲ ಎಂಬುದಾಗಿ; ಅಥವಾ ಸತ್ತರ್ಕದೀಪಾವಳಿಯಲ್ಲಿ ಹೇಳಿದಂತೆ ದುಷ್ಟರಿಂದ ವರ್ಜ-ನಾದ್ದರಿಂದ ಅಥವಾ ಸರ್ವದೋಷಗಳನ್ನು ವರ್ಜಿಸುವ ಕಾರಣದಿಂದ ಹರಿಯು ''ವಜ್ರ''ನೆಂದೆನಿಸುವನು. 'ಖಂಡನಾತ್' - ದುಷ್ಟರ ಅಂಗವನ್ನು ಭೇದಿಸುವುದರಿಂದ ಮತ್ತು ಅವರ ದಮನ ಮಾಡುವುದರಿಂದ ಹರಿಯು ಖಡ್ಗನೆನಿಸುವನು ಎಂದು ಅರ್ಥ. ಏವಶಬ್ದದಿಂದ ಆ ಆಯುಧಗಳ ಅಭೇದವನ್ನು ವ್ಯಾವೃತ್ತಿಗೊಳಿಸಲಾಗಿದೆ. ಮುಂದೇನು 'ಏಷಃ'ಎಂದರೆ ಯಾರು? ಎಂಬ ಶಂಕೆಗೆ ಉತ್ತರವಾಗಿ ''ಹೇತಿ'' ಎಂದು ಹೇಳಿರುವರು. ಹೀಗೆ ಹರಿಯು 'ಸ್ವಯಂ' ಸಾಕ್ಷಾತ್ತಾಗಿ ಅಂದರೆ ಇನ್ನೊಂದರ ಸಂಬಂಧವಿಲ್ಲದೇ 'ಹೇತಿನಾಮಾ' - ಹೇತೀನಾಂ ಅಂದರೆ ಚಕ್ರ ಮೊದಲಾದ ಎಲ್ಲಾ ಆಯುಧಗಳಿಗೆ ನಾಮಗಳಿವೆಯೋ ಅವುಗಳಿಗೆ ಮುಖ್ಯವಾಚ್ಯನಾಗಿರುವುದರಿಂದ ಆ ಹೆಸರುಳ್ಳವನು ಎಂದೆನಿಸುವನು ಎಂದು ಅರ್ಥ.

''ಹೇತಿ'' ಎಂಬುದಾಗಿ ಆಯುಧವಾಚಕವಾದ ಸಾಮಾನ್ಯಶಬ್ದವನ್ನು ಗ್ರಹಿಸಿರು-ವುದರಿಂದ ಭಾಷ್ಯದಲ್ಲಿರುವ ವಜ್ರಪದವು ಇತರ ಆಯುಧಗಳಿಗೂ ಉಪಲಕ್ಷಕವೆಂದು ಹೇಳಿದಂತಾಗುವುದು. 'ಬ್ರಹ್ಮವೈವರ್ತೇ' ಎಂಬ ಪದದ ನಂತರ 'ಉಕ್ತಮ್' ಎಂಬ

ಪದವು ಶೇಷವಾಗಿದೆ. ಆದ್ದರಿಂದ ಶ್ರುತಿವಿರೋಧವೂ ಇಲ್ಲ ಎಂದು ಭಾವ. 'ಉಚ್ಯತೇ ಹೇತಿನಾಮಾ' ಆಯುಧವಾಚಕಶಬ್ದಗಳಿಂದ ಉಕ್ತನಾಗಿದ್ದಾನೆ- ಎಂಬುದರಿಂದ ವಜ್ರಾದಿ-ಶಬ್ದಗಳಿಗೆ ವಿಷ್ಣುವಿನಲ್ಲಿ ವಿದ್ವದ್ರೂಢಿಯೂ ಇರುವುದೆಂದು ಸೂಚಿತವಾಗುವುದು. ಆದ್ದರಿಂದ 'ವರ್ಜನಾತ್' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಯೋಗವು ರೂಢಿಗಿಂತ ದುರ್ಬಲವಾದದ್ದರಿಂದ ಆ ಯೌಗಿಕಾರ್ಥವು ವಿಷ್ಣುವಿನಲ್ಲಿ ಇಲ್ಲ ಎಂಬ ಶಂಕೆಯು ನಿವಾರಿತವಾಗುವುದು.

ಹೀಗೆ ಹೇಳಿದಲ್ಲಿ ಕಾಠಕಭಾಷ್ಯದಲ್ಲಿ – 'ವಜ್ರವದ್ ಭಯದಂ ಚ' ವಜ್ರದಂತೆ ಭಯಪ್ರದನಾಗಿರುವನು ಎಂದು ವಜ್ರಶಬ್ದವು ವಿಷ್ಣುವಿನಲ್ಲಿ ಗೌಣವೆಂದು ಹೇಳುವುದರ ವಿರೋಧ ಬರುವುದು ಎಂದರೆ, ಅದು ಸರಿಯಲ್ಲ. ಏಕೆಂದರೆ ಆ ಭಾಷ್ಯದಲ್ಲಿ ಆ ವಾಕ್ಯಕ್ಕೆ ಯಾವುದಾದರೂ ಒಂದು ರೀತಿಯಲ್ಲಿ ಬ್ರಹ್ಮನಲ್ಲೇ ತಾತ್ಪರ್ಯವಿರುವುದೆಂಬ ವಿಷಯದಲ್ಲಿ ಅಭಿಪ್ರಾಯವಿದೆ. ಏಕೆಂದರೆ, ಆ ವಾಕ್ಯದಲ್ಲಿ ವಜ್ರಶಬ್ದವು ಗೌಣವೆಂದು ಅಂಗೀಕರಿಸಿದರೂ ಆ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾಗುತ್ತದೆ ಎಂಬ ಆಶಯ-ವಿದೆಯೇ ಹೊರತು ವಜ್ರಶಬ್ದವು ವಿಷ್ಣುವಿನಲ್ಲಿ ಗೌಣ ಎಂಬ ವಿಷಯದಲ್ಲಿ ತಾತ್ಪರ್ಯ-ವಿಲ್ಲ. ಇಲ್ಲಾದರೋ ಸಮನ್ವಯಸೂತ್ರದಲ್ಲಿ ಪ್ರತಿಜ್ಞೆ ಮಾಡಿದಂತೆ ಶಬ್ದಗಳ ಮುಖ್ಯಾರ್ಥ ವಿಷ್ಣುವೇ ಆಗಿದ್ದಾನೆಂದು ಸಾಧಿಸಲು ಶಬ್ದಗಳಿಗೆ ವಿಷ್ಣುವಿನಲ್ಲಿ ಯೋಗ-ರೂಢಿಗಳು ಇರುವುದೆಂದು ಹೇಳುವ ತಾತ್ಪರ್ಯವಿದೆ.

ಕಂಪನಾತ್ ಎಂಬ ಸೂತ್ರಾರ್ಥವಾದರೂ ಸ್ಪಷ್ಟವಾಗಿದೆ.

॥ ಇಲ್ಲಿಗೆ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಮುಗಿಯಿತು ॥

* * * * *

## ೧೧. ಅಥ ಜ್ಯೋತಿರಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಉಭಯತ್ರ ಪ್ರಸಿದ್ಧಜ್ಯೋತಿರ್ನಾಮ ಸಮನ್ವೀಯತೇ। ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ದರ್ಶಯತಿ – ಹೃದಯ ಇತಿ ॥

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ ಜ್ಯೋತಿಃ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲಾಗಿದೆ. ಈ ಅಧಿಕರಣಕ್ಕಿರುವ ಶ್ರುತಿ ಮೊದಲಾದವುಗಳ ಸಂಗತಿಯನ್ನು ಹಾಗೂ ಇದರ ವಿಷಯಾದಿಗಳನ್ನು ''ಹೃದಯೇ'' ಎಂಬ ವಾಕ್ಯದಿಂದ ಭಾಷ್ಯದಲ್ಲಿ ತೋರಿಸುತ್ತಿದ್ದಾರೆ.

**ಭಾಷ್ಯಮ್ – ಹೃದಯ ಆಹಿತಂ ಜ್ಯೋತಿಃ ಪರಮಾತ್ಮೇತ್ಯುಕ್ತಮ್ । ತತ್ರ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಇತ್ಯತ್ರ 'ಉಭೌ ಲೋಕಾವನುಸಂಚರತಿ' ಇತಿ ವಚನಾತ್ ಜೀವ ಇತಿ ಪ್ರತೀಯತ ಇತಿ,**

ಹೃದಯದಲ್ಲಿರುವ ಜ್ಯೋತಿಃಶಬ್ದವಾಚ್ಯನಾದವನು ಪರಮಾತ್ಮನೇ ಆಗಿರುವನೆಂದು ಹಿಂದೆ ಜ್ಯೋತಿರಧಿಕರಣದಲ್ಲಿ ಹೇಳಿದೆ. ಆ ಜ್ಯೋತಿವಿಷಯದಲ್ಲಿ 'ಯೋಽಯಂ ....' ಎಂಬ ವಾಕ್ಯವು ಶ್ರುತವಾಗಿದೆ. ಈ ವಾಕ್ಯದಲ್ಲಿ 'ಉಭೌ ಲೋಕೌ ಅನುಸಂಚರತಿ' - ಎಂಬ ವಾಕ್ಯದಿಂದ ಜ್ಯೋತಿಃಶಬ್ದವಾಚ್ಯನು ಜೀವನೇ ಆಗಿರುವನು.

ಭಾ.ದೀ. – ಯದ್ ಹೃದಯೇ 'ಆಹಿತಂ' ನಿಹಿತಂ ಜ್ಯೋತಿಃ ತಚ್ಛಬ್ದವಾಚ್ಯಂ ಸ ಪರಮಾತ್ಮಾ ಇತಿ ಜ್ಯೋತಿರ್ನಯೇಽಭಿಹಿತಮ್ ಇತ್ಯರ್ಥಃ । ತತಃ ಕಿಮ್? ಇತ್ಯತ ಆಹ – ತತ್ರೇತಿ ॥ 'ಜ್ಯೋತಿರ್ವಿಷಯಃ' ಇತ್ಯರ್ಥಃ । 'ಇತಿ'ಶಬ್ದಾತ್ ಪರಂ 'ಶ್ರೂಯತೇ' ಇತಿ ಶೇಷಃ। ತತೋಽಪಿ ಕಿಮ್? ಇತ್ಯತ ಆಹ – ಅತ್ರೇತಿ ॥ 'ಏತದ್ ವಾಕ್ಯೇ' ಇತ್ಯರ್ಥಃ। 'ಶ್ರುತಂ ಜ್ಯೋತಿಃ' ಇತ್ಯನುಷಜ್ಯತೇ। ತಥಾ ಚ – ಅತ್ರ ಶ್ರುತಂ

ಜ್ಯೋತಿಃ ತಚ್ಛಬ್ದವಾಚ್ಯೋ ಜ್ಞಾನಾತ್ಮಕೋ ಜೀವ ಏವ ಇತಿ ಪ್ರತೀಯತೇ । ಕುತಃ? 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' ಇತಿ ವಚನಾದ್ ಇತ್ಯಾದಿಜೀವ-ಲಿಂಗಾಭಿಧಾಯಕವಾಕ್ಯಶೇಷಾದಿತಿ ಯೋಜನಾ ।

ಅನೇನ 'ಹೃದ್ಯಂತರ್ಜ್ಯೋತಿಃ' ಇತಿ ವಾಜಸನೇಯವಾಕ್ಯೋಕ್ತಜ್ಯೋತಿಷೋ ವಿಷ್ಣುತ್ವಾಕ್ಷೇಪಮುಖೇನ ಪೂರ್ವೋಕ್ತಸ್ಯಾಪಿ ತದಾಕ್ಷೇಪಾತ್ ತೇನಾಸ್ಯ ಆಕ್ಷೇಪಿಕೀ-ಸಂಗತಿರುಕ್ತಾ ಭವತಿ । ವಾಜಸನೇಯೋಕ್ತಂ ಜ್ಯೋತಿರ್ವಿಷಯಃ, 'ಜೀವ ಏವೇದಂ ಜ್ಯೋತಿಃ' ಇತಿ ಪೂರ್ವಪಕ್ಷಶ್ಚ ಸೂಚಿತಃ ।

ಯಾವುದು 'ಹೃದಯೇ ಆಹಿತಂ' ಹೃದಯದಲ್ಲಿ ಇರುವುದೋ 'ಜ್ಯೋತಿಃ' ಜ್ಯೋತಿಃಶಬ್ದವಾಚ್ಯವಾದದ್ದು ಅದು ಪರಮಾತ್ಮನೆಂದು ಜ್ಯೋತಿರಧಿಕರಣದಲ್ಲಿ ಹೇಳ-ಲಾಗಿದೆ ಎಂದು ಅರ್ಥ. ಅದರಿಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ "ತತ್ರ" ಎಂಬ ವಾಕ್ಯವು ಹೊರಟಿದೆ. "ತತ್ರ" ಅಂದರೆ ಆ ಜ್ಯೋತಿರ್ವಿಷಯದಲ್ಲಿ ಎಂದು ಅರ್ಥ. ಇತಿ ಎಂಬ ಭಾಷ್ಯದ ಶಬ್ದದ ಜೊತೆಗೆ 'ಶ್ರೂಯತೇ ಎಂಬುದು ಶೇಷವಾಗಿದೆ. ಅದ-ರಿಂದಲೂ ಏನು ಎಂಬ ಪ್ರಶ್ನೆಗೆ ಉತ್ತರವಾಗಿ "ಅತ್ರ" ಎಂದು ಹೇಳಲಾಗಿದೆ. "ಅತ್ರ" ಎಂದರೆ 'ಯೋಽಯಂ' ಎಂಬ ವಾಕ್ಯದಲ್ಲಿ ಎಂದು ಅರ್ಥ. 'ಶ್ರುತಂ, ಜ್ಯೋತಿಃ' ಎಂಬ ಪದಗಳು ಇಲ್ಲಿ ಅನುವೃತ್ತಿಯನ್ನು ಹೊಂದುತ್ತವೆ. ತಥಾ ಚ – 'ಅತ್ರ ಶ್ರುತಂ ಜ್ಯೋತಿಃ' ಈ ವಾಕ್ಯದಲ್ಲಿ ಕೇಳಿಬರುವ ಜ್ಯೋತಿಃ ಶಬ್ದವಾಚ್ಯನು ಜ್ಞಾನಾತ್ಮಕನಾದ ಜೀವನೇ ಎಂದು ತೋರುವನು. ಏಕೆಂದರೆ - 'ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ' ಅಂದರೆ 'ಸ ಸಮಾನಃ' ಇತ್ಯಾದಿ ಜೀವನ ಅಸಾಧಾರಣಧರ್ಮವನ್ನು ಹೇಳುವ ವಾಕ್ಯ-ಶೇಷದಿಂದ ಎಂದು ಯೋಜನೆ.

ಇದರಿಂದ 'ಹೃದ್ಯಂತಃ ಜ್ಯೋತಿಃ ಎಂಬ ಬೃಹದಾರಣ್ಯಕವಾಕ್ಯದಲ್ಲಿ ಉಕ್ತವಾಗಿರುವ ಜ್ಯೋತಿಸ್ಸು ವಿಷ್ಣುವಲ್ಲ ಎಂದು ಆಕ್ಷೇಪ ಮಾಡುವ ಮೂಲಕ ಹಿಂದೆ ಉಕ್ತನಾಗಿರುವ ಜ್ಯೋತಿಸ್ಸು ವಿಷ್ಣುವಲ್ಲ ಎಂದು ಆಕ್ಷೇಪ ಮಾಡುವುದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಇರುವುದೆಂದು ಉಕ್ತವಾಗುವುದು. ಹಾಗೆಯೇ

ವಾಜಪೇಯದಲ್ಲಿ ಹೇಳಿದ ಜ್ಯೋತಿಸ್ಸು ಈ ಅಧಿಕರಣದ ವಿಷಯವಾಗಿದೆ. ಮತ್ತು ಈ ಜ್ಯೋತಿಸ್ಸು ಜೀವನೇ ಆಗಿರುವನೆಂಬ ಪೂರ್ವಪಕ್ಷವು ಸೂಚಿತವಾಗುವುದು.

ಭಾ.ದೀ. – ವಾಜಸನೇಯಕೇ ಹಿ – 'ಅಯಂ ಪುರುಷಃ ಕಿಂ ಜ್ಯೋತಿ, ಕಿಂ ಜ್ಞಾನಸಾಧನಃ, ಜೀವಸ್ಯ ಜ್ಞಾನಸಾಧನಂ ಕಿಮ್?' ಇತಿ ಜನಕೇನ ಪೃಷ್ಟೋ ಯಾಜ್ಞವಲ್ಕ್ಯಃ 'ಆದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ' (ಬೃ.೬.೩.೨) ಇತ್ಯನೇನ ಹೇ 'ಸಮ್ರಾಟ್' ಸಾರ್ವಭೌಮ ಜನಕರಾಜ! ಆದಿತ್ಯಾಖ್ಯಜ್ಞಾನಸಾಧನಕೋಽ-ಯಂ ಪುರುಷಃ – ಇತ್ಯುವಾಚ ।

ಏವಂಕ್ರಮೇಣ ಪ್ರಶ್ನೋತ್ತರಾಭ್ಯಾಂ ಜಾಗ್ರದ್ದಶಾಯಾಮ್ ಆದಿತ್ಯಚಂದ್ರಾಗ್ನಿ-ವಾಚಾಂ ಮಧ್ಯೇ ಪೂರ್ವಪೂರ್ವಾಸ್ತಮಯೇ ಉತ್ತರೋತ್ತರಜ್ಯೋತಿಷ್ಟ್ವಂ ಜೀವಸ್ಯ ಅಭಿಧಾಯ, ಪುನಃ ಸುಪ್ತಿಸ್ವಪ್ನಯೋರಾದಿತ್ಯಾದಿಷು ಚತುರ್ಷು ಅಸ್ತಮಿತೇಷು 'ಕಿಂ ಜ್ಯೋತಿರಯಂ ಪುರುಷಃ' (ಬೃ.೬.೩.೨) ಇತಿ ಜನಕೇನ ಪೃಷ್ಟೋ ಯಾಜ್ಞವಲ್ಕ್ಯಃ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಇತಿ ತಯೋರ್ಜೀವಸ್ಯ ಸ್ವಪ್ರಕಾಶಪರಮಾತ್ಮಜ್ಯೋತಿಷ್ಟ್ವಮುಕ್ತ್ವಾ ಪುನಃ 'ಕತಮ ಆತ್ಮಾ' (ಬೃ.೬.೩.೭) ಇತಿ ಜ್ಯೋತಿಷ್ಟ್ವೇನೋಕ್ತ ಆತ್ಮಾ ಕತಮಃ, ಕೀದೃಶಃ? ಇತಿ ಪೃಷ್ಟೋ 'ಯೋಽಯಮ್' ಇತ್ಯನೇನ ಜೀವದೇಹೇಂದ್ರಿಯಾದಿವಿವಿಕ್ತಃ 'ಪರಮಾತ್ಮಾ' ಇತ್ಯುತ್ತರಮಾಹ – ಇತ್ಯುಕ್ತಮ್ ।

ಯೋ 'ವಿಜ್ಞಾನಮಯಃ' ವಿಜ್ಞಾನಪೂರ್ಣಃ, 'ಪ್ರಾಣೇಷು' ಇಂದ್ರಿಯೇಷು 'ಅಂತಃ' – ಹೃದ್ಯಂತಶ್ಚ ನಿಯಂತೃತ್ವೇನ ವರ್ತಮಾನೋ 'ಜ್ಯೋತಿಃ' – ಜೀವಸ್ಯ ಬುದ್ಧ್ಯಾದಿದ್ಯೋತಕಃ 'ಪುರುಷಃ' – ಪೂರ್ಣಷಡ್ಗುಣೋಽಸ್ತಿ । ಸೋಽಯಮಾತ್ಮಾ – ಇತ್ಯರ್ಥಃ ।

ತಸ್ಯ ಮಹಿಮಾನಮಾಹ – ಸ ಇತಿ ॥ 'ಸಃ' – ಆತ್ಮಾ ಪರಮಾತ್ಮಾ 'ಸಮಾನಃ' – ಅವಿಕಾರಃ ಸದೈಕರೂಪಃ ಸನ್ 'ಉಭೌ ಲೋಕೌ' ಭೂಲೋಕದ್ಯುಲೋಕೌ ಜಾಗ್ರತ್ಸುಷುಪ್ತೀ ವಾ ಪ್ರತಿಜೀವಮಾದಾಯ ತಮನುಸಂಚರತೀತ್ಯರ್ಥಃ ।

ಪೂರ್ವಪಕ್ಷೌ ತು – 'ಆತ್ಮ'ಪದಂ 'ಸಃ' ಇತಿ ಪದಂ ಚ ಜೀವಪರಮ್ । ಉಭಯಲೋಕಸಂಚರಣಮಪಿ ಕರ್ಮಾಧೀನಂ ವಿವಕ್ಷಿತಮ್, ತಚ್ಚ ಲಿಂಗಂ ಕರ್ಮವಶಾತ್ ತಸ್ಯೈವ – ಇತಿ ಮನ್ಯತೇ ।

ಬೃಹದಾರಣ್ಯಕದಲ್ಲಾದರೋ – ಅಯಂ ಪುರುಷಃ ಕಿಂ ಜ್ಯೋತಿಃ? - ಈ ಜೀವನು ತನ್ನ ಜ್ಞಾನಕ್ಕೆ ಸಾಧನವನ್ನಾಗಿ ಯಾವುದನ್ನು ಹೊಂದಿರುವನು? ಎಂದು ಜೀವನ ಜ್ಞಾನಸಾಧನದ ವಿಷಯವಾಗಿ ಜನಕನಿಂದ ಪ್ರಶ್ನಿಸಲ್ಪಟ್ಟ ಯಾಜ್ಞವಲ್ಕ್ಯರು 'ಆದಿತ್ಯ-ಜ್ಯೋತಿಃ ಸಮ್ರಾಡಿತಿ ಹೋವಾಚ' ಎಂಬ ವಾಕ್ಯದಿಂದ 'ಹೇ ಸಮ್ರಾಟ್ ಸಾರ್ವಭೌಮ-ನಾದ ಜನಕರಾಜನೇ! ಜೀವನು ಆದಿತ್ಯನೆಂಬ ಜ್ಞಾನಸಾಧನವನ್ನು ಹೊಂದಿರುವನು' ಎಂದು ಹೇಳುವರು.

ಹೀಗೆ ಕ್ರಮವಾಗಿ ನಡೆದ ಪ್ರಶ್ನೋತ್ತರಗಳಿಂದ ಜಾಗ್ರದ್ ದೆಶೆಯಲ್ಲಿ, ಆದಿತ್ಯ, ಚಂದ್ರ, ಅಗ್ನಿ, ವಾಕ್ ಇವುಗಳ ಮಧ್ಯೆ ಹಿಂದು ಹಿಂದಿನದು ಅಸ್ತಮಯವನ್ನು ಹೊಂದಿದಾಗ ಮುಂದು ಮುಂದಿನದು ಜೀವನಿಗೆ ಜ್ಯೋತಿಸ್ಸಾಗಿರುವುದು ಎಂದು ಹೇಳಿ; ಅನಂತರ ಸುಷುಪ್ತಿ ಮತ್ತು ಸ್ವಪ್ನಾವಸ್ಥೆಗಳಲ್ಲಿ ಆದಿತ್ಯ ಮೊದಲಾದ ನಾಲ್ಕೂ ಸಾಧನಗಳು ಅಸ್ತಮಯವನ್ನು ಪಡೆದಾಗ, 'ಕಿಂ ಜ್ಯೋತಿಃ ಅಯಂ ಪುರುಷಃ' ಈ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು ಎಂದು ಜನಕನಿಂದ ಪ್ರಶ್ನಿಸಲ್ಪಟ್ಟ ಯಾಜ್ಞವಲ್ಕ್ಯರು 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬುದಾಗಿ ಆ ಎರಡು ಅವಸ್ಥೆಗಳಲ್ಲಿ ಜೀವನು ಸ್ವಪ್ರಕಾಶನಾದ ಪರಮಾತ್ಮನನ್ನು ಜ್ಯೋತಿಸ್ಸಾಗಿ ಹೊಂದಿರುವನು ಎಂದು ಹೇಳಿ, ಮತ್ತೆ 'ಕತಮಃ ಆತ್ಮಾ' ಎಂದು ಜ್ಞಾನಸಾಧನವೆಂದು ಹೇಳಲಾದ ಆತ್ಮನು 'ಕತಮಃ' ಅಂದರೆ ಎಂತಹವನು? ಎಂಬುದಾಗಿ ಪ್ರಶ್ನಿಸಲ್ಪಟ್ಟವನಾಗಿ 'ಯೋಽ-ಯಂ' ಎಂಬ ವಾಕ್ಯದಿಂದ 'ಜೀವ, ಅವನ ದೇಹ ಮತ್ತು ಇಂದ್ರಿಯಾದಿಗಳಿಂದ ಅತ್ಯಂತ ಭಿನ್ನನಾದ ಪರಮಾತ್ಮನೇ ಆ ಆತ್ಮನು' ಎಂದು ಉತ್ತರವನ್ನು ಹೇಳಿದರು ಎಂದು ಹೇಳಲಾಗಿದೆ. 'ಯೋ ವಿಜ್ಞಾನಮಯಃ' ಯಾರು ವಿಜ್ಞಾನಪೂರ್ಣನಾಗಿದ್ದಾನೋ, 'ಪ್ರಾಣೇಷು' ಇಂದ್ರಿಯಗಳಲ್ಲಿ, 'ಹೃದಿ ಅಂತಃ' ಮತ್ತು ಹೃದಯದಲ್ಲಿ ನಿಯಾಮಕನಾ-ಗಿರುವ 'ಜ್ಯೋತಿಃ' - ಜೀವನಿಗೆ ಬುದ್ಧಿ ಮೊದಲಾದವುಗಳ ಪ್ರಚೋದಕನಾಗಿ-

ರುವವನು 'ಪುರುಷಃ'- ಪೂರ್ಣಷಡ್ಗುಣನಾಗಿರುವನು. 'ಸೋಽಯಮಾತ್ಮಾ' - ಅವನೇ ಈ ಪರಮಾತ್ಮನು ಎಂದು ಅರ್ಥ.

ಅವನ ಮಹಿಮೆಯನ್ನು 'ಸ ಸಮಾನಃ' ಎಂಬ ವಾಕ್ಯದಲ್ಲಿ ಹೇಳಿದೆ. 'ಸಃ ಆತ್ಮಾ' ಆ ಪರಮಾತ್ಮನು 'ಸಮಾನಃ ಸನ್' ವಿಕಾರವಿಲ್ಲದವನಾಗಿ ಅಂದರೆ ಸರ್ವಕಾಲದಲ್ಲೂ ಒಂದೇ ವಿಧವಾದ ಸ್ವರೂಪವುಳ್ಳವನಾಗಿ 'ಉಭೌ ಲೋಕೌ' ಭೂ ಲೋಕ ಮತ್ತು ದ್ಯುಲೋಕ ಇವುಗಳಿಗೆ ಅಥವಾ ಜಾಗ್ರತ್ ಮತ್ತು ಸುಷುಪ್ತಿ ಅವಸ್ಥೆಗಳಿಗೆ ಜೀವನನ್ನು ಕರೆದುಕೊಂಡು 'ಅನುಸಂಚರತಿ' - ಚರಿಸುವನು ಎಂದು ಅರ್ಥ.

ಪೂರ್ವಪಕ್ಷಿಯಾದರೋ ಆತ್ಮ ಪದ ಮತ್ತು ಸಃ ಎಂಬ ಪದವು ಜೀವಪರವಾಗಿದೆ, ಉಭಯಲೋಕಸಂಚಾರವೂ ಕೂಡ ಅವನ ಕರ್ಮಾಧೀನವಾದ ಸಂಚಾರವಾಗಿದೆ - ಎಂದು ಶ್ರುತಿಯ ಅಭಿಪ್ರಾಯ, ಆ ಲಿಂಗವಾದರೋ ಕರ್ಮದ ಅಧೀನವಾಗಿ-ರುವುದರಿಂದ ಜೀವನಿಗೇ ಸಂಬಂಧಪಟ್ಟದ್ದೆಂದು ಅಭಿಪ್ರಾಯ ಪಡುತ್ತಾನೆ.

ಭಾ.ದೀ. – ಸಿದ್ಧಾಂತಯತ್ಸೂತ್ರಮ್ ಅವತಾರ್ಯ ದರ್ಶನಪದೋಕ್ತ-ಶ್ರುತ್ಯುದಾಹರಣಪೂರ್ವಕಂ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ಕೊಟ್ಟು ಸೂತ್ರದಲ್ಲಿರುವ ದರ್ಶನಪದದಿಂದ ಉಕ್ತವಾಗಿರುವ ಶ್ರುತಿಯನ್ನು ಉದಾಹರಿಸಿ ''ಅತಃ'' ಎಂದು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತ ಉಚ್ಯತೇ–**

**॥ ಓಂ ಜ್ಯೋತಿರ್ದರ್ಶನಾತ್ ಓಂ ॥ ೪೦ ॥**

**'ವಿಷ್ಣುರೇವ ಜ್ಯೋತಿರ್ವಿಷ್ಣುರೇವ ಬ್ರಹ್ಮ ವಿಷ್ಣುರೇವಾತ್ಮಾ ವಿಷ್ಣುರೇವ ಬಲಂ ವಿಷ್ಣುರೇವ ಯಶೋ ವಿಷ್ಣುರೇವಾನಂದಃ' ಇತಿ ದರ್ಶನಾಚ್ಚತುರ್ವೇದಶಿಖಾಯಾಂ ಜ್ಯೋತಿರ್ವಿಷ್ಣುರೇವ ।**

ಈ ಆಕ್ಷೇಪವನ್ನು ನಿರಾಕರಿಸಲು 'ಜ್ಯೋತಿರ್ದರ್ಶನಾತ್' ಎಂಬ ಸೂತ್ರವು ಹೊರಟಿದೆ.

''ವಿಷ್ಣುರೇವ ಜ್ಯೋತಿರ್ವಿಷ್ಣುರೇವ ಬ್ರಹ್ಮ ವಿಷ್ಣುರೇವಾತ್ಮಾ ವಿಷ್ಣು-ರೇವ ಬಲಂ ವಿಷ್ಣುರೇವ ಯಶೋ ವಿಷ್ಣುರೇವಾನಂದಃ'' ಎಂದು ಚತುರ್ವೇದಶಿಖಾ ಶ್ರುತಿಯಲ್ಲಿ ವಿಷ್ಣುವೇ ಜ್ಯೋತಿಃಶಬ್ದಕ್ಕೆ ಮುಖ್ಯ-ವಾಚ್ಯನೆಂದು ಹೇಳಿರುವುದರಿಂದ ಬೃಹದಾರಣ್ಯಕದ ವಾಕ್ಯದಲ್ಲಿ ಶ್ರುತನಾಗಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆ.

ಭಾ.ದೀ. – 'ವಿಷ್ಣುರೇವ ಜ್ಯೋತಿಃ .... ವಿಷ್ಣುರೇವಾನಂದಃ' ಇತಿ ಚತುರ್ವೇದಶಿಖಾಯಾಮ್ ಇತಿ, 'ದರ್ಶನಾತ್' ವಿಷ್ಣುರೇವ ಮುಖ್ಯತೋ ಜ್ಯೋತಿಃಶಬ್ದಿತ ಇತ್ಯುಕ್ತತ್ವಾತ್ 'ಜ್ಯೋತಿಃ' ತಚ್ಛಬ್ದವಾಚ್ಯೋ ವಿಷ್ಣುರೇವ, ನ ಜೀವ ಇತ್ಯರ್ಥಃ । 'ವಿಷ್ಣುರೇವ' ಇತ್ಯನೇನ 'ತತ್ತು' ಇತ್ಯನುವೃತ್ತಸ್ಯ ಅರ್ಥ ಉಕ್ತಃ । ಶ್ರುತ್ಯರ್ಥಸ್ತು ಸ್ಪಷ್ಟಃ।

ವಿಶೇಷಸ್ತು – 'ಬಲಂ' - ಬಲಪ್ರದಃ । 'ಸ ವೈ ಬಲಂ ಬಲಿನಾಂ ಚಾಪರೇ-ಷಾಮ್' ಇತಿ ಚ ಭಾಗವತೇ। ವಿಷ್ಣುರೇವ ಯಶಃ। 'ತಸ್ಯ ನಾಮ ಮಹದ್‌ಯಶಃ' (ಮಹಾನಾ. ೧.೧೦) ಇತಿ ಶ್ರುತಿಃ – ಇತಿ ತತ್ತ್ವಪ್ರದೀಪೇಽಭಿಹಿತಮ್ । ಬ್ರಹ್ಮಾದಿ-ಶಬ್ದವತ್ ಜ್ಯೋತಿಃಶಬ್ದೋಽಪಿ ವಿಷ್ಣ್ವೇಕನಿಷ್ಠ ಇತಿ ಜ್ಞಾಪನಾಯ ಸಮಗ್ರವಾಕ್ಯೋ-ದಾಹರಣಮ್ । ಅತ ಏವ ಶ್ರುತಾವೇವಕಾರಃ।

'ವಿಷ್ಣುರೇವ ಜ್ಯೋತಿರ್ವಿಷ್ಣುರೇವ ಬ್ರಹ್ಮ ವಿಷ್ಣುರೇವಾತ್ಮಾ ವಿಷ್ಣುರೇವ ಬಲಂ ವಿಷ್ಣುರೇವ ಯಶೋ ವಿಷ್ಣುರೇವಾನಂದಃ' ಎಂದು ಚತುರ್ವೇದಶಿಖಾ ಶ್ರುತಿಯಲ್ಲಿ 'ಇತಿ ದರ್ಶನಾತ್' ವಿಷ್ಣುವೇ ಮುಖ್ಯತಃ ಜ್ಯೋತಿಃಶಬ್ದವಾಚ್ಯನೆಂದು ಉಕ್ತವಾಗಿರುವುದರಿಂದ ಜ್ಯೋತಿಃ ಜ್ಯೋತಿಃಶಬ್ದವಾಚ್ಯನು ವಿಷ್ಣುವೇ ಜೀವನಲ್ಲ ಎಂದು ಅರ್ಥ. 'ವಿಷ್ಣುರೇವ' ಎಂಬ ಪದಗಳಿಂದ ಅನುವೃತ್ತಿಯನ್ನು ಪಡೆದಿರುವ ತತ್ತು ಎಂಬ ಪದಗಳ ಅರ್ಥವು ಉಕ್ತವಾಗಿದೆ. ಶ್ರುತ್ಯರ್ಥವಾದರೋ ಸ್ಪಷ್ಟವಾಗಿದೆ.

ವಿಶೇಷವಿಚಾರವೆಂದರೆ – 'ಬಲಂ - ಅಂದರೆ ಬಲಪ್ರದ ಎಂದು ಅರ್ಥ. 'ಸ ವೈ ಬಲಂ ಬಲಿನಾಂ ಚಾಪರೇಷಾಮ್' - ಆ ಭಗವಂತನೇ ಬಲಶಾಲಿಗಳಾದ ಇತರರಿಗೂ ಬಲ ಪ್ರದನಾಗಿದ್ದಾನೆ ಎಂದು ಭಾಗವತದಲ್ಲಿ ಹೇಳಿದೆ. ವಿಷ್ಣುರೇವ ಯಶಃ - 'ತಸ್ಯ ನಾಮ ಮಹದ್ ಯಶಃ' - ಆ ಭಗವಂತನಿಗೆ ಮಹದ್ ಯಶಃ ಎಂದು ಹೆಸರು ಎಂದು ಶ್ರುತಿ ಇದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ. ಬ್ರಹ್ಮ ಮೊದಲಾದ ಶಬ್ದಗಳು ಹೇಗೋ ಹಾಗೆ ಜ್ಯೋತಿಃಶಬ್ದವೂ ಕೂಡ ಮುಖ್ಯವಾಗಿ ವಿಷ್ಣುವಾಚಕವೆಂದು ತಿಳಿಸಲು ಸಮಗ್ರ-ವಾಕ್ಯವನ್ನು ಉದಾಹರಿಸಲಾಗಿದೆ. ಆದ್ದರಿಂದಲೇ ಶ್ರುತಿಯಲ್ಲಿ ಏವಕಾರವಿದೆ.

ಭಾ.ದೀ. – ಜ್ಯೋತಿರ್ವಿಷ್ಣುಶ್ಚೇತ್ ತರ್ಹಿ ಉಭಯಲೋಕಸಂಚರಣಲಿಂಗ-ವಿರೋಧ ಇತಿ ಶಂಕಾಮಪಿ ಸೌತ್ರದರ್ಶನಪದೋಕ್ತಶ್ರುತ್ಯಾ ಪರಿಹರತಿ – ಪ್ರಾಜ್ಞೇನೇತಿ ॥

ಜ್ಯೋತಿಶಬ್ದವಾಚ್ಯನು ವಿಷ್ಣುವಾದ ಪಕ್ಷದಲ್ಲಿ ಉಭಯಲೋಕಸಂಚರಣವೆಂಬ ಲಿಂಗದ ವಿರೋಧ ಬರುವುದು ಎಂಬ ಶಂಕೆಯನ್ನೂ ಸೂತ್ರದಲ್ಲಿರುವ 'ದರ್ಶನಪದವು ಹೇಳುವ 'ಪ್ರಾಜ್ಞೇನ' ಎಂಬ ಶ್ರುತಿಯಿಂದ ಪರಿಹರಿಸುತ್ತಿದ್ದಾರೆ.

**ಭಾಷ್ಯಮ್ – 'ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜದ್ ಯಾತಿ' ಇತಿ ವಚನಾತ್ ತಸ್ಯಾಪಿ ಲೋಕಸಂಚರಣಮಸ್ತ್ಯೇವ ॥ ೪೦ ॥**

॥ ಇತಿ ಬ್ರಹ್ಮಸೂತ್ರಭಾಷ್ಯೇ ಜ್ಯೋತಿರಧಿಕರಣಮ್ ॥೧೧॥

'ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜದ್ ಯಾತಿ' ಎಂಬ ವಚನ-ದಿಂದ ಪರಮಾತ್ಮನಿಗೂ ಲೋಕಸಂಚಾರವು ಇದ್ದೇ ಇರುವುದು.

ಭಾ.ದೀ. – 'ಇತಿ ವಚನಾತ್' ಇತಿ ವಾಜಸನೇಯಶ್ರುತಿವಾಕ್ಯಾತ್ 'ತಸ್ಯಾಪಿ' ಪರಮಾತ್ಮನೋಽಪಿ ಲೋಕಸಂಚರಣಮಸ್ತ್ಯೇವ – ಇತ್ಯರ್ಥಃ । ನ ಕೇವಲಂ ಜೀವಸ್ಯ ಇತ್ಯಪೇರರ್ಥಃ । ನ ತದಭಾವ ಇತ್ಯೇವಶಬ್ದಾರ್ಥಃ । ತಥಾ ಚ ಲಿಂಗಂ ಸಾವ-ಕಾಶಮ್ ಇತಿ ನ ತದ್ವಿರೋಧಃ – ಇತಿ ಭಾವಃ ।

ಶರೀರ ಆತ್ಮಾ ಜೀವೋ ಮರಣಕಾಲೇ 'ಪ್ರಾಜ್ಞೇನ' ಪ್ರಕರ್ಷೇಣ ಆಸಮಂತಾದ್ ಜ್ಞೇನ, ಪ್ರಜ್ಞ ಏವ ಪ್ರಾಜ್ಞಃ, ತೇನ ವಾ ಪರಮಾತ್ಮನಾ 'ಅನ್ವಾರೂಢಃ' ಅಧಿಷ್ಠಿತೋ ಜೀವಮಾರುಹ್ಯ ಗಚ್ಛತಿ ಭಗವಾನ್- ಇತಿ ಬೃಹದ್ಭಾಷ್ಯೋಕ್ತೇಃ ತದ್‌ವಾಹನಭೂತಃ 'ಉತ್ಸರ್ಜತ್' ಪ್ರಾಕ್ತನದೇಹಮುತ್ಸೃಜನ್ ದೇಹಾಂತರಂ ಲೋಕಾಂತರಂ ಚ 'ಯಾತಿ' ಗಚ್ಛತೀತಿ ವಾಜಸನೇಯಶ್ರುತ್ಯರ್ಥಃ।

ಸೂತ್ರಾರ್ಥಸ್ತು ಸ್ಪಷ್ಟಃ ।

॥ ಇತಿ ಭಾಷ್ಯದೀಪಿಕಾಯಾಂ ಜ್ಯೋತಿರಧಿಕರಣಮ್ ॥೧೧॥

'ಇತಿ ವಚನಾತ್' ಹೀಗೆ ಬೃಹದಾರಣ್ಯಕ ಶ್ರುತಿವಾಕ್ಯದಿಂದ ತಸ್ಯಾಪಿ ಪರಮಾತ್ಮನಿಗೂ ಲೋಕಸಂಚಾರವು ಇದ್ದೇ ಇರುವುದು ಎಂದರ್ಥ. 'ಜೀವನಿಗೆ ಮಾತ್ರವಲ್ಲ' ಎಂದು ಅಪಿಶಬ್ದದ ಅರ್ಥ. ಲೋಕಸಂಚಾರವಿಲ್ಲ ಎನ್ನುವುದಿಲ್ಲ ಎಂದು 'ಏವ'ಕಾರದ ಅರ್ಥ. ತಥಾ ಚ – ಉಭಯಲೋಕಸಂಚಾರವೆಂಬ ಲಿಂಗವು ವಿಷ್ಣುವಿನಲ್ಲೂ ಅವಕಾಶವನ್ನು ಪಡೆದಿದೆಯಾದ್ದರಿಂದ ಅದರ ವಿರೋಧವಿಲ್ಲ ಎಂದು ಭಾವ.

'ಶಾರೀರ ಆತ್ಮಾ' - ಜೀವನು ಮರಣಕಾಲದಲ್ಲಿ 'ಪ್ರಾಜ್ಞೇನ' – 'ಪ್ರಕರ್ಷೇಣ ಆ ಸಮಂತಾತ್ ಜ್ಞೇನ' - ನಿರತಿಶಯವಾದ ಸರ್ವವಿಷಯಕವಾದ ಜ್ಞಾನಕ್ಕೆ ಆಶ್ರಯನಾದ ಪರಮಾತ್ಮನಿಂದ ಅಥವಾ ಪ್ರಜ್ಞನೆಂದರೆ ಪ್ರಕರ್ಷಯುಕ್ತವಾದ ಜ್ಞಾನಾತಿಶಯ, ಪ್ರಜ್ಞ ಏವ ಪ್ರಾಜ್ಞಃ - ಪ್ರಜ್ಞಶಬ್ದದ ಅರ್ಥದಲ್ಲೇ ಪ್ರಾಜ್ಞ ಎಂಬ ಶಬ್ದವು ಇರುವುದು. ಅಂತಹ ಪರಮಾತ್ಮನಿಂದ 'ಅನ್ವಾರೂಢಃ' ಅಧಿಷ್ಠಿತನಾಗಿ - ಅಂದರೆ 'ಜೀವಮಾರುಹ್ಯ ಗಚ್ಛತಿ ಭಗವಾನ್' ಜೀವನ ಮೇಲೆ ಕುಳಿತು ಭಗವಂತನು ಹೋಗುವನು ಎಂದು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿರುವುದರಿಂದ ಆ ಪರಮಾತ್ಮನ ವಾಹನನಾಗಿ ಜೀವನು 'ಉತ್ಸರ್ಜನ್' -ಹಿಂದಿನ ದೇಹವನ್ನು ಬಿಟ್ಟು ದೇಹಾಂತರವನ್ನು ಮತ್ತು ಲೋಕಾಂತರವನ್ನು ಅನುಸರಿಸಿ 'ಯಾತಿ' - ಹೋಗುವನು ಎಂದು ವಾಜಸನೇಯ ಶ್ರುತಿಯ ಅರ್ಥ. ಸೂತ್ರಾರ್ಥವಾದರೋ ಸ್ಪಷ್ಟವಾಗಿದೆ.

॥ ಇಲ್ಲಿಗೆ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು ॥

* * * * *

## ೧೨. ಅಥಾಕಾಶಾಧಿಕರಣಮ್

ಭಾ.ದೀ. – ಅತ್ರ ಉಭಯತ್ರಪ್ರಸಿದ್ಧಮ್ ಆಕಾಶನಾಮ ಬ್ರಹ್ಮಣಿ ಸಮನ್ವೀಯತೇ । ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ದರ್ಶಯತಿ – ಸರ್ವಾಧಾರತ್ವಮ್ ಇತಿ ॥

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ 'ಆಕಾಶ' ಎಂಬ ನಾಮಾತ್ಮಕಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುವುದು. ಶ್ರುತಿ ಮೊದಲಾದವುಗಳ ಸಂಗತಿಯನ್ನು ಮತ್ತು ವಿಷಯಾದಿಗಳನ್ನು ''ಸರ್ವಾಧಾರತ್ವಂ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – ಸರ್ವಾಧಾರತ್ವಂ ವಿಷ್ಣೋರುಕ್ತಮ್ । ತಚ್ಚ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಇತ್ಯತ್ರಾಕಾಶಸ್ಯ ಪ್ರತೀಯತೇ । ವೈ ನಾಮೇತಿ ಪ್ರಸಿದ್ಧೋಪದೇಶಾತ್ । ಪ್ರಸಿದ್ಧಾಕಾಶಶ್ಚಾಂಗೀಕರ್ತವ್ಯ ಇತಿ ।**

ಹಿಂದೆ ಸರ್ವಾಧಾರತ್ವವು ವಿಷ್ಣುವಿಗೆ ಇರುವುದೆಂದು ಹೇಳಲಾಗಿದೆ. ಆ ಸರ್ವಾಧಾರತ್ವವಾದರೋ 'ಆಕಾಶೋ ವೈ ನಾಮರೂಪಯೋರ್ನಿರ್ವಹಿತಾ' ಎಂಬ ಶ್ರುತಿಯಲ್ಲಿ ಆಕಾಶಕ್ಕೆ ಇರುವುದೆಂದು ತಿಳಿದು ಬರುವುದು. 'ವೈ, ನಾಮ' ಎಂಬ ಶಬ್ದಗಳಿಂದ ಪ್ರಸಿದ್ಧವಾದ ಆಕಾಶವೆಂದು ಹೇಳಿರುವುದರಿಂದ ಪ್ರಸಿದ್ಧವಾದ ಆಕಾಶವೇ ಈ ಶ್ರುತಿಯಲ್ಲಿ ಆಕಾಶಶಬ್ದವಾಚ್ಯವೆಂದು ಅಂಗೀಕರಿಸಬೇಕು.

ಭಾ.ದೀ. – 'ದ್ಯುಭ್ವಾದ್ಯಧಿಕರಣೇ' ಇತಿ ಶೇಷಃ । ತತಃ ಕಿಮ್? ಇತ್ಯತ ಆಹ – ತಚ್ಚೇತಿ ॥ ಚೋಽವಧಾರಣೇ । 'ಇತ್ಯತ್ರ' – ಇತ್ಯೇವಂರೂಪೇ ಛಂದೋಗವಾಕ್ಯೇ – ಇತ್ಯರ್ಥಃ । ಅನೇನ ಅತ್ರತ್ಯ ಆಕಾಶಶಬ್ದಸ್ಯ ವಿಷ್ಣ್ವನ್ಯಪರತ್ವೋಕ್ತಿಮುಖೇನ ಪೂರ್ವೋಕ್ತಸರ್ವಾಧಾರತ್ವಸ್ಯಾಪಿ ಅನ್ಯನಿಷ್ಠತ್ವಾಕ್ಷೇಪಾತ್ ತೇನ ಅಸ್ಯ ಆಕ್ಷೇಪಿಕೀ ಸಂಗತಿರುಕ್ತಾ ಭವತಿ । ಛಂದೋಗಶ್ರುತ್ಯುಕ್ತಆಕಾಶಾಖ್ಯೋ ವಿಷಯಶ್ಚ ಸೂಚಿತಃ ।

ಸಯುಕ್ತಿಕಂ ಪೂರ್ವಪಕ್ಷಂ ದರ್ಶಯತಿ – ವೈನಾಮೇತಿ ॥ 'ಸಃ' ಇತಿಶೇಷಃ । ಚೋಽವಧಾರಣೇ । ತಥಾ ಚ – ಛಂದೋಗಶ್ರುತ್ಯುಕ್ತ ಆಕಾಶಃ ಪ್ರಸಿದ್ಧಃ ಸಾಕ್ಷಿ-ಸಿದ್ಧೋಽವ್ಯಾಕೃತಾಕಾಶ ಏವ ಅಂಗೀಕಾರ್ಯಃ । ಕುತಃ? ಆಕಾಶಪದೇನ ವೈ ನಾಮೇತಿ ನಿಪಾತದ್ವಯದ್ಯೋತಿತಪ್ರಸಿದ್ಧಿಮದರ್ಥಸ್ಯ ಉಪದೇಶಾದ್ ಉಕ್ತತ್ವಾತ್ - ಇತ್ಯರ್ಥಃ।

ಕೇಚಿತ್ತು – 'ಸತ್ತರ್ಕದೀಪಾವಲ್ಯಾಂ ಪ್ರಸಿದ್ಧೋ ಭೂತಾಕಾಶ ಏವಾಂಗೀ-ಕಾರ್ಯ ಇತಿ ವಚನಾದ್ ಅವಕಾಶಸ್ಯಾಪಿ ನಾಮರೂಪತ್ವಾತ್' ಇತಿ ಚಂದ್ರಿಕಾ-ಕೃದಭಿಪ್ರೇತಂ ಟೀಕಾಪಾಠಮಾಶ್ರಿತ್ಯ ಆಕಾಶಶಬ್ದಪ್ರವೃತ್ತಿನಿಮಿತ್ತಮವಕಾಶತ್ವಂ ಭೂತೇ ನಿರವಧಿಕಮಿತಿ ಸುಧೋಕ್ತೇರತ್ರ ಅವಕಾಶಶಬ್ದಿತಂ ಭೂತಮೇವ ಪೂರ್ವಪಕ್ಷವಿಷಯಃ - ಇತ್ಯಾಹುಃ।

ಶ್ರುತೌ ವೈ, ನಾಮೇತಿ ನಿಪಾದದ್ವಯಂ ಪ್ರಸಿದ್ಧೌ। 'ನಾಮ' ವಾಚಕಶಬ್ದ-ಪ್ರಪಂಚಃ ರೂಪಪದೇನ ಪ್ರಾಕೃತರೂಪಾಂತರ್ಭಾವಿತಾರ್ಥಪ್ರಪಂಚಮಾತ್ರಮ್ ಉಚ್ಯತೇ । ತಥಾ ಚ – ಚಾಽಕಾಶೋ 'ನಾಮರೂಪಯೋಃ' ಶಬ್ದಾರ್ಥ-ಪ್ರಪಂಚಯೋಃ 'ನಿರ್ವಹಿತಾ' ನಿರ್ವೋಢಾ ಆಶ್ರಯಃ ಕರ್ತಾ ಚ - ಇತ್ಯರ್ಥಃ । 'ತೇ' - ನಿರ್ವಾಹ್ಯತಯಾ ಪ್ರಕೃತೇ ನಾಮರೂಪೇ 'ಅಂತರಾ' ಭೇದೇನ। 'ಯದಿತಿ ನಾಮರೂಪಪ್ರಪಂಚಾದ್ ಭಿನ್ನಂ ಯದಸ್ತೀತಿ ಯಾವತ್।

ಯದ್ವಾ – ತಚ್ಛಬ್ದೇನ ವಾಚ್ಯಪ್ರಪಂಚಾಂತರ್ಭೂತಂ ನೀಲಾದಿರೂಪಂ ವಾಚಕಂ ನಾಮ ಚ ಗೃಹ್ಯತೇ। ತಥಾ ಚ 'ತೇ' ನಾಮರೂಪೇ 'ಅಂತರಾ' ವಿನಾ ತದ್ರಹಿತಮಿತಿ ಯಾವತ್ । 'ಸಾಕಲ್ಯೇನ ನಾಮವಾಚ್ಯಂ ಪ್ರಾಕೃತರೂಪರಹಿತಂ ಚ ಯದ್ ವರ್ತತೇ ತದ್ ಬ್ರಹ್ಮ' ಇತ್ಯರ್ಥಃ । ಯದ್ವಾ– 'ತೇ' ನಾಮಿರೂಪಿಣಾಮ್ 'ಅಂತರಾ' ಭೇದೇನ ಯದಸ್ತೀತ್ಯರ್ಥಃ। ಯಥೋಕ್ತಂ ತತ್ತ್ವಪ್ರದೀಪೇ – ನಾಮಿ ಚ ರೂಪಿ ಚ ಯನ್ನ ಭವತಿ ತದ್ ಬ್ರಹ್ಮ - ಇತಿ।

'ದ್ಯುಭ್ವಾದ್ಯಧಿಕರಣದಲ್ಲಿ' ಎಂಬ ಪದವು ಶೇಷವಾಗಿದೆ. ಮುಂದೇನು? ಎಂಬ ಪ್ರಶ್ನೆಗೆ – ''ತಚ್ಚ'' ಎಂಬ ವಾಕ್ಯದಿಂದ ಉತ್ತರಿಸಲಾಗಿದೆ. ಇಲ್ಲಿರುವ ಚಶಬ್ದವು ಅವಧಾರಣಾರ್ಥಕವಾದದ್ದು. ''ಇತ್ಯತ್ರ'' ಎಂದರೆ ಈ ರೀತಿಯ ಛಂದೋಗವಾಕ್ಯದಲ್ಲಿ ಎಂದು ಅರ್ಥ. ಇದರಿಂದ ಇಲ್ಲಿರುವ ಆಕಾಶಶಬ್ದಕ್ಕೆ ವಿಷ್ಣುಭಿನ್ನನಲ್ಲಿ ತಾತ್ಪರ್ಯವಿರುವುದೆಂದು ಹೇಳುವ ಮೂಲಕ ಹಿಂದೆ ಹೇಳಲಾದ ಸರ್ವಾಧಾರತ್ವವು ವಿಷ್ಣುಭಿನ್ನರಲ್ಲಿ ಇರುವುದೆಂದು ಆಕ್ಷೇಪಿಸಿರುವುದರಿಂದ ಆ ಹಿಂದಿನ ದ್ಯುಭ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯನ್ನು ಹೇಳಿದಂತಾಗುವುದು. ಛಾಂದೋಗ್ಯಶ್ರುತಿಯಲ್ಲಿ ಹೇಳಿರುವ ಆಕಾಶವೆಂಬ ವಿಷಯವು ಸೂಚಿತವಾಗುವುದು.

ವೈ, ನಾಮ ಎಂಬ ಪದಗಳಿಂದ ಯುಕ್ತಿಸಹಿತವಾದ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ. 'ಸಃ' ಎಂಬ ಪದವು ಶೇಷವಾಗಿದೆ. 'ಚಶಬ್ದವು ಏವಕಾರದ ಅರ್ಥವನ್ನು ಹೇಳುವುದು. ತಥಾ ಚ – ಛಾಂದೋಗ್ಯಶ್ರುತಿಯಲ್ಲಿ ಉಕ್ತವಾಗಿರುವ ಆಕಾಶವು ಪ್ರಸಿದ್ಧಃ ಎಂದರೆ ಸಾಕ್ಷಿಸಿದ್ಧವಾದ ಅವ್ಯಾಕೃತಾಕಾಶವೆಂದೇ ಅಂಗೀಕರಿಸಬೇಕು. ಏಕೆಂದರೆ ಆಕಾಶಪದದಿಂದ 'ವೈ, ನಾಮ' ಎಂಬ ಎರಡು ನಿಪಾತಗಳಿಂದ ಸೂಚಿತವಾದ ಪ್ರಸಿದ್ಧಿಯನ್ನು ಪಡೆದಿರುವ ಅರ್ಥವನ್ನು ಉಪದೇಶಿಸಿರುವುದರಿಂದ ಅಂದರೆ ಉಕ್ತವಾಗಿರುವುದರಿಂದ ಎಂದು ಅರ್ಥ.

ಕೆಲವರಾದರೋ – ಸತ್ತರ್ಕದೀಪಾವಲಿಯಲ್ಲಿ 'ಪ್ರಸಿದ್ಧೋ ಭೂತಾಕಾಶ ಏವಾಂಗೀಕಾರ್ಯಃ ಇತಿ ವಚನಾತ್' ಪ್ರಸಿದ್ಧವಾದ ಭೂತಾಕಾಶವೇ ಇಲ್ಲಿ ಆಕಾಶಶಬ್ದವಾಚ್ಯವಾದದ್ದು ಎಂದು ಅಂಗೀಕರಿಸಬೇಕು ಎಂಬ ವಾಕ್ಯವಿರುವುದರಿಂದ, 'ಅವಕಾಶಸ್ಯಾಪಿ ನಾಮರೂಪವತ್ವಾತ್' ಎಂದು ಚಂದ್ರಿಕಾಕಾರರಿಗೆ ಅಭಿಪ್ರೇತವಾದ ಟೀಕಾಪಾಠವನ್ನು ಅನುಸರಿಸಿ, 'ಆಕಾಶಶಬ್ದಪ್ರವೃತ್ತಿನಿಮಿತ್ತಮ್ ಅವಕಾಶತ್ವಂ ಭೂತೇ ನಿರವಧಿಕಮ್' ಆಕಾಶಶಬ್ದದ ಪ್ರವೃತ್ತಿನಿಮಿತ್ತವಾದ ಅವಕಾಶತ್ವವು ಭೂತಾಕಾಶದಲ್ಲಿ ನಿರವಧಿಕವಾಗಿರುವುದು - ಎಂದು ಸುಧಾದಲ್ಲಿ ಹೇಳಿರುವುದರಿಂದ ಈ ಅಧಿಕರಣದಲ್ಲಿ ಅವಕಾಶಶಬ್ದವಾಚ್ಯವಾದ ಭೂತಾಕಾಶವೇ ಪೂರ್ವಪಕ್ಷ ವಿಷಯವೆಂದು ಹೇಳುವರು.

ಶ್ರುತಿಯಲ್ಲಿ 'ವೈ,ನಾಮ' ಎಂಬ ಎರಡು ನಿಪಾತಗಳು ಪ್ರಸಿದ್ಧಿಯನ್ನು ಹೇಳುವವು. ನಾಮರೂಪಯೋಃ ಎಂಬಲ್ಲಿರುವ 'ನಾಮ' ಎಂದರೆ ವಾಚಕಶಬ್ದಪ್ರಪಂಚ ಎಂದು

ಅರ್ಥ. ರೂಪಪದದಿಂದ ಪ್ರಾಕೃತ ರೂಪವನ್ನು ಪಡೆದಿರುವ ಕೇವಲ ಅರ್ಥಪ್ರಪಂಚವು ಹೇಳಲ್ಪಡುವುದು. ತಥಾ ಚ – 'ಆಕಾಶಃ ಆಕಾಶವು 'ನಾಮರೂಪಯೋಃ' ಶಬ್ದಾರ್ಥ-ರೂಪವಾದ ಪ್ರಪಂಚಗಳ, 'ನಿರ್ವಹಿತಾ' ನಿರ್ವಾಹಕವಾಗಿದೆ. ಆಶ್ರಯವೂ ಕರ್ತೃವೂ ಆಗಿದೆ ಎಂದು ಅರ್ಥ. 'ತೇ' ನಿರ್ವಹಿಸಲ್ಪಡುವ ಪ್ರಕೃತವಾದ ನಾಮರೂಪಗಳು 'ಅಂತರಾ ಯತ್' ಅಂತರಾ ಎಂದರೆ ಭೇದದಿಂದ ಎಂದು ಅರ್ಥ - ನಾಮರೂಪ-ಪ್ರಪಂಚದಿಂದ ಭಿನ್ನವಾಗಿ ಯಾವುದು ಇದೆಯೋ ಎಂದು ಅಭಿಪ್ರಾಯ.

ಅಥವಾ 'ತೇ' ಎಂಬಲ್ಲಿ ತತ್ ಶಬ್ದದಿಂದ ವಾಚ್ಯಪ್ರಪಂಚದಲ್ಲಿ ಅಂತರ್ಭೂತ-ವಾಗಿರುವ ನೀಲಾದಿ ರೂಪವು ಮತ್ತು ವಾಚಕವಾದ ನಾಮವು ಗ್ರಹಿಸಲ್ಪಡುವುದು. ತಥಾ ಚ – 'ತೇ' ಆ ನಾಮರೂಪಗಳು, 'ಅಂತರಾ' ವಿನಾ ಅಂದರೆ ಅದರಿಂದ ರಹಿತ-ವಾದದ್ದು ಎಂದು ಭಾವ. ಸಾಕಲ್ಯೇನ ನಾಮವಾಚ್ಯವಾದದ್ದು ಪ್ರಾಕೃತರೂಪರಹಿತ-ವಾದದ್ದು ಯಾವುದು ಇರುವುದೋ ಅದು ಬ್ರಹ್ಮವೆಂದು ಅರ್ಥ. ಅಥವಾ – 'ತೇ' ಅಂದರೆ ನಾಮವುಳ್ಳ ಮತ್ತು ರೂಪವುಳ್ಳವುಗಳ 'ಅಂತರಾ' ಭೇದದಿಂದ ಯದಸ್ತಿ-ಯಾವುದು ಇದೆಯೋ ಎಂದು ಅರ್ಥ. ತತ್ತ್ವಪ್ರದೀಪದಲ್ಲಿ ಹೀಗೆ ಹೇಳಿದೆ – 'ನಾಮಿ ಚ ರೂಪಿ ಚ ಯನ್ನ ಭವತಿ ತದ್ ಬ್ರಹ್ಮ' – 'ನಾಮವುಳ್ಳದ್ದು ರೂಪವುಳ್ಳದ್ದು ಯಾವು-ದಲ್ಲವೋ ಅದು 'ಬ್ರಹ್ಮ' ಎಂದು.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ ॥

ಸಿದ್ಧಾಂತವನ್ನು ಹೇಳುವ ಸೂತ್ರವನ್ನು 'ಅತಃ' ಎಂದು ಅವತಾರಿಕೆ ಕೊಟ್ಟು ವ್ಯಾಖ್ಯಾನಮಾಡುತ್ತಿದ್ದಾರೆ.

**ಭಾಷ್ಯಮ್ – ಅತ ಉಚ್ಯತೇ-**

**॥ ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ ॥ ೪೧ ॥**

**'ತೇ ಯದಂತರಾ ತದ್ ಬ್ರಹ್ಮ' ಇತ್ಯರ್ಥಾಂತರತ್ವಾದಿವ್ಯಪದೇಶಾದ್ ಆಕಾಶೋ ಹರಿರೇವ ।**

ಈ ಆಕ್ಷೇಪವನ್ನು ನಿರಾಕರಿಸಲು ಓಂ ಆಕಾಶೋಽರ್ಥಾಂತರತ್ವಾದಿ-ವ್ಯಪದೇಶಾತ್ ಓಂ ಎಂದು ಹೇಳಲಾಗಿದೆ.

'ಆಕಾಶೋ ವೈ ನಾಮ' ಎಂಬ ಶ್ರುತಿಯಲ್ಲಿ ಆಕಾಶಶಬ್ದವಾಚ್ಯನು ವಿಷ್ಣುವೇ ಆಗಿರುವನು. ಏಕೆಂದರೆ, ಅವನಿಗೆ ಪ್ರಾಕೃತನಾಮರೂಪ-ಗಳು ಇಲ್ಲವೆಂಬ ವಿಲಕ್ಷಣವಸ್ತುವೆಂದು ಹೇಳಿರುವುದರಿಂದ.

'ತೇ ಯದಂತರಾ ತದ್ ಬ್ರಹ್ಮ' ಎಂದು ನಾಮರೂಪವಿಲಕ್ಷಣ-ವಸ್ತುವೆಂದು ಹೇಳಿರುವುದರಿಂದ ಆಕಾಶಶಬ್ದವಾಚ್ಯನು ಹರಿಯೇ ಆಗಿದ್ದಾನೆ.

ಭಾ.ದೀ. – ಇತ್ಯರ್ಥಾಂತರತ್ವಾದಿವ್ಯಪದೇಶಾದ್ ಇತಿ ॥ ಸೂತ್ರೇ ಭಾಷ್ಯೇ ಚ ಪದಾರ್ಥತ್ವಬೋಧಾಯ 'ಅರ್ಥ'ಶಬ್ದಃ । ಶ್ರುತ್ಯನುಸಾರಾದ್ 'ಅಂತರ'ಶಬ್ದಃ । 'ತಾಭ್ಯಾಮ್' ಇತಿ ಶೇಷಃ । ತಥಾ ಚ – ತಾಭ್ಯಾಂ ನಾಮರೂಪಾಭ್ಯಾಮ್ ಅನ್ಯೋಽರ್ಥಃ ಅರ್ಥಾಂತರಂ, ಯದ್ವಾ ತಾಭ್ಯಾಂ ವಿಲಕ್ಷಣಃ ಅರ್ಥಃ ಅರ್ಥಾಂ-ತರಃ ತಸ್ಯಭಾವಸ್ತತ್ತ್ವಮ್ । ನಾಮರೂಪಪ್ರಪಂಚಭಿನ್ನತ್ವಂ ವಾ ಪ್ರಾಕೃತನಾಮ-ರೂಪರಾಹಿತ್ಯಂ ವಾ । ನಾಮರೂಪರಾಹಿತ್ಯಾಖ್ಯ ಅರ್ಥಾಂತರತ್ವವ್ಯಪದೇಶಾದ್ ಇತ್ಯರ್ಥಃ । 'ಆದಿ'ಪದೇನ ಬ್ರಹ್ಮತ್ವಂ ಗೃಹ್ಯತೇ ।

ಯದ್ವಾ – ನಿರಪೇಕ್ಷಯೋರೇವ ನಾಮರೂಪರಾಹಿತ್ಯಯೋರಾಕಾಶಸ್ಯ ಬ್ರಹ್ಮತ್ವಸಾಧಕತ್ವಾದ್ ಅರ್ಥಾಂತರಪದೇನ ರೂಪರಾಹಿತ್ಯಮ್ ಆದಿಪದೇನ ನಾಮರಾಹಿತ್ಯಂ ಚ ಗೃಹ್ಯತೇ । ತಥಾ ಚ ಏವಂರೂಪಾರ್ಥಾಂತರತ್ವಾದ್ಯುಕ್ತೇಃ - ಇತ್ಯರ್ಥಃ । 'ಆಕಾಶಃ' ಛಾಂದೋಗ್ಯೇ ಶ್ರುತೋಽಯಮಾಕಾಶಃ ತಚ್ಛಬ್ದವಾಚ್ಯಃ । ಸಮನ್ವಯಸೂತ್ರಾದನುವೃತ್ತಸ್ಯ 'ತತ್ತು' ಇತ್ಯಸ್ಯಾರ್ಥಮಾಹ – ಹರಿರೇವೇತಿ ॥

ಅನೇನ – ಅಯಮಾಕಾಶೋ ಹರಿರೇವ । ಕುತಃ? ಅಸ್ಯ ಅರ್ಥಾಂತರತ್ವಾದಿ-

ವ್ಯಪದೇಶಾತ್ 'ತೇ ಯದಂತರಾ' ಇತಿ ನಾಮರೂಪರಾಹಿತ್ಯಾಖ್ಯವಿಲಕ್ಷಣಾರ್ಥತ್ವೋಕ್ತೇಃ, ಬ್ರಹ್ಮತ್ವೋಕ್ತೇಶ್ಚ - ಇತಿ ಸೂತ್ರಾರ್ಥ ಉಕ್ತೋ ಭವತಿ।

''ಇತ್ಯರ್ಥಾಂತರತ್ವಾದಿವ್ಯಪದೇಶಾತ್'' ಎಂದು ಸೂತ್ರದಲ್ಲಿ ಮತ್ತು ಭಾಷ್ಯದಲ್ಲಿ ಅರ್ಥಶಬ್ದವು ಪದಾರ್ಥತ್ವಬೋಧವನ್ನು ಮಾಡುವುದು. 'ತೇ ಯದಂತರಾ' ಎಂಬ ಶ್ರುತಿಯನ್ನು ಅನುಸರಿಸಿ ಅಂತರಶಬ್ದವು ಪ್ರಯೋಗಿಸಲ್ಪಟ್ಟಿದೆ. 'ತಾಭ್ಯಾಂ' ಎಂಬ ಪದವು ಶೇಷವಾಗಿದೆ. ತಥಾ ಚ – ತಾಭ್ಯಾಂ ಎಂದರೆ ನಾಮರೂಪಗಳಿಗಿಂತ ಎಂದು ಅರ್ಥ. ಅರ್ಥಾಂತರ ಎಂದರೆ ಅನ್ಯಃ ಅರ್ಥಃ ಅರ್ಥಾಂತರಮ್ ಎಂದು ವಿಗ್ರಹ. ಅಥವಾ 'ತಾಭ್ಯಾಂ ವಿಲಕ್ಷಣಃ ಅರ್ಥಃ ಅರ್ಥಾಂತರಃ - ತಸ್ಯ ಭಾವಃ ತತ್ವಮ್' ಎಂಬ ವಿಗ್ರಹಕ್ಕನುಸಾರವಾಗಿ ಅರ್ಥಾಂತರತ್ವವೆಂದರೆ ನಾಮರೂಪಾತ್ಮಕವಾದ ಪ್ರಪಂಚಭಿನ್ನತ್ವ, ಅಥವಾ ಪ್ರಾಕೃತವಾದ ನಾಮರೂಪರಹಿತತ್ವ. 'ಅರ್ಥಾಂತರತ್ವವ್ಯಪದೇಶಾತ್' ಎಂಬ ಪದಕ್ಕೆ ನಾಮರೂಪರಹಿತತ್ವ ಎಂಬ ಅರ್ಥಾಂತರವನ್ನು ಹೇಳಿರುವುದರಿಂದ ಎಂದು ಅರ್ಥ. ಇಲ್ಲಿ ಆದಿಪದದಿಂದ ಬ್ರಹ್ಮತ್ವವು ಗ್ರಹಿಸಲ್ಪಡುವುದು.

ಅಥವಾ – ನಾಮರಾಹಿತ್ಯ ಮತ್ತು ರೂಪರಾಹಿತ್ಯಗಳು ಇನ್ನೊಂದರ ಅಪೇಕ್ಷೆ ಇಲ್ಲದೇ ಆಕಾಶವು ಬ್ರಹ್ಮವೆಂದು ಸಾಧಿಸುವ ಸಾಮರ್ಥ್ಯವನ್ನು ಪಡೆದಿರುವುದರಿಂದ ಅರ್ಥಾಂತರಪದದಿಂದ ರೂಪರಾಹಿತ್ಯವನ್ನು ಆದಿಪದದಿಂದ ನಾಮರಾಹಿತ್ಯವನ್ನು ಗ್ರಹಿಸಲಾಗುವುದು. ತಥಾ ಚ – ಇಂತಹ ಅರ್ಥಾಂತರತ್ವ ಮೊದಲಾದವುಗಳನ್ನು ಹೇಳಿರುವುದರಿಂದ ಎಂದು ಅರ್ಥ. ಭಾಷ್ಯದಲ್ಲಿ 'ಆಕಾಶಃ' ಅಂದರೆ ಛಾಂದೋಗ್ಯದಲ್ಲಿ ಶ್ರುತವಾಗಿರುವ ಆಕಾಶ ಅಂದರೆ ಆಕಾಶಶಬ್ದವಾಚ್ಯನು ಎಂದು ಅರ್ಥ. ಸಮನ್ವಯಸೂತ್ರದಿಂದ ಅನುವೃತ್ತಿಹೊಂದಿರುವ 'ತತ್ ತು' ಎಂಬ ಪದಗಳ ಅರ್ಥವನ್ನು ''ಹರಿರೇವ'' ಎಂಬ ಪದಗಳು ಹೇಳುತ್ತವೆ.

ಇದರಿಂದ – ಈ ಆಕಾಶಶಬ್ದವಾಚ್ಯನು ಹರಿಯೇ ಆಗಿದ್ದಾನೆ. ಏಕೆಂದರೆ? ಈ ಆಕಾಶಕ್ಕೆ 'ಅರ್ಥಾಂತರತ್ವಾದಿ ವ್ಯಪದೇಶಾತ್' - 'ತೇ ಯದಂತರಾ' ಎಂದು ನಾಮರೂಪರಾಹಿತ್ಯವೆಂಬ ವಿಲಕ್ಷಣಪದಾರ್ಥತ್ವವನ್ನು ಹೇಳಿರುವುದರಿಂದ ಮತ್ತು ಬ್ರಹ್ಮತ್ವವನ್ನು ಹೇಳುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ.– ಆಕಾಶೇ ಶ್ರುತೇನ ಅನಾಮರೂಪತ್ವಾದಿಲಿಂಗೇನ ಕುತೋ ವಿಷ್ಣುತ್ವ-ನಿಶ್ಚಯಃ? ಇತ್ಯತಃ ತಸ್ಯ ತನ್ನಿಷ್ಠತ್ವಾತ್ ಇತಿ ಭಾವೇನ ತತ್ರ ಪ್ರಮಾಣತಯಾಽಽಥ-ರ್ವಣೀಂ ಶ್ರುತಿಮಾಹ – ಅವರ್ಣಮಿತಿ ॥

ಆಕಾಶದಲ್ಲಿ ಶ್ರುತವಾಗಿರುವ ನಾಮರೂಪರಹಿತತ್ವ ಮೊದಲಾದ ಲಿಂಗದಿಂದ ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಆ ಧರ್ಮಗಳು ವಿಷ್ಣುನಿಷ್ಠವಾದ ಧರ್ಮಗಳಾಗಿರುವುದರಿಂದ ವಿಷ್ಣುತ್ವನಿಶ್ಚಯವಾಗುವುದು ಎಂಬ ಅಭಿ-ಪ್ರಾಯದಿಂದ ಆ ವಿಷಯದಲ್ಲಿ ಪ್ರಮಾಣವಾಗಿ ''ಅವರ್ಣಮ್'' ಎಂಬ ಆಥರ್ವಣ-ಶ್ರುತಿಯನ್ನು ಉದಾಹರಿಸುತ್ತಿದ್ದಾರೆ.

## ಭಾಷ್ಯಮ್ – 'ಅವರ್ಣಂ 'ಯತೋ ವಾಚೋ ನಿವರ್ತಂತೇ' ಇತ್ಯಾದಿ-ಶ್ರುತೇಸ್ತಸ್ಯೈವ ಹಿ ತಲ್ಲಕ್ಷಣಮ್ ।

'ಅವರ್ಣಂ' 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿ-ಗಳಿಂದ ಪ್ರಾಕೃತನಾಮರೂಪರಾಹಿತ್ಯವೆಂಬ ಲಕ್ಷಣವು ಅವನಿಗೇ ಸಂಬಂಧಿಸಿರುವುದು.

ಭಾ.ದೀ. – ಪ್ರಾಕೃತಶುಕ್ಲಾದಿವರ್ಣರಹಿತಂ ತದ್ಭಿನ್ನಂ ವಾ ಇತ್ಯರ್ಥಃ। ಯದ್ವಾ, ಅವರ್ಣಂ ನ ವರ್ಣ್ಯಂ 'ನಾಪಿ ವರ್ಣಾತ್ಮಕಮ್' ಇತ್ಯರ್ಥಃ।

'ಯತಃ' ಇತಿ ಶ್ರುತಿಃ – 'ಯತೋ' ಬ್ರಹ್ಮಣೋ 'ವಾಚೋ' ನಾಮಾನಿ । 'ನಿವರ್ತಂತೇ' - ಇತಿ ಅನಾಮತ್ವೋಕ್ತಿಪರತಯಾ ವ್ಯಾಖ್ಯೇಯಾ । ಆದಿಶಬ್ದಾತ್ 'ಅಶಬ್ದಮ್ ಅಸ್ಪರ್ಶಮ್ ಅರೂಪಮ್' (ಕಠ.೧.೩.೧೫) ಇತ್ಯಾದಿ ಶ್ರುತಿರ್ಗೃಹ್ಯತೇ। 'ಇತ್ಯಾದಿಶ್ರುತೇಃ' ಇತ್ಯಸ್ಯ 'ತಸ್ಯ ವಿಷ್ಣೋರೇತದರೂಪತ್ವಾದಿಕಂ ಲಕ್ಷಣಮ್ ಅಸಾಧಾರಣಧರ್ಮ ಇತಿ ಜ್ಞಾಯತೇ' ಇತ್ಯಧ್ಯಾಹಾರೇಣ ಅನ್ವಯಃ । 'ಹಿ' ಯಸ್ಮಾತ್ ತಸ್ಮಾತ್ ನ ಲಿಂಗಸ್ಯ ವ್ಯಧಿಕರಣಾಸಿದ್ಧಿಃ - ಇತಿ ಭಾವಃ। 'ತಸ್ಯೈವ' ಇತಿ 'ಏವ'ಕಾರೇಣ ವ್ಯಭಿಚಾರ- ಶಂಕಾಽಪಿ ನಿರಸ್ತಾ।

ಯದ್ಯಪಿ 'ಯತಃ' ಇತ್ಯನಾಮತ್ವಶ್ರುತಿರೇವ ಪ್ರಥಮಮುದಾಹರ್ತವ್ಯಾ, 'ತೇ ಯದಂತರಾ' ಇತಿ ನಾಮರಾಹಿತ್ಯಸ್ಯೈವ ಪ್ರಥಮಮುಕ್ತತ್ವಾತ್ ನ ತು 'ಅವರ್ಣಮ್' ಇತ್ಯರೂಪಶ್ರುತಿಃ । ತಥಾಽಪಿ ವಾಚಕಸ್ಯ ನಾಮ್ನೋ ವಾಚ್ಯಾ-ಪೇಕ್ಷಯಾಽಪ್ರಾಧಾನ್ಯಾದ್ ವಾಚ್ಯಸ್ಯೈವ ಪ್ರಧಾನತ್ವಾದ್ ವಾಚ್ಯಪ್ರಪಂಚಾಂತ-ರ್ಗತರೂಪರಾಹಿತ್ಯಶ್ರುತಿರೇವ ಪ್ರಥಮಮುದಾಹೃತಾ - ಇತ್ಯದೋಷಃ।

'ಅವರ್ಣ' ಎಂದರೆ ಪ್ರಾಕೃತವಾದ ಶುಕ್ಲಾದಿವರ್ಣಗಳಿಂದ ರಹಿತನು. ಅಥವಾ ಅವುಗಳಿಂದ ಭಿನ್ನನು ಎಂದು ಅರ್ಥ. ಅಥವಾ 'ಅವರ್ಣಮ್' ಅಂದರೆ ವರ್ಣ-ವಿಷಯವಲ್ಲ; ಹಾಗೂ ವರ್ಣಾತ್ಮಕವೂ ಅಲ್ಲ ಎಂದು ಅರ್ಥ.

''ಯತಃ'' ಎಂಬ ಶ್ರುತಿಯು 'ಯತಃ' ಎಂದರೆ ಬ್ರಹ್ಮನಿಂದ ನಾಮಗಳು 'ನಿವ-ರ್ತಂತೇ' ನಿವೃತ್ತವಾಗುವವು ಎಂದು ಬ್ರಹ್ಮನಿಗೆ ಅನಾಮತ್ವವನ್ನು ಹೇಳುವ ತಾತ್ಪರ್ಯ-ವುಳ್ಳದ್ದೆಂದು ವ್ಯಾಖ್ಯಾನ ಮಾಡಬೇಕು. 'ಇತ್ಯಾದಿ ಶ್ರುತೇಃ' ಎಂಬಲ್ಲಿರುವ ''ಆದಿ''ಶಬ್ದ-ದಿಂದ 'ಅಶಬ್ದಮಸ್ಪರ್ಶಮರೂಪಮ್' ಇತ್ಯಾದಿ ಶ್ರುತಿಯು ಗ್ರಹಿಸಲ್ಪಡುವುದು. ''ಇತ್ಯಾದಿ ಶ್ರುತೇಃ'' ಎಂಬ ಪದಗಳಿಗೆ 'ತಸ್ಯ ವಿಷ್ಣೋಃ ಏತದರೂಪತ್ವಾದಿಕಂ ಲಕ್ಷಣಮ್ ಅಸಾಧಾರಣಧರ್ಮಃ ಇತಿ ಜ್ಞಾಯತೇ' - 'ಆ ವಿಷ್ಣುವಿಗೆ ಈ ಅರೂಪ-ತ್ವಾದಿಗಳು ಲಕ್ಷಣವೆಂದು ಅಸಾಧಾರಣಧರ್ಮವಾಗಿದೆ ಎಂದು ತಿಳಿದು ಬರುವುದು' ಎಂದು ಅಧ್ಯಾಹಾರ ಮಾಡಿಕೊಂಡ ವಾಕ್ಯದೊಂದಿಗೆ ಅನ್ವಯವಾಗುವುದು. ''ತಸ್ಯೈವ ಹಿ'' ಎಂಬ ಭಾಷ್ಯದಲ್ಲಿ 'ಹಿ' ಎಂದರೆ ಆದ್ದರಿಂದ ಎಂದು ಅರ್ಥ. ಆದ್ದರಿಂದ ಲಿಂಗಕ್ಕೆ ವ್ಯಧಿಕರಣಾಸಿದ್ಧಿದೋಷವಿಲ್ಲ ಎಂದು ಭಾವ. 'ತಸ್ಯೈವ' ಎಂಬಲ್ಲಿರುವ ಏವಶಬ್ದದಿಂದ ನಾಮರೂಪರಾಹಿತ್ಯವೆಂಬ ಹೇತುವಿಗೆ ವ್ಯಭಿಚಾರಶಂಕೆಯೂ ನಿರಾಕೃತವಾಗುವುದು.

ಯದ್ಯಪಿ – ''ಯತಃ'' ಎಂಬ ನಾಮರಾಹಿತ್ಯವನ್ನು ಹೇಳುವ ಶ್ರುತಿಯನ್ನೇ ಮೊದಲು ಉದಾಹರಿಸಬೇಕಾಗಿದ್ದಿತು. ಏಕೆಂದರೆ, 'ತೇ ಯದಂತರಾ' ಎಂಬ ಶ್ರುತಿ-ಯಲ್ಲಿ ನಾಮರಾಹಿತ್ಯವನ್ನೇ ಮೊದಲು ಹೇಳಲಾಗಿದೆ. ಹೊರತು ಅರೂಪತ್ವವನ್ನು ಹೇಳುವ 'ಅವರ್ಣಮ್' ಎಂಬ ಶ್ರುತಿಯನ್ನಲ್ಲ. ಆದರೂ ನಾಮ ಅಂದರೆ ವಾಚಕ-ವಾದ ಶಬ್ದವು ವಾಚ್ಯದ ದೃಷ್ಟಿಯಿಂದ ಅಪ್ರಧಾನವಾಗಿರುವ ಕಾರಣ ವಾಚ್ಯವೇ

ಪ್ರಧಾನವಾಗಿರುವುದರಿಂದ ವಾಚ್ಯಪ್ರಪಂಚದಲ್ಲಿ ಅಂತರ್ಗತವಾಗಿರುವ ರೂಪದ ರಾಹಿತ್ಯವನ್ನು ಹೇಳುವ ಶ್ರುತಿಯನ್ನೇ ಮೊದಲು ಉದಾಹರಿಸಲಾಗಿದೆ. ಆದ್ದರಿಂದ ದೋಷವಿಲ್ಲ.

ಭಾ.ದೀ. – ನನು ಹರೇರ್ನಾಮರೂಪರಾಹಿತ್ಯಂ ನೋಪಪದ್ಯತೇ, ಸರ್ವ-ಶಬ್ದವಾಚ್ಯತ್ವಾದ್ ರುಗ್ಮವರ್ಣಾದಿರೂಪವತ್ತ್ವಾಚ್ಚ । ಅನ್ಯಥಾ 'ಈಕ್ಷತೇಃ', 'ರೂಪೋಪನ್ಯಾಸಾಚ್ಚ' ಇತ್ಯುಕ್ತವಿರೋಧಾಪಾತಾತ್ ಇತ್ಯತ ಆಹ – ಅನಾಮೇತಿ ॥

ಹರಿಗೆ ನಾಮರೂಪರಾಹಿತ್ಯವನ್ನು ಹೇಳಿರುವುದು ಯುಕ್ತವಲ್ಲ. ಏಕೆಂದರೆ, ಅವನು ಸರ್ವಶಬ್ದವಾಚ್ಯನಾಗಿದ್ದಾನೆ. ಹಾಗೂ ರುಕ್ಮವರ್ಣ ಮೊದಲಾದ ರೂಪವನ್ನು ಪಡೆದಿದ್ದಾನೆ. ಹೀಗೆ ಒಪ್ಪದಿದ್ದರೆ 'ಈಕ್ಷತೇಃ' 'ರೂಪೋಪನ್ಯಾಸಾಚ್ಚ' ಎಂದು ಹೇಳಿದ್ದರ ವಿರೋಧ ಬರುವುದು ಎಂಬ ಶಂಕೆಯನ್ನು ಪರಿಹರಿಸಲು ''ಅನಾಮ'' ಎಂಬ ಶ್ರುತಿ-ಯನ್ನು ಉದಾಹರಿಸಲಾಗಿದೆ.

**ಭಾಷ್ಯಮ್ – 'ಅನಾಮಾ ಸೋಽಪ್ರಸಿದ್ಧತ್ವಾದ್ ಅರೂಪೋ ಭೂತ-ವರ್ಜನಾತ್' ಇತಿ ಬ್ರಾಹ್ಮೇ ॥ ೪೧ ॥**

॥ ಇತಿ ಆಕಾಶಾಧಿಕರಣಮ್ ॥ ೧೨ ॥

ಶ್ರೀಹರಿಯು ಸಾಕಲ್ಯೇನ ಇತರರಿಂದ ತಿಳಿಯಲು ಸಾಧ್ಯವಿಲ್ಲದ ಕಾರಣ ನಾಮರಹಿತನೆಂದೆನಿಸುವನು. ಭೌತಿಕದೇಹಶೂನ್ಯನಾಗಿ-ದ್ದರಿಂದ ಅರೂಪನೆಂದೆನಿಸುವನು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

ಭಾ.ದೀ. – 'ಸಃ' - ಹರಿಃ, 'ಅಪ್ರಸಿದ್ಧತ್ವಾತ್' ಸಾಕಲ್ಯೇನ ಸ್ವಾತ್ಮನೋಽನ್ಯೇನ ಶಬ್ದಾದಿನಾ ಅಪ್ರಮಿತತ್ವಾನ್ನಿಮಿತ್ತಾದ್ 'ಅನಾಮ' ಇತ್ಯುಚ್ಯತ ಇತ್ಯರ್ಥಃ।

ನ ಚೈವಮ್ ಆಕಾಶಶಬ್ದವಾಚ್ಯಸ್ಯ ಪ್ರಸಿದ್ಧಿಬೋಧಕನಿಪಾತದ್ವಯವಿರೋಧಃ ಇತಿ ವಾಚ್ಯಮ್ । ನಿಪಾತಬೋಧ್ಯಪ್ರಸಿದ್ಧೇಃ ವಿಧೇಯಭೂತನಿರ್ವೋಢೃತ್ವಾ-

ನ್ವಯಿತ್ವೇನ ಪೂರ್ವಪಕ್ಷಿರೀತ್ಯಾ ಉದ್ದೇಶ್ಯಾಕಾಶಾನ್ವಯಿತ್ವಾಭಾವಾತ್ । ನಿರ್ವೋಢೃತ್ವಸ್ಯ ಚ ಲೋಕಪ್ರಸಿದ್ಧತ್ವಾಭಾವೇಽಪಿ 'ಏಕೋ ದಾಧಾರ' ಇತ್ಯಾದಿ-ಶ್ರುತಿಪ್ರಸಿದ್ಧತ್ವಾತ್ । ತಸ್ಯ ಚ 'ಅಪ್ರಸಿದ್ಧತ್ವಾತ್' ಇತ್ಯನೇನಾನಿಷಿದ್ಧತ್ವಾತ್ । 'ಭೂತ-ವರ್ಜನಾತ್' ಭೌತಿಕದೇಹಶೂನ್ಯತ್ವಾತ್ ತಾದೃಶರೂಪರಾಹಿತ್ಯಾದ್ ವಾಽರೂಪ ಇತ್ಯರ್ಥಃ । 'ಇತಿ ಬ್ರಾಹ್ಮೇ' ಇತ್ಯಸ್ಯ 'ಉಕ್ತತ್ವಾನ್ನೋಕ್ತವಿರೋಧಃ' ಇತ್ಯಧ್ಯಾಹೃತೇನ ಅನ್ವಯಃ ।

॥ ಇತಿ ಭಾಷ್ಯದೀಪಿಕಾಯಾಮ್ ಆಕಾಶಾಧಿಕರಣಮ್ ॥೧೨॥

"ಸಃ" - ಆ ಹರಿಯು, 'ಅಪ್ರಸಿದ್ಧತ್ವಾತ್' - ತನ್ನಿಂದ ಭಿನ್ನವಾದ ಶಬ್ದಾದಿಗಳಿಂದ ಸಾಕಲ್ಯೇನ ಯಥಾರ್ಥವಾಗಿ ತಿಳಿಯಲು ಅಶಕ್ಯನಾದ ಕಾರಣ ಅನಾಮನೆಂದೆನಿಸುವನು ಎಂದು ಅರ್ಥ.

ಹಾಗೆ ಹೇಳಿದಲ್ಲಿ ಆಕಾಶಶಬ್ದವಾಚ್ಯಕ್ಕೆ ಹೇಳುವ ಪ್ರಸಿದ್ಧಿಯನ್ನು ಬೋಧಿಸುವ 'ವೈ, ನಾಮ' ಎಂಬೆರಡು ನಿಪಾತಗಳ ವಿರೋಧ ಬರುವುದು ಎಂದು ಹೇಳತಕ್ಕದ್ದಲ್ಲ. ನಿಪಾತವು ತಿಳಿಸುವ ಪ್ರಸಿದ್ಧಿಯು ಉದ್ದೇಶ್ಯವಾದ ಆಕಾಶಕ್ಕೆ ಅನ್ವಯಿಸದೇ ವಿಧೇಯ-ವಾಗಿರುವ ನಿರ್ವೋಢೃತ್ವದಲ್ಲಿ (ನಿರ್ವಾಹಕತ್ವದಲ್ಲಿ) ಅನ್ವಯವನ್ನು ಹೊಂದುವುದು. ನಿರ್ವಾಹಕತ್ವವು ವಿಷ್ಣುವಿಗೆ ಲೋಕದಲ್ಲಿ ಪ್ರಸಿದ್ಧವಲ್ಲದೇ ಇದ್ದರೂ 'ಏಕೋ ದಾಧಾರ' ಎಂಬ ಶ್ರುತಿಯಿಂದ ಪ್ರಸಿದ್ಧವಾಗಿದೆ. ಆ ರೀತಿಯ ನಿರ್ವಾಹಕತ್ವವು 'ಅನಾಮ, ಅಪ್ರಸಿದ್ಧತ್ವಾತ್' ಎಂಬ ವಾಕ್ಯದಿಂದ ನಿಷೇಧಿಸಲ್ಪಟ್ಟಿಲ್ಲ. 'ಭೂತವರ್ಜನಾತ್' ಭೌತಿಕ-ದೇಹಶೂನ್ಯನಾಗಿರುವುದರಿಂದ ಅಥವಾ ಅಂತಹ ರೂಪರಹಿತನಾದ್ದರಿಂದ 'ಅರೂಪ' ಎಂದು ಅರ್ಥ. 'ಇತಿ ಬ್ರಾಹ್ಮೇ' ಎಂಬ ಪದಗಳಿಗೆ 'ಉಕ್ತತ್ವಾತ್ ನೋಕ್ತವಿರೋಧಃ' ಅಂದರೆ 'ಹೀಗೆ ಹೇಳಿರುವುದರಿಂದ ಹಿಂದೆ ಹೇಳಿರುವುದರ ವಿರೋಧವಿಲ್ಲ' ಎಂಬ ಅಧ್ಯಾಹಾರವನ್ನು ಹೊಂದಿದ ಪದಗಳೊಂದಿಗೆ ಅನ್ವಯ.

॥ ಇಲ್ಲಿಗೆ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

* * * * *

## ೧೩. ಅಥ ಸುಷುಪ್ತ್ಯಧಿಕರಣಮ್

ಭಾ.ದೀ.– ಅತ್ರ ಅಧಿಕರಣೇ ಸ್ವಪ್ನಾದಿದ್ರಷ್ಟೃತ್ವಲಿಂಗಂ ಬ್ರಹ್ಮಣಿ ಸಮನ್ವೀಯತೇ। ಶ್ರುತ್ಯಾದಿಸಂಗತಿಂ ವಿಷಯಾದಿಕಂ ಚ ಸೂಚಯತಿ – ಅಸಂಗತ್ವಮಿತಿ ॥

ಈ ಅಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವವೆಂಬಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯಗೊಳಿಸಲಾಗುವುದು. ಶ್ರುತಿ ಮೊದಲಾದವುಗಳ ಸಂಗತಿಯನ್ನು ಮತ್ತು ವಿಷಯಾದಿಗಳನ್ನು ''ಅಸಂಗತ್ವಮ್'' ಇತ್ಯಾದಿ ವಾಕ್ಯದಿಂದ ಸೂಚಿಸುತ್ತಿದ್ದಾರೆ.

**ಭಾಷ್ಯಮ್ – ಅಸಂಗತ್ವಂ ಪರಮಾತ್ಮನ ಉಕ್ತಮ್ । ತಚ್ಚ 'ಸ ಯತ್ ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ'** (ಬೃ.೬.೩.೧೫) **ಇತಿ ಸ್ವಪ್ನಾದಿದ್ರಷ್ಟುಃ ಪ್ರತೀಯತೇ । ಸ ಚ ಜೀವಃ ಪ್ರಸಿದ್ಧೇರಿತಿ,**

ಅಸಂಗತ್ವವು ಪರಮಾತ್ಮನಿಗಿರುವುದೆಂದು ಹಿಂದೆ ಹೇಳಿದೆ. ಆ ಅಸಂಗತ್ವವಾದರೋ 'ಸ ಯತ್ ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ' ಎಂದು ಸ್ವಪ್ನಾದಿ ದ್ರಷ್ಟೃವಿಗೆ ಇರುವುದೆಂದು ತೋರುವುದು. ಲೋಕದಲ್ಲಿ ಸ್ವಪ್ನಾದಿಗಳನ್ನು ನೋಡುವವನು ಜೀವನೇ ಎಂದು ಪ್ರಸಿದ್ಧವಾಗಿರುವುದರಿಂದ ಆ ಆ ಸ್ವಪ್ನಾದಿದ್ರಷ್ಟೃವು ಜೀವನೇ ಆಗಿರುವನು.

ಭಾ.ದೀ.– ಅಕ್ಷರನಯೋದಾಹೃತೇ(೧-೩-೩) 'ಅಗಂಧಮರಸಮ್' ಇತ್ಯಾದಿ ವಾಜಸನೇಯವಾಕ್ಯೇ ಪರಮಾತ್ಮನೋ ಅಸಂಗತ್ವಮ್ ಉಕ್ತಮಿತ್ಯರ್ಥಃ । ತತಃ ಕಿಮ್? ಇತ್ಯತ ಆಹ – ತಚ್ಚೇತಿ ॥ ಚೋಽವಧಾರಣೇ । 'ಇತಿ' 'ಏವಂರೂಪೇ ವಾಜಸನೇಯವಾಕ್ಯೇ' ಇತ್ಯರ್ಥಃ।

ಅನೇನ ಸ್ವಪ್ನಾದಿದ್ರಷ್ಟೃತ್ವಸ್ಯ ಅನ್ಯನಿಷ್ಠತ್ವಾಕ್ಷೇಪಮುಖೇನ ಪೂರ್ವೋಕ್ತಾ-

ಸಂಗತ್ವಸ್ಯಾಪಿ ಅನ್ಯನಿಷ್ಠತ್ವಾಕ್ಷೇಪಾತ್, ಅಕ್ಷರನಯೇನ ಅಸ್ಯಾಽಕ್ಷೇಪಿಕೀ ಸಂಗತಿಃ ಸೂಚಿತಾ । ಸ್ವಪ್ನಾದಿದ್ರಷ್ಟೃತ್ವಾಖ್ಯೋ ವಿಷಯಶ್ಚ ಸೂಚಿತಃ ।

ಅಕ್ಷರಾಧಿಕರಣದಲ್ಲಿ ಉದಾಹರಿಸಲ್ಪಟ್ಟಿರುವ 'ಅಗಂಧಮರಸಮ್' ಎಂಬ ಬೃಹದಾರಣ್ಯಕವಾಕ್ಯದಲ್ಲಿ ಪರಮಾತ್ಮನಿಗೆ ಅಸಂಗತ್ವವನ್ನು ಹೇಳಲಾಗಿದೆ ಎಂದು ಅರ್ಥ. ಅದರಿಂದೇನು? ಎಂಬ ಶಂಕೆಗೆ ಉತ್ತರವಾಗಿ ''ತಚ್ಚ'' ಎಂಬ ವಾಕ್ಯವು ಹೊರಟಿದೆ. ಇಲ್ಲಿ ಚಕಾರವು ಏವಕಾರದ ಅರ್ಥವನ್ನು ಹೇಳುವುದು. ''ಇತಿ'' ಎಂದರೆ ಈ ರೀತಿ-ಯಾಗಿರುವ ವಾಜಸನೇಯವಾಕ್ಯದಲ್ಲಿ ಎಂದು ಅರ್ಥ.

ಇದರಿಂದ – ಸ್ವಪ್ನಾದಿದ್ರಷ್ಟೃತ್ವವು ವಿಷ್ಣುಭಿನ್ನನಲ್ಲಿರುವುದೆಂದು ಆಕ್ಷೇಪಿಸುವ ಮೂಲಕ ಹಿಂದೆ ಹೇಳಲಾದ ಅಸಂಗತ್ವವು ವಿಷ್ಣುಭಿನ್ನನಲ್ಲಿ ಇರುವುದೆಂದು ಆಕ್ಷೇಪಿಸು-ವುದರಿಂದ ಅಕ್ಷರಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುವು-ದೆಂದು ಸೂಚಿತವಾಗುವುದು. ಸ್ವಪ್ನಾದಿದ್ರಷ್ಟೃತ್ವವೆಂಬ ವಿಷಯವೂ ಸೂಚಿತವಾಗು-ವುದು.

ಭಾ.ದೀ. – ತತಃ ಕಿಮ್? ಇತ್ಯತ ಸಯುಕ್ತಿಕಂ ಪೂರ್ವಪಕ್ಷಯತಿ – ಸ ಚೇತಿ ॥ ಚೋಽವಧಾರಣೇ । 'ಸಃ' ಸ್ವಪ್ನಾದಿದ್ರಷ್ಟಾ । ಜೀವ ಏವ ಭವೇತ್ । ಕುತಃ? ತದ್ ದ್ರಷ್ಟೃತ್ವಸ್ಯ ಲೋಕೇ ಜೀವ ಏವ ಪ್ರಸಿದ್ಧತ್ವಾತ್ ಇತ್ಯರ್ಥಃ ।

ಸಿದ್ಧಾಂತೇ ಶ್ರುತೌ 'ಸಃ' ಇತಿ ತಚ್ಛಬ್ದೇನ 'ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಯೈವ'(ಬೃ.೬.೩.೧೫ - ಜ್ಯೋತಿರ್ಬ್ರಾಹ್ಮಣಮ್) ಇತಿ ಪೂರ್ವವಾಕ್ಯೇ ಪ್ರಕೃತಃ ಪರಮಾತ್ಮಾ ಪರಾಮೃಶ್ಯತೇ । ವೈಶಬ್ದಃ ಪ್ರಸಿದ್ಧೌ । ಸಮ್ಯಕ್ ಪ್ರಸೀದತಿ ಜೀವೋಽಸ್ಯಾಮ್ ಇತಿ ಸಂಪ್ರಸಾದಃ ಸುಪ್ತಿಃ ।

ಮುಂದೇನು? ಎಂಬ ಶಂಕೆಗೆ ಉತ್ತರವಾಗಿ ಯುಕ್ತಿಸಹಿತವಾದ ಪೂರ್ವಪಕ್ಷವನ್ನು ''ಸ ಚ'' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಇಲ್ಲಿ ಚಕಾರವು ಅವಧಾರಣಾ-

ರ್ಥಕವಾದದ್ದು. 'ಸಃ' - ಆ ಸ್ವಪ್ನಾದಿ ದ್ರಷ್ಟೃವು ಜೀವನೇ ಆಗಿರಬೇಕು. ಏಕೆಂದರೆ ಆ ಸ್ವಪ್ನಾದಿ ದರ್ಶನಕರ್ತೃತ್ವವು ಲೋಕದಲ್ಲಿ ಜೀವನಲ್ಲೇ ಪ್ರಸಿದ್ಧವಾಗಿದೆ ಎಂದು ಅರ್ಥ.

ಸಿದ್ಧಾಂತದಲ್ಲಿ – ಶ್ರುತಿಯಲ್ಲಿರುವ 'ಸಃ' ಎಂಬ ತಚ್ಛಬ್ದದಿಂದ 'ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಯೈವ' ಎಂಬ ಪೂರ್ವವಾಕ್ಯದಲ್ಲಿ ಪ್ರಸ್ತುತನಾಗಿರುವ ಪರಮಾತ್ಮನು ಪರಾಮರ್ಶಿಸಲ್ಪಡುವನು. 'ಸ ವಾ' ಎಂಬಲ್ಲಿರುವ 'ವೈ'ಶಬ್ದವು ಪ್ರಸಿದ್ಧಿಯನ್ನು ಹೇಳುವುದು. 'ಸಮ್ಯಕ್ ಪ್ರಸೀದತಿ ಜೀವಃ ಅಸ್ಯಾಂ ಇತಿ ಸಂಪ್ರಸಾದಃ' - ಜೀವನು ಈ ಅವಸ್ಥೆಯಲ್ಲಿ ಚೆನ್ನಾಗಿ ಸುಖಿಸುವನು ಎಂಬ ವಿಗ್ರಹದ ಪ್ರಕಾರ ಸಂಪ್ರಸಾದವೆಂದರೆ ಸುಷುಪ್ತಿ.

ಭಾ.ದೀ. – ತಥಾ ಚ – ಸ ಪರಮಾತ್ಮಾ 'ಸಂಪ್ರಸಾದೇ' ಸುಪ್ತೌ 'ರತ್ವಾ' ರಮಣಂ ಕೃತ್ವಾ ಜೀವಗತಂ ಪುಣ್ಯಂ ಚ ಪಾಪಂ ಚ ದೃಷ್ಟ್ವೈವ ನ ತ್ವನುಭೂಯ, 'ಚರಿತ್ವಾ' ಸಂಚರಿತ್ವಾ 'ಪ್ರತಿನ್ಯಾಯಮ್' ಅವಸ್ಥಾಂತರಂ ಪ್ರವರ್ತನೀಯಮಿತಿ ನ್ಯಾಯಮನುಸೃತ್ಯ, ಯದ್ವಾ ತತ್ತತ್ ಕರ್ಮಾನುಸೃತ್ಯ, 'ಪ್ರತಿಯೋನಿ' ಪ್ರತಿದೇಹಂ ಸರ್ವದೇಹೇಷು, ಯದ್ವಾ ಪ್ರತಿಯೋನಿ ತತ್ತನ್ಮಾರ್ಗಮನುಸೃತ್ಯ 'ಪುನಃ' 'ಸ್ವಪ್ನಾಯೈವ' ಜೀವಸ್ಯ ಸ್ವಪ್ನಪ್ರಾಪ್ತಯೇ ಏವ 'ಆದ್ರವತಿ' ಕಂಠದೇಶಮಾಗಚ್ಛತಿ । 'ಸಃ' ಪರಮಾತ್ಮಾ 'ತತ್ರ' ಸ್ವಪ್ನಾವಸ್ಥಾಯಾಂ ಯತ್ಕಿಂಚಿದನಿಷ್ಟಂ ಪಶ್ಯತಿ 'ತೇನ' ತತ್ಕೃತಪಾಪಫಲೇನ ದುಃಖೇನ 'ಅನನ್ವಾಗತಃ' ಅಸಂಸ್ಪೃಷ್ಟೋ ಭವತಿ । ತತ್ರ ಹೇತುಃ – ಅಸಂಗ ಇತಿ ॥ 'ಹಿ' ಯಸ್ಮಾದಯಂ ಪುರುಷಃ 'ಅಸಂಗಃ' ತತ್ಕೃತಪಾಪಫಲ- ಸಂಸರ್ಗಶೂನ್ಯಃ ಪ್ರಮಿತಃ, ತಸ್ಮಾತ್ ಇತ್ಯರ್ಥಃ । ಪೂರ್ವಪಕ್ಷೀ ತು ಶ್ರೌತತಚ್ಛಬ್ದೇನ ಜೀವಂ ಗೃಹೀತ್ವಾ ಸರ್ವಂ ವಾಕ್ಯಂ ಜೀವಪರತಯಾ ವ್ಯಾಖ್ಯಾತಿ ।

ತಥಾ ಚ – 'ಸಃ' - ಆ ಪರಮಾತ್ಮನು, 'ಸಂಪ್ರಸಾದೇ' - ಸುಷುಪ್ತಿಯಲ್ಲಿ, 'ರತ್ವಾ' - ಸುಖವನ್ನು ಅನುಭವಿಸಿ 'ಜೀವಗತಂ ಪುಣ್ಯಂ ಚ ಪಾಪಂ ಚ ದೃಷ್ಟ್ವೈವ' ಜೀವನಲ್ಲಿರುವ ಪುಣ್ಯವನ್ನು ಮತ್ತು ಪಾಪವನ್ನು ತಾನು ಅನುಭವಿಸದೇ ಕೇವಲ ನೋಡಿ

'ಚರಿತ್ವಾ' - ಸಂಚರಿಸುತ್ತಾ, 'ಪ್ರತಿನ್ಯಾಯಂ' ಮತ್ತೊಂದು ಅವಸ್ಥೆಯನ್ನು ಜೀವನಿಗೆ ಹೊಂದಿಸಬೇಕು ಎಂಬ ನ್ಯಾಯವನ್ನು ಅನುಸರಿಸಿ, ಅಥವಾ – ಆಯಾಯ ಕರ್ಮ-ವನ್ನು ಅನುಸರಿಸಿ, 'ಪ್ರತಿಯೋನಿ' ಪ್ರತಿ ದೇಹದಲ್ಲಿ ಅಂದರೆ ಎಲ್ಲ ದೇಹಗಳಲ್ಲೂ, ಅಥವಾ 'ಪ್ರತಿಯೋನಿ' ಆಯಾಯ ಮಾರ್ಗವನ್ನು ಅನುಸರಿಸಿ, 'ಪುನಃ' 'ಸ್ವಪ್ನಾಯೈವ' ಜೀವನಿಗೆ ಸ್ವಪ್ನವನ್ನು ಹೊಂದಿಸುವುದಕ್ಕೋಸ್ಕರವೇ 'ಆದ್ರವತಿ' ಕಂಠದೇಶವನ್ನು ಕುರಿತು ಬರುವನು. 'ಸಃ' ಆ ಪರಮಾತ್ಮನು 'ತತ್ರ' - ಆ ಸ್ವಪ್ನಾವಸ್ಥೆಯಲ್ಲಿ, 'ಯತ್ಕಿಂಚಿತ್ ಪಶ್ಯತಿ' ಯಾವುದಾದರೂ ಅನಿಷ್ಟವನ್ನು ನೋಡಿದರೆ 'ತೇನ' ಅದರಿಂದ ಉಂಟಾಗುವ ಪಾಪಫಲವಾದ ದುಃಖದಿಂದ 'ಅನನ್ವಾಗತಃ ಭವತಿ' - ಯಾವುದೇ ಸಂಬಂಧವನ್ನು ಪಡೆಯುವುದಿಲ್ಲ. ಹೊಂದುವುದಿಲ್ಲ. ಈ ವಿಷಯದಲ್ಲಿ ಹೇತುವನ್ನು "ಅಸಂಗಃ" ಎಂಬ ಪದದಿಂದ ಹೇಳಲಾಗಿದೆ. 'ಹಿ' ಯಸ್ಮಾದ್ ಅಯಂ ಪುರುಷಃ ಈ ಪರಮಾತ್ಮನು, ಅಸಂಗಃ - ಜೀವನಿಂದ ಮಾಡಲಾದ ಪಾಪಫಲದ ಸಂಬಂಧಶೂನ್ಯನೆಂದು ಪ್ರಮಾಣ-ಗಳಿಂದ ಸಿದ್ಧನಾಗಿರುವನೋ ಆ ಕಾರಣದಿಂದ ಎಂದು ಅರ್ಥ. ಪೂರ್ವಪಕ್ಷಿ-ಯಾದರೋ ಶ್ರುತಿಯಲ್ಲಿರುವ ತಚ್ಛಬ್ದದಿಂದ ಜೀವನನ್ನು ಗ್ರಹಿಸಿ, ಸಮಸ್ತವಾಕ್ಯವನ್ನು ಜೀವಪರವಾಗಿ ವ್ಯಾಖ್ಯಾನಮಾಡುತ್ತಾನೆ.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಅತ ಇತಿ॥

ಭಾಷ್ಯಕಾರರು ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ "ಅತಃ" ಎಂದು ಅವತಾರಿಕೆ-ಯನ್ನು ಕೊಟ್ಟು ವ್ಯಾಖ್ಯಾನ ಮಾಡುತ್ತಿದ್ದಾರೆ.

**ಭಾಷ್ಯಮ್ – ಅತೋ ವಕ್ತಿ –**

**॥ ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ ॥ ೪೨ ॥**

**'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಮ್' 'ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜದ್ ಯಾತಿ' ಇತಿ ಭೇದವ್ಯಪದೇಶಾನ್ನ ಜೀವಃ, ಪರ ಏವಾಸಂಗಃ ।**

ಈ ಆಕ್ಷೇಪವನ್ನು ಪರಿಹರಿಸಲು ಓಂ ಸುಷುಪ್ತ್ಯುತ್ಕ್ರಾಂತ್ಯೋ-ರ್ಭೇದೇನ ಓಂ ಎಂದು ಹೇಳುತ್ತಿದ್ದಾರೆ.

'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಮ್' 'ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜದ್ ಯಾತಿ' ಈ ಶ್ರುತಿಗಳಲ್ಲಿ ಅಸಂಗನಾದ ಸ್ವಪ್ನಾದಿ ದ್ರಷ್ಟೃವಾದ ಈಶ್ವರನಿಂದ ಜೀವನಿಗೆ ಭೇದವನ್ನು ಹೇಳಿರುವುದರಿಂದ ಜೀವನು ಅಸಂಗನಲ್ಲ. ಪರಮಾತ್ಮನೇ ಅಸಂಗನಾಗಿರುವನು.

ಭಾ.ದೀ. – 'ವಕ್ತಿ' ಸಮಾಧತ್ತೇ । ಸ್ವಪ್ನಾದಿದ್ರಷ್ಟೃತ್ವಂ 'ತಸ್ಯೈವ' ಇತ್ಯತ್ರಾಪಿ ಸಂಬಧ್ಯತೇ । ತೇನ ಸೂತ್ರೇ ಉದ್ದ್ಯೇಶ್ಯವಿಧೇಯಪ್ರತಿಪತ್ತ್ಯರ್ಥಮ್ ಅನುವೃತ್ತಾ-ವೃತ್ತಸ್ಯ ತಚ್ಛಬ್ದಸ್ಯ ವಿಪರಿಣಾಮಃ ಸೂಚಿತಃ । ತಚ್ಛಬ್ದೇನ ಗೃಹೀತಸ್ಯಾಪಿ ಸಮನ್ವೇತವ್ಯ-ಲಿಂಗಸ್ಯ ಸ್ಪಷ್ಟಪ್ರತಿಪತ್ತ್ಯರ್ಥಂ ಸ್ವಶಬ್ದೇನ ನಿರ್ದೇಶಃ । 'ಇತಿ'ಶಬ್ದಾನಂತರಂ 'ಸುಷು-ಪ್ತೀ'ತಿ ಸೌತ್ರಪದಂ ಸಂಯೋಜ್ಯಮ್ । 'ವ್ಯಪದೇಶಾತ್' ಇತಿ ಬುದ್ಧ್ಯಾ ವಿವಿಚ್ಯ ಪೂರ್ವಸ್ಮಾದನುಷಕ್ತಂ ಪದಮ್ । 'ಅಸಂಗಃ' ಇತ್ಯಪಿ ಹೇತುಸೂಚನಾಯ ಸೂತ್ರೇ-ಽಧ್ಯಾಹೃತಂ ಪದಮ್ । 'ಜೀವಃ ಪರಃ' ಇತ್ಯನೇನ ಸುಷುಪ್ತ್ಯುತ್ಕ್ರಾಂತಿಪದಂ ತತ್ಪ್ರಕರಣಲಕ್ಷಕಮಪಿ ಜೀವಪರಮಾತ್ಮಪರಮಪಿ ಇತ್ಯುಕ್ತಂ ಭವತಿ । ತಥಾತ್ವೇ ಸುಷುಪ್ತಿಶಬ್ದಃ ಕರ್ತರಿ ಕ್ತಿನ್ನಂತಃ । ಉತ್ಕ್ರಾಂತಿಶಬ್ದಃ ದೇಹಾದುತ್ಕ್ರಾಮಯಿತೃಪರಃ ।

'ವಕ್ತಿ' ಅಂದರೆ ಸಮಾಧಾನವನ್ನು ಹೇಳುತ್ತಿದ್ದಾರೆ ಎಂದು ಅರ್ಥ. 'ಸ್ವಪ್ನಾದಿ-ದ್ರಷ್ಟೃತ್ವಂ ತಸ್ಯೈವ' ಎಂಬ ಪದಗಳು ಇಲ್ಲೂ ಸಂಬಂಧವನ್ನು ಪಡೆಯುತ್ತವೆ. ಅದ-ರಿಂದ ಸೂತ್ರದಲ್ಲಿ ಉದ್ದೇಶ್ಯ ಮತ್ತು ವಿಧೇಯಗಳ ಜ್ಞಾನಕ್ಕೋಸ್ಕರವಾಗಿ ಅನುವೃತ್ತಿ-ಯನ್ನು ಪಡೆದು ಆವೃತ್ತಿಯನ್ನು ಹೊಂದುವ ತಚ್ಛಬ್ದಕ್ಕೆ ವಿಭಕ್ತಿಯ ವ್ಯತ್ಯಾಸವಿರು-ವುದೆಂದು ಸೂಚಿತವಾಗುವುದು. ತಚ್ಛಬ್ದದಿಂದಲೇ ಸಮನ್ವಯ ಮಾಡಬೇಕಾದ ಲಿಂಗವು ತಿಳಿದುಬರುವುದಾದರೂ ಆ ಲಿಂಗದ ಸ್ಪಷ್ಟಜ್ಞಾನಕ್ಕೋಸ್ಕರವಾಗಿ ಸ್ವಪ್ನಾದಿ-ದ್ರಷ್ಟೃತ್ವಂ ಎಂಬ ಆ ಲಿಂಗವನ್ನು ಹೇಳುವ ಶಬ್ದದಿಂದಲೇ ಸಮನ್ವಯ ಮಾಡಬೇಕಾದ

ಲಿಂಗವನ್ನು ನಿರ್ದೇಶಿಸಲಾಗಿದೆ. ಭಾಷ್ಯದಲ್ಲಿ ಇತಿಶಬ್ದದ ಅನಂತರ 'ಸುಷುಪ್ತಿ' ಎಂಬ ಸೂತ್ರದ ಪದವನ್ನು ಸಂಯೋಜಿಸಬೇಕು. ಭಾಷ್ಯದಲ್ಲಿ 'ವ್ಯಪದೇಶಾತ್' ಎಂಬ ಪದವು 'ಆಕಾಶಃ ಅರ್ಥಾಂತರತ್ವಾದಿ ವ್ಯಪದೇಶಾತ್' ಎಂಬ ಹಿಂದಿನ ಸೂತ್ರದಿಂದ ಬುದ್ಧಿ-ಯಿಂದಲೇ ಪ್ರತ್ಯೇಕಗೊಳಿಸಿ ಅನುವೃತ್ತಿಮಾಡಲಾದ ಪದವಾಗಿದೆ. 'ಅಸಂಗಃ' ಎಂಬ ಪದವೂ ಹೇತುವನ್ನು ಸೂಚಿಸುವುದಕ್ಕೋಸ್ಕರ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳ-ಬೇಕಾದ ಪದವಾಗಿದೆ. ಸೂತ್ರದಲ್ಲಿರುವ ಸುಷುಪ್ತ್ಯುತ್ಕ್ರಾಂತಿಪದವು ಆ ಪ್ರಕರಣವನ್ನು ಲಕ್ಷಣಯಾ ಹೇಳುವುದರ ಜೊತೆಗೆ ಜೀವಪರಮಾತ್ಮಪರವೂ ಆಗಿದೆ ಎಂಬುದಾಗಿ ಭಾಷ್ಯದಲ್ಲಿ 'ಜೀವಃ ಪರಃ' ಎಂಬ ಪದಗಳಿಂದ ಸೂಚಿತವಾಗುವುದು. ಹಾಗೆ ವ್ಯಾಖ್ಯಾನ ಮಾಡುವ ಪಕ್ಷದಲ್ಲಿ ಸುಷುಪ್ತಿಶಬ್ದವು ಕರ್ತ್ರರ್ಥಕವಾದ ಕ್ತಿನ್ ಪ್ರತ್ಯಯಾಂತವಾಗಿದ್ದು ಸುಷುಪ್ತಿಯನ್ನು ಹೊಂದಿರುವ ಜೀವನನ್ನು ಹೇಳುವುದು. ಉತ್ಕ್ರಾಂತಿಶಬ್ದವು ಜೀವನಿಗೆ ದೇಹದಿಂದ ಉತ್ಕ್ರಮಣವನ್ನು ಮಾಡಿಸುವ ಪರಮಾತ್ಮನನ್ನು ಹೇಳುವ ತಾತ್ಪರ್ಯ-ವುಳ್ಳದ್ದು.

ಭಾ.ದೀ.– ತಥಾ ಚೇತ್ಥಂ ಯೋಜನಾ – ಸ್ವಪ್ನಾದಿದ್ರಷ್ಟೃತ್ವಂ ತಸ್ಯ ಪರಮಾತ್ಮನ ಏವ ಭವೇತ್ ನ ಜೀವಸ್ಯ। ಕುತಃ? ಯತೋಽಸಾವಸಂಗಃ ಶ್ರುತಃ। ನ ಚ ಸ್ವಪ್ನಾದಿ-ದ್ರಷ್ಟುರಸಂಗತ್ವಶ್ರವಣೇಽಪಿ ಕುತೋಽಯಂ ವಿಷ್ಣುರಿತಿ ವಾಚ್ಯಮ್ । ಯತೋಽ-ಯಮಸಂಗಃ ಕರ್ಮಾಬದ್ಧತ್ವಾತ್ ಪರಃ ಪರಮಾತ್ಮೈವ ನ ಜೀವಃ । ತಥಾ ಚ ಲಿಂಗಸ್ಯ ನಿರವಕಾಶತ್ವಾನ್ನಾಪ್ರಯೋಜಕತ್ವಂ ಶಂಕ್ಯಮಿತಿ ಭಾವಃ। ನ ಚ ಜೀವೇಽಪಿ ಈಶ್ವರಭೇದೇನಾಸಂಗತ್ವೋಕ್ತಿಃ ಸಂಭವತೀತಿ ವಾಚ್ಯಮ್ । 'ಪ್ರಾಜ್ಞೇನ' ಇತ್ಯಾದಿ-ಸುಷುಪ್ತ್ಯುತ್ಕ್ರಾಂತಿಪ್ರಕರಣದ್ವಯಗತವಾಕ್ಯಯೋರಸಂಗಾತ್ ಸ್ವಪ್ನಾದಿದ್ರಷ್ಟುರೀ-ಶ್ವರಾತ್ ಜೀವಸ್ಯ ಭೇದವ್ಯಪದೇಶಾತ್ ಇತಿ।

'ಪ್ರಾಜ್ಞೇನ' ಇತಿ ಶ್ರುತ್ಯುದಾಹರಣೇನ ಸೂತ್ರೇ ಸುಷುಪ್ತಿಪದಂ ಮೋಕ್ಷಸ್ಯಾಪಿ ಗ್ರಾಹಕಂ, ತೇನಾಯಂ ಭೇದೋ ವ್ಯಾವಹಾರಿಕ ಇತಿ ಶಂಕಾನಿರಾಸೋಽಪಿ ಭವತಿ । ಸುಷುಪ್ತ್ಯುತ್ಕ್ರಾಂತಿಪದೇನ ಚ ತತ್ಪ್ರಕರಣಂ ಲಕ್ಷ್ಯತ ಇತ್ಯುಕ್ತಂ ಭವತಿ ।

ಉತ್ಕ್ರಾಂತಿಪದಂ ಚ ಜೀವಸ್ಯ ದೇಹಾದುತ್ಕ್ರಮಣರೂಪಮರಣವಾಚಿ । ಶ್ರುತೌ ಪ್ರಾಜ್ಞಶಬ್ದಃ ಸ್ವಾರ್ಥಿಕಾಣಂತಃ।

ತಥಾ ಚ 'ಪ್ರಾಜ್ಞೇನ' ಸರ್ವಜ್ಞೇನ ಪರಮಾತ್ಮನಾ 'ಸಂಪರಿಷ್ವಕ್ತಃ' ಸಮಾಶ್ಲಿಷ್ಟಃ ಸುಪ್ತೋ ಮುಕ್ತಶ್ಚ ದೇಹಾದ್ ಬಾಹ್ಯಮಾಂತರಂ ಚ ಕಿಂಚನ ವಿಷಯಾದಿಕಂ ನ ವೇದ - ಇತಿ ಪ್ರಥಮವಾಕ್ಯಾರ್ಥಃ। ದ್ವಿತೀಯಾರ್ಥಸ್ತು – ಪ್ರಾಕ್ತನಾಧಿಕರಣೇಽಭಿಹಿತಃ।

ತಥಾ ಚ – ಭಾಷ್ಯದ ಪದಗಳ ಯೋಜನೆ ಹೀಗಿರುವುದು – ಸ್ವಪ್ನಾದಿದ್ರಷ್ಟೃತ್ವವು 'ತಸ್ಯೈವ' - ಆ ಪರಮಾತ್ಮನಿಗೇ ಇರುವುದು ಹೊರತು ಜೀವನಿಗಲ್ಲ. ಏಕೆಂದರೆ? ಆ ಸ್ವಪ್ನಾದಿದ್ರಷ್ಟೃವು ಅಸಂಗನೆಂದು ಶ್ರುತವಾಗಿರುವನು. ಸ್ವಪ್ನಾದಿದ್ರಷ್ಟೃವು ಅಸಂಗನೆಂದು ಶ್ರುತವಾಗಿದ್ದರೂ ಅವನು ವಿಷ್ಣುವೆಂದು ಹೇಳುವುದು ಹೇಗೆ? ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಈ ಅಸಂಗನು ಕರ್ಮಬಂಧನಕ್ಕೆ ಒಳಗಾಗದಿರುವುದರಿಂದ 'ಪರ ಏವ' ಪರಮಾತ್ಮನೇ ಹೊರತು ಜೀವನಲ್ಲ. ತಥಾ ಚ – ಅಸಂಗತ್ವವೆಂಬ ಲಿಂಗವು ಪರಮಾತ್ಮನನ್ನು ಬಿಟ್ಟು ಅನ್ಯತ್ರ ಅವಕಾಶವನ್ನು ಪಡೆಯದಿರುವುದರಿಂದ ಈ ಹೇತುವು ಅಪ್ರಯೋಜಕವೆಂದು ಶಂಕಿಸಲಾಗದು ಎಂದು ಭಾವ. ಈಶ್ವರನಿಂದ ಅಭಿನ್ನನಾದ ಕಾರಣ ಜೀವನಲ್ಲೂ ಅಸಂಗತ್ವವನ್ನು ಹೇಳಲು ಸಾಧ್ಯವಿದೆ ಎಂದರೆ ಅದು ಸರಿಯಲ್ಲ. 'ಪ್ರಾಜ್ಞೇನ' ಇತ್ಯಾದಿಯಾಗಿ ಸುಷುಪ್ತಿ ಮತ್ತು ಉತ್ಕ್ರಾಂತಿಗಳನ್ನು ಹೇಳುವ ಎರಡು ಪ್ರಕರಣಗಳಲ್ಲಿರುವ ವಾಕ್ಯಗಳಲ್ಲಿ ಅಸಂಗನಾಗಿದ್ದು ಸ್ವಪ್ನಾದಿದ್ರಷ್ಟೃವಾಗಿರುವ ಈಶ್ವರ-ನಿಂದ ಜೀವನಿಗೆ ಭೇದವನ್ನು ಹೇಳಿರುವುದರಿಂದ ಎಂದು.

'ಪ್ರಾಜ್ಞೇನ' ಎಂದು ಶ್ರುತಿಯನ್ನು ಉದಾಹರಿಸಿರುವುದರಿಂದ ಸೂತ್ರದಲ್ಲಿರುವ ಸುಷುಪ್ತಿಪದವು ಮೋಕ್ಷವನ್ನೂ ಹೇಳುವುದು. ಆದರಿಂದ ಈ ಜೀವೇಶ್ವರಭೇದವು ವ್ಯಾವಹಾರಿಕವಾದದ್ದು ಎಂಬ ಶಂಕೆಯನ್ನು ನಿವಾರಿಸಿದಂತಾಗುವುದು. ಸುಷುಪ್ತ್ಯುತ್ಕ್ರಾಂತಿ -ಪದಗಳಿಂದ ಅವುಗಳನ್ನು ಹೇಳುವ ಪ್ರಕರಣವು ಲಕ್ಷಣಯಾ ಉಕ್ತವಾಗುವುದು. 'ಉತ್ಕ್ರಾಂತಿ'ಪದವಾದರೋ ಜೀವನಿಗೆ ದೇಹದಿಂದ ಉತ್ಕ್ರಮಣರೂಪವಾದ ಮರಣ-ವನ್ನು ಹೇಳುವ ಶಬ್ದವಾಗಿದೆ. ಶ್ರುತಿಯಲ್ಲಿ ಪ್ರಾಜ್ಞಶಬ್ದವು ಪ್ರಕೃತ್ಯರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳದ ಅಣ್‌ಪ್ರತ್ಯಯಾಂತವಾಗಿದೆ.

ತಥಾ ಚ – 'ಪ್ರಾಜ್ಞೇನ ಆತ್ಮನಾ' - ಸರ್ವಜ್ಞನಾದ ಪರಮಾತ್ಮನಿಂದ 'ಸಂಪರಿಷ್ವಕ್ತಃ' ಸಮ್ಯಕ್ ಆಲಿಂಗಿತನಾದ ಸುಪ್ತಜೀವ ಮತ್ತು ಮುಕ್ತಜೀವರು 'ನ ಬಾಹ್ಯಂ ವೇದ ಕಿಂಚನ ಆಂತರಮ್' ದೇಹದಿಂದ ಹೊರಗಿರುವ, ಮತ್ತು ಒಳಗಿರುವ ಯಾವುದೇ ವಿಷಯಾದಿಗಳನ್ನು ತಿಳಿಯುವುದಿಲ್ಲ ಎಂದು ಮೊದಲನೆಯ ವಾಕ್ಯದ ಅರ್ಥವಾಗಿದೆ. 'ಪ್ರಾಜ್ಞೇನಾತ್ಮನಾ ಅನ್ವಾರೂಢಃ' ಎಂಬ ಎರಡನೆಯ ವಾಕ್ಯದ ಅರ್ಥವನ್ನು ಹಿಂದಿನ ಅಧಿಕರಣದಲ್ಲೇ ಹೇಳಲಾಗಿದೆ.

ಭಾ.ದೀ. – ನನು ಕಥಮೀಶ್ವರಸ್ಯ ಸ್ವಪ್ನಾದಿದರ್ಶನಂ ಯುಕ್ತಂ ಸ್ಯಾದಿತ್ಯತ ಆಹ – ಸ್ವಪ್ನಾದೀತಿ ॥

ಅಶರೀರನಾದ ಪರಮಾತ್ಮನಿಗೆ ಸ್ವಪ್ನವೇ ಮೊದಲಾದ ಅವಸ್ಥೆಗಳಲ್ಲಿ ಪದಾರ್ಥಗಳ ದರ್ಶನವು ಹೇಗೆ ಯುಕ್ತವಾಗುವುದು? ಎಂಬ ಶಂಕೆಗೆ ಉತ್ತರವಾಗಿ – ''ಸ್ವಪ್ನಾದಿ'' ಎಂಬ ವಾಕ್ಯವು ಹೊರಟಿದೆ.

**ಭಾಷ್ಯಮ್ – ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ ತಸ್ಯೈವ ಯುಜ್ಯತೇ ॥ ೪೨ ॥**

॥ ಇತಿ ಬ್ರಹ್ಮಸೂತ್ರಭಾಷ್ಯೇ ಸುಷುಪ್ತ್ಯಧಿಕರಣಮ್ ॥೧೩॥

ಅಸಂಗತ್ವ ಮಾತ್ರವಲ್ಲದೇ ಸ್ವಪ್ನಾದಿದ್ರಷ್ಟೃತ್ವವು ಸತ್ಯವಾದ ಸಮಸ್ತ ಪದಾರ್ಥಗಳ ಜ್ಞಾನವನ್ನು ಪಡೆದಿರುವ ಈಶ್ವರನಿಗೇ ಯುಕ್ತವಾಗಿದೆ.

ಭಾ.ದೀ. – ಚಶಬ್ದಃ ಸಮುಚ್ಚಯೇ । ಅಪ್ಯರ್ಥೇ ವಾ । 'ಆದಿ'ಪದೇನ ಜೀವಗತಾವಸ್ಥಾ ಗೃಹ್ಯತೇ । ತಥಾ ಚ – ನ ಕೇವಲಮಸಂಗತ್ವಂ ಕರ್ಮಾಬದ್ಧತ್ವಾತ್ ಪರಸ್ಯೈವ ಯುಜ್ಯತೇ, ಕಿಂತು ಸ್ವಪ್ನಾದಿದ್ರಷ್ಟೃತ್ವಂ ಚ 'ತಸ್ಯೈವ' - ಪರಮಾತ್ಮನ ಏವ ಜೀವಾದಪಿ ಮುಖ್ಯತೋ ಯುಜ್ಯತೇ । ಅತಃ ತಸ್ಯೈವ ತದ್ವಚನಂ ಯುಜ್ಯತೇ ನ ಜೀವಸ್ಯ । ಕುತಃ? ತಸ್ಯೈವ 'ಸರ್ವಜ್ಞತ್ವಾತ್' ಸತ್ಯಾಶೇಷಾರ್ಥಜ್ಞತ್ವಾತ್ । ಸ್ವಪ್ನ-ಪದಾರ್ಥಾನಾಂ ಜೀವಗತಾವಸ್ಥಾಯಾಶ್ಚ ಸತ್ಯತಾಯಾ ವಕ್ಷ್ಯಮಾಣತ್ವಾತ್ ಇತಿ

ಭಾವಃ । ನ ಚ ಅಶರೀರತ್ವಲಿಂಗಂ ಬಾಧಕಮ್, ಯತೋತ್ರ ತಸ್ಯೈವ ಚಿಚ್ಛರೀರಕಸ್ಯೈವ ಸ್ವಪ್ನಾದಿದ್ರಷ್ಟೃತ್ವಮುಚ್ಯತೇ । ನ ಚ 'ದೃಷ್ಟ್ವೈವ ಪುಣ್ಯಂ ಚ ಪಾಪಂ ಚ' (ಬೃ.೬.೩.೧೫) ಇತ್ಯಾದ್ಯಯೋಗ ಇತಿ ವಾಚ್ಯಮ್ । ಯತೋಽತ್ರ 'ಆದಿ'ಪದಗೃಹೀತಂ ಪುಣ್ಯಪಾಪಾದಿದ್ರಷ್ಟೃತ್ವಂ ಲಿಂಗಾಂತರಂ ಚ ತಸ್ಯೈವ ಯುಜ್ಯತೇ, ಅತಃ – ಇತಿ ಯೋಜನಾ । ತತ್ರೋಪಪತ್ತಿಸ್ತು ಬೃಹದ್ಭಾಷ್ಯಾದವಗಂತವ್ಯಾ ।

ಅನೇನ – 'ಸುಷುಪ್ತ್ಯುತ್ಕ್ರಾಂತಯೋಃ' 'ಪ್ರಾಜ್ಞೇನ' ಇತಿ ಸುಷುಪ್ತ್ಯುತ್ಕ್ರಾಂತಿಪ್ರಕರಣಯೋಃ ಸುಷುಪ್ತ್ಯುತ್ಕ್ರಾಂತಯೋಃ ಸುಷುಪ್ತಿಯುತತ್ವಾತ್ ಸುಷುಪ್ತಿರ್ಜೀವಃ, ಉತ್ಕ್ರಾಮಯಿತೃತ್ವಾದ್ ಉತ್ಕ್ರಾಂತಿರೀಶ್ವರಃ । ತಥಾ ಚ – ಜೀವೇಶ್ವರಯೋಃ 'ಭೇದೇನ' ಭಿನ್ನತ್ವೇನೈವ 'ವ್ಯಪದೇಶಾತ್' ಉಕ್ತತ್ವಾತ್ ನ ತಯೋರಭೇದಃ । ಅತೋ ನೇಶ್ವರಾಭೇದೇನಾಪಿ ಜೀವೇಽಸಂಗತ್ವೋಕ್ತಿರ್ಯುಜ್ಯತೇ । ಕಿಂತು 'ತತ್ ತು' ತಸ್ಯೈವ ಈಶ್ವರಸ್ಯೈವ ಯುಜ್ಯತೇ । ಅತ ಏವ 'ಸ್ವಪ್ನಾದಿದ್ರಷ್ಟೃತ್ವಂ ಚ ತಸ್ಯೈವ ವಕ್ತುಂ ಯುಜ್ಯತೇ, ನ ಜೀವಸ್ಯ' ಇತಿ ಸೂತ್ರಾರ್ಥ ಉಕ್ತೋ ಭವತಿ ॥

॥ ಇತಿ ಭಾಷ್ಯದೀಪಿಕಾಯಾಂ ಸುಷುಪ್ತ್ಯಧಿಕರಣಮ್ ॥

ಇಲ್ಲಿ 'ಚ'ಶಬ್ದವು ಸಮುಚ್ಚಯವನ್ನು ಹೇಳುವುದು. ಅಥವಾ 'ಅಪಿ' ಎಂಬರ್ಥವನ್ನು ಹೇಳುವುದು. 'ಸ್ವಪ್ನಾದಿ' ಎಂಬಲ್ಲಿರುವ ಆದಿಪದದಿಂದ ಜೀವನ ಅವಸ್ಥೆಯು ಗ್ರಹಿಸಲ್ಪಡುವುದು. ತಥಾ ಚ – ಕರ್ಮಬಂಧನವಿಲ್ಲದ ಪ್ರಯುಕ್ತ ಅಸಂಗತ್ವವು ಪರಮಾತ್ಮನಿಗೇ ಯುಕ್ತವಾಗಿದೆ ಎಂದಷ್ಟೇ ಅಲ್ಲ; ಕಿಂತು 'ಸ್ವಪ್ನಾದಿದ್ರಷ್ಟೃತ್ವಂ ಚ' ಸ್ವಪ್ನಾದಿ ದರ್ಶನವೂ 'ತಸ್ಯೈವ' ಆ ಪರಮಾತ್ಮನಿಗೇ ಜೀವನಿಗಿಂತಲೂ ಮುಖ್ಯವಾಗಿ ಯುಕ್ತವಾಗಿದೆ. ಆದ್ದರಿಂದ 'ಸ ವಾ ಏತಸ್ಮಿನ್ ಸಂಪ್ರಸಾದೇ' ಎಂಬ ವಾಕ್ಯವು ಪರಮಾತ್ಮನಿಗೇ ಹೊಂದುವುದು ಹೊರತು ಜೀವನಿಗಲ್ಲ. ಏಕೆಂದರೆ 'ತಸ್ಯೈವ ಸರ್ವಜ್ಞತ್ವಾತ್' ಆ ಪರಮಾತ್ಮನೇ ಸತ್ಯವಾದ ಸಮಸ್ತಪದಾರ್ಥಗಳ ಜ್ಞಾನವುಳ್ಳವನು, ಸ್ವಪ್ನಪದಾರ್ಥಗಳಿಗೆ ಜೀವರಿಗೆ ಇರುವ ಅವಸ್ಥೆಗಳಿಗೆ ಸತ್ಯತ್ವವಿರುವುದೆಂದು ಮುಂದೆ ಹೇಳಲಾಗುವುದು ಎಂದು ಭಾವ. ಹೀಗೆ ಹೇಳಿದರೆ ಅಶರೀರತ್ವಲಿಂಗವು ಬಾಧಕವಾಗು-

ವುದು ಎಂದು ಶಂಕಿಸಲಾಗದು? ಏಕೆಂದರೆ ಇಲ್ಲಿ ಈ ವಾಕ್ಯದಲ್ಲಿ 'ತಸ್ಯೈವ' ಚಿದಾತ್ಮಕ-ವಾದ ಶರೀರವುಳ್ಳವನಿಗೆ ಸ್ವಪ್ನಾದಿದ್ರಷ್ಟೃತ್ವವನ್ನು ಹೇಳಲಾಗಿದೆ. ಹೀಗೆ ಹೇಳಿದಾಗ 'ದೃಷ್ಟ್ವೈವ ಪುಣ್ಯಂ ಚ ಪಾಪಂ ಚ' ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವ ವಿಷಯವು ಪರಮಾತ್ಮನಿಗೆ ಹೊಂದುವುದಿಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ, ಸ್ವಪ್ನಾದಿ ಎಂಬಲ್ಲಿ ಆದಿಪದದಿಂದ ಗ್ರಹಿಸಲಾಗಿರುವ ಪುಣ್ಯಪಾಪಾದಿ ದ್ರಷ್ಟೃತ್ವವು ಮತ್ತೊಂದು ಲಿಂಗವೂ ಕೂಡ ಪರಮಾತ್ಮನಿಗೇ ಹೊಂದುವುದು ಎಂದು ಭಾಷ್ಯಪದಗಳ ಯೋಜನೆಯಿರು-ವುದು. ಈ ವ್ಯಾಖ್ಯಾನದಲ್ಲಿ ಯುಕ್ತಿಯನ್ನು ಬೃಹದಾರಣ್ಯಕಭಾಷ್ಯದಿಂದ ತಿಳಿಯತಕ್ಕದ್ದು.

ಇದರಿಂದ – 'ಸುಷುಪ್ತ್ಯುತ್ಕ್ರಾಂತ್ಯೋಃ' 'ಪ್ರಾಜ್ಞೇನ' ಎಂದು ಪ್ರಾರಂಭವಾಗುವ ಸುಷುಪ್ತಿ ಮತ್ತು ಉತ್ಕ್ರಾಂತಿಪ್ರಕರಣಗಳಲ್ಲಿ ಸುಷುಪ್ತ್ಯುತ್ಕ್ರಾಂತ್ಯೋಃ - ಸುಷುಪ್ತಿಯನ್ನು ಹೊಂದಿರುವುದರಿಂದ ಜೀವನು ಸುಷುಪ್ತಿ ಎಂದೆನಿಸುವನು. ಉತ್ಕ್ರಮಣವನ್ನು ಜೀವನಿಗೆ ಹೊಂದಿಸುವುದರಿಂದ ಈಶ್ವರನು ಉತ್ಕ್ರಾಂತಿ ಎಂದೆನಿಸುವನು. ತಥಾ ಚ – ಸುಷುಪ್ತ್ಯು-ತ್ಕ್ರಾಂತ್ಯೋಃ ಎಂದರೆ ಜೀವೇಶ್ವರರನ್ನು 'ಭೇದೇನ' ಭೇದವಿರುವವರೆಂದೇ ವ್ಯಪ-ದೇಶಾತ್ ಹೇಳಿರುವುದರಿಂದ ಅವರಿಬ್ಬರಿಗೆ ಅಭೇದವಿಲ್ಲ. ಆದ್ದರಿಂದ ಈಶ್ವರಾಭೇದ-ವಿರುವ ಕಾರಣದಿಂದಲೂ ಜೀವನಿಗೆ ಅಸಂಗತ್ವವಿರುವುದೆಂದು ಹೇಳುವುದು ಯುಕ್ತ-ವಲ್ಲ. ಕಿಂತು 'ತತ್ ತು' ಆ 'ತಸ್ಯೈವ' ಎಂದರೆ ಈಶ್ವರನಿಗೇ ಅದು ಯುಕ್ತವಾಗಿ-ರುವುದು. ಆದ್ದರಿಂದಲೇ ಸ್ವಪ್ನಾದಿದ್ರಷ್ಟೃತ್ವವನ್ನು ಅವನಿಗೇ ಹೇಳುವುದು ಯುಕ್ತವೇ ಹೊರತು ಜೀವನಿಗಲ್ಲ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

॥ ಭಾಷ್ಯದೀಪಿಕಾ ಕನ್ನಡಾನುವಾದದಲ್ಲಿ ಸುಷುಪ್ತ್ಯಧಿಕರಣವು ಮುಗಿಯಿತು ॥

* * * * * *

## ೧೪. ಅಥ ಬ್ರಾಹ್ಮಣಾಧಿಕರಣಮ್

ಭಾ.ದೀ. – ಅತ್ರಾಧಿಕರಣೇ ಬ್ರಾಹ್ಮಣನಾಮ ಸಮನ್ವೀಯತೇ । ಶ್ರುತ್ಯಾದಿ-ಸಂಗತಿಂ ವಿಷಯಾದಿಕಂ ಚ ಸೂಚಯತಿ – ಏಷ ಇತಿ ॥

ಈ ಅಧಿಕರಣದಲ್ಲಿ 'ಬ್ರಾಹ್ಮಣ' ಎಂಬ ನಾಮಮಾತ್ರಕಶಬ್ದದ ಸಮನ್ವಯವನ್ನು ಮಾಡ-ಲಾಗುವುದು. ಶ್ರುತಿ ಮೊದಲಾದವುಗಳ ಸಂಗತಿಯನ್ನು ಹಾಗೂ ವಿಷಯಾದಿಗಳನ್ನು ''ಏಷಃ'' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**ಭಾಷ್ಯಮ್ – 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಇತಿ ಬ್ರಾಹ್ಮಣ-ಸ್ಯಾಪಿ ನಿತ್ಯಮಹಿಮಾ ಪ್ರತೀಯತೇ । ಸ ಚ ಬ್ರಾಹ್ಮಣಃ 'ಸ ವಾ ಏಷ ಮಹಾನಜ ಆತ್ಮಾ' ಇತ್ಯಜಶಬ್ದಾದ್ ವಿರಿಂಚ ಇತಿ ಪ್ರಾಪ್ತಮ್ ।**

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂದು ಬ್ರಾಹ್ಮಣನಿಗೂ ನಿತ್ಯಮಹಿಮೆಯು ಇರುವುದೆಂದು ತಿಳಿದು ಬರುತ್ತದೆ. ಆ ಬ್ರಾಹ್ಮಣ-ನಾದರೋ 'ಸ ವಾ ಏಷ ಮಹಾನಜ ಆತ್ಮಾ' ಎಂಬ ಮುಂದಿನ ವಾಕ್ಯದಲ್ಲಿ 'ಅಜ'ಶಬ್ದವಿರುವುದರಿಂದ ವಿರಿಂಚನೇ ಎಂದು ಪ್ರಾಪ್ತ-ವಾಗುವುದು.

ಭಾ.ದೀ. – ಇತೀತಿ ॥ 'ವಾಜಸನೇಯಕೋದಾಹೃತಋಙ್ಮಂತ್ರೇ' ಇತ್ಯರ್ಥಃ । 'ನ ಕೇವಲಂ ವಿಷ್ಣೋಃ, ಅಪಿ ತು ಕಸ್ಯಚಿದ್ ಬ್ರಾಹ್ಮಣಸ್ಯಾಪಿ' ಇತ್ಯಪೇರರ್ಥಃ । ಇದಂ ಚ ಯೋ ಜನ್ಮಾದ್ಯಧಿಕರಣೇಷು ವಿಷ್ಣೋರನನ್ಯಾಪೇಕ್ಷಯಾ ಜಗತ್ಸ್ರಷ್ಟೃತ್ವೋ-ಕ್ತ್ಯಾ ಅಭಿಸಂಹಿತೋ ನಿತ್ಯಮಹಿಮಾ ಸಃ 'ಏಷಃ' ಇತಿ ವಾಕ್ಯೇ ಬ್ರಾಹ್ಮಣಸ್ಯಾಪಿ ಪ್ರತೀಯತೇ – ಇತಿ ಯತ್ತಚ್ಛಬ್ದಾಧ್ಯಾಹಾರೇಣ ಯೋಜ್ಯಮ್ । ಅನೇನ – ಪೂರ್ವಾಭಿಸಂಹಿತನಿತ್ಯಮಹಿಮತ್ವಸ್ಯ ವಿಷ್ಣೋರನ್ಯಸ್ಯಾಪಿ ಆಕ್ಷೇಪಾದ್ ಜನ್ಮಾದ್ಯ-ಧಿಕರಣೈಃ ಫಲಮುಖೇನ ಅಸ್ಯಾಽಕ್ಷೇಪಿಕೀ ಸಂಗತಿರುಕ್ತಾ ಭವತಿ । ತಥಾ ಬ್ರಾಹ್ಮಣಾಖ್ಯವಿಷಯೋಽಪಿ ಸೂಚಿತಃ । ಯದ್ವಾ– 'ದೇವಾನಾಮ್' ಇತಿ ವಾಕ್ಯಂ

ದೇವತಾಧಿಕರಣಪ್ರತಿಪಾದ್ಯಾನುವಾದಪರತ್ವೇನಾಪಿ ವ್ಯಾಖ್ಯಾಯ ತೇನಾಸ್ಯಾಽ-ಕ್ಷೇಪಿಕೀ ಸಂಗತಿರುಕ್ತಾ ದ್ರಷ್ಟವ್ಯಾ ।

ಭಾಷ್ಯದಲ್ಲಿ ''ಇತಿ'' ಎಂದರೆ ಬೃಹದಾರಣ್ಯಕದಲ್ಲಿ ಉದಾಹರಿಸಲಾದ ಋಙ್ಮಂತ್ರ-ದಲ್ಲಿ ಎಂದು ಅರ್ಥ. ಬ್ರಾಹ್ಮಣಸ್ಯಾಪಿ ಎಂಬಲ್ಲಿ ಅಪಿಶಬ್ದವು ವಿಷ್ಣುವಿಗೆ ಮಾತ್ರವಲ್ಲ ಒಬ್ಬ ಬ್ರಾಹ್ಮಣನಿಗೂ ಎಂಬ ಅರ್ಥವನ್ನು ಹೇಳುವುದು. ಈ ವಾಕ್ಯವನ್ನು - ಜನ್ಮಾದ್ಯಧಿ ಕರಣಗಳಲ್ಲಿ ವಿಷ್ಣುವಿಗೆ ಇನ್ನೊಬ್ಬರ ಅಪೇಕ್ಷೆ ಇಲ್ಲದೇ ಜಗತ್ ಸೃಷ್ಟಿಕರ್ತೃತ್ವವನ್ನು ಹೇಳುವ ಮೂಲಕ ಯಾವ ನಿತ್ಯಮಹಿಮೆಯು ಅಭಿಪ್ರೇತವಾಗಿದೆಯೋ ಅದು 'ಏಷಃ' ಎಂಬ ವಾಕ್ಯದಲ್ಲಿ ಒಬ್ಬ ಬ್ರಾಹ್ಮಣನಿಗೂ ಇರುವುದೆಂದು ತಿಳಿದುಬರುವುದು - ಎಂದು 'ಯತ್(ಯಾವ) ತತ್ (ಅ) ಎಂದು ಯತ್‌ತಚ್ಛಬ್ದಗಳನ್ನು ಅಧ್ಯಾಹಾರಮಾಡಿಕೊಂಡು ಯೋಜಿಸಬೇಕು. ಇದರಿಂದ ಹಿಂದೆ ಅಭಿಪ್ರೇತವಾದ ನಿತ್ಯಮಹಿಮೆಯು ವಿಷ್ಣುಭಿನ್ನ-ನಿಗೂ ಇರುವುದೆಂದು ಆಕ್ಷೇಪಿಸುವುದರಿಂದ ಜನ್ಮಾಧಿಕರಣವೇ ಮೊದಲಾದ ಅಧಿ-ಕರಣಗಳಿಂದ ಈ ಅಧಿಕರಣಕ್ಕೆ ಅಧಿಕರಣಗಳ ಫಲವನ್ನು ಆಕ್ಷೇಪಿಸುವುದರ ಮೂಲಕ ಆಕ್ಷೇಪಿಕೀಸಂಗತಿ ಇರುವುದೆಂದು ಹೇಳಿದಂತಾಗುವುದು. ಹಾಗೆಯೇ ಬ್ರಾಹ್ಮಣನೆಂಬ ಈ ಅಧಿಕರಣದ ವಿಷಯವೂ ಸೂಚಿತವಾಗುವುದು.

ಅಥವಾ – ಭಾಷ್ಯದಲ್ಲಿ 'ದೇವಾನಾಮ್' ಎಂಬ ವಾಕ್ಯವು ದೇವತಾಧಿಕರಣದಲ್ಲಿ ಪ್ರತಿಪಾದ್ಯವಾಗಿರುವ ವಿಷಯದ ಅನುವಾದಪರವಾಗಿರುವುದೆಂದು ವ್ಯಾಖ್ಯಾನ ಮಾಡಿ ಆ ದೇವತಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುವುದೆಂದು ಉಕ್ತ-ವಾಗಿದೆ ಎಂದು ತಿಳಿಯಬೇಕು.

ಭಾ.ದೀ. – ತಥಾ ಹಿ – 'ತದುಪರಿ' ಇತಿ ಸೂತ್ರೇಣ ದೇವಾನಾಂ ವಿರಿಂಚಾ-ದ್ಯಮರಣಾಂ ವಿದ್ಯಾಕರ್ಮಣೋಃ ಸಕಾಶಾತ್ ಸಾಧ್ಯಾ ಯಾಽನಿತ್ಯಪದಪ್ರಾಪ್ತಿ-ರುಕ್ತಾ, ಸಾ ನ ಯುಕ್ತಾ । ಕುತಃ? ಯತಃ 'ಏಷಃ' ಇತಿ ವಾಕ್ಯೇ ಬ್ರಾಹ್ಮಣಪದೋ-ದಿತಸ್ಯ ವಿರಿಂಚಸ್ಯ ನಿತ್ಯಮಹಿಮಾ 'ಪ್ರತೀಯತೇ' ಪ್ರತಿಪಾದ್ಯತೇ – ಇತಿ ವಾಕ್ಯ-ಯೋಜನಾ ।

ಶ್ರುತೌ ಬ್ರಹ್ಮಣಾ ವೇದೇನಾಣ್ಯತೇ ಅವಗಮ್ಯತ ಇತಿ ವ್ಯುತ್ಪತ್ತಿಃ । ದೀರ್ಘ-ವ್ಯತ್ಯಾಸೋ ವಿಷ್ಣೋರ್ವೇದಗಮ್ಯತ್ವೇ ಜೀವಾದ್ ಆಧಿಕ್ಯಜ್ಞಾಪಕಃ । ತಥಾ ಚ – ಬ್ರಾಹ್ಮಣಸ್ಯ ವಿಷ್ಣೋರೇಷಃ ಪೂರ್ವೋಕ್ತಮಹಿಮಾ ನಿತ್ಯಃ। ಕುತಃ? ಯತೋಽಯಂ 'ನ ಕರ್ಮಣಾ ವರ್ಧತೇ ನೋ ಕನೀಯಾನ್' (ಬೃ.೬.೪.೨೨) ಶುಭಕರ್ಮಣಾ ತತ್ಫಲೇನ ಸುಖೇನ ನ ವರ್ಧತೇ। ಪಾಪಕರ್ಮಣಾ ತತ್ಫಲೇನ ದುಃಖೇನ ನ ಹ್ರಸತೇ - ಇತಿ ಶ್ರುತ್ಯರ್ಥಃ।

ತಥಾಹಿ – 'ತದುಪರಿ' ಎಂಬ ಬ್ರಹ್ಮಸೂತ್ರದಿಂದ 'ದೇವಾನಾಂ' - ಚತುರ್ಮುಖ-ಬ್ರಹ್ಮ ಮೊದಲಾದ ದೇವತೆಗಳಿಗೆ ವಿದ್ಯೆ ಮತ್ತು ಕರ್ಮಗಳ ಬಲದಿಂದ ಉಂಟಾಗುವ ಯಾವ ನಿತ್ಯಪದಪ್ರಾಪ್ತಿಯನ್ನು ಹೇಳಲಾಯಿತೋ ಅದು ಯುಕ್ತವಲ್ಲ. ಏಕೆಂದರೆ, 'ಏಷಃ' ಎಂಬ ವಾಕ್ಯದಲ್ಲಿ ಬ್ರಾಹ್ಮಣ ಪದದಿಂದ ಉಕ್ತನಾದ ವಿರಿಂಚನಿಗೆ ನಿತ್ಯವಾದ ಮಹಿಮೆಯು 'ಪ್ರತೀಯತೇ' - ಪ್ರತಿಪಾದಿತವಾಗಿದೆ ಎಂದು ಭಾಷ್ಯವಾಕ್ಯದ ಯೋಜನೆ.

'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯಲ್ಲಿ ಬ್ರಾಹ್ಮಣಶಬ್ದಕ್ಕೆ 'ಬ್ರಹ್ಮಣಾ' - ವೇದದಿಂದ ಅಣ್ಯತೇ' - ತಿಳಿಯಲ್ಪಡುವವನು ಎಂದು ವ್ಯುತ್ಪತ್ತಿಯು. ಬ್ರಹ್ಮಾಣ ಎನ್ನುವ ಬದಲು ಬ್ರಾಹ್ಮಣ ಎಂದು ದೀರ್ಘದ ವ್ಯತ್ಯಾಸವು ವಿಷ್ಣುವಿಗೆ ಜೀವನಿಗಿಂತಲೂ ಅಧಿಕವಾಗಿ ವೇದಗಮ್ಯತ್ವವಿರುವುದು ಎಂದು ಸೂಚಿಸುವುದು. ತಥಾ ಚ – ಬ್ರಾಹ್ಮಣಸ್ಯ ವಿಷ್ಣುವಿಗೆ 'ಏಷಃ' - ಹಿಂದೆ ಹೇಳಲಾದ ಮಹಿಮೆಯು ನಿತ್ಯವಾದದ್ದು. ಏಕೆಂದರೆ? 'ಅಯಂ ನ ಕರ್ಮಣಾ ವರ್ಧತೇ ನೋ ಕನೀಯಾನ್' ವಿಷ್ಣುವು ಶುಭಕರ್ಮದಿಂದ ಅಂದರೆ ಅದರ ಫಲವಾದ ಸುಖದಿಂದ 'ನ ವರ್ಧತೇ' - ವೃದ್ಧಿಯನ್ನು ಪಡೆಯು-ವುದಿಲ್ಲ. ಪಾಪಕರ್ಮಗಳ ಫಲವಾದ ದುಃಖದಿಂದ ಹ್ರಾಸವನ್ನು ಪಡೆಯುವುದಿಲ್ಲ - ಎಂದು ಶ್ರುತ್ಯರ್ಥ.

ಭಾ.ದೀ. – ಸಯುಕ್ತಿಕಂ ಪೂರ್ವಪಕ್ಷಯತಿ – ಸ ಇತಿ ॥ 'ವಾಜಸನೇಯಶ್ರುತಃ' ಇತ್ಯರ್ಥಃ । 'ಚ'ಶಬ್ದೋಽವಧಾರಣೇ । 'ವಿರಿಂಚ ಏವ' ಇತಿ ಸಂಬಧ್ಯತೇ । 'ಇತ್ಯಜಶಬ್ದಾತ್' ಇತಿ। ಇತ್ಯೇವಂರೂಪೇಷು ಪೂರ್ವೋತ್ತರವಾಕ್ಯೇಷು ಶ್ರುತಾಜ-ಶಬ್ದಾತ್ ಇತ್ಯರ್ಥಃ । 'ಸ ಏಷಃ' ಪರಮಾತ್ಮಾ 'ಮಹಾನ್' ಅಪರಿಮಿತಃ 'ಅಜಃ'

ಜನ್ಮರಹಿತಶ್ಚ - ಇತಿ ಶ್ರುತ್ಯರ್ಥಃ । ಪೂರ್ವಪಕ್ಷೀ ತು ಬ್ರಾಹ್ಮಣಾಜಶಬ್ದವಾಚ್ಯಂ ವಿರಿಂಚಂ ಮನ್ಯತೇ ।

ಭಾಷ್ಯದಲ್ಲಿ "ಸ ಚ" ಎಂಬ ವಾಕ್ಯದಿಂದ ಸಯುಕ್ತಿಕಪೂರ್ವಪಕ್ಷವನ್ನು ಹೇಳುತ್ತಿದ್ದಾರೆ. 'ಸಃ' ಅಂದರೆ ಬೃಹದಾರಣ್ಯಕದಲ್ಲಿ ಶ್ರುತನಾದವನು ಎಂದರ್ಥ. 'ಚ'ಶಬ್ದವು ಏವಕಾರದ ಅರ್ಥವನ್ನು ಹೇಳುತ್ತಿದ್ದು, 'ವಿರಿಂಚ ಏವ' ಎಂದು ಸಂಬಂಧವನ್ನು ಪಡೆಯುವುದು. ಭಾಷ್ಯದಲ್ಲಿ 'ಇತ್ಯಜಶಬ್ದಾತ್' ಎಂಬ ಪದಕ್ಕೆ ಇತಿ ಈ ರೀತಿಯಾಗಿರುವ ಪೂರ್ವೋತ್ತರವಾಕ್ಯಗಳಲ್ಲಿ ಶ್ರುತವಾಗಿರುವ ಅಜಶಬ್ದದಿಂದ ಎಂದು ಅರ್ಥ. 'ಸ ವಾ ಏಷ' ಎಂಬ ಶ್ರುತಿಗೆ - 'ಸ ಏಷಃ' ಈ ಪರಮಾತ್ಮನು 'ಮಹಾನ್' - ಅಪರಿಮಿತನಾಗಿದ್ದಾನೆ. 'ಅಜಃ' - ಜನ್ಮರಹಿತನೂ ಆಗಿದ್ದಾನೆ ಎಂದು ಅರ್ಥ. ಪೂರ್ವಪಕ್ಷಿಯಾದರೋ ಬ್ರಾಹ್ಮಣ ಮತ್ತು ಅಜಶಬ್ದಗಳಿಂದ ವಾಚ್ಯನಾದವನು ಚತುರ್ಮುಖನೆಂದು ತಿಳಿಯುತ್ತಾನೆ.

ಭಾ. ದೀ. – ನನು ಕಥಂ ಬ್ರಾಹ್ಮಣೋ ವಿರಿಂಚೋ ಭವೇತ್ । 'ತದುಪರಿ' ಇತಿ ಸೂತ್ರೇ ದೇವಾನಾಂ ವಿದ್ಯಾಕರ್ಮಭ್ಯಾಂ ಪದಪ್ರಾಪ್ತೇಃ ಸಮರ್ಥಿತತ್ವೇನ ಬ್ರಾಹ್ಮಣೇ ಶ್ರುತನಿತ್ಯಮಹಿಮತ್ವಸ್ಯ ವಿರಿಂಚೇಽಸಂಭವಾತ್ । ಸಾದಿಪದಸ್ಯಾನಿತ್ಯತ್ವನಿಯಮಾದ್ ಇತ್ಯತ ಆಹ – ದೇವಾನಾಂ ಚೇತಿ ॥

ಶಂಕೆ – ಈ ಶ್ರುತಿಯಲ್ಲಿ ಬ್ರಾಹ್ಮಣ ಪದವಾಚ್ಯನು ಚತುರ್ಮುಖನಾಗುವುದು ಹೇಗೆ? 'ತದುಪರಿ' ಎಂಬ ಸೂತ್ರದಲ್ಲಿ ದೇವತೆಗಳಿಗೆ ಅವರ ವಿದ್ಯೆ-ಕರ್ಮಗಳಿಂದ ಅನಿತ್ಯಪದಪ್ರಾಪ್ತಿಯಾಗುವುದೆಂದು ಸಮರ್ಥಿಸಿರುವುದರಿಂದ ಬ್ರಾಹ್ಮಣನಲ್ಲಿ ಇರುವುದೆಂದು ಶ್ರುತವಾಗಿರುವ ನಿತ್ಯಮಹಿಮೆಯು ಚತುರ್ಮುಖನಲ್ಲಿ ಇರಲು ಸಾಧ್ಯವಿಲ್ಲ. ಏಕೆಂದರೆ ಆದಿಯನ್ನು ಹೊಂದಿರುವ ಪದವು ಅನಿತ್ಯವಾಗಿರಲೇಬೇಕೆಂಬ ನಿಯಮವಿದೆ.

ಈ ಆಕ್ಷೇಪಕ್ಕೆ ಪೂರ್ವಪಕ್ಷಿಯ ಉತ್ತರವನ್ನು "ದೇವಾನಾಂ ಚ" ಎಂಬ ವಾಕ್ಯದಿಂದ ಹೇಳಲಾಗಿದೆ.

**ಭಾಷ್ಯಮ್ – ದೇವಾನಾಂ ಚ ವಿದ್ಯಾಕರ್ಮಣೋಃ ಪದಪ್ರಾಪ್ತಿಃ**

**ಸೂಚಿತಾ ತದುಪರ್ಯಪೀತಿ ।**

ಆದ್ದರಿಂದ ತದುಪರಿ ಎಂಬ ಸೂತ್ರದಲ್ಲಿ ವಿರಿಂಚನೇ ಮೊದಲಾದ ಎಲ್ಲ ದೇವತೆಗಳಿಗೂ ಅವರ ವಿದ್ಯೆ ಮತ್ತು ಕರ್ಮಗಳಿಂದ ಪದ ಪ್ರಾಪ್ತಿಯನ್ನು ಹೇಳಿರುವುದು ಯುಕ್ತವಲ್ಲ.

ಭಾ.ದೀ. – ಚೋಽವಧಾರಣೇ। 'ಇತಿ' ಇತ್ಯನಂತರಂ 'ಸೂತ್ರೇ' ಇತಿ ಶೇಷಃ। ತಥಾ ಚ 'ತದುಪರಿ' ಇತಿ ಸೂತ್ರೇ ವಿರಿಂಚೇತರದೇವಾನಾಮೇವ ವಿದ್ಯಾ-ಕರ್ಮಣೋಃ ಸಕಾಶಾತ್ ಪದಪ್ರಾಪ್ತಿಃ 'ಸೂಚಿತಾ' ಸಮರ್ಥಿತಾ। ನ ತು ವಿರಿಂಚ-ಸ್ಯಾಪಿ। ತಸ್ಯ ಈಶ್ವರರೂಪತ್ವೇನ ದೇವಕೋಟ್ಯಪ್ರವಿಷ್ಟತ್ವಾತ್ ಅತೋ ವಿರಿಂಚಸ್ಯ ನಿತ್ಯಮಹಿಮತ್ವಂ ಯುಕ್ತಮೇವ – ಇತಿ ಯೋಜನಾ।

ಸಮಾಧಾನ – ಇಲ್ಲಿ ಚಶಬ್ದವು ಏವಕಾರಾರ್ಥವನ್ನು ಹೇಳುವುದು. ಭಾಷ್ಯದಲ್ಲಿ ಇತಿ ಪದದ ನಂತರ 'ಸೂತ್ರೇ' ಎಂಬ ಪದವು ಶೇಷವಾಗಿದೆ. ತಥಾ ಚ – 'ತದುಪರಿ' ಎಂಬ ಸೂತ್ರದಲ್ಲಿ ಚತುರ್ಮುಖಭಿನ್ನರಾದ ದೇವತೆಗಳಿಗೆ ಅವರ ವಿದ್ಯೆ ಮತ್ತು ಕರ್ಮಗಳಿಂದ ಪದಪ್ರಾಪ್ತಿಯಾಗುವುದೆಂದು ಸೂಚಿತವಾಗಿದೆ ಎಂದರೆ ಸಮರ್ಥಿತವಾಗಿದೆ ಹೊರತು ಚತುರ್ಮುಖನಿಗೂ ಪದಪ್ರಾಪ್ತಿಯಾಗುವುದೆಂದು ಹೇಳಿಲ್ಲ. ಅವನು ಈಶ್ವರಸ್ವರೂಪನಾದ್ದರಿಂದ ದೇವಕೋಟಿಯಲ್ಲಿ ಸೇರಿಲ್ಲದ ಕಾರಣ ವಿರಿಂಚನಿಗೆ ನಿತ್ಯಮಹಿಮೆಯು ಯುಕ್ತವೇ ಆಗಿದೆ - ಎಂದು ಯೋಜನೆ.

ಭಾ.ದೀ. – ಸಿದ್ಧಾಂತಯತ್ಸೂತ್ರಮವತಾರಯತಿ – ಅತ ಇತಿ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ''ಅತಃ'' ಎಂಬ ಪದದಿಂದ ಅವತಾರಿಕೆಯನ್ನು ಕೊಡುತ್ತಿದ್ದಾರೆ.

**ಭಾಷ್ಯಮ್ – ಅತೋ ಬ್ರವೀತಿ - ಓಂ ಪತ್ಯಾದಿಶಬ್ದೇಭ್ಯಃ ಓಂ॥ ೪೩॥**

**'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ....... ಸ ವಾ ಏಷ ನೇತಿ ನೇತಿ' ಇತ್ಯಾದಿ ಶಬ್ದೇಭ್ಯೋ ನಿತ್ಯಮಹಿಮಾ ವಿಷ್ಣುರೇವ।**

ಈ ಆಶಂಕೆಯನ್ನು ನಿವಾರಿಸಲು ಸೂತ್ರಕಾರರು ಓಂ ಪತ್ಯಾದಿ-ಶಬ್ದೇಭ್ಯಃ ಎಂದು ಹೇಳುತ್ತಿದ್ದಾರೆ. 'ಸರ್ವಸ್ಯಾಧಿಪತಿಃ ಸರ್ವಸ್ಯ ಈಶಾನಃ... ಸ ವಾ ಏಷ ನೇತಿ ನೇತಿ' ಇತ್ಯಾದಿ ವಾಕ್ಯಗಳಿಂದ ನಿತ್ಯ-ಮಹಿಮೆಯುಳ್ಳವನು ವಿಷ್ಣುವೇ ಆಗಿದ್ದಾನೆ.

ಭಾ.ದೀ. – ವಾಜಸನೇಯಕೇ ಸರ್ವವಶಿತ್ವವಾಚಿಶಬ್ದಸ್ಯೈವ ಆದಿತ್ವಾತ್ ಸೂತ್ರಸ್ಯ ತದ್ವಿಸಂವಾದಮಾಶಂಕ್ಯ ತತ್ಪರಿಹಾರಾಯ ಸೂತ್ರಾನುಕೂಲತಯಾ ಸದೃಶ-ಶಾಖಾಂತರಗತವಾಕ್ಯೋದಾಹರಣಪೂರ್ವಕಂ ಸೂತ್ರಂ ವ್ಯಾಚಷ್ಟೇ – ಸರ್ವಸ್ಯ ಇತಿ ॥ 'ಸರ್ವಸ್ಯ' ಬ್ರಹ್ಮರುದ್ರಾದೇಃ ಸಕಾಶಾದ್ ಗುಣೈರಧಿಕಶ್ಚಾಸೌ ಸರ್ವಸ್ಯ ಪತಿಃ ಪಾಲಕಶ್ಚೇತಿ ಸರ್ವಾಧಿಪತಿಃ । 'ಸರ್ವಸ್ಯ' ಜಗತಃ 'ಈಶಾನಾಂ' ಬ್ರಹ್ಮಾದೀನಾಮ್ ಅನಃ ಪ್ರೇರಕಃ ಇತಿ ಸರ್ವಸ್ಯೇಶಾನ ಇತಿ ಶ್ರುತ್ಯಂತರಾರ್ಥಃ । ಸರ್ವವಶಿಶಬ್ದಾರ್ಥಸ್ತು 'ಸರ್ವಮಸ್ಯ ವಶೇ ಯಸ್ಮಾದ್ಧರಿಃ ಸರ್ವವಶೀ ತತಃ' ಇತಿ ಬೃಹದ್ಭಾಷ್ಯಾದವಗಂತವ್ಯಃ ।

'ಸ ವಾ ಏಷಃ' ಇತಿ ವಾಜಸನೇಯಶ್ರುತಿಃ । 'ಸಃ' ಪ್ರಾಣಶಬ್ದೋಕ್ತಃ 'ಏಷಃ' ಸಮಾನಶಬ್ದಾಭಿಧೇಯಃ 'ಆತ್ಮಾ' ಪರಮಾತ್ಮಾ 'ಇತಿ ನ' ದೃಷ್ಟವನ್ನ 'ಇತಿ ನ' ಶ್ರುತವನ್ನ, ಕಿಂತು ದೃಷ್ಟಶ್ರುತವಿಲಕ್ಷಣಃ ಇತ್ಯರ್ಥಃ । 'ವೈ'ಶಬ್ದಃ ಪ್ರಸಿದ್ಧೌ । ಕುತಃ? ಇತ್ಯತಃ 'ಆತ್ಮಾಽಗೃಹ್ಯೋ ನ ಹಿ ಗೃಹ್ಯತೇ, ಅಶೀರ್ಯೋ ನ ಹಿ ಶೀರ್ಯತೇ, ಅಸಂಗೋ ನ ಹಿ ಸಜ್ಜತೇ, ಅಸಿತೋ ನ ವ್ಯಥತೇ ನ ರಿಷ್ಯತಿ ... ಸ ಏಷ ಆತ್ಮಾಽ-ಜರೋಽಮರೋಽಮೃತೋಽಭಯಃ' (ಬೃ.೨.೪.೨೪) ಇತಿ ವಾಕ್ಯಶೇಷಃ ಪ್ರವೃತ್ತಃ । ಅತ್ರ 'ಅಗೃಹ್ಯಃ' ಇತ್ಯಾದಿರಾತ್ಮನ ಇತಿ ನ' ಇತ್ಯುಕ್ತಾರ್ಥೇ ಸಾಕಲ್ಯೇನ ಅಗ್ರಾಹ್ಯತ್ವಾದಿರೂಪಹೇತುಸಮರ್ಪಕಃ । 'ನ ಹಿ' ಇತ್ಯಾದಿಸ್ತು ತತ್ರ ಪ್ರಮಾಣಾ-ಭಾವಾತ್ ಇತಿ ಹೇತುಸೂಚಕಃ ।

ಬೃಹದಾರಣ್ಯಕದಲ್ಲಿ ಸರ್ವವಶಿತ್ವವನ್ನು ಹೇಳುವ ಶಬ್ದವೇ ವಾಕ್ಯದ ಆರಂಭದಲ್ಲಿ-ರುವುದರಿಂದ ಸೂತ್ರಕ್ಕೆ ಆ ಶ್ರುತಿವಾಕ್ಯದ ವಿಸಂವಾದವಿರುವುದೆಂದು ಆಶಂಕಿಸಿ, ಅದನ್ನು ಪರಿಹರಿಸುವುದಕ್ಕೋಸ್ಕರವಾಗಿ ಸೂತ್ರಕ್ಕೆ ಅನುಕೂಲವಾಗಿರುವ ಇನ್ನೊಂದು ಸದೃಶ

(ಸಂವಾದಿಯಾದ)ಶಾಖೆಯಲ್ಲಿರುವ ವಾಕ್ಯವನ್ನು ಉದಾಹರಿಸಿ ''ಸರ್ವಸ್ಯ'' ಎಂದು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸರ್ವಸ್ಯ' - ಬ್ರಹ್ಮರುದ್ರಾದಿಗಳಿಗಿಂತ ಗುಣಗಳಿಂದ ಅಧಿ - ಅಧಿಕನೂ, 'ಸರ್ವಸ್ಯ' - ಸರ್ವರಿಗೂ 'ಪತಿಃ' - ಪಾಲಕನೂ ಆಗಿರುವನೆಂದು ವಿಷ್ಣುವು ಸರ್ವಾಧಿಪತಿ ಎನಿಸುವನು. 'ಸರ್ವಸ್ಯ' - ಸಮಸ್ತಜಗತ್ತಿಗೆ 'ಈಶಾನಾಂ' ನಿಯಾಮಕರಾದ ಬ್ರಹ್ಮಾದಿಗಳಿಗೆ 'ಅನಃ' ಪ್ರೇರಕನಾದ್ದರಿಂದ 'ಸರ್ವಸ್ಯೇಶಾನಃ' ಎಂದೆನಿಸುವನು – ಎಂದು ಆ ಇನ್ನೊಂದು ಶ್ರುತಿಯ ಅರ್ಥ. ಬೃಹದಾರಣ್ಯಕದಲ್ಲಿರುವ 'ಸರ್ವವಶಿ' ಶಬ್ದದ ಅರ್ಥವನ್ನಾದರೋ 'ಸರ್ವಮಸ್ಯ ವಶೇ ಯಸ್ಮಾದ್ಧರಿಃ ಸರ್ವವಶೀ ತತಃ' - ಎಲ್ಲವೂ ಅವನ ವಶದಲ್ಲಿರುವುದರಿಂದ ಆ ಹರಿಯು ಸರ್ವವಶಿ ಎಂದೆನಿಸುವನು ಎಂದು ಬೃಹದಾರಣ್ಯಕಭಾಷ್ಯದಿಂದ ತಿಳಿಯಬೇಕು.

'ಸ ವಾ ಏಷಃ' ಎಂಬ ವಾಕ್ಯ ಬೃಹದಾರಣ್ಯಕಶ್ರುತಿಯಾಗಿದೆ. 'ಸಃ' - ಪ್ರಾಣಶಬ್ದದಿಂದ ಉಕ್ತನಾದ 'ಏಷಃ' ಈ ಸಮಾನಶಬ್ದದಿಂದ ವಾಚ್ಯನಾದ 'ಆತ್ಮಾ' - ಪರಮಾತ್ಮನು 'ಇತಿ ನ' ನಮ್ಮಿಂದ ದೃಷ್ಟವಾದ ವಸ್ತುವಿನಂತೆ ಅಲ್ಲ; 'ಇತಿ ನ' ಶ್ರುತವಾದ ವಸ್ತುವಿನಂತೆಯೂ ಅಲ್ಲ. ಕಿಂತು ದೃಷ್ಟವಾದ ಶ್ರುತವಾದ ವಸ್ತುಗಳಿಂದ ವಿಲಕ್ಷಣನಾಗಿರುವನು ಎಂದು ಅರ್ಥ. 'ಸ ವಾ' ಎಂಬಲ್ಲಿರುವ ವೈಶಬ್ದವು ಪ್ರಸಿದ್ಧಿಯನ್ನು ಹೇಳುವುದು. ಅವನು ವಿಲಕ್ಷಣನಾಗಿರುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ 'ಆತ್ಮಾಽಗೃಹ್ಯೋ ನ ಹಿ ಗೃಹ್ಯತೇ, ಅಶೀರ್ಯೋ ನ ಹಿ ಶೀರ್ಯತೇ, ಅಸಂಗೋ ನ ಹಿ ಸಜ್ಜತೇ, ಅಸಿತೋ ನ ವ್ಯಥತೇ ನ ರಿಷ್ಯತಿ ... ಸ ಏಷ ಆತ್ಮಾಽ- ಜರೋಽಮರೋಽ-ಮೃತೋಽಭಯಃ' ಎಂಬ ವಾಕ್ಯಶೇಷವು ಹೊರಟಿದೆ. ಇಲ್ಲಿ 'ಅಗೃಹ್ಯಃ' ಮೊದಲಾದ ಶಬ್ದಗಳು ಪರಮಾತ್ಮನು 'ಇತಿ ನ' ಹೀಗಿಲ್ಲ ಎಂದು ಹೇಳಿದ ವಿಷಯದಲ್ಲಿ ಸಾಕಲ್ಯೇನ ಅಗ್ರಾಹ್ಯತ್ವವೆಂಬ ಹೇತುವನ್ನು ತಿಳಿಸುವವು. 'ನ ಹಿ ಗೃಹ್ಯತೇ' - ಇತ್ಯಾದಿ ವಾಕ್ಯಭಾಗವಾದರೋ ಸಾಕಲ್ಯೇನ ಅಗ್ರಾಹ್ಯತ್ವವಿಷಯದಲ್ಲಿ ಹಾಗೆ ಗ್ರಾಹ್ಯನಾಗುವ ವಿಷಯದಲ್ಲಿ ಪ್ರಮಾಣಾಭಾವವೆಂಬ ಹೇತುವನ್ನು ಸೂಚಿಸುವುದು.

ಭಾ.ದೀ.– ಯದ್ಯಪಿ ಬೃಹದ್ಭಾಷ್ಯೇ – 'ಇತಿ ನ' ರಮಾವನ್ನ 'ಇತಿ ನ' ಬ್ರಹ್ಮಾದಿವನ್ನ, ಬದ್ಧವನ್ನ, ಮುಕ್ತವನ್ನ - ಇತ್ಯನ್ಯಥಾ ವ್ಯಾಖ್ಯಾತಮ್ । ತಥಾಽಪಿ

ಅತ್ರ 'ಸ ಯೋಽತೋಽಶ್ರುತಃ' (ಐ.ಆ.೩.೨.೪) ಇತಿ ಸಮಾಖ್ಯಾಶ್ರುತ್ಯನುಸಾರಾದೇವಂ ವ್ಯಾಖ್ಯಾತಮಿತ್ಯದೋಷಃ।

ಇತ್ಯಾದೀತಿ ॥ ಇತ್ಯಾದೌ ಶ್ರುತಾಃ ಯೇ ಸರ್ವಾಧಿಪತ್ಯಾದಿವಾಚಕಾಃ ಶಬ್ದಾಸ್ತೇಭ್ಯ ಇತ್ಯರ್ಥಃ। 'ಆದಿ'ಪದಾತ್ ಸರ್ವವಶಿತ್ವಾದಿವಾಚಿಶಬ್ದಸಂಗ್ರಹಃ।

ಅನೇನ ಸೌತ್ರಾದಿಶಬ್ದೋ ನ ಕೇವಲಂ ಶಾಖಾಂತರೋಕ್ತಸರ್ವೇಶಾನಾದಿಶಬ್ದಗ್ರಾಹಕಃ, ಕಿಂತು ವಾಜಸನೇಯೋಕ್ತಸರ್ವವಿಲಕ್ಷಣತ್ವಸರ್ವವಶಿತ್ವಾದಿಶಬ್ದಗ್ರಾಹಕೋಽಪಿ ಇತ್ಯುಕ್ತಂ ಭವತಿ । ಏವಂ ಹೇತುಂ ವ್ಯಾಖ್ಯಾಯ ಸೂತ್ರೇ ಸಮನ್ವಯಸೂತ್ರಾತ್ 'ತತ್ತು' ಇತ್ಯನುವರ್ತ್ಯ ವಿಪರಿಣಮ್ಯಮಾನೇನ ತತ್ ಇತ್ಯನೇನ ಅನ್ವಯಯೋಗ್ಯಮುದ್ದೇಶ್ಯಸಮರ್ಪಕಂ ನಿತ್ಯಮಹಿಮಾ ಇತಿ ಪದಂ ಚ ಅಧ್ಯಾಹೃತ್ಯ ಆಹತ್ಯ ನಿಕೃಷ್ಟಾಂ ಪ್ರತಿಜ್ಞಾಂ ದರ್ಶಯತಿ – ನಿತ್ಯಮಹಿಮೇತಿ ॥ ಇದಂ ಚ ಫಲಕಥನರೂಪಮ್ । 'ಶಬ್ದೇಭ್ಯಃ' ಇತಿ ಹೇತ್ವನ್ವಯಯೋಗ್ಯಂ ಸಾಧ್ಯಂ ತು 'ಬ್ರಾಹ್ಮಣಃ' ಇತ್ಯಧ್ಯಾಹೃತಂ ದ್ರಷ್ಟವ್ಯಮ್ ।

ಅನೇನ – ಅಯಂ ಬ್ರಾಹ್ಮಣಃ ತತ್ತು ವಿಷ್ಣುರೇವ, ನ ವಿರಿಂಚಃ । ಕುತಃ? 'ಪತ್ಯಾದಿಶಬ್ದೇಭ್ಯಃ' ಸರ್ವಾಧಿಪತ್ಯಾದಿವಾಚಿಸರ್ವಾಧಿಪತ್ಯಾದಿಶಬ್ದೇಭ್ಯೋಽತ್ರ ಶ್ರುತೇಭ್ಯಃ। ತಥಾ ಚ ನಿತ್ಯಮಹಿಮಾಽಪಿ ಸ ಏವೇತಿ ಸೂತ್ರಾರ್ಥ ಉಕ್ತೋ ಭವತಿ।

ಯದ್ಯಪಿ – ಬೃಹದಾರಣ್ಯಕಭಾಷ್ಯದಲ್ಲಿ 'ಇತಿ ನ' ರಮೆಯಂತೆ ಅಲ್ಲ, 'ಇತಿ ನ' - ಬ್ರಹ್ಮಾದಿಗಳಂತೆ ಅಲ್ಲ, ಬದ್ಧರಂತೆ ಅಲ್ಲ, ಮುಕ್ತರಂತೆ ಅಲ್ಲ ಎಂದು 'ಸ ವಾ ಏಷ ನೇತಿ' ಎಂಬ ಶ್ರುತಿಯನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಮಾಡಲಾಗಿದೆ. ಆದರೂ ಇಲ್ಲಿ 'ಸ ಯೋಽತೋಽಶ್ರುತಃ' ಎಂಬ ಸಮಾನವಿಷಯವನ್ನು ಹೇಳುವ ಶ್ರುತಿಯನ್ನು ಅನುಸರಿಸಿ ಹೀಗೆ ವ್ಯಾಖ್ಯಾನ ಮಾಡಿರುವುದರಿಂದ ದೋಷವಿಲ್ಲ.

ಭಾಷ್ಯದಲ್ಲಿ ''ಇತ್ಯಾದಿ ಶಬ್ದೇಭ್ಯಃ'' ಎಂಬ ಪದಕ್ಕೆ ಇತ್ಯಾದೌ - ಇತ್ಯಾದಿ ವಾಕ್ಯಗಳಲ್ಲಿ ಶ್ರುತಾಃ ಶ್ರುತವಾಗಿರುವ ಸರ್ವಾಧಿಪತ್ಯವೇ ಮೊದಲಾದವನ್ನು ಹೇಳುವ ಶಬ್ದ-

ಗಳಿಂದ ಎಂದು ಅರ್ಥ. 'ಆದಿ'ಪದದಿಂದ ಸರ್ವವಶಿತ್ವಾದಿಗಳನ್ನು ಹೇಳುವ ಶಬ್ದಗಳು ಸಂಗ್ರಹಿಸಲ್ಪಡುವವು.

ಇದರಿಂದ ಸೂತ್ರದಲ್ಲಿರುವ 'ಆದಿ'ಶಬ್ದವು ಶಾಖಾಂತರದಲ್ಲಿ ಹೇಳಿದ 'ಸರ್ವೇಶಾನ' ಮೊದಲಾದ ಶಬ್ದಗಳಿಗೆ ಮಾತ್ರವಲ್ಲ ಕಿಂತು ವಾಜಸನೇಯದಲ್ಲಿ (ಬೃಹದಾರಣ್ಯಕದಲ್ಲಿ) ಹೇಳಿರುವ ಸರ್ವವಿಲಕ್ಷಣತ್ವ, ಸರ್ವವಶಿತ್ವ ಮೊದಲಾದ ಶಬ್ದಗಳನ್ನೂ ಗ್ರಹಿಸುವುದು ಎಂದು ಹೇಳಿದಂತಾಗುವುದು.

ಹೀಗೆ ಸೂತ್ರದಲ್ಲಿ ಹೇಳಿರುವ ಹೇತುವನ್ನು ವ್ಯಾಖ್ಯಾನ ಮಾಡಿ ಸಮನ್ವಯಸೂತ್ರದಿಂದ 'ತತ್ತು' ಎಂಬ ಪದಗಳನ್ನು ಅನುವೃತ್ತಿಮಾಡಿಕೊಂಡು ವಿಭಕ್ತಿಬದಲಾವಣೆಯನ್ನು ಹೊಂದುವ ತತ್ ಎಂಬ ಪದದಿಂದ ಅನ್ವಯವನ್ನು ಹೊಂದಲು ಯೋಗ್ಯವಾದ ಉದ್ದೇಶ್ಯವನ್ನು ತಿಳಿಸುವ 'ನಿತ್ಯಮಹಿಮಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಈ ಸೂತ್ರದಲ್ಲಿ ವಿವಕ್ಷಿತವಾದ ನಿಷ್ಕೃಷ್ಟವಾದ ಪ್ರತಿಜ್ಞೆಯನ್ನು ''ನಿತ್ಯಮಹಿಮಾ'' ಎಂಬ ಮುಂದಿನ ಭಾಗದಿಂದ ತಿಳಿಸುತ್ತಿದ್ದಾರೆ. ಈ ವಾಕ್ಯವು ಈ ಅಧಿ-ಕರಣದ ಫಲವನ್ನು ಹೇಳುವ ವಾಕ್ಯವಾಗಿದೆ. ಸೂತ್ರದಲ್ಲಿರುವ ''ಶಬ್ದೇಭ್ಯಃ'' ಎಂಬ ಹೇತುವಿನ ಅನ್ವಯವನ್ನು ಹೊಂದಲು ಯೋಗ್ಯವಾದ ಸಾಧ್ಯವಾಚಕ ಪದವಾದರೋ 'ಬ್ರಾಹ್ಮಣಃ' ಎಂದು ಅಧ್ಯಾಹಾರ ಮಾಡಲ್ಪಟ್ಟದ್ದು ಎಂದು ತಿಳಿಯಬೇಕು.

ಇದರಿಂದ – ಇಲ್ಲಿ ಶ್ರುತನಾಗಿರುವ ಬ್ರಾಹ್ಮಣನು 'ತತ್ತು' ವಿಷ್ಣುವೇ ಆಗಿದ್ದಾನೆ ಹೊರತು ವಿರಿಂಚನಲ್ಲ. ಏಕೆಂದರೆ 'ಪತ್ಯಾದಿಶಬ್ದೇಭ್ಯಃ' - ಇಲ್ಲಿ ಶ್ರುತವಾಗಿರುವ ಸರ್ವಾಧಿಪತ್ಯ ಮೊದಲಾದವುಗಳನ್ನು ಹೇಳುವ ಸರ್ವಾಧಿಪತಿ ಮೊದಲಾದ ಶಬ್ದಗಳಿಂದ. ತಥಾ ಚ – ನಿತ್ಯಮಹಿಮೆಯುಳ್ಳವನೂ ಅವನೇ ಆಗಿರುವನು ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ.ದೀ. – ನನು ಸರ್ವಾಧಿಪತ್ಯಾದಿವಾಚಿಶಬ್ದಸದ್ಭಾವೇಽಪಿ ಕುತೋ ಬ್ರಾಹ್ಮಣಸ್ಯ ವಿಷ್ಣುತ್ವನಿಶ್ಚಯಃ? ಇತ್ಯಪ್ರಯೋಜಕಶಂಕಾವಾರಣಾಯ ತತ್ರ ಸರ್ವಾಧಿಪತಿತ್ವಸ್ಯ ವಿಷ್ಣ್ವೇಕನಿಷ್ಠತ್ವೇ ತಾವಚ್ಛ್ರುತಿಮಾಹ – ಉತೇತಿ ॥

ಸರ್ವಾಧಿಪತ್ಯ ಮೊದಲಾದವುಗಳನ್ನು ಹೇಳುವ ಶಬ್ದಗಳಿದ್ದರೂ ಇಲ್ಲಿ ಬ್ರಾಹ್ಮಣ-ಶಬ್ದವಾಚ್ಯನು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಅಪ್ರಯೋಜಕತ್ವ-ಶಂಕೆಯನ್ನು ನಿವಾರಿಸಲು ಸರ್ವಾಧಿಪತಿತ್ವವು ವಿಷ್ಣುವಿನಲ್ಲಿ ಮಾತ್ರವಿರುವುದು ಎಂಬ ವಿಷಯದಲ್ಲಿ ''ಉತ'' ಎಂಬುದಾಗಿ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ.

**ಭಾಷ್ಯಮ್ – 'ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ'- – (ತೈ.ಆ.೩.೧೨) 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋ-ಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ'** (ಋ.೧.೧೬೪.೩೬); **'ಸ ಯೋಽತೋ-ಽಶ್ರುತಃ'** (ಐ.ಆ. ೩.೨.೪) **ಇತ್ಯಾದಿ ಶ್ರುತಿಭ್ಯಸ್ತಸ್ಯೈವ ಹಿ ತೇ ಶಬ್ದಾಃ ॥೪೩॥** ॥ ಇತಿ ಬ್ರಾಹ್ಮಣಾಧಿಕರಣಮ್ ॥ ೧೪ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ॥೧॥೩॥

'ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ' 'ಸಪ್ತಾರ್ಧ-ಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧ-ರ್ಮಣಿ' 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಗಳಿಂದ ಸರ್ವ-ಸ್ವಾಧಿಪತಿತ್ವ, ಸರ್ವಸ್ಯ ಈಶಾನತ್ವವು ವಿಷ್ಣುವಿಗೇ ಸಂಬಂಧಪಟ್ಟ ಶಬ್ದಗಳಾಗಿವೆಯಷ್ಟೇ.

ಭಾ.ದೀ. – ಇದಂ ಚ 'ಪುರುಷ ಏವೇದಂ ಸರ್ವಮ್' । 'ಯದ್ಭೂತಂ ಯಚ್ಚ ಭವ್ಯಮ್' ಇತಿ ಪೂರ್ವವಾಕ್ಯೇನ ಸಹ ವ್ಯಾಖ್ಯೇಯಮ್ ।

ತತ್ಪ್ರಕಾರಸ್ತು – 'ಯದ್ಭೂತಮ್' ಅತೀತಂ 'ಭವ್ಯಂ' ಭವಿಷ್ಯದ್ ವರ್ತಮಾನಂ ಚ ತತ್ಸರ್ವಂ 'ಪುರುಷ ಏವ' ಪರಮಪುರುಷಾಧೀನಮೇವ । ಕುತಃ? ಯತೋ ಯಸ್ಮಾನ್ನ ಕೇವಲಮಮುಕ್ತಸರ್ವಾಧಿಪತಿಃ ಪುರುಷಃ, ಕಿಂತು 'ಅಮೃತತ್ವಸ್ಯೋತ'

ಮುಕ್ತಸಮುದಾಯಸ್ಯಾಪಿ 'ಈಶಾನಃ' ಅಧಿಪತಿಃ । 'ವಿಚಿತ್ರಾ ಹಿ ತದ್ಧಿತಗತಿಃ' ಇತಿ ವಚನಾತ್ ಸಮುದಾಯಾರ್ಥೇ ತ್ವಪ್ರತ್ಯಯಃ । ತತ್ತ್ವಪ್ರದೀಪೇ ತು – ಭಾವ-ಭವಿತ್ರೋರಭೇದವ್ಯಪದೇಶಾದ್ ಭಾವೇ ತ್ವಪ್ರತ್ಯಯಃ । 'ಅಮೃತತ್ವಸ್ಯ' ಮೋಕ್ಷಸ್ಯ ಈಶಾನ ಇತಿ ಚ - ಇತಿ ಅರ್ಥಾಂತರಂ ಚೋಕ್ತಮ್ । ಅತ್ರ ಹೇತುಮಾಹ – ಯದಿತಿ ॥ ತೃತೀಯಾ ದ್ವಿತೀಯಾರ್ಥೇ । ತಥಾ ಚ 'ಯತ್' ಯಸ್ಮಾತ್ 'ಅನ್ನೇನ' ಅನ್ನಂ ಮರ್ತ್ಯಂ ಸಂಸಾರಿಸಮೂಹಮ್ 'ಅತಿರೋಹತಿ' ಅತಿಶೇತೇ, ತಸ್ಮಾತ್ ಇತ್ಯರ್ಥಃ । ಮುಕ್ತಾವನಧೀನತ್ವೇ ಸರ್ವಜ್ಞಸ್ಯ ಬುದ್ಧಿಮತಃ ಸ್ವಾಧೀನಸಂಸಾರಿಭ್ಯೋ ಮೋಕ್ಷಪ್ರದಾನಾಯೋಗಾತ್ ಇತಿ ಭಾವಃ।

ಈ ವಾಕ್ಯವನ್ನು 'ಪುರುಷ ಏವೇದಂ ಸರ್ವಮ್ । ಯದ್ಭೂತಂ ಯಚ್ಚ ಭವ್ಯಮ್' ಎಂಬ ಹಿಂದಿನ ವಾಕ್ಯದೊಂದಿಗೆ ವ್ಯಾಖ್ಯಾನ ಮಾಡಬೇಕು.

ವ್ಯಾಖ್ಯಾನ ಮಾಡುವ ರೀತಿ ಹೀಗಿರುವುದು – 'ಯದ್ಭೂತಂ' - ಯಾವುದು ಅತೀತ-ವಾದದ್ದೋ, 'ಭವ್ಯಂ' ಭವಿಷ್ಯತ್ಕಾಲಕ್ಕೆ ಸಂಬಂಧಿಸಿರುವುದೋ, 'ಚ' - ಮತ್ತು ಯಾವುದು ವರ್ತಮಾನವೋ ಅದೆಲ್ಲವೂ 'ಪುರುಷ ಏವ' - ಪರಮಪುರುಷನಿಗೆ ಅಧೀನವೇ ಆಗಿರುವುದು. ಏಕೆಂದರೆ? ಯತ್ - ಆ ಪರಮಪುರುಷನು ಕೇವಲ ಅಮುಕ್ತರಾದ ಸರ್ವರಿಗೂ ಅಧಿಪತಿಯಷ್ಟೇ ಅಲ್ಲ. ಕಿಂತು 'ಅಮೃತತ್ವಸ್ಯ ಉತ' ಮುಕ್ತಸಮುದಾಯಕ್ಕೂ 'ಈಶಾನಃ' - ಅಧಿಪತಿಯಾಗಿದ್ದಾನೆ. 'ವಿಚಿತ್ರಾ ಹಿ ತದ್ಧಿತಗತಿಃ' – ತದ್ಧಿತಪ್ರತ್ಯಯಗಳು ಅನೇಕ ಅರ್ಥವಾಚಿಗಳು ಆಗಿರುವವು ಎಂಬ ಅಭಿಪ್ರಾಯದ ಈ ವಚನದಿಂದ ಅಮೃತತ್ವ ಎಂಬಲ್ಲಿರುವ ತ್ವಪ್ರತ್ಯಯವು ಸಮುದಾಯ ಎಂಬ ಅರ್ಥವನ್ನು ಹೇಳುವುದು. ತತ್ತ್ವಪ್ರದೀಪದಲ್ಲಾದರೋ ಧರ್ಮಧರ್ಮಿಗಳಿಗೆ ಅಭೇದವ್ಯವಹಾರ ಮಾಡಲಾಗಿದೆ ಎಂಬ ಅಭಿಪ್ರಾಯದಿಂದ ಅಮೃತತ್ವ ಎಂಬಲ್ಲಿರುವ ತ್ವಪ್ರತ್ಯಯವು ಭಾವ ಅಂದರೆ ಪ್ರಕೃತ ಮುಕ್ತರ ಧರ್ಮವಾದ ಮೋಕ್ಷವನ್ನು ಹೇಳುವುದು. 'ಅಮೃತತ್ವಸ್ಯ' ಎಂದರೆ ಮೋಕ್ಷಕ್ಕೆ ಈಶಾನಃ - ನಿಯಾಮಕನಾದವನು ಎಂದೂ ಅರ್ಥಾಂತರವನ್ನು ಹೇಳಲಾಗಿದೆ. ಈ ವಿಷಯದಲ್ಲಿ ಹೇತುವನ್ನು ''ಯದನ್ನೇನ'' ಎಂಬ ಮುಂದಿನ ವಾಕ್ಯವು ಹೇಳುತ್ತಿದೆ. ಅನ್ನೇನ ಎಂಬಲ್ಲಿ ತೃತೀಯಾ ವಿಭಕ್ತಿಯು ದ್ವಿತೀಯಾವಿಭಕ್ತ್ಯರ್ಥ-

ವನ್ನು ಹೇಳುವುದು. ತಥಾ ಚ – 'ಯತ್' ಯಾವ ಕಾರಣದಿಂದ 'ಅನ್ನೇನ' - ಎಂದರೆ ಅನ್ನಂ ಮರಣಶೀಲವಾದ ಸಂಸಾರಿ ಜೀವರ ಸಮೂಹವನ್ನು 'ಅತಿರೋಹತಿ' ನೀಡಿರು-ವನೋ ಆದ್ದರಿಂದ ಎಂದು ಅರ್ಥ. ಮೋಕ್ಷದಲ್ಲಿ ಮುಕ್ತರು ಭಗವಂತನ ಅಧೀನದಲ್ಲಿ ಇಲ್ಲದಿರುವ ಪಕ್ಷದಲ್ಲಿ ಸರ್ವಜ್ಞನೂ ವಿವೇಕಿಯೂ ಆದ ಭಗವಂತನು ತನ್ನ ಅಧೀನ-ದಲ್ಲಿರುವ ಸಂಸಾರಿಗಳಿಗೆ ಮೋಕ್ಷವನ್ನು ಕೊಡಲಾರನು ಎಂದು ಅಭಿಪ್ರಾಯ.

ಭಾ.ದೀ. – ಇದಾನೀಂ ಸರ್ವಶಬ್ದಸಂಬಂಧಿಕೇಶಾನಪದೋಕ್ತಸರ್ವಪ್ರೇರಕತ್ವೇ ಶ್ರುತಿಮಾಹ – ಸಪ್ತೇತಿ ॥ ಅಕ್ಷರನಯೇ ವ್ಯಾಖ್ಯಾತೇಯಂ ಶ್ರುತಿಃ।

'ನೇತಿ ನೇತಿ' ಇತ್ಯುಕ್ತದೃಷ್ಟಶ್ರುತಸರ್ವವಿಲಕ್ಷಣತ್ವೇಽಪಿ ಶ್ರುತಿಮುದಾಹರತಿ – ಸ ಇತಿ ॥ ಇಯಮಪಿ ಸರ್ವತ್ರಾಧಿಕರಣೇ ವ್ಯಾಖ್ಯಾತಾ।

'ಇತ್ಯಾದಿ' ಇತ್ಯಾದಿಪದೇನ ಸರ್ವವಶಿತ್ವಾದಾವಪಿ ಏವಮೇವ ಶ್ರುತ್ಯಂತರಾಣಿ ಉದಾಹರ್ತವ್ಯಾನೀತಿ ಸೂಚಯತಿ। 'ತಸ್ಯೈವ' ವಿಷ್ಣೋರೇವ, 'ನಾನ್ಯಸ್ಯ' ಇತ್ಯೇ-ವಾರ್ಥಃ। 'ಹಿ' ಯಸ್ಮಾತ್ ತೇ ಸರ್ವಾಧಿಪತ್ಯಾದಿಶಬ್ದಾ ಇತ್ಯವಗತಾಃ ತಸ್ಮಾನ್ನಾ-ಪ್ರಯೋಜಕತ್ವಂ ಶಂಕ್ಯಮಿತಿ ವಾಕ್ಯಶೇಷಃ।

॥ ಇತಿ ಬ್ರಾಹ್ಮಣಾಧಿಕರಣಮ್ ॥ ೧೪ ॥

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಾಣಾಂ ಸರ್ವತಂತ್ರಸ್ವತಂತ್ರಾಣಾಂ
ಶ್ರೀಮದ್ರಘುನಾಥತೀರ್ಥಪೂಜ್ಯಪಾದಾನಾಂ ಶಿಷ್ಯೇಣ
ಶ್ರೀಮಜ್ಜಗನಾಥಯತಿನಾ ಕೃತಾಯಾಂ ಶ್ರೀಮದ್ಬ್ರಹ್ಮಸೂತ್ರಭಾಷ್ಯದೀಪಿಕಾಯಾಂ
ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ॥

'ಸರ್ವಸ್ಯ ಈಶಾನಃ' ಎಂದು ಹೇಳಿರುವ ಸರ್ವಪ್ರೇರಕತ್ವವಿಷಯದಲ್ಲಿ ಆಧಾರವಾಗಿ ''ಸಪ್ತ'' ಎಂಬ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ. ಅಕ್ಷರಾಧಿಕರಣದಲ್ಲಿ (ಸೂತ್ರ ೧-೩-೧೦) ಈ ಶ್ರುತಿಯನ್ನು ವ್ಯಾಖ್ಯಾನ ಮಾಡಲಾಗಿದೆ.

'ನೇತಿ ನೇತಿ' ಎಂಬಶ್ರುತಿಯಲ್ಲಿ ಹೇಳಿದ ದೃಷ್ಟವಾದ ಹಾಗೂ ಶ್ರುತವಾದ ಸರ್ವಪದಾರ್ಥಗಳಿಂದಲೂ ಭಗವಂತನು ವಿಲಕ್ಷಣನಾಗಿದ್ದಾನೆ ಎಂಬ ವಿಷಯದಲ್ಲೂ

''ಸ ಯೋಽತೋ'' ಎಂಬಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸುತ್ತಿದ್ದಾರೆ. ಈ ಶ್ರುತಿಯೂ ಸರ್ವಗತತ್ವಾಧಿಕರಣದಲ್ಲಿ(೧-೨-೧) ವ್ಯಾಖ್ಯಾತವಾಗಿದೆ.

ಭಾಷ್ಯದಲ್ಲಿ 'ಇತ್ಯಾದಿ' ಎಂಬಲ್ಲಿರುವ ಆದಿಪದದಿಂದ ಸರ್ವವಶಿತ್ವ ಮೊದಲಾದ ವಿಷಯಗಳಲ್ಲೂ ಇದೇ ರೀತಿಯಾಗಿ ಬೇರೆ ಶ್ರುತಿಗಳನ್ನು ಉದಾಹರಿಸಬೇಕೆನ್ನುವುದನ್ನು ಸೂಚಿಸುತ್ತಿದ್ದಾರೆ. 'ತಸ್ಯೈವ' ಎಂದರೆ ವಿಷ್ಣುವಿಗೇ ಹೊರತು ಅನ್ಯರಿಗಲ್ಲ ಎಂದು 'ಏವ'ಕಾರದ ಅರ್ಥ. ''ಹಿ ಯಾವ ಕಾರಣದಿಂದಾಗಿ 'ತೇ ಶಬ್ದಾಃ' ಸರ್ವಾಧಿಪತಿ ಮೊದಲಾದ ಶಬ್ದಗಳು ಕೇಳಲ್ಪಟ್ಟವೆಯೋ ಆದ್ದರಿಂದ ಸೂತ್ರದಲ್ಲಿರುವ ಹೇತುವು ಅಪ್ರಯೋಜಕವೆಂದು ಶಂಕಿಸತಕ್ಕದ್ದಲ್ಲ'' ಎಂದು ಭಾಷ್ಯದಲ್ಲಿ ವಾಕ್ಯವು ಶೇಷವಾಗಿದೆ.

॥ ಇಲ್ಲಿಗೆ ಭಾಷ್ಯದೀಪಿಕಾದ ಕನ್ನಡಾನುವಾದದಲ್ಲಿ ಬ್ರಾಹ್ಮಣಾಧಿಕರಣವು
ಹಾಗೂ ಬ್ರಹ್ಮಸೂತ್ರಭಾಷ್ಯದ ಮೊದಲನೇ ಅಧ್ಯಾಯದ
ಮೂರನೆಯ ಪಾದವು ಮುಗಿಯಿತು ॥

\- - - - - -

॥ ಶ್ರೀಮಧ್ವೇಶಾರ್ಪಣಮಸ್ತು ॥

ಶರ್ವಾದಿಸರ್ವಗೀರ್ವಾಣನಿರ್ವಾಣಗತಿಹೇತವಃ ।
ಪೂರ್ಣಪ್ರಜ್ಞಪದಾಂಭೋಜಪಾಂಸವಃ ಪಾಂತು ನಃ ಸದಾ ॥
– ಶ್ರೀರಾಘವೇಂದ್ರಸ್ವಾಮಿಗಳು




ಪ್ರಕಾಶಕರು

**ಶ್ರೀಗುರುರಾಜ ಅಸೋಸಿಯೇಷನ್ (ರಿ)**

# 53, ಮಾಡಲ್ ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು 560 004. ದೂರವಾಣಿ: 26625658/59

Website: www.sriguruRajaassociation.org